# ಗ್ರಾಮೀಣ ಹಣಕಾಸು
## (ರಾಯಚೂರು ಜಿಲ್ಲೆಯನ್ನು ಅನುಲಕ್ಷಿಸಿ)

(ಅರ್ಥಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕರು
ಪಿ. ಕೆಂಪೇಗೌಡ

ಮಾರ್ಗದರ್ಶಕರು
ಡಾ. ಸಿದ್ದಗಂಗಮ್ಮ
ಸಹ ಪ್ರಾಧ್ಯಾಪಕರು



ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ– ೫೮೩ ೨೭೬
೨೦೧೫

# ಗ್ರಾಮೀಣ ಹಣಕಾಸು

## (ರಾಯಚೂರು ಜಿಲ್ಲೆಯನ್ನು ಅನುಲಕ್ಷಿಸಿ)

(ಅರ್ಥಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು
ಪಿ. ಕೆಂಪೇಗೌಡ

ಮಾರ್ಗದರ್ಶಕರು
ಡಾ. ಸಿದ್ದಗಂಗಮ್ಮ
ಸಹ ಪ್ರಾಧ್ಯಾಪಕರು



ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

೨೦೧೫

## ಮಾರ್ಗದರ್ಶಕರ ದೃಢೀಕರಣ ಪತ್ರ

**ಪಿ. ಕೆಂಪೇಗೌಡ** ಇವರು **ಅರ್ಥಶಾಸ್ತ್ರ** ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಗ್ರಾಮೀಣ ಹಣಕಾಸು (ರಾಯಚೂರು ಜಿಲ್ಲೆಯನ್ನು ಅನುಲಕ್ಷಿಸಿ)** ಎಂಬ **ಅರ್ಥಶಾಸ್ತ್ರ ವಿಷಯದ** ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಸಲ್ಲಿಸಿದ್ದಾರೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: 07/12/2015
ಸ್ಥಳ : ವಿದ್ಯಾರಣ್ಯ

(ಡಾ. ಸಿದ್ದಗಂಗಮ್ಮ)
ಮಾರ್ಗದರ್ಶಕರು ಹಾಗೂ ಸಹ ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ ೫೮೩೨೭೬

# ಸಂಶೋಧಕರ ಘೋಷಣಾ ಪತ್ರ

**ಗ್ರಾಮೀಣ ಹಣಕಾಸು** (ರಾಯಚೂರು ಜಿಲ್ಲೆಯನ್ನು ಅನುಲಕ್ಷಿಸಿ) ಎಂಬ **ಅರ್ಥಶಾಸ್ತ್ರ ವಿಷಯದ** ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗದ ಸಹ ಪ್ರಾಧ್ಯಾಪಕರಾದ **ಡಾ. ಸಿದ್ದಗಂಗಮ್ಮ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಕೆಂಪೇಗೌಡ.ಪಿ

**(ಪಿ. ಕೆಂಪೇಗೌಡ)**
ಸಂಶೋಧನಾ ವಿದ್ಯಾರ್ಥಿ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ ೫೮೩೨೭೬

ದಿನಾಂಕ : 07/12/2015
ಸ್ಥಳ : ವಿದ್ಯಾರಣ್ಯ

ಪರಿವಿಡಿ

# ಪರಿಶಿಷ್ಟಗಳು

## ೧. ಕೋಷ್ಟಕಗಳು



## ೨. ಭೂಪಟಗಳು



## ೩. ಪೈ ರೇಖಾಚಿತ್ರ

**೪. ಪಟ್ಟಿಗಳು**



**೫. ಛಾಯಾಚಿತ್ರಗಳು**

# ಗ್ರಾಮೀಣ ಹಣಕಾಸು

## (ರಾಯಚೂರು ಜಿಲ್ಲೆಯನ್ನು ಅನುಲಕ್ಷಿಸಿ ಅಧ್ಯಯನ)

### ಪ್ರಸ್ತಾವನೆ

ಪ್ರತಿಯೊಬ್ಬ ಬಡವನೂ ಉತ್ತಮ ಉದ್ಯಮಶೀಲ ವ್ಯಕ್ತಿಯಾಗಿ ಯಶಸ್ಸುಗಳಿಸಲು ಸಾಧ್ಯವಿಲ್ಲ ಎಂದು ಕೆಲವರು ಟೀಕಿಸುತ್ತಾರೆ. ಇದಕ್ಕೆ ಸವಾಲು ಎನ್ನುವಂತೆ ನಾವು ಬಿಕ್ಷುಕರಿಗೂ ಸಾಲ ನೀಡಲು ಪ್ರಾರಂಭಿಸಿದೆವು. ಅವರು ಮನೆ ಮನೆಗೆ ಭಿಕ್ಷೆಗಾಗಿ ಅಲೆದಾಡುವಾಗಲೂ ಅವರು ಏನನ್ನಾದರೂ ನೀಡಬಲ್ಲರು ಎಂಬ ಕಲ್ಪನೆ ನಮ್ಮಲ್ಲಿತ್ತು. ನಾವು ಇದನ್ನು ಪ್ರಾರಂಭಿಸಿ ಮೂರು ವರ್ಷಗಳಾದವು ನಮ್ಮ ಈ ಪ್ರಯೋಗ ಯಶಸ್ವಿಯಾದದ್ದಷ್ಟೆ ಅಲ್ಲ ನಮ್ಮ ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡವರ ಸಂಖ್ಯೆ ಒಂದು ಲಕ್ಷವನ್ನು ಮೀರಿದೆ(ಮಹಮದ್ ಯೂನಸ್: ೨೦೦೮). ಆರ್ಥಿಕ ಅವಕಾಶಗಳನ್ನು ವಿಸ್ತರಿಸಿ ಆದಾಯ ಅಸಮಾನತೆ ಹಾಗೂ ಬಡತನ ಪ್ರಮಾಣ ಕಡಿಮೆ ಮಾಡುವಲ್ಲಿ ಸಾಲ ಸೌಲಭ್ಯ ಒಂದು ಸಾಧನವಾಗಬಲ್ಲದು. ಬಡವರನ್ನು ಬದಲಾವಣೆಯ ನಿಯೋಗಿಗಳಾಗಿ ಗುರುತಿಸಬೇಕಾಗಿದೆ ವಿನಃ ಸರಳವಾಗಿ ಕಲ್ಯಾಣವನ್ನು ಸ್ವೀಕರಿಸುವವರೆಂದು ಪರಿಗಣಿಸಬಾರದು. ಬಡತನ, ಆದಾಯ ಅಸಮಾನತೆ ಮತ್ತು ಸಾಮಾಜಿಕ ಅಸಮಾನತೆಯನ್ನು ಭಾರತದ ಗ್ರಾಮೀಣ ಪ್ರದೇಶದಲ್ಲಿ ಸ್ವಾತಂತ್ರ್ಯ ಪೂರ್ವ ಮತ್ತು ನಂತರ ದಿನಗಳಲ್ಲೂ ಕಾಣಬಹುದು. ೧೯೭೭-೭೮ರ ಎನ್‌ಎಸ್‌ಎಸ್ ಪ್ರಕಾರ ಕುಟುಂಬದ ಅನುಭೋಗ ವೆಚ್ಚದ ಆಧಾರದ ಮೇಲೆ ಭಾರತದಲ್ಲಿ ಶೇಕಡಾ ೪೮ರಷ್ಟು ಜನ ಬಡತನದ ರೇಖೆಗಿಂದ ಕೆಳಗಿದ್ದರು. ೨೦೦೦-೦೧ರ ಆರ್ಥಿಕ ಸಮೀಕ್ಷೆ ಪ್ರಕಾರ ಬಡತನದ ಪ್ರಮಾಣ ೧೯೯೩-೯೪ರಲ್ಲಿ ಒಟ್ಟಾರೆ ಶೇಕಡಾ ೩೬.೦೧ರಷ್ಟಿತ್ತು. ಇದರಲ್ಲಿ ಗ್ರಾಮೀಣ

ಬಡತನ ಪಾಲು ಶೇಕಡಾ ೩೬.೩ರಷ್ಟಿತ್ತು. ಪ್ರಸ್ತುತ ಮಾರುಕಟ್ಟೆ ಆಧಾರಿತ ವ್ಯವಸ್ಥೆ ಮತ್ತು ಜಾಗತೀಕರಣ ಸಂದರ್ಭಗಳು ಬಡತನ, ಹಸಿವು ಅಸಮಾನತೆಯನ್ನು ಮತ್ತಷ್ಟು ಹೆಚ್ಚಿಸಿವೆ. ಬಡವ ಶ್ರೀಮಂತರ ಅಂತರ ಹೆಚ್ಚಾಗಿದೆ. ವುಳ್ಳವರು ಮತ್ತಷ್ಟು ಬಲಾಢ್ಯರಾಗುತ್ತಿದ್ದಾರೆ. ಬಡತನ ನಿರ್ಮೂಲನೆ ಮತ್ತು ಆದಾಯ ಅಸಮಾನತೆಗೆ ಕಾರಣವಾಗುವ ಅಂಶಗಳಲ್ಲಿ ಹಣಕಾಸಿನ ಸಮಸ್ಯೆಗಳು ಸಹ ಮುಖ್ಯವಾದವು ಎನ್ನಬಹುದು.

ಈ ಅಧ್ಯಯನದಲ್ಲಿ **ಗ್ರಾಮೀಣ ಹಣಕಾಸು** ಎಂದರೆ ಗ್ರಾಮೀಣ ಸಾಲ ಎಂದು ಪರಿಭಾವಿಸಲಾಗಿದೆ. ಇದು ಗ್ರಾಮೀಣ ಸಾಲ ಪೂರೈಕೆ ವ್ಯವಸ್ಥೆಗೆ ಸಂಬಂಧಿಸಿದ್ದಾಗಿದೆ. ಈ ವ್ಯವಸ್ಥೆಯು ಸಂಘಟಿತ ಮತ್ತು ಅಸಂಘಟಿತ ಎಂಬ ಎರಡು ಸಾಲ ಮೂಲಗಳನ್ನು ಒಳಗೊಂಡಿದೆ. ಈ ಎರಡೂ ಮೂಲಗಳು ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ ಮತ್ತು ಕೃಷಿಯೇತರ ಉದ್ದೇಶಗಳಿಗೆ ಸಾಲ ಪೂರೈಸುತ್ತವೆ. ಈ ಅಧ್ಯಯನದಲ್ಲಿ ಕೃಷಿ ಕ್ಷೇತ್ರಕ್ಕೆ ಪೂರೈಕೆಯಾಗುವ ಸಾಲ ಸೌಲಭ್ಯಗಳ ವಿಷಯಕ್ಕೆ ಒತ್ತು ನೀಡಲಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಕೃಷಿ ಕ್ಷೇತ್ರವನ್ನು ಇಂದಿಗೂ ಶೇಕಡಾ ೬೦–೭ಕ್ಕಿಂತ ಅಧಿಕ ಜನರು ಅವಲಂಬಿಸಿದ್ದಾರೆ. ರಾಷ್ಟ್ರೀಯ ಆದಾಯದಲ್ಲಿ ಕೃಷಿಯ ಪಾಲು ಕಡಿಮೆಯಾಗಿದ್ದರೂ ಇದನ್ನು ಅವಲಂಬಿಸಿರುವ ಶ್ರಮ ಶಕ್ತಿ ಅಥವಾ ಜನರ ಸಂಖ್ಯೆ ಕಡಿಮೆಯಾಗಿಲ್ಲ. ಕೃಷಿ ಅರ್ಥ ವ್ಯವಸ್ಥೆಯ ಒಂದು ಮುಖ್ಯ ಕ್ಷೇತ್ರ, ಗ್ರಾಮೀಣ ಪ್ರದೇಶಗಳಲ್ಲಿ ಸಾಗುವಳಿದಾರರು, ಕೃಷಿ ಕಾರ್ಮಿಕರು ಬದುಕಿಗಾಗಿ ಕೃಷಿಯನ್ನು ಆಶ್ರಯಿಸಿದ್ದಾರೆ. ಗ್ರಾಮೀಣ ಪ್ರದೇಶದಲ್ಲಿ ಕೃಷಿಗೆ ಪೂರೈಕೆಯಾಗುವ ಹಣಕಾಸು ಇಂದಿಗೂ ಒಂದು ಗಂಭೀರ ವಿಷಯ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದ ಆಶಯ ಗ್ರಾಮೀಣ ಸಂಘಟಿತ ಹಣಕಾಸು ವ್ಯವಸ್ಥೆಯ ಸಾಮಾಜಿಕ ಆರ್ಥಿಕ ಸ್ವರೂಪವನ್ನು ಅರ್ಥಮಾಡಿಕೊಳ್ಳುವುದಾಗಿದೆ. ಕೃಷಿ ಕ್ಷೇತ್ರಕ್ಕೆ ಸಾಲ ಪೂರೈಕೆ ಮಾಡುವ ಮೂಲಗಳು ಯಾವುವು? ಅವುಗಳ ಲಕ್ಷಣಗಳೇನು? ಈ ಸಾಲ ಮೂಲಗಳ ಉದ್ದೇಶಗಳೇನು? ಗ್ರಾಮೀಣ ಸಂಘಟಿತ ಹಣಕಾಸು ವ್ಯವಸ್ಥೆಯ ಸಾಲ ಸೌಲಭ್ಯಗಳನ್ನು ಸಮಾಜದ ಯಾವ ವರ್ಗಗಳು ಪಡೆಯುತ್ತವೆ? ಯಾವ ವರ್ಗಗಳು ಪಡೆಯುವುದಿಲ್ಲ? ಪಡೆಯದಿರುವುದಕ್ಕೆ ಕಾರಣಗಳೇನು? ಇದರ ಐತಿಹಾಸಿಕ ಹಿನ್ನೆಲೆ ಏನು? ಸಾಗುವಳಿದಾರರು ಅಸಂಘಟಿತ ಹಣಕಾಸು ಮಾರುಕಟ್ಟೆಯಿಂದ ಸಾಲ ಪಡೆಯುವುದ ರಿಂದಾಗುವ ಪರಿಣಾಮಗಳನ್ನು ಗುರುತಿಸುವುದು ಈ ಅಧ್ಯಯನದ ಉದ್ದೇಶವಾಗಿವೆ.

ಬಡತನ ನಿರ್ಮೂಲನೆ ಮಾಡುವಲ್ಲಿ ಗ್ರಾಮೀಣ ಹಣಕಾಸಿನ ಪಾತ್ರ ದೊಡ್ಡದು. ಬಡತನ ನಿರ್ಮೂಲನೆಯ ಮೂಲಕ ಗ್ರಾಮೀಣ ಪ್ರದೇಶದ ದುರ್ಬಲ ವರ್ಗಗಳು ಮುಖ್ಯವಾಗಿ ಭೂರಹಿತ ಕೃಷಿ ಕಾರ್ಮಿಕರು, ಸಣ್ಣ, ಅತಿ ಸಣ್ಣ ರೈತರು, ಮಹಿಳೆಯರು, ವಿಧವೆಯರು, ಸಂಪನ್ಮೂಲ ರಹಿತ ಮತ್ತು ಸಾಮಾಜಿಕ ಆರ್ಥಿಕವಾಗಿ ದುರ್ಬಲರಾದ ಪರಿಶಿಷ್ಟ ಜಾತಿ ಮತ್ತು ಪಂಗಡದವರು ಯೋಗ್ಯಬದುಕು ಕಟ್ಟಿಕೊಳ್ಳುವಲ್ಲಿ ಸಾಲ ಸೌಲಭ್ಯ ನೆರವಾಗುವುದು. ಬಡಜನತೆಗೆ ಹಣಕಾಸು ಸೌಲಭ್ಯಗಳ ಅಗತ್ಯವಿದೆ. ಆದರೆ ಬಡ ಜನತೆಗೆ ನಿಗದಿತ ಪ್ರಮಾಣದ ಭದ್ರತೆಗಳನ್ನು ಅಂದರೆ

ಭೌತಿಕ ಆಸ್ತಿಗಳನ್ನು ಒದಗಿಸುವ ಸಾಮರ್ಥ್ಯವಿಲ್ಲದೆ ಸಂಘಟಿತ ಹಣಕಾಸು ವ್ಯವಸ್ಥೆಯಿಂದ ಸಾಲ ಸೌಲಭ್ಯವನ್ನು ಪಡೆಯಲು ಸಾಧ್ಯವಾಗದೆ ಈ ಅನುಕೂಲದಿಂದ ವಂಚಿತರಾಗಿದ್ದಾರೆ. ಆದರೆ ಸಾಲ ಸೌಲಭ್ಯಗಳನ್ನು ಪಡೆಯುವ ಅವಕಾಶಗಳು ಸಮಾಜದ ಎಲ್ಲಾ ಸಾಮಾಜಿಕ ವರ್ಗಗಳಿಗೂ ಇರಬೇಕು. ಈ ಹಕ್ಕು ಎಲ್ಲರಿಗೂ ಇದೆ. ಈ ರೀತಿಯ ವಾತಾವರಣ ಹಾಗು ವ್ಯವಸ್ಥೆಯನ್ನು ನಿರ್ಮಾಣ ಮಾಡುವುದು ಸರ್ಕಾರದ ಹೊಣೆಗಾರಿಕೆಯಾಗಿದೆ. ಸಂಘಟಿತ ಹಣಕಾಸು ವ್ಯವಸ್ಥೆಯ ಸಾಲ ಸೌಲಭ್ಯಗಳನ್ನು ಅಭಿವೃದ್ಧಿಯ ಭಾಗವೆಂದೇ ಪರಿಗಣಿಸಿ ಈ ಸೌಲಭ್ಯಗಳು ಸಾಮಾಜದ ಎಲ್ಲಾ ಗುಂಪುಗಳನ್ನು ಒಳಗೊಳ್ಳುವಂತೆ ಮಾಡಬೇಕು. ಹಾಗಾದರೆ ಮಾತ್ರ **"ಎಲ್ಲರನ್ನೂ ಒಳಗೊಂಡ ಹಣಕಾಸು, ಎಲ್ಲರನ್ನೂ ಒಳಗೊಂಡ ಅಭಿವೃದ್ಧಿ" ಸಾಧ್ಯ** ಇದನ್ನು ಸಾಧಿಸಲು ಸಮಾಜದ ಮೂಲಭೂತ ವ್ಯವಸ್ಥೆಯಲ್ಲಿ ಸುಧಾರಣೆ ತರಬೇಕು. ಭೂಮಿ, ನೀರು, ತಂತ್ರಜ್ಞಾನ, ವಿದ್ಯುತ್ ಮತ್ತು ಸರ್ಕಾರದ ಹೂಡಿಕೆಯ ಲಾಭವನ್ನು ಎಲ್ಲರೂ ಪಡೆಯುವಂತಾಗ ಬೇಕು. ಈ ರೀತಿಯ ಸುಧಾರಣೆಯಿಂದ ದುರ್ಬಲರು ಆಸ್ತಿರಹಿತರು ಸಂಘಟಿತ ಮೂಲದ ಸಾಲ ಸೌಲಭ್ಯ ಪಡೆಯುವ ಅರ್ಹತೆ ಮತ್ತು ಸಾಮರ್ಥ್ಯ ಪಡೆಯುತ್ತಾರೆ ಹಾಗು ಪಡೆದ ಸಾಲವನ್ನು ತಮ್ಮ ಅಭಿವೃದ್ಧಿಗೆ ಬಳಸಿಕೊಳ್ಳುವ ಶಕ್ತಿ ಅವಕಾಶ ಪಡೆಯುತ್ತಾರೆ. ಆಗ ಆರ್ಥಿಕಾಭಿವೃದ್ಧಿಯ ಪಾಲುದಾರರಾಗುತ್ತಾರೆ. ಆ ಮೂಲಕ ಆರ್ಥಿಕ ಸಾಮಾಜಿಕ ಚಟುವಟಿಕೆಗಳಲ್ಲಿ ಸಕ್ರೀಯವಾಗಿರುತ್ತಾರೆ.

ಸಾಲ ಬಡತನ ನಿರ್ಮೂಲನೆಯ ಸಾಧನ ಎಂಬುದು ಸಾಂಪ್ರದಾಯಿಕ ವಾದ. ಅದೇ ರೀತಿ ಆಧುನಿಕ ಹಣಕಾಸು ಆರ್ಥಿಕತೆಯಲ್ಲಿ ಅರ್ಥ ವ್ಯವಸ್ಥೆಯ ಸುಲಲಿತ ಕಾರ್ಯಾಚರಣೆ ಮತ್ತು ಅಭಿವೃದ್ಧಿ ದೃಷ್ಟಿಯಿಂದ ಹಣಕಾಸಿನ ಪಾತ್ರ ನಿರ್ಲಕ್ಷಿಸುವಂತಿಲ್ಲ. ಉದ್ಯೋಗ ಮತ್ತು ಉತ್ಪನ್ನ ಹೆಚ್ಚಳದಲ್ಲಿ ಭೌತಿಕ ಸಂಪನ್ಮೂಲಗಳಂತೆ, ಸರ್ಕಾರದ ಮನೋಭಾವ, ಸಾಲನೀತಿಗಳು ಹಾಗೂ ಹಣಕಾಸು ವ್ಯವಸ್ಥೆಯು ಮುಖ್ಯವಾದುದು. ಆರ್ಥಿಕ ಚಟುವಟಿಕೆಗಳು ಮತ್ತು ಅಭಿವೃದ್ಧಿಯ ವೇಗವನ್ನು ಪ್ರೇರೆಪಿಸುವಲ್ಲಿ ಸಂಘಟಿತ ಹಣಕಾಸು ವ್ಯವಸ್ಥೆ ಮಹತ್ವದ ಕೊಡುಗೆ ನೀಡಬಲ್ಲದು. ಕೃಷಿಕರಿಗೆ, ಕೃಷಿ ಹೂಡಿಕೆದಾರರಿಗೆ ಸರಿಯಾದ ಕಾಲಕ್ಕೆ, ಸರಿಯಾದ ಪ್ರಮಾಣದಲ್ಲಿ ಹಣಕಾಸು ಲಭಿಸಬೇಕು. ಈ ಮೂಲಕ ಇವರಲ್ಲಿ ಉದ್ಯಮಶೀಲ ಮನೋಭಾವ ಬೆಳೆಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಸಾಲ ಬಡತನ ನಿರ್ಮೂಲನೆಯ ಸಾಧನ ಮತ್ತು ಅಭಿವೃದ್ಧಿಯನ್ನು ಪ್ರೇರೇಪಿಸಬಲ್ಲದ್ದು ಎಂಬ ವಾದ ಹಾಗೂ ಕೆಲವು ಅಧ್ಯಯನಗಳ ಪ್ರಕಾರ ಗ್ರಾಮೀಣ ಪ್ರದೇಶಗಳಲ್ಲಿ ಸಂಘಟಿತ ಹಣಕಾಸು ವ್ಯವಸ್ಥೆಯ ಸಾಲ ಸೌಲಭ್ಯಗಳು ಅಗತ್ಯವಿರುವವರನ್ನು ತಲುಪುತ್ತಿಲ್ಲ ಎಂಬ ವಾದಗಳನ್ನು ಪರಿಶೀಲಿಸುವ ಮತ್ತು ಅರ್ಥ ಮಾಡಿಕೊಳ್ಳುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಸಂಘಟಿತ ಹಣಕಾಸು ಮೂಲದ ಸಾಲ ಸೌಲಭ್ಯಗಳಿಂದ ಸಮಾಜದ ಯಾವ ವರ್ಗಗಳು ಹೊರಗುಳಿಯುತ್ತವೆ (ಫೈನಾನ್ಸಿಯಲ್ ಎಕ್ಸ್‌ಕ್ಲೂಷನ್)? ಅದಕ್ಕೆ ಆರ್ಥಿಕ, ಸಾಮಾಜಿಕ ಕಾರಣಗಳನ್ನು ಮತ್ತು ಸಾಲ ನೀತಿಗಳಲ್ಲಿನ ಅಂತರಗಳನ್ನು ಗುರ್ತಿಸುವ ಪ್ರಯತ್ನ ಮಾಡಲಾಗಿದೆ. ಕಾರಣಗಳಲ್ಲಿ

ಮುಖ್ಯವಾಗಿ ಭದ್ರತೆ ನೀಡಲು ಭೂಮಿಯಂತಹ ಆರ್ಥಿಕ ಸಂಪನ್ಮೂಲವಿಲ್ಲದಿರುವಿಕೆ, ವಾಣಿಜ್ಯ ಬ್ಯಾಂಕುಗಳ ಕಠಿಣ ಸಾಲ ನೀತಿ ಮತ್ತು ಮನೋಭಾವ, ಸಂಘಟಿತ ಸಂಸ್ಥೆಗಳಿಂದ ಸಾಲ ಪಡೆಯಲು ರೈತರು ದುಬಾರಿ ವೆಚ್ಚವನ್ನು ಭರಿಸಬೇಕಾದ್ದದ್ದು, ಸಹಕಾರ ಸಂಸ್ಥೆಗಳ ಆರ್ಥಿಕ ದುಸ್ಥಿತಿ ಮತ್ತು ಹಣಕಾಸು ಅಥವಾ ಸಂಪನ್ಮೂಗಳಿಗಾಗಿ ಸರ್ಕಾರವನ್ನು ಅವಲಂಭಿಸಿರುವುದು, ಸಹಕಾರ ಸಂಸ್ಥೆಗಳ ರಾಜಕೀಕರಣ, ಈ ಸಂಸ್ಥೆಗಳಿಂದ ಪಡೆದ ಸಾಲಗಳನ್ನು ಮರುಪಾವತಿಸಿ ಸಹಕಾರ ಸಂಸ್ಥೆಗಳ ಆಶಯಗಳನ್ನು ಕಾಪಾಡುವ ಮನಸ್ಥಿತಿ ಸದಸ್ಯರಿಗೆ ಇಲ್ಲದಿರುವುದು, ಈ ಸಂಸ್ಥೆಯಲ್ಲಿನ ಪ್ರಬಲ ಜಾತಿಗಳ ಹಿಡಿತ, ಸಾಮಾಜಿಕ ಆರ್ಥಿಕವಾಗಿ ದುರ್ಬಲ ಎಂದು ಹೇಳಲಾಗುವ ವರ್ಗಗಳ ಜನರ ನಿರ್ಲಕ್ಷ್ಯ, ಸರ್ಕಾರದ ಸಾಲ ಯೋಜನೆಗಳ ಬಗ್ಗೆ ಸರಿಯಾದ ಮಾಹಿತಿ ಇಲ್ಲದಿರುವುದು, ಸಾಲದ ಬೇಡಿಕೆ ಮತ್ತು ಪೂರೈಕೆಗಳ ಅಂತರ ಮತ್ತು ಅದರ ಪರಿಣಾಮಗಳನ್ನು ಇಲ್ಲಿ ಚರ್ಚಿಸಲಾಗಿದೆ. ಸರ್ಕಾರ ಮತ್ತು ಮೇಲ್ಮಟ್ಟದ ಹಣಕಾಸು ಸಂಸ್ಥೆಗಳು ಸಮಾಜದ ಎಲ್ಲಾ ವರ್ಗಗಳಿಗೂ ತಲುಪ ಬಹುದಾದ ಸಾಲ ಕಾರ್ಯಕ್ರಮ ಮತ್ತು ನೀತಿಗಳನ್ನು ರೂಪಿಸಲು ಈ ಅಧ್ಯಯನದ ಪಲಿತಾಂಶಗಳು ನೆರವಾಗುತ್ತವೆ.

ಇದೊಂದು ಪ್ರಾಯೋಗಿಕ ಅಧ್ಯಯನವಾಗಿದೆ. ಕ್ಷೇತ್ರಕಾರ್ಯವನ್ನು ಕರ್ನಾಟಕದ ರಾಯಚೂರು ಜಿಲ್ಲೆಯಲ್ಲಿ ಕೈಗೊಳ್ಳಲಾಗಿದೆ. ಈ ಅಧ್ಯಯನದ ಮಾಹಿತಿದಾರರನ್ನು ಯಾದೃಚ್ಚಿಕ ವಿಧಾನದ (ರ್‍ಯಾಂಡಮ್ ಸ್ಯಾಂಪ್ಲಿಂಗ್) ಮೂಲಕ ಆಯ್ಕೆ ಮಾಡಿಕೊಳ್ಳಲಾಗಿದೆ. ಕ್ಷೇತ್ರಾಧ್ಯಯನ ಹಾಗೂ ಸಾಹಿತ್ಯ ಸಮೀಕ್ಷೆಯ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಪ್ರಸ್ತುತ ಈ ಅಂತಿಮ ಸಾರಲೇಖವು ಸಮಸ್ಸೀಕರಣ, ಅಧ್ಯಯನದ ಉದ್ದೇಶಗಳು, ವಿಧಾನ, ಮಿತಿ, ಅಧ್ಯಯನದ ಫಲಿತಗಳು, ಅದ್ಯಾಯಗಳು ಮತ್ತು ಪರಾಮರ್ಶನ ಗ್ರಂಥಗಳನ್ನು ಒಳಗೊಂಡಿದೆ.

**ಸಮಸ್ಯೀಕರಣ**

ಸಂಶೋಧನಾ ವಸ್ತು ವಿಷಯಕ್ಕೆ ಸಂಬಂಧಿಸಿದಂತೆ ಜಾಗತಿಕ ದೃಷ್ಟಿಕೋನ, ರಾಷ್ಟ್ರೀಯ ಅಧ್ಯಯನಗಳು ಮತ್ತು ರಾಜ್ಯ ಮಟ್ಟದ ಅಥವಾ ಸ್ಥಳೀಯ ಅಧ್ಯಯನಗಳನ್ನಾಗಿ ಸಮಸ್ಸೀಕರಣವನ್ನು ಮೂರು ಭಾಗಗಳಾಗಿ ವಿಶ್ಲೇಷಿಸಲಾಗಿದೆ. ಇದರೊಂದಿಗೆ ಅಧ್ಯಯನದ ವಸ್ತು ವಿಷಯಕ್ಕೆ ಸಂಬಂಧಿಸಿದ ರಾಜಕೀಯ ಆರ್ಥಿಕತೆಯ ದೃಷ್ಟಿಕೋನವನ್ನು ಇಲ್ಲಿ ಚರ್ಚಿಸಲಾಗಿದೆ.

ಅಭಿವೃದ್ಧಿಯ ಇತಿಹಾಸ ಹಾಗೂ ವಿವಿಧ ಕಾಲ ಘಟ್ಟದಲ್ಲಿ ಅಭಿವೃದ್ಧಿ ಅರ್ಥದ ಬದಲಾವಣೆಯನ್ನು ಮತ್ತು ೧೯ನೇ ಶತಮಾನದ ಅಭಿವೃದ್ಧಿ ಚಟುವಟಿಕೆಗಳ ಮೇಲೆ ಇಂಗ್ಲೆಂಡಿನ ಪ್ರಭಾವವನ್ನು ಇಲ್ಲಿ ಚರ್ಚಿಸಲಾಗಿದೆ. ೧೯ನೇ ಶತಮಾನ ಅಭಿವೃದ್ಧಿ ಎಂದರೆ ಕೈಗಾರಿಕೀಕರಣವೆಂದು ಭಾವಿಸಿದ್ದನ್ನು ಅದರ ಪರಿಣಾಮಗಳನ್ನು ವಿಶ್ಲೇಷಿಸಿದ್ದಾರೆ. ೨೦ನೇ ಶತಮಾನದ ಯೂರೋಪಿನ ವಸಾಹತುಶಾಹಿ ಬಂಡವಾಳಶಾಹಿ ವ್ಯವಸ್ಥೆಯಿಂದ ಸ್ಥಳೀಯ ಉದ್ಯಮಗಳು ನಾಶವಾದವು. ೧೯೪೦-೧೯೫೦ರ ಅವಧಿಯಲ್ಲಿ ಆಧುನಿಕರಣ ಸಿದ್ಧಾಂತ ಅಭಿವೃದ್ಧಿ ಎಂದರೆ ಆರ್ಥಿಕ ಬೆಳವಣಿಗೆಗೆ ಎಂದು

ಪ್ರತಿಪಾದಿಸಿತು. ೧೯೬೦ರಲ್ಲಿ ಅವಲಂಬಿತ ಸಿದ್ಧಾಂತ ಹುಟ್ಟಿಕೊಂಡಿತು. ಈ ಸಿದ್ಧಾಂತ ಆಧುನೀಕರಣ ಸಿದ್ಧಾಂತಕ್ಕೆ ಭಿನ್ನವಾದದು. ೧೯೭೦ರಲ್ಲಿ ಪರ್ಯಾಯ ಅಭಿವೃದ್ಧಿ ಸಿದ್ಧಾಂತ ಅಭಿವೃದ್ಧಿಯ ಅರ್ಥವನ್ನು ಸಾಮಾಜಿಕ ಮತ್ತು ಸಮುದಾಯ ಅಭಿವೃದ್ಧಿಯೆಂದು ವಿಭಿನ್ನವಾಗಿ ಅರ್ಥೈಸಿಸಿತು. ಈ ವಿಧಾನ ಮಾನವ ಅಭಿವೃದ್ಧಿಯ ಯಶಸ್ವಿ ಪ್ರಯತ್ನ ಎನ್ನಲಾಗಿದೆ. ೧೯೮೦ರ ನವ ಉದಾರೀಕರಣ ಸಿದ್ಧಾಂತವು ಅಭಿವೃದ್ಧಿ ಎಂದರೆ ಆರ್ಥಿಕ ಬೆಳವಣಿಗೆ ಎಂದು ಭಾವಿಸಿತು. ಈ ಆರ್ಥಿಕ ಬೆಳವಣಿಗೆಯ ಸಾಧನೆ ವ್ಯವಸ್ಥೆಯ ಮೂಲಭೂತ ಬದಲಾವಣೆಯಿಂದ ಸಾಧ್ಯ ಎಂದು ಪ್ರತಿಪಾದಿಸಿತು. ಅಂದರೆ ಇಡೀ ವ್ಯವಸ್ಥೆಯನ್ನು ಮುಕ್ತ ವ್ಯವಸ್ಥೆಯನ್ನಾಗಿಸಿ ಸರ್ಕಾರದ ಮಧ್ಯೆ ಪ್ರವೇಶವನ್ನು ಕಡಿಮೆ ಮಾಡಿ ಉದಾರೀಕರಣ ಖಾಸಗೀಕರಣ ಮತ್ತು ನಿಯಂತ್ರಣ ಮುಕ್ತ ವ್ಯವಸ್ಥೆ ಅಥವಾ ಮುಕ್ತ ನೀತಿಯ ಮೂಲಕ ಆರ್ಥಿಕ ಪ್ರಗತಿ ಸಾಧಿಸಬಹುದು ಎಂದು ಪ್ರತಿಪಾದಿಸಿತು. ಆದರೆ ಮುಕ್ತ ವ್ಯವಸ್ಥೆ ಮತ್ತು ೧೯೯೦ರ ಅಭಿವೃದ್ಧಿ ನಂತರದ (ಪೋಸ್ಟ್ ಡೆವಲಪ್‌ಮೆಂಟ್) ದೃಷ್ಟಿಕೋನಗಳು ಅಥವಾ ಸಿದ್ಧಾಂತಗಳು ಬಹು ಸಂಖ್ಯಾತ ಜನರ ಆಶಯ ಮತ್ತು ಅಭಿವೃದ್ಧಿಯನ್ನು ಸಾಧಿಸುವಲ್ಲಿ ವಿಫಲವಾದವು.[೧]

ಕಡಿಮೆ ಆದಾಯ ರಾಷ್ಟ್ರಗಳಲ್ಲಿ ಅಥವಾ ಅನಭಿವೃದ್ಧಿ ದೇಶಗಳಲ್ಲಿ ಸಾಂಸ್ಥಿಕ ಕೃಷಿ ಸಾಲ ವಿಸ್ತರಣೆ ಒಂದು ಮುಖ್ಯ ನೀತಿಯಾಗಿದೆ. ಈ ರಾಷ್ಟ್ರಗಳು ವಾರ್ಷಿಕ ೩೦ ದಶಲಕ್ಷದಿಂದ ೪೦ ದಶಲಕ್ಷ ಡಾಲರ್ ಸಾಲ ಪೂರೈಕೆಯಾಗುತ್ತಿದೆ. ಕಡಿಮೆ ಬಡ್ಡಿದರ, ಹೆಚ್ಚು ಆಡಳಿತ ವೆಚ್ಚ ಹಾಗೂ ಕಡಿಮೆ ಮರುಪಾವತಿ ಅಂಶಗಳಿಗೆ ಹೆಚ್ಚಿನ ಸಹಾಯಧನ ನೀಡಲಾಗುತ್ತಿದೆ. ಆದರೆ ಈ ಸಾಲ ವ್ಯವಸ್ಥೆಯ ನಿರೀಕ್ಷಿತ ಮಟ್ಟದ ಸುಧಾರಣೆ ತಂದಿಲ್ಲವೆಂಬ ಅಭಿಪ್ರಾಯ ಹೆಚ್ಚುತ್ತಿದೆ. ಅಂದರೆ ಕೃಷಿ ಆದಾಯ, ಉತ್ಪನ್ನ ಮತ್ತು ಆದಾಯ ಹಂಚಿಕೆಯು ಹೆಚ್ಚುತ್ತಿಲ್ಲ ಎಂಬ ಚರ್ಚೆ ನಡೆಯುತ್ತಿವೆ. ಸಾಲವೆಂಬ ಸಂಪನ್ಮೂಲವನ್ನು ಸಾಗುವಳಿ ಕುಟುಂಬಗಳು ಉತ್ಪಾದನೆ ಅಥವಾ ಅನುಭೋಗ ಕಾರ್ಯಕ್ಕೆ ಬಳಸುವ ತೀರ್ಮಾನ ಸಂಕೀರ್ಣವಾದದು. ಕೃಷಿ ಮೇಲಿನ ಸಾಲದ ಪರಿಣಾಮವನ್ನು ಗುರ್ತಿಸುವುದು ಕಷ್ಟ ಸರ್ಕಾರ ನೀಡುವ ಸಾಲ ಉತ್ಪಾದನೆ ಹೆಚ್ಚಿಸುವ ಉದ್ದೇಶ ಹೊಂದಿರುವುದರಿಂದ ಅನೇಕ ಸಂಶೋಧಕರು ವಿತರಿಸಿದ ಸಾಲ ಉತ್ಪಾದಕ ಚಟುವಟಿಕೆಗೆ ಬಳಕೆಯಾಗಿದೆ ಎಂದು ಭಾವಿಸುತ್ತಾರೆ. ಸಾಗುವಳಿ ಕುಟುಂಬ ಪಡೆಯುವ ಸಾಲದ ಒಟ್ಟು ಪ್ರಯೋಜನಗಳ ಪ್ರಾಯೋಗಿಕ ಮಾಪನ ಸಂಕೀರ್ಣವಾದುದು. ಪಡೆದ ಸಾಲ ಕೃಷಿಯ ಹೂಡುವಳಿ ಮತ್ತು ಉತ್ಪನ್ನವನ್ನು ಹೆಚ್ಚಿಸಿದೆಯೇ ಎಂಬುದನ್ನು ತಿಳಿಯುವುದು ಅಗತ್ಯ. ಸಾಲ ಪಡೆಯುವುದಕ್ಕೆ ಮುಂಚೆ ಮತ್ತು ನಂತರ ವ್ಯತ್ಯಾಸವನ್ನು ಗುರ್ತಿಸಿ ದಾಖಲಿಸುವುದು ಕಷ್ಟಕರ ವಿಷಯ. ಕೆಲವು ಸಂಶೋಧನೆಗಳು ಮಾತ್ರ ಕೃಷಿ ಸಾಲ ಕಾರ್ಯಕ್ರಮಗಳ ಮೇಲೆ ಖರ್ಚು ಮಾಡಿದ ಬೃಹತ್ ಪ್ರಮಾಣದ ಸಾಲದ ಪರಿಣಾಮವನ್ನು ಮಾಪನ ಮಾಡಿದೆ ಎಂಬ ಸಂಗತಿ ಪ್ರಾಯೋಗಿಕ ಸಾಹಿತ್ಯವನ್ನು ಪರಾಮರ್ಶಿಸಿದಾಗ ತಿಳಿದುಬಂದಿತು. ಉದಾಹರಣೆಗೆ ೧೯೭೩ರಲ್ಲಿ ಅಮೇರಿಕಾದ ಅಂತರಾಷ್ಟ್ರೀಯ ಅಭಿವೃದ್ಧಿ ಏಜೆನ್ಸಿಯ

ಪರಾಮರ್ಶೆ ವರದಿಯು ವಿವಿದ ಕೃಷಿ ಸಾಲ ಕಾರ್ಯಕ್ರಮಗಳ ವಿವರವನ್ನು ನೀಡಿದೆ ವಿನಃ ಕೃಷಿ ಸಾಲ ಕೃಷಿಯ ಮೇಲೆ ಯಾವ ರೀತಿಯ ಪರಿಣಾಮ ಬೀರಿದೆ ಎಂಬುದನ್ನು ತಿಳಿಸುವುದಿಲ್ಲ.[೨] ಸಾಂಸ್ಥಿಕ ಹಣಕಾಸು ವ್ಯವಸ್ಥೆಯಲ್ಲಿ ಸಾಲ ಮರುಪಾವತಿ ಮಾಡದವರು ಅನುಪಾತ ಹೆಚ್ಚಾಗಿರುವುದು ಈ ವ್ಯವಸ್ಥೆಯ ಒಂದು ಮುಖ್ಯ ಲಕ್ಷಣ. ಸಾಲ ಮರುಪಾವತಿ ಅವಧಿ ವಿಚಾರದಲ್ಲಿ ಸಾಂಸ್ಥಿಕೇತರ ಸಾಲಗಾರರು ಉದಾರವಾಗಿರುತ್ತಾರೆ. ಆದರೆ ಸಾಂಸ್ಥಿಕ ಹಣಕಾಸು ವ್ಯವಸ್ಥೆಯಲ್ಲಿ ನಿರ್ದಿಷ್ಟ ಅವಧಿಯ ಒಳಗೆ ಸಾಲ ಮರುಪಾವತಿ ಮಾಡುವುದು ಕಡ್ಡಾಯವಾಗಿರುತ್ತದೆ. ಸಾಂಸ್ಥಿಕ ಸಾಲ ವ್ಯವಸ್ಥೆ ವೈಪಲ್ಯತೆಗೆ ಇನೊಂದು ಕಾರಣ. ಬಹುತೇಕ ಸಾಲಗಳು ಕೆಲವೆ ಶ್ರೀಮಂತರ ಪಾಲಾಗುತ್ತವೆ. ಶ್ರೀಮಂತರಿಗೆ ಅಥಾವ ಜಮೀನ್ದಾರರಿಗೆ ನೀಡುವ ಬೃಹತ್ ಮೊತ್ತದ ಸಾಲಗಳ ನಿರ್ವಹಣಾ ವ್ಯವಹಾರ ವೆಚ್ಚ ಕಡಿಮೆ ಇರುವುದು ಇದಕ್ಕೆ ಕಾರಣ.[೩] ಆಧುನಿಕರಣದ ಮೂಲಕ ಹೆಚ್ಚುತ್ತಿರುವ ಉತ್ಪಾದಕತೆಗೆ ಹಣಕಾಸು ಪೂರೈಸಲು ಮತ್ತು ಲೇವಾದೇವಿಗಾರರ ಮೇಲಿನ ಅವಲಂಬನೆ ತಪ್ಪಿಸಲು ಸಣ್ಣ ಸಾಗುವಳಿ ಸಾಲ ವ್ಯವಸ್ಥೆಯನ್ನು ಪರಿಚಯಿಸಲಾಯಿತು. ಇತ್ತೀಚಿನ ಸಾಹಿತ್ಯ ಮತ್ತು ಸಂಶೋಧನೆಗಳ ಪ್ರಕಾರ ಸಾಲ ಸಂಸ್ಥೆಗಳು ಸಣ್ಣ ಹಿಡುವಳಿದಾರರನ್ನು ತಲುಪುವಲ್ಲಿ ಅಥವಾ ಅವರ ಸಾಲ ಅಗತ್ಯಗಳನ್ನು ಪೂರೈಸುವಲ್ಲಿ ತೃಪ್ತಿಕರ ಯಶಸ್ಸು ಸಾಧಿಸಿಲ್ಲ. ಸಹಕಾರಿ ಸಾಲ ಸಂಸ್ಥೆಗಳು ತಮ್ಮ ಅಸ್ತಿತ್ವ ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದು ಸಣ್ಣ ಸಾಗುವಳಿದಾರರ ಅವಶ್ಯಕತೆ ಪೂರೈಸುವಲ್ಲಿ ವಿಫಲವಾಗಿದೆ. ಭಾರತದಲ್ಲಿ ಸಣ್ಣ ಸಾಗುವಳಿದಾರರು ಹೆಚ್ಚು ಇಳುವರಿ ಬರುವಂತಹ ಬೆಳೆಗಳನ್ನು ಬೆಳೆಯದಿರಲು ಕಾರಣವಾಗುವ ಅಂಶಗಳಲ್ಲಿ ಬಂಡವಾಳದ ಕೊರತೆ ಮುಖ್ಯವಾದದು. ಬಂಡವಾಳ ಸಮಸ್ಯೆಯನ್ನು ತೊಡೆದು ಹಾಕುವ ಉದ್ದೇಶ ಹೊಂದಿರುವ ಸಾಲ ಸೌಲಭ್ಯಗಳು ಹೆಚ್ಚಿನ ಪ್ರಮಾಣದಲ್ಲಿ ಪೂರೈಕೆಯಾದರೆ ಹಾಗೂ ತಾಂತ್ರಿಕ ನೆರವು ದೊರೆತರೆ ಸಣ್ಣ ಸಾಗುವಳಿದಾರರ ಆರ್ಥಿಕ ಬೆಳೆವಣಿಗೆಯ ವೇಗ ಹೆಚ್ಚುತ್ತದೆ.[೪] ಬದುಕಲು ಸಂಪನ್ಮೂಲಗಳಿಲ್ಲದೆ ಭೂರಹಿತ ಕಾರ್ಮಿಕರು ಅನಿವಾರ್ಯವಾಗಿ ಅನುಭೋಗ ಸಾಲವನ್ನು ಮಾಡುತ್ತಾರೆ. ಭಾರತದಲ್ಲಿ ಯೋಜನೆಗಳ ಪ್ರಯೋಜನ ನೇರವಾಗಿ ಪ್ರಬಲ ವರ್ಗಗಳನ್ನು ತಲುಪುತ್ತದೆ ಉದಾ: ಸಹಕಾರಿ ಸಾಲ ಸಂಸ್ಥೆಗಳಲ್ಲಿ ಲೇವಾದೇವಿಗಾರರು ಮತ್ತು ಸ್ಥಳೀಯ ಪ್ರಭಾವಿಗಳು ವ್ಯವಸ್ಥಾಪಕ ನಿರ್ದೇಶಕರ ಮಂಡಳಿಗೆ ತಾವೇ ಆಯ್ಕೆಯಾಗಿ ಸಹಕಾರಿ ಸಾಲ ಸಂಸ್ಥೆಗಳಿಂದ ಸಾಲಗಳನ್ನು ಪಡೆದು ಅದನ್ನು ಖಾಸಗಿಯಾಗಿ ತಾವು ಹೊರಗಡೆ ಸಾಲ ನೀಡಲು ಬಳಸುತ್ತಾರೆ.[೫] ಸಾಂಪ್ರದಾಯಕವಾಗಿ ಸ್ಥಳೀಯ ಲೇವಾದೇವಿಗಾರರು ಅಧಿಕ ಬಡ್ಡಿದರದಲ್ಲಿ ಸಾಲಗಳನ್ನು ನೀಡುತ್ತಿದ್ದು, ಸಾಗುವಳಿದಾರರನ್ನು ಶೋಷಣೆ ಮಾಡಲಾಗುತ್ತಿತ್ತು. ಸಾಗುವಳಿದಾರರ ಅಗತ್ಯಗಳನ್ನು ಪೂರೈಸುವ ಅಧಿಕೃತ ಪ್ರಯತ್ನಗಳು ೧೭೯೩ರಲ್ಲಿ ತಕ್ಕಾವಿ ಸಾಲ ವ್ಯವಸ್ಥೆಯೊಂದಿಗೆ ಪ್ರಾರಂಭವಾದವು. ಸ್ಥಳೀಯ ವ್ಯಾಪಾರಸ್ಥರ ಮತ್ತು ಲೇವಾದೇವಿಗಾರರ ಶೋಷಣೆ ತಪ್ಪಿಸಲು ೧೯೦೪ರಲ್ಲಿ ಸಹಕಾರಿ ತತ್ವದ ಮೇಲೆ ಸಾಗುವಳಿದಾರರ ಕೃಷಿ ಸಾಲ ಅಗತ್ಯಗಳನ್ನು ಪೂರೈಸಲು ಸಹಕಾರ ಚಳುವಳಿ ಪ್ರಾರಂಭವಾಗಿ ಸಹಕಾರಿ ಸಾಲ ಸಂಸ್ಥೆಗಳು ಅಸ್ಥಿತ್ವಕ್ಕೆ ಬಂದವು. ಹಾಗೆ ೧೯೩೫ರಲ್ಲಿ ಆದ್ಯತಾ ವಲಯದ ಹಣಕಾಸು ಬೇಡಿಕೆಯನ್ನು ಪೂರೈಸಲು ಅನುಕೂಲವಾಗುವಂತೆ

ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಣಗೊಳಿಸಲಾಯಿತು. ಗ್ರಾಮೀಣ ಪ್ರದೇಶದ ಸಣ್ಣ ಉದ್ಯಮಗಳು ಕರಕುಶಲ ಕುಟುಂಬಗಳಿಗೆ ಬಡವರಿಗೆ ಹಣಕಾಸನ್ನು ಪೂರೈಸಲು ೧೯೭೫ರಲ್ಲಿ ಪ್ರಾದೇಶಿಕ ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳು ಸ್ಥಾಪನೆಯಾದವು. ಅದೇ ರೀತಿ ಕೃಷಿ ಮತ್ತು ಕೃಷಿಯೇತರ ಉದ್ಯಮಗಳ ಅಭಿವೃದ್ಧಿಗೆ ಪೂರಕವಾದ ನೆರವನ್ನು ಒದಗಿಸಲು ಹಾಗೂ ಸಮಗ್ರ ಗ್ರಾಮೀಣಾಭಿವೃದ್ಧಿ ಸಾಧನೆಯ ಉದ್ದೇಶದಿಂದ ೧೯೮೨ರಲ್ಲಿ ಸಾಂಸ್ಥಿಕ ಹಣಕಾಸು ವ್ಯವಸ್ಥೆಯ ಸುಧಾರಣೆ ಮತ್ತು ಈ ವ್ಯವಸ್ಥೆಯ ಮೇಲ್ವಿಚಾರಣೆಯ ಹಿನ್ನೆಲೆಯಲ್ಲಿ ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಬಾರ್ಡ್ ಸ್ಥಾಪನೆಯಾಯಿತು. ಈ ಹಿನ್ನೆಲೆಯಲ್ಲಿ ನಿರ್ದಿಷ್ಟ ಉದ್ದೇಶದೊಂದಿಗೆ ಗ್ರಾಮೀಣ ಪ್ರದೇಶದ ಕೃಷಿ ಮತ್ತು ಕೃಷಿಯೇತರ ಸಾಲ ಅಗತ್ಯಗಳನ್ನು ಪೂರೈಸಲು ಸಾಂಸ್ಥಿಕ ಹಣಕಾಸು ವ್ಯವಸ್ಥೆ ಸ್ಥಾಪನೆಯಾಯಿತು. ಆದರೆ ಈ ವ್ಯವಸ್ಥೆ ಪ್ರಸ್ತುತ ಜಾಗತೀಕರಣ, ಖಾಸಗೀಕರಣದ ಹಿನ್ನೆಲೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಹಣಕಾಸು ಸಂಸ್ಥೆಗಳು ಸ್ಥಾಪನೆಯಾದ ಉದ್ದೇಶದ ಪ್ರಕಾರ ಕಾರ್ಯನಿರ್ವಹಿಸುತ್ತಿವೆಯೇ? ಎಂಬುದನ್ನು ಪರೀಕ್ಷಿಸುವ ಅಗತ್ಯವಿದೆ.[೬] ಆರ್ಥಿಕವಾಗಿ ಸಮರ್ಥವಲ್ಲದ ಅತೀ ಸಣ್ಣ ಮತ್ತು ಭೂ ರಹಿತ ಕೃಷಿ ಕಾರ್ಮಿಕರು ಭೂಮಿಯಂತಹ ಉತ್ಪಾದಕ ಸಂಪನ್ಮೂಲ ಅಥವಾ ಉತ್ಪಾದಕ ಕೃಷಿಯೇತರ ಉದ್ಯೋಗಗಳ ಕೊರತೆಯಿಂದ ಬಹುತೇಕ ಭೂರಹಿತ ಕೃಷಿ ಕಾರ್ಮಿಕ ಕುಟುಂಬಗಳು ಮತ್ತು ಅತೀ ಸಣ್ಣ ಸಾಗುವಳಿ ಕುಟುಂಬಗಳು ಅತ್ಯಂತ ಕೆಳಮಟ್ಟದ ಬದುಕನ್ನು ನಡೆಸುತ್ತಿವೆ. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಉದ್ದೇಶಗಳನ್ನು ವಿವರಿಸುತ್ತಾ ಅವದ್ ಗ್ರಾಮೀಣ ಬ್ಯಾಂಕ್ ಲಖ್ನೋದ ಗ್ರಾಮೀಣ ಬ್ಯಾಂಕ್‌ನ್ನು ಅಧ್ಯಯನವಾಗಿಟ್ಟುಕೊಂಡು ಈ ಬ್ಯಾಂಕಿನ ನಿರ್ದೇಶಕ ಮಂಡಳಿ, ಸಿಬ್ಬಂದಿ ಸಾಮರ್ಥ್ಯ, ಠೇವಣಿ ಸಂಗ್ರಹ ವಿಧಾನ ಈ ಬ್ಯಾಂಕಿನ ಸಾಧನೆ ಸಮಸ್ಯೆಗಳನ್ನು ವಿವರಿಸಲಾಗಿದೆ. ಈ ಬ್ಯಾಂಕಿನ ಹಿನ್ನೆಲೆಯಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಸಾಧನೆಯನ್ನು ತಿಳಿಸಲಾಗಿದೆ. ಅಂದರೆ ೧೯೭೫ರಲ್ಲಿ ಒಂದು ಗ್ರಾಮೀಣ ಬ್ಯಾಂಕ್ ಇದ್ದದ್ದು ೨೦೦೨ರ ಹೊತ್ತಿಗೆ ೧೯೬ರಕ್ಕೆ ಹೆಚ್ಚಿ ೧೪ ಸಾವಿರಕ್ಕೂ ಹೆಚ್ಚು ಶಾಖೆಗಳು ಪ್ರಾರಂಭವಾದವು ಎನ್ನಲಾಗಿದೆ. ಈ ಅಧ್ಯಯನ ಕೇವಲ ಪರಿಮಾಣಾತ್ಮಕ ಪ್ರಗತಿಯನ್ನು ತಿಳಿಸುತ್ತದೆ ವಿನಾಃ ಗ್ರಾಮೀಣ ಬ್ಯಾಂಕುಗಳ ಸಾಧನೆಯನ್ನು ಗುಣಾತ್ಮಕ ಪ್ರಗತಿ ಹಿನ್ನೆಲೆಯಲ್ಲಿ ವಿವರಿಸದಿರುವುದು ಕಂಡುಬರುತ್ತದೆ. ಅಂದರೆ ಯಾವ ಉದ್ದೇಶಕ್ಕೆ ಸಾಲ ನೀಡಲಾಗಿದೆ. ಸಾಲ ಪಡೆದವರ ಆರ್ಥಿಕ ಹಿನ್ನೆಲೆ ಏನು? ಸಾಲದ ಬಳಕೆ ಕೃಷಿ/ಕೃಷಿಯೇತರ ಅಥವಾ ಉತ್ಪಾದನೆ ಅಥವಾ ಅನುಭೋಗಕ್ಕೆ ಬಳಕೆಯಾಗಿದೆಯಾ ಎಂಬ ವಿಶ್ಲೇಷಣೆಗಳು ಕಂಡು ಬಂದಿರುವುದಿಲ್ಲ. ಈ ಅಂಶಗಳ ಆಧಾರದ ಮೇಲೆ ಅಪೆಕ್ಸ್ ಬ್ಯಾಂಕುಗಳ ಸಾಲ ನೀತಿಗಳು, ಧೋರಣೆಗಳು, ಸಾಲಸೌಲಭ್ಯಗಳಿಂದ ವಂಚಿತವಾದ ಜನತೆ ಯಾರು? ಇವರ ಅಗತ್ಯಗಳೇನು? ಈ ಅಗತ್ಯಗಳ ಪೂರೈಕೆಯಲ್ಲಿ ಹಣಕಾಸು ಸಂಸ್ಥೆಗಳ ಮನೋಭಾವ ಹೇಗಿರಬೇಕು? ಎಂಬ ಅಂಶಗಳು ಅಧ್ಯಯನದಲ್ಲಿ ಕಂಡುಬಂದಿರುವುದಿಲ್ಲ.[೬]

ಪ್ರಾಥಮಿಕ ಕೃಷಿ ಸಹಕಾರ ಸಂಸ್ಥೆಗಳು ೧೯೫೧-೫೨ರಲ್ಲಿ ೧.೧೦ ಲಕ್ಷದಷ್ಟು ಇದ್ದದ್ದು ೧೯೫೯-೬೦ರಲ್ಲಿ ೨.೦೩ರಷ್ಟಾಯಿತು. ಹಾಗೆಯೇ ಸದಸ್ಯತ್ವ ಕ್ರಮವಾಗಿ ೪೭.೭೬ ಲಕ್ಷದಷ್ಟಿದ್ದು ೧೯೫೯-೬೦ರಲ್ಲಿ ೧೪೪.೪೩ಕ್ಕೆ ಹೆಚ್ಚಿತು. ಇದು ೧೯೮೪-೮೫ರಲ್ಲಿ ೬೯೧.೮೨ ಲಕ್ಷಕ್ಕೆ ಹೆಚ್ಚಾಯಿತು. ಅದೇ ರೀತಿ ವಾಣಿಜ್ಯ ಬ್ಯಾಂಕುಗಳ ಕಛೇರಿಗಳು ೧೯೬೮-೬೯ರಲ್ಲಿ ಗ್ರಾಮೀಣ ಪ್ರದೇಶದಲ್ಲಿ ೧೮೩೨ರಷ್ಟಿದ್ದು, ೧೯೮೪-೮೫ರಲ್ಲಿ ೩೦೩೩೬ಕ್ಕೆ ಹೆಚ್ಚಿತು. ಅದೇ ರೀತಿ ಕೇಂದ್ರ ಸಹಕಾರಿ ಬ್ಯಾಂಕುಗಳ ಕಛೇರಿಗಳ ಸಂಖ್ಯೆ ೧೯೫೯-೬೦ರಲ್ಲಿ ೧೨೭೭ರಷ್ಟಿದ್ದು, ೧೯೮೧-೮೨ರಲ್ಲಿ ೭೯೧ಕ್ಕೆ ಹೆಚ್ಚಾಯಿತು. ಹಾಗ್ಗೆ ರಾಜ್ಯ ಸಹಕಾರಿ ಬ್ಯಾಂಕುಗಳು ಭೂ ಅಭಿವೃದ್ಧಿ ಬ್ಯಾಂಕುಗಳ ಸಂಖ್ಯೆ ಸಹಾ ಹೆಚ್ಚಾಯಿತು ಎನ್ನಲಾಗಿದೆ. ೧೯೭೦ ರಿಂದ ೧೯೮೪ರವರೆಗೆ ಪ್ರಾಥಮಿಕ ಸಹಕಾರ ಸಂಘಗಳು ವಿವಿಧ ರಾಜ್ಯಗಳಲ್ಲಿ ವಿತರಿಸಿದ ಸಾಲದ ಬಗ್ಗೆ ವಿವರ ನೀಡಲಾಗಿದ್ದು, ಈ ವಿವರಗಳಲ್ಲಿ ಸಾಲ ನೀಡಿದ ರಾಜ್ಯಗಳ ಸ್ಥಾನದಲ್ಲಿ ಕರ್ನಾಟಕ ೭ನೇ ಸ್ಥಾನದಲ್ಲಿದೆ ಎಂದು ಹೇಳಲಾಗಿದೆ. ಹೀಗೆ ಹಣಕಾಸು ಸಂಸ್ಥೆಗಳ ಸಾಧನೆ ಮತ್ತು ಬೆಳವಣಿಗೆಯನ್ನು ಬ್ಯಾಂಕುಗಳ ಶಾಖೆಗಳ ವಿಸ್ತರಣೆಗೆ ಸಂಬಂಧಿಸಿದಂತೆ ಹೆಚ್ಚು ಗಮನ ಹರಿಸಿರುವುದು ತಿಳಿದುಬರುತ್ತದೆ. ಆದರೆ ಸಾಲ ಪಡೆದವರು ಯಾರು? ಅವರ ಆರ್ಥಿಕ ಹಿನ್ನೆಲೆ ಏನು? ಪಡೆದ ಸಾಲ ಯಾವ ಉದ್ದೇಶಕ್ಕೆ ಬಳಕೆಯಾಗಿದೆ? ವಿತರಿಸಿದ ಸಾಲದ ಪರಿಣಾಮವೇನು? ಎಂಬ ಗುಣಾತ್ಮಕ ಅಂಶಗಳ ಬಗ್ಗೆ ಚರ್ಚಿಸಿರುವುದು ಕಂಡು ಬಂದಿರುವುದಿಲ್ಲ.[೮] ಭಾರತದ ಸಂಘಟಿತ ಹಣಕಾಸು ವ್ಯವಸ್ಥೆ ೧೯೯೧ರ ಹಣಕಾಸು ಸುಧಾರಣೆಗಿಂತ ಹಿಂದೆ ಗ್ರಾಮೀಣ ಹಣಕಾಸಿನ ಅಗತ್ಯಗಳನ್ನು ಪೂರೈಸುತ್ತಿತ್ತು. ಆದರೆ ೧೯೯೧ರ ಹಣಕಾಸು ಸುಧಾರಣೆ ನಂತರ ಸಾಂಸ್ಥಿಕ ಹಣಕಾಸು ವ್ಯವಸ್ಥೆ ಗ್ರಾಮೀಣ ಪ್ರದೇಶವನ್ನು ನಿರ್ಲಕ್ಷಿಸಿತು. ಸಣ್ಣ ಮೊತ್ತದ ಸಾಲ ನೀಡಲು ಬ್ಯಾಂಕುಗಳು ಹಿಂಜರಿದವು. ವಾಣಿಜ್ಯ ಬ್ಯಾಂಕುಗಳು ತಮ್ಮ ಶಾಖೆಗಳನ್ನು ಕಡಿತಗೊಳಿಸಿದವು. ಸಂಘಟಿತ ಬ್ಯಾಂಕುಗಳಿಂದ ಸಾಲಗಳನ್ನು ಪಡೆಯುತ್ತಿದ್ದವರು ಯಾರು? ಎಂಬುದರ ಬಗ್ಗೆ ಇಲ್ಲಿ ಚರ್ಚಿಸಿರುವುದಿಲ್ಲ.[೯] ಪ್ರಸಕ್ತ ಗ್ರಾಮೀಣ ಹಣಕಾಸು ವ್ಯವಸ್ಥೆಯು ಬಹುರೂಪ ಪದ್ಧತಿಯಿಂದ ಕೂಡಿದೆ. ಅಂದರೆ ಇದನ್ನು ಔಪಚಾರಿಕ ಹಣಕಾಸು ವ್ಯವಸ್ಥೆ ಎಂದು ಸಹ ಕರೆಯಲಾಗುತ್ತಿದೆ. ೧.೦೯ ಲಕ್ಷ ಪ್ರಾಥಮಿಕ ಸಹಕಾರ ಸಂಘಗಳು, ೩೫೦ ರಾಜ್ಯ/ಕೇಂದ್ರ ಸಹಕಾರಿ ಬ್ಯಾಂಕುಗಳು, ಎನ್.ಜಿ.ಓ ಮತ್ತು ಸ್ವಯಂ ಸೇವಾ ಸಂಸ್ಥೆಗಳು, ೨೦ತಕ್ಕೂ ಹೆಚ್ಚು ಸಣ್ಣ ಹಣಕಾಸು ಸಂಸ್ಥೆಗಳು ಮೂರು ದಶಲಕ್ಷ ಮಹಿಳಾ ಸ್ವಸಹಾಯ ಸಂಘಗಳು ಮತ್ತು ಲೇವಾದೇವಿ ಗಾರರು, ವ್ಯಾಪಾರಸ್ಥರು ಈ ಬಹುರೂಪ ಹಣಕಾಸು ಪದ್ಧತಿಯಲ್ಲಿ ಇದ್ದಾರೆ. ಹಾಗೆ ಗ್ರಾಮೀಣ ಬ್ಯಾಂಕುಗಳು ೧೪೫೦೦ ಶಾಖೆಗಳನ್ನು ಹೊಂದಿದ್ದು ೬೮೨೦೦ ಸಿಬ್ಬಂದಿ ಕಾರ್ಯ ನಿರ್ವಹಿಸುತ್ತಿದ್ದು, ೬೩೦೦೦ ಕೋಟಿ ಮುಂಗಡಗಳನ್ನು ನೀಡಲಾಗಿದ್ದು, ೭೨:೬೩ರಷ್ಟು ಸಾಲ ಠೇವಣಿ ಅನುಪಾತ ಹೊಂದಿದ್ದು, ೪೫ ಲಕ್ಷ ಕಿಸಾನ್ ಕ್ರೆಡಿಟ್ ಕಾರ್ಡ್‌ಗಳ ಮೂಲಕ ೧೧೨೬೫ ಕೋಟಿಯಷ್ಟು ಮುಂಗಡ ನೀಡಲಾಗಿದೆ ಎಂದು ವಿವರಗಳಿವೆ ಆದರೆ ಬಹು ಹಣಕಾಸು ವ್ಯವಸ್ಥೆಯ ಮುಖ್ಯ ಭಾಗವಾಗಿ ಸಾರ್ವಜನಿಕ ಹಣಕಾಸು ಸಂಸ್ಥೆಯಾಗಿ ಗ್ರಾಮೀಣ ಬ್ಯಾಂಕುಗಳು ವಿತರಿಸಿದ ಮುಂಗಡಗಳು

ಗ್ರಾಮೀಣ ಭಾಗದ ಯಾವ ಜನತೆಗೆ ತಲುಪಿವೆ. ಈ ಮುಂಗಡಗಳ ಬಳಕೆ ಮತ್ತು ಗುಣಾತ್ಮಕ ಪರಿಣಾಮಗಳೇನು? ಎಂಬ ವಿಶ್ಲೇಷಣೆ ಇಲ್ಲಿ ಕಂಡು ಬಂದಿರುವುದಿಲ್ಲ (ಡಾ.ದನಂಜಯ ಕುಮಾರ್ ಬಿಸಾಯ್:೨೦೧೦).

ಲಾಭಗಳಿಕೆಯನ್ನು ಉದ್ದೇಶವಾಗಿರಿಸಿಕೊಂಡಿರುವ ಸಾಲ ನೀಡುವ ಹಣಕಾಸು ಸಂಸ್ಥೆಗಳು ಮುಖ್ಯವಾಗಿ ವಾಣಿಜ್ಯ ಬ್ಯಾಂಕುಗಳು ಗ್ರಾಮೀಣ ಭಾಗಗಳಲ್ಲಿ ತನ್ನ ಶಾಖೆಗಳನ್ನು ತೆರೆಯಲು ಇಚ್ಛಿಸುವುದಿಲ್ಲ. ಇದರಿಂದ ಸ್ಥಳೀಯ ಲೇವಾದೇವಿಗಾರರ ಏಕಸ್ವಾಮ್ಯತೆ ಹೆಚ್ಚಿ, ಅಧಿಕ ಬಡ್ಡಿದರದಲ್ಲಿ ಸಾಲ ನೀಡಿ ಗ್ರಾಮೀಣ ಬಡವರನ್ನು ಶೋಷಣೆ ಮಾಡುವ ಸಾಧ್ಯತೆ ಹೆಚ್ಚುವುದು. ಗ್ರಾಮೀಣ ಭಾಗದಲ್ಲಿ ವಾಣಿಜ್ಯ ಬ್ಯಾಂಕುಗಳ ಶಾಖೆಗಳ ಸಂಖ್ಯೆ ೨೦೦೫ರ ಹೊತ್ತಿಗೆ ೩೦೦೦೦ಗಳಿಗೆ ಕಡಿಮೆಯಾಯಿತು. ೧೯೮೦ರಲ್ಲಿ ಕೇಂದ್ರ ಬ್ಯಾಂಕ್ ನಿರ್ದೇಶಿತ ಸಾಲ ನೀತಿಯನ್ನು ರಚಿಸಿ ೧೯೮೫ರ ಹೊತ್ತಿಗೆ ಆದ್ಯತಾ ವಲಯಗಳಿಗೆ ಶೇಕಡಾ ೪೦ರಷ್ಟು ಸಾಲ ಪೂರೈಸಬೇಕು, ಇದರಲ್ಲಿ ಶೇಕಡಾ ೨೫ರಷ್ಟು ಸಾಲ ಸೌಲಭ್ಯ ದುರ್ಬಲ ವರ್ಗಗಳಿಗೆ ವಿತರಣೆಯಾಗಬೇಕೆಂದು ತಿಳಿಸಿತು. ಆದರೆ ೧೯೯೧ರ ನಂತರ ಹಲವು ಅಧ್ಯಯನಗಳು ಗ್ರಾಮೀಣ ಬಡವರ ಹಣಕಾಸು ಸೌಲಭ್ಯಗಳು ಕಡಿಮೆಯಾಗಿದೆ ಎಂಬುದನ್ನು ದೃಢಪಡಿಸಿದೆ. ಒಟ್ಟು ಬ್ಯಾಂಕುಗಳಲ್ಲಿ ಗ್ರಾಮೀಣ ಪ್ರದೇಶದ ಬ್ಯಾಂಕುಗಳ ಪಾಲು ೧೯೯೦ರಲ್ಲಿ ಶೇಕಡಾ ೫೮ ರಷ್ಟಿದ್ದು, ೨೦೦೦ದ ಹೊತ್ತಿಗೆ ಇದು ಶೇಕಡಾ ೫೦ ತಕ್ಕೆ ಕಡಿಮೆಯಾಯಿತು. ಅದೇ ರೀತಿ ಒಟ್ಟು ಬ್ಯಾಂಕು ಹಣಕಾಸಿನಲ್ಲಿ ಗ್ರಾಮೀಣ ಭಾಗಗಳಿಗೆ ಪೂರೈಕೆಯಾದ ಹಣಕಾಸಿನ ಪಾಲು ೧೯೮೮ರಲ್ಲಿ ಶೇಕಡಾ ೧೫.೩ರಷ್ಟಿದ್ದದ್ದು ೨೦೦೦ದ ಹೊತ್ತಿಗೆ ಶೇಕಡಾ ೧೦.೬ಕ್ಕೆ ಕಡಿಮೆಯಾಯಿತು. ಗ್ರಾಮೀಣ ಭಾಗದ ಅತೀ ಸಣ್ಣ ರೈತರು ಕೃಷಿ ಚಟುವಟಿಕೆಗಳಲ್ಲಿ ಆಧುನಿಕ ತಂತ್ರಜ್ಞಾನವನ್ನು ಬಳಕೆ ಮಾಡಿಕೊಳ್ಳಲು ಸಾಧ್ಯವಾಗದೇ ಇರುವುದಕ್ಕೆ ಹಣಕಾಸಿನ ತೊಂದರೆಯೇ ಮುಖ್ಯ ಕಾರಣ ಎನ್ನಬಹುದು (ರೋಹಿಣಿ ಪಾಂಡೆ:೧೯೯೮). ಜಾಗತೀಕರಣದ ದಿನಗಳಲ್ಲಿ ಬಡತನ ನಿರ್ಮೂಲನೆ ಮತ್ತು ಉದ್ಯೋಗ ಸೃಷ್ಟಿಯಲ್ಲಿ ಸರ್ಕಾರದ ನೆರವಿನ ಪ್ರಮಾಣ ಕಡಿಮೆಯಾಗುತ್ತಿದೆ. ಇದು ಮುಂದೆ ಗ್ರಾಮೀಣ ಸಾಲ ಮಾರುಕಟ್ಟೆಗಳಲ್ಲಿ ಸಾಂಸ್ಥಿಕೇತರ ಸಾಲ ವ್ಯವಸ್ಥೆ ತನ್ನ ಹಿಡಿತವನ್ನು ಮತ್ತಷ್ಟು ಹೆಚ್ಚಿಸಿಕೊಳ್ಳುವ ಸಾಧ್ಯತೆ ಇದೆ. ಇದು ಗ್ರಾಮೀಣ ಸಮುದಾಯಗಳ ಮೇಲೆ ಋಣಾತ್ಮಕ ಪರಿಣಾಮ ಬೀರಬಹುದು. ಖಾಸಗಿ ಲೇವಾದೇವಿಗಾರರ ಶೋಷಣೆಯನ್ನು ತಪ್ಪಿಸಿ, ಗ್ರಾಮೀಣ ಜನತೆಯ ಸಾಲ ಸೌಲಭ್ಯಗಳ ಅಗತ್ಯಗಳನ್ನು ಪೂರೈಸುವಲ್ಲಿ ಸಾಂಸ್ಥಿಕ ಹಣಕಾಸು ವ್ಯವಸ್ಥೆ ಮುಖ್ಯ ಪಾತ್ರ ವಹಿಸಿತ್ತು. ಆದರೆ ೧೯೯೧ರ ಉದಾರೀಕರಣದ ನಂತರ ಸಾಂಸ್ಥಿಕ ಹಣಕಾಸು ವ್ಯವಸ್ಥೆಯ ಸಾಲ ಸೌಲಭ್ಯಗಳ ಪ್ರಮಾಣ ಗ್ರಾಮೀಣ ಪ್ರದೇಶಗಳಿಗೆ ಕಡಿಮೆಯಾಗಿದೆ. ಈ ಹಿನ್ನೆಲೆಯಲ್ಲಿ ಗ್ರಾಮೀಣ ಭಾಗದಲ್ಲಿ ಸ್ಥಳೀಯ ಲೇವಾದೇವಿಗಾರರ ನಿಯಂತ್ರಣ ಮತ್ತು ಪ್ರಾಬಲ್ಯ ಹೆಚ್ಚಾಗುವ ಸಾಧ್ಯತೆ ಇದೆ (ಗೌತಮ್ ಪುರಕಾಯಸ್ತ:೨೦೦೮).

ಕಡಿಮೆ ಬಡ್ಡಿದರಲ್ಲಿ ರೈತರಿಗೆ ಅಲ್ಪಾವಧಿ ಸಾಲ ಪೂರೈಕೆ ಮಾಡಿರುವ ಬ್ಯಾಂಕುಗಳಿಗೆ ಕೇಂದ್ರ ಸರ್ಕಾರ ಪರಿಹಾರ ಧನವಾಗಿ ಅಥವಾ ಉತ್ತೇಜನ ಹಣವಾಗಿ ೮೩೦೦ ಕೋಟಿ ಹಣ ಬಿಡುಗಡೆ ಮಾಡಿದೆ. ಕಾಲಕಾಲಕ್ಕೆ ಸಾಲ ಮರುಪಾವತಿ ಮಾಡುತ್ತಿರುವ ರೈತರು ಇದರ ಅನುಕೂಲ ಪಡೆಯಲಿದ್ದಾರೆ. ಹಣಕಾಸು ಇಲಾಖೆ ನಿರಂತರವಾಗಿ ಸಾಲ ಮರುಪಾವತಿ ಮಾಡುತ್ತಿರುವ ರೈತರ ಮಾಹಿತಿ ನೀಡುವಂತೆ ಬ್ಯಾಂಕುಗಳನ್ನು ಕೇಳಿದೆ. ನಾನ್ ಫರ್‌ಫಾರ್ಮಿಂಗ್ ಸಾಲಗಳನ್ನು ಕಡಿಮೆ ಮಾಡುವ ಉದ್ದೇಶದಿಂದ ಸರ್ಕಾರ ಈ ಕ್ರಮ ಕೈಗೊಂಡಿದೆ. ಅದೇ ರೀತಿ ಸಹಕಾರಿ ಬ್ಯಾಂಕುಗಳು ಮತ್ತು ಗ್ರಾಮೀಣ ಬ್ಯಾಂಕುಗಳು ಅಲ್ಪಾವಧಿ ಬೆಳೆ ಸಾಲಗಳನ್ನು ಒದಗಿಸಲು ಸರ್ಕಾರ ನಬಾರ್ಡ್‌ಗೆ ಹೆಚ್ಚುವರಿಯಾಗಿ ೧೦೦೦೦ ಕೋಟಿಯನ್ನು ಬಿಡುಗಡೆ ಗೊಳಿಸಿದೆ. ಸರ್ಕಾರ ಕೃಷಿಗೆ ಒದಗಿಸಬೇಕಾದ ಸಾಲದ ಪ್ರಮಾಣವನ್ನು ಶೇಕಡಾ ೨೫ಕ್ಕೆ ಹೆಚ್ಚಿಸಿದೆ. ಆದ್ಯತಾ ವಲಯದ ನಿಯಮದಡಿ ಬ್ಯಾಂಕುಗಳು ಕೃಷಿ ಕ್ಷೇತ್ರಕ್ಕೆ ಶೇಕಡಾ ೧೮ರಷ್ಟು ಮುಂಗಡ ಸಾಲಗಳನ್ನು ನೀಡಬೇಕಾಗಿದೆ. ಇದರಿಂದ ಹಣಕಾಸು ಸಂಸ್ಥೆಗಳು ಮತ್ತು ಸರ್ಕಾರದ ಧೋರಣೆಯಿಂದ ತಿಳಿದುಬರುವುದೇನೆಂದರೆ ಬ್ಯಾಂಕುಗಳಿಂದ ಸ್ಥಿರಾಸ್ಥಿ ಭದ್ರತೆಯನ್ನು ನೀಡಿ ಸಾಲ ಸೌಲಭ್ಯ ಪಡೆಯಲು ಶಕ್ತರಾಗಿರುವವರು ಮಾತ್ರ ಹಣಕಾಸು ಸೌಲಭ್ಯಗಳನ್ನು ಪಡೆಯುವರು. ಸ್ಥಿರಾಸ್ಥಿಗಳಿಲ್ಲದ ಸಾಮಾನ್ಯರಿಗೆ ಬಡವರಿಗೆ ಭೂರಹಿತ ಕೃಷಿ ಕಾರ್ಮಿಕರಿಗೆ ಸರ್ಕಾರದ ಮೇಲಿನ ಸೌಲಭ್ಯಗಳ ಪ್ರಯೋಜನ ದೊರೆಯುವುದಿಲ್ಲ (ದೀರಜ್ ತಿವಾರ್: ೨೦೧೧). ತಮಿಳುನಾಡಿನಲ್ಲಿ ನಡೆದ ಪ್ರಯೋಗಿಕ ಅಧ್ಯಯನದ ಪಲಿತಾಂಶಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಸಣ್ಣ ರೈತರ ಸಾಲದ ಅಗತ್ಯ ಮತ್ತು ಅದರ ಪರಿಣಾಮಗಳಿಗೆ ಅದ್ಯತೆ ನೀಡಿ ರೈತರೊಂದಿಗೆ ಸಂದರ್ಶನ ನಡೆಸಿ ಸಂಗ್ರಹಿಸಿದ ಮಾಹಿತಿ ವಿಶ್ಲೇಷಣೆ ಪ್ರಕಾರ ಆಧುನಿಕ ಕೃಷಿ ತಂತ್ರಜ್ಞಾನ ಅಳವಡಿಸಿಕೊಂಡು ಉತ್ಪನ್ನ ಹೆಚ್ಚಿಸಿಕೊಳ್ಳಲು ರೈತರಿಗೆ ಹಣಕಾಸಿನ ಅಗತ್ಯವಿದ್ದು ಅದು ಧನಾತ್ಮಕ ಪರಿಣಾಮ ಬೀರುತ್ತದೆ ಎಂದು ಇಲ್ಲಿ ವಾದಿಸಲಾಗಿದೆ. ಸಾಲದ ಅಗತ್ಯಗಳು ಯಾವ ಮೂಲದಿಂದ ಪೂರೈಕೆಯಾದವು ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ. ಸಹಕಾರಿ ಸಾಲ ಸಂಸ್ಥೆಗಳಿಂದ ಅಗತ್ಯ ಪ್ರಮಾಣದಲ್ಲಿ ನೆರವು ಸಿಗದಿದ್ದಾಗ ಅಧಿಕ ಬಡ್ಡಿದರದಲ್ಲಿ ಅಸಂಘಟಿತ ಮೂಲಗಳಿಂದ ಸಾಲ ಪಡೆಯುತ್ತಿದ್ದರು. ಹಣದ ಲೇವಾದೇವಿಗಳಿಂದ ಸಾಲ ಪಡೆಯಲು ಒಡವೆ ಮತ್ತು ಮನೆಗಳನ್ನು ಭದ್ರತೆಯಾಗಿ ನೀಡಿದ್ದರು. ಸಹಕಾರ ಸಂಸ್ಥೆಗಳಲ್ಲಿ ದೊಡ್ಡ ರೈತರ ಪ್ರಭಾವ ಹೆಚ್ಚಾಗಿದ್ದರಿಂದ ಕಡಿಮೆ ಸಂಖ್ಯೆಯ ರೈತರು ಈ ಸಂಸ್ಥೆಗಳಲ್ಲಿ ಸದಸ್ಯರಾಗಿದ್ದರು (ಎಸ್.ಗುಣಶೇಖರನ್:೧೯೮೫).

ಕರ್ನಾಟಕದ ರಾಜ್ಯ ಮಟ್ಟದಲ್ಲಿ ಮತ್ತು ಗ್ರಾಮ ಮಟ್ಟದಲ್ಲಿ ಮತ್ತು ೧೯೭೨ ರಿಂದ ಸಂಭವಿಸಿದ ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಕರ್ನಾಟಕದ ರಾಜಕೀಯ ನಾಯಕತ್ವವನ್ನು ವಿಶ್ಲೇಷಿಸಲಾಗಿದೆ. ಕರ್ನಾಟಕ ರಾಜ್ಯದಲ್ಲಿ ಸಂಭವಿಸಿದ ಮುಖ್ಯ ಬದಲಾವಣೆಗಳನ್ನು ಚರ್ಚಿಸಲಾಗಿದೆ. ೧. ಸ್ವಾತ್ರಂತ್ರ್ಯದ ಅವಧಿಯಿಂದಲೂ ರಾಜ್ಯಮಟ್ಟದ ರಾಜಕೀಯದಲ್ಲಿ ಲಿಂಗಾಯತ ಮತ್ತು ಒಕ್ಕಲಿಗರ ಪ್ರಾಬಲ್ಯ ವಿದ್ದದ್ದು. ೨. ೧೯೮೩ರಲ್ಲಿ ರಾಜ್ಯದಲ್ಲಿ

ಕಾಂಗ್ರೆಸ್ ಸೋಲುವುದರೊಂದಿಗೆ ರಾಜ್ಯದ ಪಕ್ಷ ವ್ಯವಸ್ಥೆ ಬದಲಾಯಿತು. ೩. ೧೯೮೦ರ ನಂತರ ಬೆಂಗಳೂರಿನಲ್ಲಿ ಸಾಫ್ಟ್‌ವೇರ್ ಮತ್ತು ಹೊರಗುತ್ತಿಗೆ ಪ್ರಮುಖ ಚಟುವಟಿಕೆಗಳು. ರಾಜ್ಯದ ಮುಖ್ಯ ಮಂತ್ರಿಗಳಾದ ರಾಮಕೃಷ್ಣ ಹೆಗಡೆ, ಬಂಗಾರಪ್ಪ, ಗುಂಡೂರಾವ್ ಮತ್ತು ದೇವರಾಜ್ ಅರಸ್‌ರ ಆಡಳಿತ ವ್ಯವಸ್ಥೆಯನ್ನು ವಿಶ್ಲೇಷಿಸಲಾಗಿದೆ (ಜೇಮ್ಸ್ ಮೇನರ್: ೨೦೦೭). ಕರ್ನಾಟಕದ ಅಭಿವೃದ್ಧಿ ರಾಜಕಾರಣ ಕುರಿತಂತೆ ಕರ್ನಾಟಕ ಮತ್ತು ಕೇರಳದ ಅಭಿವೃದ್ಧಿ ನೀತಿಗಳ ವಿಶ್ಲೇಷಣೆ ಮಾಡಲಾಗಿದೆ. ಬಹುತೇಕ ಅಭಿವೃದ್ಧಿ ಮಾನದಂಡಗಳ ಪ್ರಕಾರ ದೇಶದಲ್ಲೇ ಮಂಚೂಣಿಯಲ್ಲಿರುವ ರಾಜ್ಯವೆಂದರೆ ಕೇರಳ ಎನ್ನಲಾಗಿದೆ. ಕೇರಳದ ಈ ಸಾಧನೆಯ ಹಿಂದೆ ಕೆಲವೊಂದು ಅಭಿವೃದ್ಧಿ ನೀತಿಗಳ ಪಾತ್ರ ಬಹುದೊಡ್ಡದು ಎನ್ನಲಾಗಿದೆ. ಅವುಗಳೆಂದರೆ ಭೂ ಸುಧಾರಣೆ ಮಸೂದೆ, ಅಭಿವೃದ್ಧಿ ಆಡಳಿತ ವಿಕೇಂದ್ರೀಕರಣ, ಎಲ್ಲರಿಗೂ ಸಿಗುವ ಶಿಕ್ಷಣ ಮತ್ತು ಆರೋಗ್ಯ ಸವಲತ್ತುಗಳು ಇತ್ಯಾದಿ ನೀತಿಗಳು ಸಾಕಷ್ಟು ಕೆಲಸ ಮಾಡಿವೆ. ಕರ್ನಾಟಕ ಕೂಡಾ ಮೇಲಿನ ಎಲ್ಲಾ ಅಭಿವೃದ್ಧಿ ಕ್ರಮಗಳನ್ನು ಕೈಗೊಂಡಿದೆ. ಆದರೆ ಕರ್ನಾಟಕದ ಸಾಧನೆ ಮತ್ತು ಕೇರಳ ಸಾಧನೆಯ ನಡುವೆ ಸಾಕಷ್ಟು ವ್ಯತ್ಯಾಸವಿದೆ ಎಂದು ವಿಶ್ಲೇಷಿಸಲಾಗಿದೆ. ಕೆಲವು ಅಂಕಿ ಅಂಶಗಳ ಮೂಲಕ ಈ ವ್ಯತ್ಯಾಸವನ್ನು ಅರ್ಥ ಮಾಡಿಕೊಳ್ಳಬಹುದು. ಕೇರಳದಂತೆ ಕರ್ನಾಟಕದಲ್ಲಿ ೭೦ರ ದಶಕದಲ್ಲೇ ಭೂ ಸುಧಾರಣೆಯನ್ನು ಜಾರಿಗೆ ತರಲಾಗಿದೆ. ಆದರೆ ಭೂರಹಿತರಿಗೆ ಭೂಮಿ ನೀಡುವ ವಿಚಾರದಲ್ಲಿ ಕರ್ನಾಟಕದ ಸಾಧನೆ ಏನೇನೂ ಇಲ್ಲ. ೧೯೭೧ರಲ್ಲಿ ಕರ್ನಾಟಕದಲ್ಲಿ ಸುಮಾರು ಶೇಕಡಾ ೩೨.೭ರಷ್ಟು ಭೂ ರಹಿತ ಮತ್ತು ಅರೆ ಭೂರಹಿತ ಕುಟುಂಬಗಳಿದ್ದವು. ೧೯೯೨ರಲ್ಲಿ ಅಂತಹ ಕುಟುಂಬಗಳ ಪ್ರಮಾಣ ಶೇಕಡಾ ೩೨ಕ್ಕೆ ಇಳಿದಿದೆ. ಅಂದರೆ ಶೇಕಡಾ ೦.೭ರಷ್ಟು ಮಾತ್ರ ಕಡಿಮೆಯಾಗಿದೆ. ಆದರೆ ಕೇರಳದಲ್ಲಿ ಈ ಪ್ರಮಾಣ ೧೯೭೧ರಲ್ಲಿ ಶೇಕಡಾ ೧೫ರಷ್ಟಿದ್ದ ಭೂರಹಿತ ಕುಟುಂಬಗಳ ಸಂಖ್ಯೆ ೧೯೯೦–೯೧ರಲ್ಲಿ ಶೇಕಡಾ ೮ಕ್ಕೆ ಇಳಿದಿದೆ (ಡಾ. ಎಂ. ಚಂದ್ರ ಪೂಜಾರಿ:೨೦೦೮). ಒಂದು ಭಾಷೆ, ಸಂಸ್ಕೃತಿ, ಚರಿತ್ರೆ ಇತ್ಯಾದಿಗಳ ನೆಲೆಯಲ್ಲಿ ತನ್ನ ಪ್ರತ್ಯೇಕತೆಯನ್ನು ಸಾಧಿಸಿ ಪ್ರತ್ಯೇಕ ರಾಜ್ಯ ಪಡೆದ **ಕರ್ನಾಟಕ ಪಂಚವಾರ್ಷಿಕ ಯೋಜನೆಗಳಲ್ಲಿ** ತನ್ನ ಪತ್ಯೇಕತೆಯನ್ನು ಉಳಿಸಿಕೊಂಡಿಲ್ಲ. ಕೇಂದ್ರ ಸರ್ಕಾರ ಮಂಚೂಣಿಗೆ ತಂದ ಅಭಿವೃದ್ಧಿ ಮಾದರಿ ಹಾಗೂ ಯೋಜನೆಗಳನ್ನು ಯತಾವತ್ತಾಗಿ ಅಥವಾ ಸಣ್ಣ ಬದಲಾವಣೆಗಳೊಂದಿಗೆ ಕರ್ನಾಟಕ ಸಹಾ ಅನುಸರಿಸಿದೆ ಎನ್ನಲಾಗಿದೆ. ಉತ್ಪಾದನಾ ಪ್ರಮಾಣವನ್ನು ಹೆಚ್ಚಿಸುವುದಕ್ಕೆ ಈ ಮಾದರಿ ಹೆಚ್ಚು ಆದ್ಯತೆ ನೀಡಿದೆ. ಕೇಂದ್ರ ಅನುಸರಿಸಿದ ಅಭಿವೃದ್ಧಿ ಮಾದರಿಯಲ್ಲಿ ಭೂಮಿ, ಬಂಡವಾಳ ಮತ್ತು ಆಧುನಿಕ ಕೌಶಲ್ಯ ಮುಖ್ಯ ಪಾತ್ರ ವಹಿಸುತ್ತವೆ. ಈ ಸಂಪನ್ಮೂಲಗಳನ್ನು ಹೊಂದಿರುವವರು ಮಾತ್ರ ಕೇಂದ್ರ ಅನುಸರಿಸಿದ ಅಭಿವೃದ್ಧಿ ಮಾದರಿಯಿಂದ ಹೆಚ್ಚು ಲಾಭ ಪಡೆಯಲು ಸಾಧ್ಯ ಎಂದು ವಿಶ್ಲೇಷಿಸಿದ್ದಾರೆ. ಆದರೆ ಈ ಸಂಪನ್ಮೂಲಗಳಲ್ಲಿ ಯಾವುದಾದರೂ ಒಂದು ಇಲ್ಲದಿದ್ದರೂ ಇಂತಹ ಅಭಿವೃದ್ಧಿ ಮಾದರಿಯ ಪ್ರಯೋಜನದಿಂದ ಹೊರಗುಳಿಯಬೇಕಾಗುತ್ತದೆ. ಇದೇ ರೀತಿಯ ಮಾದರಿಯನ್ನು ಕರ್ನಾಟಕ ತನ್ನ ಪಂಚವಾರ್ಷಿಕ ಯೋಜನೆಗಳಲ್ಲಿ ಅನುಸರಿಸುತ್ತಿರುವುದನ್ನು ಕಾಣಬಹುದು ಎನ್ನಲಾಗಿದೆ.

ಭೂ ಮಾಲೀಕರು, ಬಂಡವಾಳಿಗರು ಮತ್ತು ಸಮಾಜದ ಕೆಳಸ್ಥರ ಜನತೆ ಪಂಚವಾರ್ಷಿಕ ಯೋಜನೆಗಳಿಂದ ಪಡೆದ ಲಾಭಗಳನ್ನೂ ಸಹಾ ವಿಶ್ಲೇಷಿಸುತ್ತಾ ಕೃಷಿ, ನೀರಾವರಿ, ವಿದ್ಯುತ್ ಮತ್ತು ಕೈಗಾರಿಕಾ ಕ್ಷೇತ್ರದಲ್ಲಿನ ಯೋಜನೆಯ ಖರ್ಚಿನಲ್ಲಿ ಶೇಕಡಾ ೯೦ರಷ್ಟು ಭೂ ಮಾಲೀಕರು ಮತ್ತು ಬಂಡವಾಳಿಗರ ಪಾಲಾಗಿದೆ ಎನ್ನಲಾಗಿದೆ. ಹೀಗೆ ಕರ್ನಾಟಕ ಪಂಚವಾರ್ಷಿಕ ಯೋಜನೆಗಳನ್ನು ಅಭಿವೃದ್ಧಿ ರಾಜಕಾರಣದ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಿರುವುದನ್ನು ಕಾಣಬಹುದು. ಈ ರೀತಿಯ ಪ್ರಯತ್ನಗಳು/ಅಧ್ಯಯನಗಳು ಕರ್ನಾಟಕದಲ್ಲಿ ವಿರಳ ಎನ್ನಬಹುದು (ಡಾ. ಎಂ. ಚಂದ್ರ ಪೂಜಾರಿ: ೨೦೧೦).

ಭೂ ರಹಿತರಲ್ಲಿ ಬಹುತೇಕರು ದಲಿತರು ಮತ್ತು ಭೂಮಾಲೀಕರಲ್ಲಿ ಬಹುತೇಕರು ಬಲಾಢ್ಯ ಸಮುದಾಯಗಳವರೇ ಇದ್ದಾರೆ. ಏಕೀಕೃತ ಕರ್ನಾಟಕದಲ್ಲಿ ಬಂದು ಹೋದ ಮೂರು ಭೂ ಸುಧಾರಣೆಗಳು ಏಕೀಕರಣ ಸಂದರ್ಭದಲ್ಲಿದ್ದ ಭೂಮಿ ಸಂಬಂಧವನ್ನು ಮೂಲಭೂತವಾಗಿ ಪರಿವರ್ತಿಸಲು ವಿಫಲವಾಗಿವೆ. ೧೯೭೪ರ ಕಾಯಿದೆಯ ಅನುಷ್ಟಾನ ಮತ್ತು ಪರಿಣಾಮದ ಬಗ್ಗೆ ಸಾಕಷ್ಟು ಅದ್ಯಯನಗಳು ನಡೆದಿವೆ. ಈ ಅಧ್ಯಯನಗಳಲ್ಲಿ ಬಹುತೇಕ ಅಧ್ಯಯನಗಳು ೧೯೭೪ರ ಕಾಯಿದೆ ಕರ್ನಾಟಕದಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಂಡಿದೆ ಎನ್ನುವ ತೀರ್ಮಾನಕ್ಕೆ ಬರುತ್ತವೆ. ಆದರೆ ೧೯೭೪ರ ಕಾಯಿದೆಯ ಅನುಷ್ಠಾನದಿಂದ ಕರ್ನಾಟಕದ ಭೂ ಸಂಬಂಧಗಳು ಸಂಪೂರ್ಣವಾಗಿ ಬದಲಾಗಿದೆ ಎನ್ನುವುದು ಸತ್ಯಕ್ಕೆ ದೂರವಾದ ಸಂಗತಿ ಎನ್ನಲಾಗಿದೆ. ಇಲ್ಲಿ ಭೂ ಸುಧಾರಣೆ ಕಾಯಿದೆಗಳ ವಿಫಲತೆಗೆ ಸಾಕಷ್ಟು ಕಾರಣಗಳನ್ನು ಪಟ್ಟಿ ಮಾಡಲಾಗಿದೆ. ಕಾನೂನುಗಳ ಮೂಲಕ ಭೂ ಸುಧಾರಣೆ ಪರಿಣಾಮಕಾರಿಯಾಗಿ ಜಾರಿಯಾದರೆ ಬಡವ ಶ್ರೀಮಂತರ, ಉಳ್ಳವರ ಉಳ್ಳದವರ ನಡುವಿನ ಅಭಿವೃದ್ಧಿಯ ಅಂತರ ಕಡಿಮೆಯಾಗುತ್ತದೆ. ಭೂರಹಿತರ ಸಂಖ್ಯೆ ಕಡಿಮೆಯಾಗುತ್ತದೆ. ಕೃಷಿ ಮಾಡುವವರು ಹೆಚ್ಚಿ, ಕೃಷಿ ಉತ್ಪನ್ನವು ಹೆಚ್ಚುವುದು ಎನ್ನಲಾಗಿದೆ. ಈ ಹಿನ್ನೆಲೆಯಲ್ಲಿ ಅಭಿವೃದ್ಧಿ ಮತ್ತು ಅಭಿವೃದ್ಧಿ ರಾಜಕಾರಣವನ್ನು ಆ ಮೂಲಕ ರಾಜಕೀಯ ಆರ್ಥಿಕತೆಯ ಸ್ವರೂಪವನ್ನು ಇಲ್ಲಿ ವಿಶ್ಲೇಷಿಸಲಾಗಿದೆ ಹಾಗೂ ಇವುಗಳನ್ನು ಬೇರೆ ದೃಷ್ಟಿಕೋನದಿಂದ ನೋಡಬೇಕಾದ ಅನಿವಾರ್ಯತೆಯನ್ನು ಪ್ರತಿಪಾದಿಸಲಾಗಿದೆ (ಡಾ. ಎಂ. ಚಂದ್ರ ಪೂಜಾರಿ:೨೦೧೦). ಸಹಕಾರಿ ಬ್ಯಾಂಕುಗಳು; ರಾಜ್ಯ ಹಾಗೂ ಕೇಂದ್ರ ಸಹಕಾರಿ ಬ್ಯಾಂಕುಗಳು, ಕೃಷಿ ಮತ್ತು ಕೃಷಿಯೇತರ ಸಹಕಾರಿ ಬ್ಯಾಂಕುಗಳನ್ನು ಒಳಗೊಂಡಂತೆ ಕರ್ನಾಟಕ ರಾಜ್ಯದಲ್ಲಿ ಸಹಕಾರಿ ಸಂಸ್ಥೆಗಳ ಸಂಖ್ಯೆ ಉತ್ತಮವಾಗಿದೆ. ೮೩೯೯ ಕೃಷಿ ಸಾಲ ಸಂಸ್ಥೆಗಳು ೧೯೭೪ರ ಹೊತ್ತಿಗೆ ಶೇಕಡಾ ೫೩ರಷ್ಟು ಕೃಷಿ ಕುಟುಂಬಗಳನ್ನು ಒಳಗೊಂಡಿದ್ದವು. ಸಾಲ ನೀಡಿಕೆಯು ಸಹಾ ೧೯೫೬-೫೭ರಲ್ಲಿ ೬.೪೩ ಕೋಟಿ ಇದ್ದದ್ದು ೬ನೇ ಪಂಚವಾರ್ಷಿಕ ಯೋಜನೆಯ ಕೊನೆಗೆ ೭೦.೭೪ ಕೋಟಿಗೆ ಹೆಚ್ಚಿತು. ಠೇವಣಿ ಸಂಗ್ರಹ ಸಹಾ ೧೯೫೬-೫೭ರಲ್ಲಿ ೦.೭೨ ಇದ್ದದ್ದು ೧೯೭೩-೭೪ರ ಹೊತ್ತಿಗೆ ೪.೫೩ ಕೋಟಿಗೆ ಹೆಚ್ಚಿತು. ಆದರೆ ಈ ಸಹಕಾರಿ ಸಾಲ ಸಂಸ್ಥೆಗಳಿಂದ ಸಾಲದ ಪ್ರಯೋಜನ ಪಡೆದವರು ಯಾರು? ಸಾಲ ಸೌಲಭ್ಯದಿಂದ ಹೊರಗುಳಿದವರು ಯಾರು? ಸಾಲ ಸೌಲಭ್ಯ ಪಡೆದವರು ಸಾಲಗಳನ್ನು

ಯಾವ ಉದ್ದೇಶಗಳಿಗೆ ಉಪಯೋಗಿಸಿಕೊಂಡಿದ್ದಾರೆ ಎಂಬ ವಿಶ್ಲೇಷಣೆ ಇಲ್ಲಿ ಕಂಡುಬಂದಿರುವುದಿಲ್ಲ (ವಿ ಕೆ ಆರ್ ವಿ ರಾವ್: ೧೯೭೭). ಇಂಪ್ಯಾಕ್ಟ್ ಆಫ್ ಇನ್‌ಸ್ಟೂಷನಲ್ ಕ್ರೆಡಿಟ್ ಆನ್ ರೂರಲ್ ಪೂರ್ ವಿತ್ ಸ್ಪೆಷಲ್ ರೆಫರೆನ್ಸ್ ಟೂ ದಿ ಫರ್‌ಫಾರ್ಮೆನ್ಸ್ ಆಫ್ ಎ **ರೀಜಿನಲ್ ರೂರಲ್ ಬ್ಯಾಂಕ್ ಇನ್ ಕರ್ನಾಟಕ:** ತುಂಗಭದ್ರ ಗ್ರಾಮೀಣ ಬ್ಯಾಂಕನ್ನು ಅಧ್ಯಯನವಾಗಿಟ್ಟುಕೊಂಡು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಉದ್ದೇಶ ಸ್ಥಾಪನೆಯಾದ ಹಿನ್ನೆಲೆ ಮತ್ತು ಸಾಧನೆಯನ್ನು ವಿವರಿಸುವಾಗ ಪರಿಮಾಣಾತ್ಮಕ ವಿಚಾರಗಳಿಗೆ ಅಂದರೆ ವಿತರಿಸಿದ ಸಾಲದ ಪ್ರಮಾಣವೆಷ್ಟು? ಹಾಗೂ ಗ್ರಾಮೀಣಾಭಿವೃದ್ಧಿಯಲ್ಲಿ ಈ ಬ್ಯಾಂಕುಗಳ ಪಾತ್ರವೇನು? ಎಂದು ವಿವರಿಸುತ್ತಾ ೧೯೭೫ ಅಕ್ಟೋಬರ್‌ನಲ್ಲಿ ೫ ಬ್ಯಾಂಕುಗಳೊಂದಿಗೆ ಸ್ಥಾಪನೆಯಾದ ಗ್ರಾಮೀಣ ಬ್ಯಾಂಕುಗಳು ಇಂದು ೧೯೬ರಕ್ಕೆ ಹೆಚ್ಚಿದೆ ಎಂದು ವಿವರಿಸಲಾಗಿದೆ. ಆದರೆ ಗ್ರಾಮೀಣ ಬ್ಯಾಂಕುಗಳ ಸ್ಥಾಪನೆ ಹಾಗೂ ವಿತರಿಸಿದ ಸಾಲಗಳು ಗ್ರಾಮೀಣ ಪ್ರದೇಶದಲ್ಲಿ ಸಾಮಾಜಿಕ ಆರ್ಥಿಕ ಪರಿಸ್ಥಿತಿಯ ಮೇಲೆ ಯಾವ ರೀತಿಯ ಪರಿಣಾಮವನ್ನು ಬೀರಿದೆ. ಪ್ರಾದೇಶಿಕ ಅಸಮಾನತೆಯಲ್ಲಿ ಅಂದರೆ ಬಡತನ ಮತ್ತು ಆದಾಯ ಅಸಮಾನತೆ ನಿವಾರಣೆಯ ದೃಷ್ಟಿಯಿಂದ ಈ ಬ್ಯಾಂಕುಗಳ ಮಹತ್ವವೇನು? ಎಂಬ ವಿಶ್ಲೇಷಣಾತ್ಮಕ ಅಂಶಗಳು ಕಂಡು ಬಂದಿರುವುದಿಲ್ಲ (ಹೆಚ್.ಎಸ್. ಶೈಲೇಂದ್ರ: ೧೯೯೨). ಇವರು **ಪ್ರಸ್ತುತ ಕರ್ನಾಟಕದ ಕೃಷಿ ವಲಯದ ಸ್ಥಿತ್ಯಂತರಗಳನ್ನು** ಚರ್ಚಿಸಿದ್ದಾರೆ. ಮಳೆಯ ಪ್ರಮಾಣ ಕಡಿಮೆ ಇದ್ದು, ಕರ್ನಾಟಕ ಬರಗಾಲ ಪ್ರದೇಶವಾಗಿದೆ. ನೀರಾವರಿ ವ್ಯಾಪ್ತಿಯಲ್ಲಿ ಬರುವ ಪ್ರದೇಶ ಕಡಿಮೆ ಇದೆ. ಬೆಳೆ ಪದ್ದತಿಯಲ್ಲಿ ಕಡಮೆ ಮೌಲ್ಯದ ಮತ್ತು ಕಡಿಮೆ ಸಾಂದ್ರತೆಯ ಬೆಳೆಗಳು ಹೆಚ್ಚಾಗಿವೆ. ಕೃಷಿ ಹೂಡುವಳಿಗಳ ಬೆಲೆ ಹೆಚ್ಚಳ ಮತ್ತು ಉತ್ಪಾದಕತೆಯಲ್ಲಿನ ಅಧಿಕ ಅಸ್ಥಿರತೆಯಿಂದ ರೈತ ವರ್ಗದ ನೈಜ ಉಳಿತಾಯ ಕುಸಿದಿದೆ. ಹೀಗಾಗಿ ರೈತರು ಉಳಿತಾಯದ ಮೂಲಕ ಉತ್ಪಾದನೆಯ ಅಗತ್ಯಗಳನ್ನು ನಿರ್ವಹಿಸಲು ಸಾದ್ಯವಾಗುತ್ತಿಲ್ಲ. ಸಣ್ಣ ಮತ್ತು ಅತೀ ಸಣ್ಣ ರೈತರ ವಿಚಾರದಲ್ಲಿ ಈ ರೀತಿಯ ದುಸ್ಥಿತಿ ಹೆಚ್ಚಾಗಿದೆ. ಹೀಗಾಗಿ ಸಾಲ ಎಂಬುದು ಅತ್ಯಂತ ಅಗತ್ಯ ಎಂದು ವಿಶ್ಲೇಷಿಸಲಾಗಿದೆ. ಗ್ರಾಮೀಣ ರೈತ ಕುಟುಂಬಗಳಿಗೆ ಸಾಲ ಸೌಲಭ್ಯವು ಆದಾಯ ಮತ್ತು ಆದಾಯೇತರ ಚಟುವಟಿಕೆಗಳಿಗೆ ಸಾಲದ ಅಗತ್ಯವಿದೆ. ಅಲ್ಪಾವಧಿ ಮತ್ತು ಧೀರ್ಘಾವಧಿ ಅಗತ್ಯಗಳು ಇವೆ. ಉಳಿತಾಯ ಪ್ರಮಾಣ ಕಡಿಮೆ ಇರುವುದರಿಂದ ರೈತ ಕುಟುಂಬಗಳು ಆರೋಗ್ಯ ಮತ್ತು ಸಾಮಾಜಿಕ ಜವಾಬ್ದಾರಿಗಳನ್ನು ಸಾಲದ ಮೂಲಕವೇ ನಿರ್ವಹಿಸಬೇಕಾಗಿದೆ. ಸಾಂಸ್ಥಿಕ ಹಣಕಾಸು ಸಂಸ್ಥೆಗಳು ಅನುತ್ಪಾದಕ ಉದ್ದೇಶಗಳಿಗೆ ಸಾಲ ನೀಡುವುದಿಲ್ಲ. ಹಾಗೆಯೇ ಉತ್ಪಾದಕ ಉದ್ದೇಶಗಳಿಗೂ ಸಾಲ ಪಡೆಯುವುದು ಈ ಮೂಲದಿಂದ ಕಷ್ಟ. ಇಂತಹ ಸಂದರ್ಭಗಳಲ್ಲಿ ರೈತವರ್ಗ ಸಾಂಸ್ಥಿಕೇತರ ಮೂಲಗಳಿಂದ ಹೆಚ್ಚು ಸಾಲ ಪಡೆಯಲಾಗುತ್ತಿದೆ. ಹೀಗೆ ಬೇರೆ ಬೇರೆ ಅಂಶಗಳು ಮತ್ತು ಕಾರಣಗಲಿಂದ ರೈತ ವರ್ಗದ ಋಣಭಾರ ಹೆಚ್ಚಿ ಆತ್ಮಹತ್ಯೆಯಲ್ಲಿ ಪರ್ಯಾಸನಗೊಳ್ಳುತ್ತಿವೆ (ಮೀನಾಕ್ಷಿ ರಾಜೀವ್ ಮತ್ತು ಬಿ.ಪಿ. ವಾಣ:೨೦೧೨). **ಕರ್ನಾಟಕದ ಐಡೆಂಟಿಟಿ** ರಾಜಕೀಯ ಮತ್ತು ರೈತ ಹೋರಾಟಗಳು ಎಂಬ ಸಂಶೋಧನಾಧಾರಿತ ಗ್ರಂಥದಲ್ಲಿ ಇವತ್ತಿನ ಜಾಗತೀಕರಣದ ಸಂದರ್ಭದಲ್ಲಿ ನಡೆಯುತ್ತಿರುವ ರೈತರ ಆತ್ಮಹತ್ಯೆಯನ್ನು ಪ್ರತಿಭಟನೆಯ ಒಂದು ರೂಪ ಇನ್ನಲಾಗಿದೆ. ರೈತರ ಆತ್ಮಹತ್ಯೆಗೆ ಕೇವಲ

ಬೆಳೆ ಸಾಲ ಅಥವಾ ಬೆಳೆ ನಾಶವೇ ಕಾರಣವೆಂದು ವಾದಿಸಲು ಸಾಧ್ಯವಿಲ್ಲ. ಜಾಗತೀಕರಣದ ಸಂದರ್ಭದಲ್ಲಿ ರೈತರು ತಮ್ಮ ಅಸ್ತಿತ್ವದ ಕುರುಹಾದ ಭೂಮಿಯನ್ನು ಕಳೆದು ಕೊಳ್ಳುವ ಬಯವೇ ಅವರನ್ನು ಆತ್ಮಹತ್ಯೆಗೆ ಪ್ರೇರೇಪಿಸುತ್ತಿದೆ ಎಂಬುದು ನನ್ನ ಭಾವನೆ (ಮುಜಾಫರ್ ಅಸಾದಿ:೨೦೦೯). ೧೯೯೮ರಲ್ಲಿ **ಕರ್ನಾಟಕದ ಬೀದರ್** ಜಿಲ್ಲೆಯಲ್ಲಿ ಸುಮಾರು ೧೫ ರೈತರು ಆತ್ಮಹತ್ಯೆಗೆ ಈಡಾದರು. ಇದಕ್ಕೆ ಕಾರಣವಾದ ಅಂಶಗಳಲ್ಲಿ ಮುಖ್ಯವಾಗಿ ಕೃಷಿಯಲ್ಲಿ ಉತ್ಪಾದತೆಯ ಕುಸಿತ, ಪರಿಸರದ ಅಸಮತೋಲನ ಹಾಗು ಆರ್ಥಿಕವಾಗಿ ತಮ್ಮ ಕೃಷಿ ಹಣಕಾಸಿನ ಅಗತ್ಯಗಳನ್ನು ರೈತರು ದುಬಾರಿ ಬಡ್ಡಿಯ ಅಸಂಘಟಿತ ಮೂಲದಿಂದ ಪಡೆದಿದ್ದರು. ಈ ರೀತಿಯ ಕೃಷಿ ಬಿಕ್ಕಟ್ಟುಗಳು ಮತ್ತು ಸಾಲದ ಒತ್ತಡಗಳು ರೈತರ ಆತ್ಮಹತ್ಯೆಗೆ ಪ್ರೇರಣೆ ನೀಡಿದವು. (ವಾಸವಿ ಎ.ಆರ್: ೧೯೯೯).

ಗ್ರಾಮೀಣ ಹಣಕಾಸು ಪೂರೈಕೆ ವ್ಯವಸ್ಥೆಗೆ ಸಂಬಂಧಿಸಿದ ಮೇಲಿನ ಚರ್ಚೆಗಳು ಈ ಕೆಳಗಿನ ಸಂಶೋಧನ ಪ್ರಶ್ನೆಗಳಿಗೆ ಎಡೆಮಾಡಿದೆ.

**ಸಂಶೋಧನಾ ಪ್ರಶ್ನೆಗಳು**

೧. ಗ್ರಾಮೀಣ ಹಣಕಾಸು ಪೂರೈಕೆಗೆ ಸಂಬಂಧಿಸಿದ ಸರ್ಕಾರದ ಸಾಲ ಕಾರ್ಯಕ್ರಮಗಳಾವುವು, ಅವುಗಳು ಹೇಗೆ ಅನುಷ್ಠಾನಗಳ್ಳುತ್ತವೆ? ಅವುಗಳಿಗೆ ಸಂಬಂಧಿಸಿದ ಸಾಲ ನೀತಿಗಳೇನು?

೨. ಗ್ರಾಮೀಣ ಸಂಘಟಿತ ಹಣಕಾಸು ಸಂಸ್ಥೆಗಳಿಂದ ಸಾಲ ಸೌಲಭ್ಯಗಳನ್ನು ಪಡೆದವರು ಯಾರು? ಪಡೆದ ಸಾಲಗಳನ್ನು ಯಾವ ಉದ್ದೇಶಗಳಿಗೆ ಬಳಸಿ ಬಳಸಿಕೊಳ್ಳಲಾಗಿದೆ? ಅವುಗಳ ಅನುಕೂಲ ಗಳೇನು?

೩. ಸಮಾಜದ ಯಾವ ವರ್ಗ, ಜಾತಿ ಸಮುದಾಯಗಳ ಜನರು ಸಂಘಟಿತ ಹಣಕಾಸು ವ್ಯವಸ್ಥೆಯ ಸಾಲ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ? ಇದಕ್ಕೆ ಕಾರಣವಾದ ಅಂಶಗಳಾವುವು?

೪. ಸಂಘಟಿತ ಹಣಕಾಸು ವ್ಯವಸ್ಥೆಯ ಸಾಲ ಸೌಲಭ್ಯಗಳನ್ನು ಪಡೆಯಲು ಸಾದ್ಯವಾಗದೇ ಇರುವ ಜನರು ಗ್ರಾಮೀಣ ಪ್ರದೇಶಗಳಲ್ಲಿ ಇರತೇ ಯಾವ ಮೂಲಗಳಿಂದ ಸಾಲಗಳನ್ನು ಪಡೆಯುತ್ತಾರೆ? ಅದರ ಪರಿಣಾಮಗಳೇನು?

೫. ಸಾಲ ಸೌಲಭ್ಯಗಳು ಸಮಾಜದ ಎಲ್ಲಾ ವರ್ಗಗಳನ್ನು ತಲುಪಬೇಕಾದರೆ ಎಂತಹ ಸಾಲ ನೀತಿಯ ಅಗತ್ಯವಿದೆ.

**ಸಂಶೋಧನಾ ಉದ್ದೇಶಗಳು**

ಗ್ರಾಮೀಣ ಹಣಕಾಸು ಪೂರೈಕೆ ವ್ಯವಸ್ಥೆಯ ಲಕ್ಷಣಗಳು, ಅದರ ನೀತಿ ಕಾರ್ಯಕ್ರಮಗಳು ಹಾಗು ಈ ವ್ಯವಸ್ಥೆಯ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವುದು ಈ ಅಧ್ಯಯನದ ಪ್ರಮುಖ ಉದ್ದೇಶ. ಈ ಅಧ್ಯಯನದ ನಿರ್ಧಿಷ್ಟ ಉದ್ದೇಶಗಳು ಹೀಗಿವೆ.

೧. ಗ್ರಾಮೀಣ ಸಂಘಟಿತ ಸಾಲ ವ್ಯವಸ್ಥೆಗೆ ಸಂಬಂಧಿಸಿದ ನೀತಿ, ಕಾರ್ಯಕ್ರಮಗಳು ಹಾಗೂ ಇವುಗಳ ಅನುಷ್ಠಾನ ವಿಧಾನವನ್ನು ಅರ್ಥಮಾಡಿಕೊಳ್ಳುವುದು

೨. ಗ್ರಾಮೀಣ ಸಂಘಟಿತ ಹಣಕಾಸು ಸಂಸ್ಥೆಗಳಿಂದ ಸಾಲ ಸೌಲಭ್ಯಗಳನ್ನು ಪಡೆದವರು ಯಾರು? ಪಡೆದ ಸಾಲಗಳನ್ನು ಯಾವ ಉದ್ದೇಶಗಳಿಗೆ ಬಳಸಿ ಬಳಸಿಕೊಳ್ಳಲಾಗಿದೆ ಎಂಬುದನ್ನು ಪರಿಶೀಲಿಸುವುದು

೩. ಸಮಾಜದ ಯಾವ ವರ್ಗ, ಜಾತಿ ಸಮುದಾಯಗಳ ಜನರು ಸಂಘಟಿತ ಹಣಕಾಸು ವ್ಯವಸ್ಥೆಯ ಸಾಲ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ? ಇದಕ್ಕೆ ಕಾರಣವಾದ ಅಂಶಗಳನ್ನು ಗುರ್ತಿಸುವುದು

೪. ಗ್ರಾಮೀಣ ಸಂಘಟಿತ ಸಾಲ ವ್ಯವಸ್ಥೆಯಿಂದ ಸಾಲ ಸೌಲಭ್ಯಗಳನ್ನು ಪಡೆಯಲಾಗದೇ ಇರುವ ಜನರು ಇತರೇ ಯಾವ ಮೂಲದಿಂದ ಸಾಲ ಪಡೆಯುತ್ತಾರೆ? ಅದರ ಪರಿಣಾಮ ಗಳೇನು? ಎಂಬುದನ್ನು ಗುರ್ತಿಸುವುದು

೫. ಸಮಾಜದ ಎಲ್ಲಾ ವರ್ಗಗಳಿಗೆ ತಲುಪಬಹುದಾದ ಗ್ರಾಮೀಣ ಸಾಲ ನೀತಿಯ ಸಲಹೆ

**ಅಧ್ಯಯನದ ವಿಧಾನ**

ರಾಯಚೂರು ಜಿಲ್ಲೆ ಪ್ರಸ್ತುತ ಅಧ್ಯಯನಕ್ಕೆ ಪೂರಕ ವಾತಾವರಣ ಹೊಂದಿದ್ದರಿಂದ ಈ ಜಿಲ್ಲೆಯನ್ನು ಆಯ್ಕೆ ಮಾಡಲಾಗಿದೆ. ಈ ಜಿಲ್ಲೆಯ ಅಭಿವೃದ್ಧಿ ಕುರಿತು ಚರ್ಚಿಸುವುದೆಂದರೆ ಅದು ದುಸ್ಥಿತಿಯ ಕಥೆಯಾಗುತ್ತದೆ. ಕರ್ನಾಟಕ ರಾಜ್ಯದ ೨೭ ಜಿಲ್ಲೆಗಳಲ್ಲಿ ಅತ್ಯಂತ ಹಿಂದುಳಿದ ಜಿಲ್ಲೆ ರಾಯಚೂರು. ಅಭಿವೃದ್ಧಿ ಎಂಬುದು ಈ ಜನರ ಕನಸಾಗಿದೆ ಅಷ್ಟೆ. ಅಭಿವೃದ್ಧಿಗಾಗಿ ಜನರು ಬೆವರು ಹರಿಸುತ್ತಿದ್ದರೂ ಅದು ಸಾದ್ಯವಾಗುತ್ತಿಲ್ಲ. ಈ ಜಿಲ್ಲೆ ಅನೇಕ ರೀತಿಯಲ್ಲಿ ಹಿಂದುಳಿದಿದೆ. ಜಿಲ್ಲೆಯು ವರಮಾನದ ದೃಷ್ಟಿಯಿಂದ ಹಿಂದುಳಿದಿದೆ. ಕೃಷಿಯಾಗಲಿ, ಕೈಗಾರಿಕೆಯಾಗಲಿ, ಸಾರಿಗೆಯಾಗಲೀ ಬ್ಯಾಂಕಿಂಗ್ ಅಗಲೀ ಎಲ್ಲದರ ದೃಷ್ಟಿಯಿಂದ ಈ ಜನರ ಧಾರಣಾ ಸಾಮರ್ಥ್ಯ ಕೆಳಹಂತದಲ್ಲಿದೆ. ಮಾನವ ಅಭಿವೃದ್ಧಿ ಸೂಚ್ಯಂಕಗಳಾದ ಶಿಕ್ಷಣ, ಸಾಕ್ಷರತೆ, ಆರೋಗ್ಯ, ಆದಾಯ, ಮಕ್ಕಳ ಮತ್ತು ಮಹಿಳೆಯರ ಪೌಷ್ಠಿಕತೆ ಇತ್ಯಾದಿಗಳಲ್ಲಿ ಈ ಜಿಲ್ಲೆ ದುಸ್ಥಿತಿಯಲ್ಲಿದೆ (ಡಾ. ಟಿ.ಆರ್. ಚಂದ್ರಶೇಖರ, ೨೦೧೦). ಅದೇ ರೀತಿ ಬರ, ಬಡತನ, ಅಸಮಾನತೆ, ಅನಾರೋಗ್ಯ ಮತ್ತು ವಲಸೆ ಗಳಂತಹ ಗಂಭೀರ ಸಮಸ್ಯೆಗಳಿಂದ ಈ ಜಿಲ್ಲೆ ಜರ್ಜರಿತವಾಗಿದೆ. ರಾಯಚೂರು ಜಿಲ್ಲೆಯ ಒಟ್ಟು ದುಡಿಮೆಗಾರ ವರ್ಗದಲ್ಲಿ ಮಹಿಳಾ ದುಡಿಮೆಗಾರರ ಸಂಖ್ಯೆ ಶೇಕಡಾ ೪೯.೨೩. ಇದು ಕರ್ನಾಟಕ ರಾಜ್ಯದ ಒಟ್ಟು ಮಹಿಳಾ ದುಡಿಮೆಗಾರರ ಸಂಖ್ಯೆಗಿಂತ (ಶೇ ೩೫.೨೬) ಹೆಚ್ಚಾಗಿದೆ. ಮೇಲಿನ ಸೂಚಿಗಳು ರಾಯಚೂರು ಜಿಲ್ಲೆಯ ಸಾಮಾಜಿಕ ಮತ್ತು ಆರ್ಥಿಕ ದುಸ್ಥಿತಿಯನ್ನು ತೆರೆದಿಡುತ್ತವೆ.

ಜನಗಣತಿ ವರದಿಗಳ ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಅತೀ ಸಣ್ಣ ಭೂ ಹಿಡುವಳಿದಾರರ ಮತ್ತು ಕೃಷಿ ಕೂಲಿ ಕಾರ್ಮಿಕರ ಸಂಖ್ಯೆ ಹೆಚ್ಚುತ್ತಿದೆ. ರಾಯಚೂರು ಜಿಲ್ಲೆಯಲ್ಲೂ ಇದು ಹೆಚ್ಚುತ್ತಿದೆ. ಈ ಜಿಲ್ಲೆಯ ಒಟ್ಟು ಭೂಹಿಡುವಳಿದಾರರಲ್ಲಿ (೩.೩೨ ಲಕ್ಷ) ಅತೀ ಸಣ್ಣ ಹಿಡುವಳಿದಾರರ ಪ್ರಮಾಣ ಶೇಕಡಾ ೪೧ರಷ್ಟಿದೆ. ೨೦೦೧ರಲ್ಲಿ ಈ ಜಿಲ್ಲೆಯ ಒಟ್ಟು ಕೆಲಸಗಾರರಲ್ಲಿ ಸಾಗುವಳಿದಾರರ ಪ್ರಮಾಣ ಶೇಕಡಾ ೩೭.೧೪ರಷ್ಟಿದ್ದದ್ದು ೨೦೧೧ಕ್ಕೆ ೩೩.೫೦ಕ್ಕೆ ಕುಸಿದಿದೆ. ೨೦೦೧ರಲ್ಲಿ ಈ ಜಿಲ್ಲೆಯ ಒಟ್ಟು ಕೆಲಸಗಾರರಲ್ಲಿ ಕೃಷಿಕೂಲಿ ಕಾರ್ಮಿಕರ ಸಂಖ್ಯೆ ಶೇಕಡಾ ೨೮.೧೫ರಷ್ಟಿದ್ದದ್ದು ೨೦೧೧ಕ್ಕೆ ೨೯.೫೭ಕ್ಕೆ ಹೆಚ್ಚಾಗಿದೆ (ರಾಯಚೂರು ಜಿಲ್ಲಾ ಅಂಕಿ ಅಂಶಗಳ ನೋಟ; ೨೦೧೧-೧೨). ಒಂದು ಪ್ರದೇಶದಲ್ಲಿ ಕೃಷಿ ಕೂಲಿಕಾರರು ಹೆಚ್ಚಾಗಿರುವುದು ಕೂಲಿಕಾರರ ವರ್ಗದಲ್ಲಿನ ಕಡಿಮೆ ಮಟ್ಟದ ಸಾಕ್ಷರತೆ, ಕಡಿಮೆ ಆದಾಯ, ಅಪೌಷ್ಟಿಕತೆ ಮತ್ತು ಬಡತನವನ್ನು ಸೂಚಿಸುತ್ತದೆ. ಉತ್ತರ ಕರ್ನಾಟಕದ ರಾಯಚೂರು ಮತ್ತು ಗುಲ್ಬರ್ಗಾ ವಿಭಾಗದಲ್ಲಿ ಕೃಷಿ ಕೂಲಿ ಕಾರ್ಮಿಕರು ಹೆಚ್ಚಾಗಿರುವುದಕ್ಕೆ ಬಡತನ ಕಾರಣವೆನ್ನಲಾಗಿದೆ.

ನಂಜುಂಡಪ್ಪನವರ ಪ್ರಾದೇಶಿಕ ಅಸಮಾನತೆ ಕುರಿತ ವರದಿ ಪ್ರಕಾರ ೩೫ ಸೂಚಿಗಳಿಂದ ಕೂಡಿದ ಸಮಗ್ರ ಸಂಯುಕ್ತ ಅಭಿವೃದ್ಧಿ ಸೂಚ್ಯಂಕದ ಆಧಾರದ ಮೇಲೆ ರಾಜ್ಯದ ೧೭೫ ತಾಲ್ಲೂಕುಗಳನ್ನು ಶ್ರೇಣೀಕರಿಸಲಾಗಿದ್ದು ಈ ಸೂಚ್ಯಂಕದಲ್ಲಿ ರಾಯಚೂರಿನ ದೇವದುರ್ಗ ತಾಲ್ಲೂಕು ಕನಿಷ್ಠ ಸ್ಥಾನದಲ್ಲಿದ್ದು ಮಡಕೇರಿ ಗರಿಷ್ಠ ಸ್ಥಾನದಲ್ಲಿದೆ. ಉತ್ತರ ಕರ್ನಾಟಕದ ಹಿಂದುಳಿದ ಜಿಲ್ಲೆಗಳಿಗೆ ಹೋಲಿಸಿದರೆ ರಾಯಚೂರಿನ ಅಭಿವೃದ್ಧಿ ಮಟ್ಟ ಅತ್ಯಂತ ಕಡಿಮೆ.

ಮಾನವ ಅಭಿವೃದ್ಧಿ ಸೂಚ್ಯಂಕ ೧೯೯೧ರಂತೆ ಕರ್ನಾಟಕ ರಾಜ್ಯದ ಬೆಂಗಳೂರು ಜಿಲ್ಲೆ ೦.೬೨೩ಯೊಂದಿಗೆ ೪ನೇ ಶ್ರೇಣಿಯಲ್ಲಿದ್ದರೆ ರಾಯಚೂರು ಜಿಲ್ಲೆ ೨೭ನೇ ಶ್ರೇಣಿಯಲ್ಲಿತ್ತು. ಮಾನವ ಅಭಿವೃದ್ಧಿ ಸೂಚ್ಯಂಕ ೨೦೦೧ರಂತೆ ಬೆಂಗಳೂರು ನಗರ ೦.೭೫೩ ಯೊಂದಿಗೆ ೧ನೇ ಶ್ರೇಣಿಯಲ್ಲಿದ್ದರೆ ರಾಯಚೂರು ಜಿಲ್ಲೆ ೨೭ನೇ ಶ್ರೇಣಿಯಲ್ಲಿತ್ತು. (ಯುಎನ್‌ಡಿಪಿ ವರದಿ, ೨೦೦೫). ಜಿಲ್ಲಾವಾರು ಮಾನವ ಅಭಿವೃದ್ಧಿ ಅನುಸೂಚಿ ಪ್ರಕಾರ ರಾಯಚೂರು ಆರೋಗ್ಯ ಸೂಚ್ಯಂಕದಲ್ಲಿ ೧೬ನೇ ಸ್ಥಾನ, ಶಿಕ್ಷಣದಲ್ಲಿ ೨೭ನೇ ಸ್ಥಾನ, ಆದಾಯದಲ್ಲಿ ೨೭ನೇ ಸ್ಥಾನ, ಒಟ್ಟಾರೆ ಮಾನವ ಅಭಿವೃದ್ಧಿ ಅನುಸೂಚಿ ಪ್ರಕಾರ ೧೮ನೇ ಸ್ಥಾನದಲ್ಲಿದೆ (ಕರ್ನಾಟಕ ಮಾನವ ಅಭಿವೃದ್ಧಿ ವರದಿ: ೨೦೦೫).

೨೦೧೧ ಜನಗಣತಿ ಪ್ರಕಾರ ರಾಯಚೂರು ಜಿಲ್ಲೆಯ ಒಟ್ಟು ಜನಸಂಖ್ಯೆ ೧೯.೨೮ ಲಕ್ಷವಿದೆ. ಇದರಲ್ಲಿ ಗ್ರಾಮೀಣ ಜನಸಂಖ್ಯೆ ೧೨.೪೮ ಲಕ್ಷ. ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೬೪.೭೫ ಗ್ರಾಮೀಣ ಪ್ರದೇಶಗಳಲ್ಲಿದೆ. ಒಟ್ಟು ೨.೯೮ ಲಕ್ಷ ಕುಟುಂಬಗಳಿವೆ. ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದ ಜನಸಂಖ್ಯೆಯ ಪ್ರಮಾಣ ಶೇಕಡಾ ೩೨.೧೫. ಇದರಲ್ಲಿ ಶೇಕಡಾ ೩೩.೦೭ರಷ್ಟು ಅತೀ ಹೆಚ್ಚು ಪರಿಶಿಷ್ಟ ಪಂಗಡದ ಜನಸಂಖ್ಯೆ ದೇವದುರ್ಗ ತಾಲ್ಲೂಕಿನಲ್ಲಿದೆ. ಕೃಷಿ ಈ ಜಿಲ್ಲೆಯ ಮುಖ್ಯ ವೃತ್ತಿ. ನೀರಾವರಿ ಪ್ರದೇಶಗಳಲ್ಲಿ ಭತ್ತ

ಮತ್ತು ಹತ್ತಿ ಬೆಳೆಗಳನ್ನು ಮಾಡಲಾಗುತ್ತದೆ. ಮಳೆ ಆಶ್ರಿತ ಪ್ರದೇಶಗಳಲ್ಲಿ ಕಡಲೆ, ಹೆಸರು, ಜೋಳ, ಸಜ್ಜೆ ಮತ್ತು ಸೂರ್ಯಕಾಂತಿ ಬೆಳೆಗಳನ್ನು ಮಾಡಲಾಗುತ್ತದೆ.

ಜಿಲ್ಲೆಯ ಐದು ತಾಲ್ಲೂಕುಗಳಲ್ಲಿ ಸಿಂಧನೂರು ಮತ್ತು ದೇವದುರ್ಗ ತಾಲ್ಲೂಕುಗಳಿಂದ ನಾಲ್ಕು ಗ್ರಾಮಗಳನ್ನು ಆಯ್ಕೆ ಮಾಡಲಾಗಿದೆ. ಇದರಲ್ಲಿ ಎರಡು ಗ್ರಾಮಗಳಲ್ಲಿ ನೀರಾವರಿ ಮತ್ತು ಇನ್ನೆರಡು ಗ್ರಾಮಗಳಲ್ಲಿ ಒಣ ಭೂಮಿ ಬೇಸಾಯ ಮಾಡಲಾಗುತ್ತಿದೆ. ನಾಲ್ಕು ಗ್ರಾಮಗಳು ಅತೀ ಸಣ್ಣ, ಸಣ್ಣ ಮತ್ತು ದೊಡ್ಡ ಹಿಡುವಳಿದಾರರು, ಕೃಷಿ ಕಾರ್ಮಿಕರನ್ನು ಹೊಂದಿವೆ. ಕೃಷಿ ಚಟುವಟಿಕೆಗಳು, ಭೂ ಹಿಡುವಳಿಗಳು, ಸಾಮಾಜಿಕ ಆರ್ಥಿಕ ಅಂಶಗಳ ಅಧಾರದ ಮೇಲೆ ಈ ಗ್ರಾಮಗಳನ್ನು ಅಯ್ಕೆ ಮಾಡಲಾಗಿದೆ. ಗ್ರಾಮೀಣ ಹಣಕಾಸು ಪೂರೈಕೆ ವ್ಯವಸ್ಥೆ ಕುರಿತು ೪ ಗ್ರಾಮಗಳ ೩೧೯ ಕುಟುಂಬಗಳನ್ನು ಅವರ ವೃತ್ತಿ, ಆರ್ಥಿಕ ಸಾಮಾಜಿಕ ಸ್ಥಿತಿಗತಿಗಳು, ಅವರ ಸಾಲದ ಅಗತ್ಯಗಳು, ಸಾಲ ಪಡೆದ ಮೂಲಗಳು, ಹಣಕಾಸು ಸಂಸ್ಥೆಗಳು ಅವುಗಳ ಸಾಲ ನಿಯಮಗಳು, ಧೋರಣೆಗಳ ಬಗ್ಗೆ ರೈತ ವರ್ಗಗಳನ್ನು ಸಂದರ್ಶಿಸಿ ಮಾಹಿತಿ ಕಲೆಹಾಕಲಾಗಿದೆ. ನಾಲ್ಕು ಗ್ರಾಮಗಳಿಂದ ಒಟ್ಟಾರೆ ಶೇಕಡಾ ೫.೨೩ರಷ್ಟು ಕುಟುಂಬಗಳನ್ನು ಯಾದೃಚ್ಛಿಕ ವಿಧಾನದ ಮೂಲಕ ಅಯ್ಕೆ ಮಾಡಲಾಗಿದೆ. ಅಧ್ಯಯನಕ್ಕಾಗಿ ಆಯ್ಕೆ ಮಾಡಿದ ಗ್ರಾಮಗಳು ಕರ್ನಾಟಕ ರಾಜ್ಯದಲ್ಲಿ ಹಿಂದುಳಿದ ತಾಲ್ಲೂಕು ಎಂದು ಗುರುತಿಸಲ್ಪಟ್ಟ ದೇವದುರ್ಗ ತಾಲ್ಲೂಕಿನ ಜಾಲಿಹಾಳ ಮತ್ತು ಹೇರುಂಡೆ ಹಾಗು ಸಿಂಧನೂರು ತಾಲ್ಲೂಕಿನ ರಾಗಲಪರ್ವಿ ಮತ್ತು ಯಾಪಲಪರ್ವಿ ಗ್ರಾಮಗಳು ಸೇರಿವೆ.

ಈ ಅಧ್ಯಯನದಲ್ಲಿ ಗ್ರಾಮೀಣ ಹಣಕಾಸು ಮೂಲಗಳು, ಸಂಘಟಿತ ಸಾಲ ಮೂಲದ ಸಾಂಸ್ಥೀಕರಣ, ಸರ್ಕಾರದ ಸಾಲ ನೀತಿ, ಕಾರ್ಯ ಕ್ರಮಗಳು ಮತ್ತು ಅವುಗಳ ಅನುಷ್ಠಾನ ವಿಧಾನಕ್ಕೆ ಸಂಬಂದಿಸಿದ ಸಂಶೋಧನಾ ಗ್ರಂಥಗಳು, ಸಂಪಾದಿತ ಕೃತಿಗಳು, ಲೇಖನಗಳು, ಜನಗಣತಿ ಮತ್ತು ಮಾನವ ಅಭಿವೃದ್ಧಿ ವರದಿಗಳು, ಆಯೋಗಗಳ ವರದಿಗಳು, ಪತ್ರಿಕೆಗಳು, ಅಂತರ್ಜಾಲ ಲೇಖನಗಳು ಇನ್ನಿತರ ಮೂಲಗಳಿಂದ ಮಾಹಿತಿ ಪಡೆಯಲಾಗಿದೆ. ಸಂದರ್ಶನದಲ್ಲಿ ಕಲೆಹಾಕಿದ ಮಾಹಿತಿಯನ್ನು ಸಂಖ್ಯಾಶಾಸ್ತ್ರಿಯ, ಸರಳ ಟ್ಯಾಬುಲರ್ ವಿಧಾನದಲ್ಲಿ ವಿಶ್ಲೇಷಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ವಿವಿಧ ರೀತಿಯ ಸೂಚ್ಯಂಕಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಅತೀ ಸಣ್ಣ, ಸಣ್ಣ, ದೊಡ್ಡ ಹಿಡುವಳಿದಾರರು ಮತ್ತು ಕೃಷಿ ಕಾರ್ಮಿಕರೊಂದಿಗಿನ ಮೌಖಿಕ ಸಂದರ್ಶನ ಮೂಲಕ ದಾಖಲಿಸಲಾಗಿದೆ. ಅಧ್ಯಯನದಲ್ಲಿ ವೃತ್ತಿ, ಆರ್ಥಿಕ ಸಾಮಾಜಿಕ ಶೈಕ್ಷಣಿಕ ವಿವರಗಳು, ಜನರ ಸಾಲದ ಅಗತ್ಯಗಳು, ಸಾಲ ಪಡೆದ ಮೂಲಗಳು, ಸಾಲ ಪಡೆಯಲು ನೆರವಾದ ಅಂಶಗಳು, ಪಡೆದ ಸಾಲದ ಲಾಭಗಳು, ಸಾಲ ಯೋಜನೆ ಬಗೆಗಿನ ಮಾಹಿತಿಗಳು, ಹಣಕಾಸು ಸಂಸ್ಥೆಗಳು ಅವುಗಳ ಉದ್ದೇಶ ಮತ್ತು ಸಾಲ ನಿಯಮಗಳ ಬಗ್ಗೆ ಮಾಹಿತಿ ಪಡೆಯಲಾಗಿದೆ. ಈ ಮೇಲಿನ ಸೂಚಿಗಳ ಬಗ್ಗೆ ಮಾಹಿತಿ ಪಡೆಯುವ ಉದ್ದೇಶದಿಂದ ಮಾದರಿ

ಪ್ರಶ್ನಾವಳಿಗಳನ್ನು ತಯಾರಿಸಿಕೊಂಡು ಮಾಹಿತಿ ಪಡೆಯಲಾಗಿದೆ. ಅಧ್ಯಯನದಲ್ಲಿ ಪ್ರಾಥಮಿಕ ವಿಧಾನದಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ಸರಳ ಸಂಖ್ಯಾಶಾಸ್ತ್ರಿಯ ವಿಧಾನ ಅನುಸರಿಸಿ ವಿಶ್ಲೇಷಿಸಲಾಗಿದೆ. ಈ ಅಧ್ಯಯನದಲ್ಲಿ ಗುಣಾತ್ಮಕ ಮತ್ತು ಪರಿಮಾಣಾತ್ಮಕ ವಿಧಾನವನ್ನು ಬಳಸಿಕೊಳ್ಳಲಾಗಿದೆ. ಅಧ್ಯಯನದ ಪಲಿತಾಂಶಗಳು ಅಧ್ಯಯನ ಪ್ರದೇಶಕ್ಕೆ ಮಾತ್ರ ಅನ್ವಯಿಸುತ್ತವೆ. ಆದರೆ ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಏಕ ರೀತಿಯ ಸಾಲ ವ್ಯವಸ್ಥೆ ಇರುವುದರಿಂದ ಈ ಅಧ್ಯಯನದಲ್ಲಿ ಮೂಡಿಬಂದ ಪಲಿತಾಂಶಗಳ ಆಧಾರದ ಮೇಲೆ ಸರ್ಕಾರದ ಸಾಲ ನೀತಿಗಳಲ್ಲಿ ತರಬೇಕಾದ ಬದಲಾವಣೆಗಳನ್ನು ವಿಶ್ಲೇಷಿಸಲಾಗಿದೆ. ಈ ಅಧ್ಯಯನದಲ್ಲಿ ಮೂರು ವ್ಯಕ್ತಿ ಅಧ್ಯಯನಗಳನ್ನು ನೀಡಲಾಗಿದೆ. ವಿಧವ ಮಹಿಳೆಯೊಬ್ಬರ ಸಾಮಾಜಿಕ ಆರ್ಥಿಕ ಪರಿಸ್ಥಿತಿಯನ್ನು ಹಾಗು ಅವರ ಸಾಲದ ಅಗತ್ಯವನ್ನು ವಿಶ್ಲೇಷಣೆ ನೀಡಲಾಗಿದೆ. ಅದೇ ರೀತಿ ಕೃಷಿ ಕಾರ್ಮಿಕ ಅಥವಾ ಕೂಲಿ ಮಾಡುತ್ತಿದ್ದು ಅಲೆಮಾರಿ ಜನಾಂಗಕ್ಕೆ ಸೇರಿದ್ದಾರೆ. ಇವರಿಗೆ ಭೂಮಿ ಅಥವಾ ಇತರೇ ಯಾವುದೇ ಉತ್ಪಾದಕ ಆಸ್ತಿ ಇಲ್ಲ.

## ಅಧ್ಯಯನದ ಮಿತಿ

ಈ ಅಧ್ಯಯನದಲ್ಲಿ ಕೃಷಿ ಕ್ಷೇತ್ರಕ್ಕೆ ಪೂರೈಕೆಯಾಗುವ ಸಾಲಗಳನ್ನು ಕುರಿತು ಮಾತ್ರ ಚರ್ಚಿಸಲಾಗಿದೆ. ಸಂಘಟಿತ ಹಣಕಾಸು ವ್ಯವಸ್ಥೆಯ ಸಾಲ ನಿಯಮಗಳನ್ನು ಬ್ಯಾಂಕುಗಳ ಅಧಿಕಾರಿಗಳು ಮತ್ತು ಜನರೊಂದಿಗಿನ ಸಂದರ್ಶನದ ಆಧಾರದ ಮೇಲೆ ವಿಶ್ಲೇಷಿಸಲಾಗಿದೆ. ಈ ವಿಶ್ಲೇಷಣೆಯನ್ನು ಯಾವುದೇ ಅಧಿಕೃತ ಮಾಹಿತಿ ಅಧಾರದ ಮೇಲೆ ನೀಡಿಲ್ಲ. ಈ ಅಧ್ಯಯದಲ್ಲಿ ಕಂಡುಬಂದ ಫಲಿತಗಳು ಅಧ್ಯಯನ ಗ್ರಾಮಗಳು ಮತ್ತು ಕ್ಷೇತ್ರಾಧ್ಯಯನ ಕೈಗೊಂಡಿರುವ ರಾಯಚೂರು ಜಿಲ್ಲೆಗೆ ಅನ್ವಯಿಸುತ್ತವೆ. ಈ ಫಲಿತಗಳ ಆಧಾರದ ಮೇಲೆ ದೇಶ ಹಾಗು ರಾಜ್ಯಗಳಲ್ಲಿ ಎಲ್ಲಾ ಕಡೆ ಇದೇ ಪರಿಸ್ಥಿತಿ ಇರುತ್ತದೆಂದು ವಾದಿಸಿಲ್ಲ ಆದರೆ ಸರ್ಕಾರದ ಮತ್ತು ಮೆಲ್ಮಟ್ಟದ ಹಣಕಾಸು ಸಂಸ್ಥೆಗಳ ಸಾಲ ನೀತಿಗಳ ಪ್ರಯೋಜನ ಸಮಾಜದ ಎಲ್ಲಾ ಸಾಮಾಜಿಕ ಗುಂಪುಗಳನ್ನು ತಲುಪುತ್ತಿಲ್ಲ ಎಂಬುದು ಕಂಡು ಬಂದಿದ್ದು ಎಲ್ಲರನ್ನು ಒಳಗೊಳ್ಳುವಂತಹ ಸಾಲ ನೀತಿ ಅನುಷ್ಠಾನ ಗೊಳ್ಳಬೇಕು ಎಂದು ಚರ್ಚಿಸಲಾಗಿದೆ. ಸಂದರ್ಶನ ಸಮಯದಲ್ಲಿ ಜನರು ಸಾಲ ಪಡೆಯಲು ಅರ್ಜಿಸಲ್ಲಿಸಿದ ದಿನಾಂಕ, ಸಾಲ ಮಂಜೂರಾದ ವಿವರಗಳು, ಸಾಲ ಮರುಪಾವತಿ ಪದ್ದತಿ ಇತ್ಯಾದಿಗಳ ಬಗ್ಗೆ ತಮ್ಮ ನೆನಪಿನ ಆಧಾರದ ಮೇಲೆ ಮಾಹಿತಿ ನೀಡಿದ್ದಾರೆ. ಇದೊಂದು ಪ್ರಾಯೋಗಿಕ ಗ್ರಾಮಾಧ್ಯಯನವಾಗಿದ್ದು ಆಯ್ಕೆ ಮಾಡಿಕೊಂಡ ಗ್ರಾಮಗಳಲ್ಲಿ ಸಾಗುವಳಿ ಚಟುವಟಿಕೆಗಳಲ್ಲಿ ತೊಡಗಿರುವ ಅತೀ ಸಣ್ಣ ರೈತರು, ಸಣ್ಣ ರೈತರು, ದೊಡ್ಡರೈತರು ಹಾಗು ಕೃಷಿ ಕಾರ್ಮಿಕರನ್ನು ಸಂದರ್ಶಿಸಿ ಮಾಹಿತಿ ಸಂಗ್ರಹಿಸುವ ಉದ್ದೇಶ ಹೊಂದಲಾಗಿದೆ.

## ಕೊನೆ ಟಿಪ್ಪಣಿಗಳು

೧. ಜನ್ ನೆಡರ್‌ವೀನ್ ಪೀಟರ್ಸ್ (೨೦೦೧). *ಡವಲಪ್‌ಮೆಂಟ್ ಥಿಯರಿ: ಡಿಕನ್‌ಸ್ಟ್ರಕ್ಷನ್/ ರಿಕನ್‌ಸ್ಟ್ರಕ್ಷನ್*, ವಿಸ್ತಾರ್ ಪಬ್ಲಿಕೇಷನ್, ನೂಡೆಲ್ಲಿ, ೫–೩೦

೨. ವಾನ್ ಪಿಷ್ಕೇ ಜೆ.ಡಿ., ಡಬ್ಲ್ಯೂ ಆಡಮ್ ಅಂಡ್ ಗೋರ್ಡನ್ ಡೋನಲ್ಡ್ (೧೯೮೨): *ರೂರಲ್ ಫೈನಾನ್ಸಿಯಲ್ ಮಾರ್ಕೆಟ್ಸ್ ಇನ್ ಡವಲಪಿಂಗ್ ಕಂಟ್ರೀಸ್; ದಿ ಯೂಸ್ ಅಂಡ್ ಅಬ್ಯೂಸ್*, ದಿ ಎಕನಾಮಿಕ್ ಡವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಆಫ್ ದಿ ವರ್ಲ್ಡ್ ಬ್ಯಾಂಕ್, ದಿ ಜಾನ್ ಹಾಕಿನ್ಸ್ ಯೂನಿವರ್‌ಸಿಟಿ ಪ್ರೆಸ್ಸ್, ಪು.೮೫–೧೧೧

೩. ವಾರನ್ ಎಫ್ ಲೀ (೧೯೮೨). *ದಿ ರೋಲ್ ಆಫ್ ಫೈನಾನ್ಸಿಯಲ್ ಇನಟರ್‌ಮೀಡಿಯೇಶನ್ ಇನ್ ದಿ ಆಕ್ಟಿವಿಟೀಸ್ ಆಫ್ ರೂರಲ್ ಫರ್ಮ್ಸ್ ಅಂಡ್ ಹೌಸ್‌ಹೋಲ್ಡ್ಸ್* ಇನ್ ವಾನ್ ಪಿಷ್ಕೇ ಜೆ.ಡಿ ಅಂಡ್ ಡಬ್ಲ್ಯೂ ಆಡಮ್ (ಸಂ) *ರೂರಲ್ ಫೈನಾನ್ಸಿಯಲ್ ಮಾರ್ಕೆಟ್ಸ್ ಇನ್ ಡವಲಪಿಂಗ್ ಕಂಟ್ರೀಸ್; ದಿ ಯೂಸ್ ಅಂಡ್ ಅಬ್ಯೂಸ್*, ದಿ ಎಕನಾಮಿಕ್ ಡವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಆಫ್ ದಿ ವರ್ಲ್ಡ್ ಬ್ಯಾಂಕ್, ದಿ ಜಾನ್ ಹಾಕಿನ್ಸ್ ಯೂನಿವರ್‌ಸಿಟಿ ಪ್ರೆಸ್ಸ್, ಪು.೧೦೮–೧೧೯

೪. ಚೆಸ್ಟರ್ ಬಿ. ಬೇಕರ್ ಮತ್ತು ವಿನಯ್.ಕೆ ಭಾರ್ಗವ (೧೯೯೨). *ಫೈನಾನ್ಸ್ ಫಾರ್ ಡವಲಪ್‌ಮೆಂಟ್ ಆಫ್ ಸ್ಮಾಲ್ ಹೋಲ್ಡಿಂಗ್ ಇನ್ ಇಂಡಿಯಾ*, ದಿ ಎಕನಾಮಿಕ್ ಡವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಆಫ್ ದಿ ವರ್ಲ್ಡ್ ಬ್ಯಾಂಕ್, ದಿ ಜಾನ್ ಹಾಕಿನ್ಸ್ ಯೂನಿವರ್‌ಸಿಟಿ ಪ್ರೆಸ್ಸ್, ಪು. ೧೧೭

೫. ಕೃಷ್ಣ ಭಾರದ್ವಾಜ್ (೧೯೯೪). *ಅಕ್ಯುಮುಲೇಶನ್, ಎಕ್ಸ್‌ಚೇಂಜ್ ಅಂಡ್ ಡವಲಪ್‌ಮೆಂಟ್– ಎಸ್ಸೆ ಆನ್ ದಿ ಇಂಡಿಯನ್ ಇಕನಾಮಿ*, ಸೇಜ್ ಪಬ್ಲಿಕೇಶನ್, ನ್ಯೂಡೆಲ್ಲಿ, ಪು.೩೨೭–೩೨೮

೬. ವಿ.ಎಮ್. ದಾಂಡೇಕರ್ (೧೯೯೪). *ದಿ ಇಂಡಿಯನ್ ಎಕನಾಮಿ ೧೯೪೭–೯೨*, ವಾಲ್ಯೂಮ್ ೧, *ಅಗ್ರಿಕಲ್ಚರ್*, ಸೇಜ್ ಪಬ್ಲಿಕೇಶನ್, ನ್ಯೂಡೆಲ್ಲಿ, ಪು. ೩೪೧–೩೫೫

೭. ಸಂಜಯ್ ಸಿಂಗ್ ರಾಥೋರ್ (೨೦೦೪). *ರೂರಲ್ ಬ್ಯಾಂಕಿಂಗ್ ಇನ್ ಇಂಡಿಯಾ*, ನ್ಯೂ ರಾಯಲ್ ಬುಕ್ ಕಂಪನಿ, ಲಕ್ನೋ, ಪು. ೯–೨೧

೮. ಗುರುದೇವಸಿಂಗ್ ಮತ್ತು ಎಸ್.ಆರ್. ಅಶೋಕನ್ (೧೯೮೮) *ಇನ್ಸಿಟ್ಯೂಷನಲ್ ಫೈನಾನ್ಸ್ ಇನ್ ರೂರಲ್ ಇಂಡಿಯಾ:* ರಾವತ್ ಪಬ್ಲಿಕೇಷನ್, ಜೈಪುರ, ಪು.೩೭–೬೪

೯. ಜಯಸೀಲನ್ ನಟರಾಜನ್ (೨೦೧೦). *ಮೈಕ್ರೋ ಕ್ರೆಡಿಟ್ ಟೂ ಮೈಕ್ರೋ ಎಂಟರ್ ಪ್ರೈಸಸ್*, ಡಾಮಿನೆಂಟ್ ಪಬ್ಲಿಷರ್ಸ್, ನ್ಯೂಡೆಲ್ಲಿ, ಪು.೭೬–೭೮.

೧೦. ಡಾ. ತನುಜ್ ಕುಮಾರ್ ಬಿಸಾಯ್ (೨೦೧೦). *ರೂರಲ್ ಕ್ರೆಡಿಟ್; ರೀಜಿನಲ್ ರೂರಲ್ ಬ್ಯಾಂಕ್ ಅಂಡ್ ಮೈಕ್ರೋಫೈನಾನ್ಸ್*, ಅಭಿಜಿತ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೩–೧೬೮.

೧೧. ರೋಹಿನಿ ಪಾಂಡೆ (೧೯೯೮). *ರೂರಲ್ ಕ್ರೆಡಿಟ್*, ನ್ಯಾಷನಲ್ ಸ್ಯಾಂಪಲ್ ಸರ್ವೆ, ಪು.೧–೧೩.

೧೨. ಸಿ. ರಂಗರಾಜನ್ (೧೯೯೮). *ಅಗ್ರೀಕಲ್ಚರ್ ಇನ್ ಚೇಂಜಿಂಗ್ ಎನ್‌ವಿರಾನ್‌ಮೆಂಟ್:* ಎಕನಾಮಿಕ್ ಡವಲಪ್‌ಮೆಂಟ್ ಇನ್ ಇಪಿಐ, ಮಂತ್ಲಿ ಅಪ್‌ಡೇಟ್, ಪುಟ: ೧೪–೧೫.

೧೩. ಎಸ್.ಎಸ್.ಎಂ. ದೇಸಾಯಿ (೧೯೭೯). *ರೂರಲ್ ಬ್ಯಾಂಕಿಂಗ್ ಇನ್ ಇಂಡಿಯಾ*, ಹಿಮಾಲಯ ಪಬ್ಲಿಕೇಷನ್, ಬಾಂಬೆ, ಪು.೧೬೪.

೧೪. ಗೌರ್ನಮೆಂಟ್ ಆಫ್ ಇಂಡಿಯಾ (೨೦೦೦–೦೧). *ಎಕನಾಮಿಕ್ ಸರ್ವೆ ೨೦೦೦–೦೧*, ಪು.೧೬೩–೧೬೪

೧೫. ರಿಸರ್ವ್‌ಬ್ಯಾಂಕ್ ಆಫ್ ಇಂಡಿಯಾ (೨೦೦೯–೧೦). *ಆನ್ಯುಯಲ್ ರಿಪೋರ್ಟ್*, ಮುಂಬೈ, ಪು.೧೦೭–೧೦೯

೧೬. ಗೌರ್ನಮೆಂಟ್ ಆಫ್ ಇಂಡಿಯಾ (೨೦೦೮–೦೯). *ಎಕನಾಮಿಕ್ ಸರ್ವೆ ೨೦೦೮–೦೯*, ಪು.೧೯೯

೧೭. ಪ್ರಿಯಾಬಸು (೨೦೦೫). *ಡೈರೆಕ್ಷನ್ ಇನ್ ಡೆವಲಪ್‌ಮೆಂಟ್: ಇಂಪ್ರೂವಿಂಗ್ ಆಕ್ಸಸ್ ಟೂ ಫೈನಾನ್ಸ್ ಫಾರ್ ಇಂಡಿಯಾಸ್ ರೂರಲ್ ಪೂರ್*, ವರ್ಲ್ಡ್ ಬ್ಯಾಂಕ್, ಪು.೧೨೫

೧೮. ಬ್ರಮನ್, ಜನ್ (೧೯೯೭). *ದಿ ವಿಲೇಜ್ ಇನ್ ಫೋಕಸ್ ಇನ್ ಜನ್ ಬ್ರಮನ್, ಪೀಟರ್ ಕ್ಲೂಸ್ ಅಂಡ್ ಅಶ್ವಿನಿ ಸೇಥ್ (ಸಂ) ದಿ ವಿಲೇಜ್ ಇನ್ ಏಷಿಯಾ ರಿ ವಿಸಿಟೆಡ್*, ಆಕ್ಸ್‌ಫರ್ಡ್ ಯೂನಿವರ್‌ಸಿಟಿ ಪ್ರೆಸ್ಸ್, ನ್ಯೂಡೆಲ್ಲಿ, ಪು.೧೫–೬೬

೧೯. ಜೀನ್ ಡ್ರೆಜ್ (೧೯೯೭). *ಆಕ್ಯುಪೇಶನಲ್ ಚೇಂಜ್, ಲ್ಯಾಂಡ್ ಓನರ್‌ಶಿಪ್ ಅಂಡ್ ಸೋಶಿಯಲ್ ಇನ್‌ಈಕ್ವಾಲಿಟಿ ಇನ್ ಜನ್ ಬ್ರಮನ್, ಪೀಟರ್ ಕ್ಲೂಸ್ ಅಂಡ್ ಅಶ್ವಿನಿ* ಸೇಥ್ (ಸಂ) ದಿ ವಿಲೇಜ್ ಇನ್ ಏಷಿಯಾ ರಿ ವಿಸಿಟೆಡ್, ಆಕ್ಸ್‌ಫರ್ಡ್ ಯೂನಿವರ್‌ಸಿಟಿ ಪ್ರೆಸ್ಸ್, ನ್ಯೂಡೆಲ್ಲಿ, ಪು.೧೨೭–೧೬೦

೨೦. ಬರ್ಬರಾ ಹ್ಯಾರಿಸ್ ವೈಟ್ (೨೦೦೪). *ಇಂಡಿಯಾ ವರ್ಕಿಂಗ್; ಎಸ್ಸೆ ಆನ್ ಸೊಸೈಟಿ ಅಂಡ್ ಎಕನಾಮಿ*, ಕೇಂಬ್ರಿಡ್ಜ್ ಯೂನಿವರ್‌ಸಿಟಿ ಪ್ರೆಸ್ಸ್, ನ್ಯೂಡೆಲ್ಲಿ, ಫೌಂಡೇಶನ್ ಬುಕ್ಸ್, ಪು.೨೨–೨೩

೨೧. ಜೀನ್ ಡ್ರೆಜ್ ಆಂಡ್ ಅಮರ್ತ್ಯಸೇನ್ (೧೯೯೯). ಇಂಡಿಯಾ: *ಎಕನಾಮಿಕ್ ಡವಲಪ್‌ಮೆಂಟ್ ಅಂಡ್ ಸೋಶಿಯಲ್ ಆಪರ್ಚುನಿಟಿ*, ಆಕ್ಸ್‌ಫರ್ಡ್ ಯೂನಿವರ್‌ಸಿಟಿ ಪ್ರೆಸ್ಸ್, ನ್ಯೂಡೆಲ್ಲಿ, ಪು.೬–೧೦

೨೨. ಅಮಿಯ ಕುಮಾರ್ ಬಾಗ್ಚಿ (೧೯೮೯). *ದಿ ಪ್ರೆಸಿಡೆನ್ಸಿ ಬ್ಯಾಂಕ್ಸ್ ಅಂಡ್ ದಿ ಇಂಡಿಯನ್ ಎಕನಾಮಿ ೧೮೭೬-೧೯೧೪*, ಆಕ್ಸ್‌ಫರ್ಡ್ ಯೂನಿವರ್‌ಸಿಟಿ ಪ್ರೆಸ್ಸ್, ಕೋಲ್ಕತ್ತಾ, ಪು.೩೨-೩೮

೨೩. ಕುರಿಯನ್ ಸಿ.ಟಿ (೧೯೯೨). *ದಿ ಎಕನಾಮಿ-ಅನ್ ಇನ್‌ಟರ್‌ಪ್ರಿಟೇಟಿವ್ ಇಂಟ್ರೊಡಕ್ಷನ್*, ಸೇಜ್ ಪಬ್ಲಿಕೇಶನ್, ನ್ಯೂಡೆಲ್ಲಿ, ಪು.೩೦೯-೩೧೩

೨೪. ಚಂದ್ರ ಶೇಖರ್ ಸಿ.ಪಿ ಅಂಡ್ ಜಯತಿ ಘೋಶ್ (೨೦೦೨). *ದಿ ಮಾರ್ಕೆಟ್ ದಟ್ ಫೈಲ್ಡ್-ನಿಯೋಲಿಬರಲ್ ಎಕನಾಮಿಕ್ ರಿಫಾರಮ್ಸ್ ಇನ್ ಇಂಡಿಯಾ;* ಲೆಫ್ಟ್ ವರ್ಡ್ ಬುಕ್ಸ್, ನ್ಯೂಡೆಲ್ಲಿ, ಪು.೧೩೯-೧೫೪

೨೫. ಪ್ರಣಬ್ ಬರ್ದಾನ್ (೧೯೯೮). *ದಿ ಪೊಲಿಟಿಕಲ್ ಎಕನಾಮಿ ಆಫ್ ಡವಲಪ್‌ಮೆಂಟ್ ಇನ್ ಇಂಡಿಯಾ*, ಆಕ್ಸ್‌ಫರ್ಡ್ ಯೂನಿವರ್‌ಸಿಟಿ ಪ್ರೆಸ್ಸ್, ನ್ಯೂಡೆಲ್ಲಿ, ಪು.೨-೧೫

೨೬. ವಿ.ಎಮ್. ದಾಂಡೇಕರ್ (೧೯೯೪). *ದಿ ಇಂಡಿಯನ್ ಎಕನಾಮಿ ೧೯೪೭-೯೨*, ವಾಲ್ಯೂಮ್ ೨, ಪಾಪುಲೇಶನ್, ಪಾವರ್ಟಿ ಅಂಡ್ ಇಮ್‌ಪ್ಲಾಯ್‌ಮೆಂಟ್, ಸೇಜ್ ಪಬ್ಲಿಕೇಶನ್, ನ್ಯೂಡೆಲ್ಲಿ, ಪು. ೧೨೭-೧೪೫

೨೭. ನ್ಯಾಷನಲ್ ಕೌನ್ಸಿಲ್ ಅಂಡ್ ಅಪ್ಲೈಡ್ ಎಕನಾಮಿಕ್ ರೀಸರ್ಚ್ ಅಂಡ್ ವರ್ಲ್ಡ್ ಬ್ಯಾಂಕ್ (೨೦೦೩). *ರೂರಲ್ ಫೈನಾನ್ಸಿಯಲ್ ಸರ್ವೆ*, ಎನ್‌ಸಿಎಇಆರ್, ಪು.೩-೪

೨೮. ದೀಪ್ತಿಮಾ ಮೆಸ್ಸಿ, ಅಬ್ದುಲ್ ರಫೀಕ್ ಅಂಡ್ ಜಾನೆಟ್ ಶೀಲಿ (೨೦೧೦). *ಬೆಗ್ಗಿಂಗ್ ಇನ್ ರೂರುಲ್ ಇಂಡಿಯಾ ಅಂಡ್ ಬಾಂಗ್ಲಾದೇಶ್*, ಇಪಿಡಬ್ಲೂ, ಏಪ್ರಿಲ್ ೨೦೧೦, ವಾಲ್ಯೂಮ್ ಎಕ್ಸ್‌ಎಲ್‌ವಿ, ನಂ.೧೪, ಪು.೬೪-೬೫

೨೯. ತಾರಾ ಎಸ್ ನಾಯರ್ (೨೦೧೦). *ಕಮರ್ಶಿಯಲ್ ಮೈಕ್ರೋ ಪೈನಾನ್ಸ್ ಅಂಡ್ ಸೋಶಿಯಲ್ ರೆಸ್ಪಾನ್ಸಿಬಿಲಿಟಿ*, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ವಾಲ್ಯೂಮ್, ಎಕ್ಸ್‌ಎಲ್‌ವಿ, ನಂ.೩೧, ಪು.೩೨-೩೩

೩೦. ಎಂ.ಎಸ್ ಶ್ರೀರಾಮ್ (೨೦೧೦). *ಮೈಕ್ರೋ ಪೈನಾನ್ಸ್; ಎ ಫೇರ್‌ಲೀ ಟೇಲ್ ಟರ್ನ್ಸ್ ಇನ್‌ಟೂ ಎ ನೈಟ್‌ಮೇರ್*, ಇಪಿಡಬ್ಲೂ ಅಕ್ಟೋಬರ್ ೨೩ ೨೦೧೦, ವಾಲ್ಯೂಮ್ ೪೩, ಪು.೧೧

೩೧. ಬೀನಾ ಅಗರ್‌ವಾಲ್ (೨೦೦೧). *ರೀ ತಿಂಕಿಂಗ್ ಅಗ್ರಿಕಲ್ಚರಲ್ ಪ್ರೊಡಕ್ಷನ್ ಕಲೆಕ್ಟಿವಿಟೀಸ್*, ಇಪಿಡಬ್ಲೂ, ಫೆಬ್ರವರಿ ೨೭ ೨೦೦೧, ವಾಲ್ಯೂಮ್ ೯, ಪು.೬೪

೩೨. ಪ್ರೊ. ಮೈತ್ರೇಯಿ ಕೃಷ್ಣರಾಜನ್, ಶ್ರೀ ಎಕೆ. ಅಗವಾಲ್ ಅಂಡ್ ಡಾ. ಕೆ.ಎಸ್.ಪಿ ರಾವ್ (೨೦೦೭). *ರಿಪೋರ್ಟ್ ಆಫ್ ಸಬ್ ಗ್ರೂಪ್ ಆನ್ ಜಂಡರ್ ಅಂಡ್ ಅಗ್ರಿಕಲ್ಚರ್*, ಪ್ಲಾನಿಂಗ್ ಕಮಿಷನ್, ಗೌರ್ನಮೆಂಟ್ ಆಫ್ ಇಂಡಿಯಾ, ಪು.೦೪-೦೫.

೩೩. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ (೧೯೯೯-೨೦೦೦). *ಆನ್ಯುಯಲ್ ರಿಪೋರ್ಟ್*, ಮುಂಬೈ, ಪು.೨೭-೨೮

೩೪. ಗೌತಮ್ ಪುರಕಾಯಸ್ತ (೨೦೦೮). *ರೂರಲ್ ಕ್ರಡಿಟ್ ಇನ್ ಡಿಸಾರೆ*, ಐಸೆಕ್, ಬೆಂಗಳೂರು, ಪು.೨೪೯-೨೫೩

೩೫. ಥಾಮಸ್ ಟಿಮ್‌ಬರ್ಗ್ ಅಂಡ್ ಚಂದ್ರಶೇಕರ್ ವಿ. ಅಯ್ಯರ್ (೧೯೮೦). *ಇನ್‌ಫಾರ್ಮಲ್ ಕ್ರೆಡಿಟ್ ಮಾರ್ಕೆಟ್ಸ್ ಇನ್ ಇಂಡಿಯಾ*, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ವಾಲ್ಯೂಮ್ ೧೫, ನಂ.೫/೭, ಫೆಬ್ರವರಿ ೧೯೮೦, ಪು. ೨೭೯-೨೮೦

೩೬. ಇಪಿಡಬ್ಲ್ಯೂ ರೀಸರ್ಚ್ ಫೌಂಡೇಶನ್ (೧೯೭೮). *ಅಗ್ರಿಕಲ್ಚರಲ್ ಲೇಬರ್ ಗೆಟಿಂಗ್ ಪೂರ್*, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಅಕ್ಟೋಬರ್ ೧೯೭೮, ಪು. ೧೭೨೬-೧೭೨೭

೩೭. ಅಂಜಲಿ ಕುಮಾರ್, ದೀರಜ್ ಕೆ. ಸಿಂಗ್ ಪ್ರಭಾತ್ ಕುಮಾರ್ (೨೦೦೭). *ಟ್ರೆಂಡ್ಸ್ ಇನ್ ರೂರಲ್ ಫೈನಾನ್ಸ್: ಪರ್‌ಫಾರ್ಮೆನ್ಸ್ ಆಫ್ ರೂರುಲ್ ಕ್ರೆಡಿಟ್ ಅಂಡ್ ಫ್ಯಾಕ್ಟರ್ಸ್ ಅಫೆಕ್ಟಿಂಗ್ ದಿ ಚಾಯ್ಸ್ ಆಫ್ ಕ್ರೆಡಿಟ್ ಸೋರ್ಸ್*, ಇಂಡಿಯನ್ ಜರ್ನಲ್ ಆಫ್ ಅಗ್ರಿಕಲ್ಚರಲ್ ಎಕನಾಮಿಕ್ಸ್, ವ್ಯಾಲ್ಯೂಮ್.೬೨.ನಂ.೩, ಜುಲೈ-ಸೆಪ್ಟಂಬರ್ ೨೦೦೭, ಪು. ೨೯೭-೩೧೨

೩೮. ರಾಜಶೇಖರ್ ಡಿ. (೧೯೯೮). *ಪ್ರೊ ಪಾರ್ಥಸಾರಥಿಸ್ ರೈಟಿಂಗ್ಸ್ ಆನ್ ಇಂಡಿಯನ್ ರೂರುಲ್ ಎಕನಾಮಿ ಇನ್ ಟ್ರಾನ್ಸಿಷನ್*, ಪ್ರಿಂಟ್ ವೆಲ್ ಪಬ್ಲಿಷರ್ಸ್, ಜೈಪುರ್, ಪು.೨-೧೦೭

೩೯. ನಾಯಕ್ ಪಿ.ಕೆ., ಸುಧಾನ್ ಕುಮಾರ್ ಚಟ್ಟೋಪಾದ್ಯಯ ಮತ್ತು ಅರುಣ್ ವಿಷ್ಣು ಕುಮಾರ್ (೨೦೧೦). *ಇನ್‌ಕ್ಲೂಸಿವ್ ಗ್ರೋತ್ ಅಂಡ್ ಇಟ್ಸ್ ರೀಜಿನಲ್ ಡೈಮೆನ್‌ಷನ್*, ಆರ್‌ಬಿಐ ಅಕೇಷನಲ್ ಪೇಪರ್, ವಾಲ್ಯೂಮ್.೩೧, ನಂ.೩, ಮುಂಬೈ, ಪು.೯೧-೯೫

೪೦. ಗೋಪಾಲ್ ಅಯ್ಯರ್ ಅಂಡ್ ಸರೋಜ ಅರೋರ (೨೦೧೦). *ಇನ್‌ಡೆಟ್‌ನೆಸ್ ಅಂಡ್ ಫಾರ್ಮರ್ಸ್ ಸೂಸೈಡ್ಸ್* ಇನ್ ಆರ್.ಎಸ್ ದೇಶಪಾಂಡೆ ಅಂಡ್ ಸರೋಜ ಅರೋರ (ಸಂ) ಅಗ್ರೇರಿಯನ್ ಕ್ರೈಸಿಸ್ ಅಂಡ್ ಫಾರ್ಮರ್ಸ್ ಸೂಸೈಡ್ಸ್-ಲ್ಯಾಂಡ್ ರಿಫಾರ್ಮ್ಸ್-ವ್ಯಾಲ್ಯೂಮ್ ೧೨, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೧-೧೩

೪೧. ಬಿ.ಎಸ್ ಹನ್ಸ್‌ರಾ ಮತ್ತು ಎ.ಎನ್. ಶುಕ್ಲಾ (೧೯೯೧). *ಸೋಶಿಯಲ್, ಇಕನಾಮಿಕ್ ಅಂಡ್ ಪೊಲಿಟಿಕಲ್ ಇಂಪ್ಲಿಕೇಷನ್ ಆಫ್ ಗ್ರೀನ್ ರೆವಲ್ಯೂಶನ್* ಇನ ಇಂಡಿಯಾ, ಕ್ಲಾಸಿಕ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೧-೧೨

೪೨. ದಂತವಾಲ ಎಂ.ಎಲ್. (೧೯೯೬). *ಡೈಲಮಾಸ್ ಆಫ್ ಗ್ರೋತ್- ದಿ ಇಂಡಿಯನ್ ಎಕ್ಸ್‌ಪೀರಿಯನ್ಸ್*, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ/ಲಂಡನ್, ಪು.೨೯೫-೩೧೧

೪೩. ಇಪಿಡಬ್ಲ್ಯೂ ರೀಸರ್ಚ್ ಫೌಂಡೇಶನ್ (೨೦೦೭). *ರೂರಲ್ ಕ್ರೆಡಿಟ್ ಸ್ಟ್ರಕ್ಚರ್ ನೀಡ್ಸ್ ಜೆನೈನ್ ರಿವಿಟಲೈಶೇನ್,* ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ೧೯ ಮೇ ೨೦೦೯, ಪು. ೫೩–೫೫

೪೪. ದಿಲಿಪ್ ಎಸ್ ಠಾಕೂರ್ ಅಂಡ್ ನೀರಜ್ ಶರ್ಮ (೨೦೦೮). *ಡಿಸ್ಟ್ರಿಬ್ಯೂಷನ್ ಆಫ್ ಹೌಸ್‌ಹೋಲ್ಡ್ಸ್ ಅಂಡ್ ದಿ ರಿಸಲ್ಟಾಂಟ್ ಪ್ಯಾಟರನ್ಸ್ ಆಫ್ ಇನ್ಕಮ್ ಅಂಡ್ ಎಮ್‌ಪ್ಲಾಯ್‌ಮೆಂಟ್ ಅಮಾಂಗ್ ದಿ ವೀಕರ್ಸ್ ಸೆಕ್ಷನ್ ಇನ ದಿ ರೂರಲ್ ಏರಿಯಾ ಆಫ್ ಹರ್‍ಯಾಣ,* ಸೋಶಿಯಲ್ ಛೇಂಜ್, ಸೆಪ್ಟಂಬರ್ ೨೦೦೮, ವಾಲ್ಯೂಮ್ ೩೮, ನಂ.೩ ಪು.೨೨೦–೨೨೩

೪೫. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ (೧೯೯೭). *ಎ ರಿವ್ಯೂವ್ ಆಫ್ ಅಗ್ರಿಕಲ್ಚರಲ್ ಕ್ರೆಡಿಟ್ ಸಿಸ್ಟಮ್ ಇನ್ ಇಂಡಿಯಾ;* ರಿಪೋರ್ಟ್ ಆಫ್ ಅಗ್ರಿಕಲ್ಚರಲ್ ಕ್ರೆಡಿಟ್ ಕಮಿಟಿ ಹೆಡೆಡ್ ಬೈ ಪ್ರೊ. ಎ.ಮ್.ಕುಸ್ರೋ, ಆರ್‌ಬಿಐ, ಬಾಂಬೆ, ಪು.೯–೩೬

೪೬. ಎಸ್.ಎನ್ ತ್ರಿಪತಿ (೨೦೦೮). *ಅಗ್ರಿಕಲ್ಚರಲ್ ಲೇಬರ್, ಪಾಲಿಸಿ ಆಫ್ ಡಬ್ಲ್ಯೂಟಿಒ ಅಂಡ್ ಫಾರ್ಮರ್ಸ್ ಸೂಸೈಡ್ ಇನ್ ಇಂಡಿಯನ್ ಸ್ಟೇಟ್ಸ್* ಇನ್ ಕೆ.ಕೆ ಬಾಗ್ಚಿ (ಸಂ) ಅಗ್ರೇರಿಯನ್ ಕ್ರೈಸಿಸ್ ಅಂಡ್ ಫಾರ್ಮರ್ಸ್ ಸೂಸೈಡ್ಸ್ ಅಂಡ್ ಲೈವ್‌ಲಿಹುಡ್ ಸೆಕ್ಯುರಿಟಿ ಆಫ್ ರೂರಲ್ ಲೇಬರ್ ಇನ್ ಇಂಡಿಯಾ, ವ್ಯಾಲೂಮ್–೧, ಅಭಿಜಿತ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೩–೧೯

೪೭. ಎಸ್. ಗುಣಶೇಖರನ್ (೧೯೮೫). *ಸ್ಮಾಲ್ ಫಾರ್ಮರ್ಸ್ ಅಂಡ್ ಇನ್‌ಸ್ಟಿಟ್ಯೂಶನಲ್ ಕ್ರೆಡಿಟ್,* ಆಶಿಶ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೬೯–೮೫

೪೮. ಶಾಕುಂತಲಾ ದೇವಿ (೧೯೯೬). *ರೂರಲ್ ಕ್ರೆಡಟ್ ಅಂಡ್ ಅಗ್ರಿಕಲ್ಚರಲ್ ಡವಲಪ್‌ಮೆಂಟ್,* ಸರೂಪ್ ಅಂಡ್ ಸನ್ಸ್ ಪಬ್ಲಿಷರ್ಸ್, ನ್ಯೂಡೆಲ್ಲಿ, ಪು.೧–೧೧

೪೯. ಆರ್.ಬಿ.ಐ. (೨೦೧೨). ಪಾಲಿಸಿ; *ಪ್ರಿಯಾರಿಟಿ ಸೆಕ್ಟರ್ ಗೈಡ್‌ಲೈನ್ಸ್ ಅಮೆಂಡಡ್, ಮಾನಿಟರಿ ಅಂಡ್ ಕ್ರೆಡಿಟ್ ಇನಫರ್‌ಮೇಶನ್ ರಿವ್ಯೂವ್,* ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ, ಅಕ್ಟೋಬರ್ ೨೦೧೨, ವ್ಯಾಲೂಮ್ ಐಎಕ್ಸ್, ಇಶ್ಯೂ ೪, ಪು.೧–೫

೫೦. ಮ್ಯಾನ್‌ಫ್ರೆಡ್ ಜೆಲ್ಲರ್, ಗೆರ್ಟ್ರಡ್ ಸ್ನೈಡರ್, ಯಾಕಿಮ್ ವೋನ್ ಬ್ರೌನ್ ಅಂಡ್ ಫ್ರಾಜ್ ಹೈಢಸ್ (೧೯೯೭). *ಫುಡ್ ಪಾಲಿಸಿ ರಿವ್ಯೂವ್–ರೂರಲ್ ಫೈನಾನ್ಸ್ ಫಾರ್ ಫುಡ್ ಸೆಕ್ಯುರಿಟಿ ಫಾರ್ ದಿ ಪೂರ್–* ಇಮ್‌ಪ್ಲಿಕೇಶನ್ ಫಾರ್ ರೀಸರ್ಚ್ ಅಂಡ್ ಪಾಲಿಸಿ, ಇಂಡಿಯನ್ ಇಸ್ಟಿಟ್ಯೂಟ್ ಫಾರ್ ಸೋಶಿಯೋ ಎಕನಾಮಿಕ್ ಛೇಂಜ್ (ಐಸೆಕ್), ಬೆಂಗಳೂರು, ಪು.೬–೧೧

೫೧. ಜೇಮ್ಸ್ ಮೇನರ್ (೨೦೦೭). *ಛೇಂಜ್ ಇನ್ ಕರ್ನಾಟಕ ಓವರ್ ದಿ ಲಾಸ್ಟ್ ಜನರೇಷನ್-ವಿಲೇಜಸ್ ಅಂಡ್ ದಿ ವೈಡರ್ ಕಂಟೆಕ್ಸ್ಟ್*, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಫೆಬ್ರವರಿ ೨೪, ೨೦೦೭, ಪು.೬೫೩-೬೬೦

೫೨. ಡಾ. ಎಂ. ಚಂದ್ರ ಪೂಜಾರಿ (೨೦೦೮). *ರಾಜಕೀಯ ಬಡತನ*, ಹೊಸಪೇಟೆ, ಸಿದ್ಧಾರ್ಥ ಪ್ರಕಾಶನ, ಪು.೧೩೫-೧೩೮

೫೩. ಡಾ. ಎಂ. ಚಂದ್ರ ಪೂಜಾರಿ (೨೦೧೦). *ಕರ್ನಾಟಕ ಪಂಚವಾರ್ಷಿಕ ಯೋಜನೆಗಳು*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ಪು.೧-೧೯

೫೪. ಡಾ. ಎಂ. ಚಂದ್ರಪೂಜಾರಿ (೨೦೧೦). *ಯಾಕೀಗ ಭೂಮಿ ಪ್ರಶ್ನೆ*, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ಪು.೩-೧೧೬

೫೫. ಡಾ. ಚಂದ್ರಶೇಖರ್ ಟಿ.ಆರ್ (೨೦೦೪). ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ: ರಾಜಕೀಯ ವೈಪಲ್ಯದ ಒಂದು ಸಂಕತನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ. ಪು.೪೫-೬೮

೫೬. ಡಾ. ಚಂದ್ರಶೇಖರ್ ಟಿ.ಆರ್ (೨೦೦೩). *ಕರ್ನಾಟಕ: ಅಭಿವೃದ್ಧಿಯ ಸಾಮಾಜಿಕ ನೆಲೆಗಳು*, ಬೆಂಗಳೂರು, ಸಿವಿಜಿ ಪಬ್ಲಿಕೇಶನ್, ಪು. ೬೬-೭೧

೫೭. ಎಡಿಟೆಡ್ ಬೈ ರಾವ್ ವಿ.ಕೆ.ಆರ್.ವಿ (೧೯೭೭). *ಪ್ಲಾನಿಂಗ್ ಇನ್ ಪರ್ಸ್‌ಪೆಕ್ಟೀವ್, ಪಾಲಿಸಿ ಚಾಯ್ಸ್‌ಸ್ ಇನ್ ಪ್ಲಾನಿಂಗ್ ಫಾರ್ ಕರ್ನಾಟಕ ೧೯೭೩-೭೪ ಟು ೧೯೮೮-೯೦*, ಇಂಡಿಯನ್ ಇಸ್ಟಿಟ್ಯೂಟ್ ಫಾರ್ ಸೋಶಿಯೋ ಎಕನಾಮಿಕ್ ಛೇಂಜ್ (ಐಸೆಕ್), ಬೆಂಗಳೂರು, ಪು.೩೩೧-೩೩೯

೫೮. ಎನ್.ಎಸ್.ಎಸ್. ನಾರಾಯಣ ಮತ್ತು ಉಷಾ ವಡ್ರೆವು (೧೯೮೩). *ಕರ್ನಾಟಕದ ಅಭಿವೃದ್ಧಿ ಮಾಧರಿಗಳು;* ಇಂಡಿಯನ್ ಸ್ಟಾಟಿಸ್ಟಿಕಲ್ ಇನ್‌ಸ್ಟಿಟ್ಯೂಟ್, ಬೆಂಗಳೂರು, ಪು.೧-೮

೫೯. ಡಾ. ಚಂದ್ರಶೇಖರ್ ಟಿ.ಆರ್ (೨೦೦೮). *ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಸ್ಥಿತಿಗತಿ*, ಹಂಪಿ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಪು.೨೫-೨೬

೬೦. ವೀರಶೇಖರಪ್ಪ (೧೯೯೭). *ಇನ್‌ಸ್ಟಿಟ್ಯೂಷನಲ್ ಫೈನಾನ್ಸ್ ಫಾರ್ ರೂರಲ್ ಡವಲಪ್‌ಮೆಂಟ್*, ರಾವತ್ ಪಬ್ಲಿಕೇಷನ್, ಜೈಪುರ್ ಅಂಡ್ ನ್ಯೂಡೆಲ್ಲಿ, ಪು.೮೩-೧೩೯

೬೧. ರಾಜನ್ ಪಾಂಡೆ (೨೦೦೯). *ಆನ್ ಉಮನ್ ಸರ್‌ವೈವಿಂಗ್ ಫಾರ್ಮರ್ಸ್ ಸೂಸೈಡ್ಸ್ ಇನ್ ಪಂಜಾಬ್*, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ೯ ಮೇ, ೨೦೦೯, ವ್ಯಾಲೂಮ್, ಎಕ್ಸ್‌ಎಲ್‌ಐವಿ, ನಂ.೧೯, ಪು.೫೩-೫೫

೬೨. ಹೆಚ್.ಎಸ್. ಶೈಲೇಂದ್ರ (೧೯೯೨). *ಇಂಪ್ಯಾಕ್ಟ್ ಆಫ್ ಇನ್ಸ್‌ಟೂಷನಲ್ ಕ್ರೆಡಿಟ್ ಆನ್ ರೂರಲ್ ಪೂರ್ ವಿತ್ ಸ್ಪೆಷಲ್ ರೆಫರೆನ್ಸ್ ಟೂ ದಿ ಪರ್‌ಫಾರ್‌ಮೆನ್ಸ್ ಆಫ್ ಎ ರೀಜಿನಲ್ ರೂರಲ್ ಬ್ಯಾಂಕ್ ಇನ್ ಕರ್ನಾಟಕ,* ಇಂಡಿಯನ್ ಇಸ್ಟಿಟ್ಯೂಟ್ ಫಾರ್ ಸೋಶಿಯೋ ಎಕನಾಮಿಕ್ ಛೇಂಜ್ (ಐಸೆಕ್), ಬೆಂಗಳೂರು, ಪು.೧೪೦-೧೪೪

೬೩. ಕರ್ನಾಟಕ ರಾಜ್ಯದ ಮುಖ್ಯವಾಗಿ ಹೈದರಾಬಾದ್ ಕರ್ನಾಟಕ ಜಿಲ್ಲೆಗಳಕಲ್ಲಿ ಕೃಷಿ ಕಾರ್ಮಿಕರ ಹೆಚ್ಚಳದ ಬಗ್ಗೆ ವಿಶ್ಲೇಷನೆ ನೀಡಲಾಗಿದೆ. ಜನಗಣತಿ ವರ್ಷಗಳು, ದೇಶದ ಒಟ್ಟು ಜನಸಂಖ್ಯೆ, ಒಟ್ಟು ಶ್ರಮ ಶಕ್ತಿ, ಇದರಲ್ಲಿ ಕೃಷಿ ಕೂಲಿ ಕಾರ್ಮಿಕರ ಶೇಕಡಾವಾರು ಹೆಚ್ಚಳಕ್ಕೆ ಕಾರಣವಾದ ಅಂಶಗಳನ್ನು ವಿಶ್ಲೇಷಿಸಲಾಗಿದೆ. ಕೆ.ಎ. ರಸೂರ್, ಚನ್ನಬಸವನಗೌಡ ಮತ್ತು ಬೊಕ್ಕಲ್ ನಾಗೇಂದ್ರಪ್ಪ, *ಆನ್ ಎಕಾನಮಿಕ್ ಅನಾಲಿಸಿಸ್ ಆಫ್ ಅಗ್ರಿಕಲ್ಚರಲ್ ಲೇಬರ್ ಇನ್ ಹೈದರಾಬಾದ್ ಕರ್ನಾಟಕ* ಇಲ್ಲಿ ಕೆ.ಕೆ ಬಾಗ್ಚಿ (ಸಂ) ಅಗ್ರೇರಿಯನ್ ಕ್ರೈಸಿಸ್; ಫಾರ್ಮರ್ಸ್ ಸುಸೈಡ್ಸ್ ಅಂಡ್ ಲೈವ್‌ಲಿಹುಡ್ ಸೆಕ್ಯೂರಿಟಿ ಆಫ್ ರೂರಲ್ ಲೇಬರ್ ಇನ್ ಇಂಡಿಯಾ, ಅಭಿಜಿತ್ ಪಬ್ಲಿಕೇಷನ್, ಡೆಲ್ಲಿ, ೨೦೧೧, ಪು.೨೨೩-೨೨೪, ನೋಡಿ.

೬೪. ಕರ್ನಾಟಕ ಸರ್ಕಾರ (೨೦೦೨). *ಪ್ರಾದೇಶಿಕ ಅಸಮತೋಲನ ನಿವಾರಣಾ ಉನ್ನತಾಧಿಕಾರಿ ಸಮಿತಿ, ಅಂತಿಮ ವರದಿ ೨೦೦೨,* ಕರ್ನಾಟಕ ಸರ್ಕಾರ, ಯೋಜನಾ ಆಯೋಗ ಇಲಾಖೆ, ಬೆಂಗಳೂರು, ಪು.೩೦೮

೬೫. ಕರ್ನಾಟಕ ಸರ್ಕಾರ (೨೦೦೬). *ಕರ್ನಾಟಕ ಮಾನವ ಅಭಿವೃದ್ಧಿ ವರದಿ-೨೦೦೫,* ಕರ್ನಾಟಕ ಸರ್ಕಾರ, ಯೋಜನಾ ಆಯೋಗ ಇಲಾಖೆ, ಬೆಂಗಳೂರು, ಪು.೧೮-೮೫,

೬೬. ಎನ್. ರಂಗಸ್ವಾಮಿ ಮತ್ತು ಪಿ.ಕೆ. ತ್ರಿಪಾಟಿ (೨೦೧೩). *ಸ್ಟ್ರಕ್ಚರಲ್ ಛೇಂಜ್ ಇನ್ ಕರ್ನಾಟಕಾಸ್ ಎಕನಾಮಿ,* ವರ್ಕಿಂಗ್ ಪೇಪರ್ ಸೀರಿಸ್ ನಂ ೨, ಯೂಜಿಸಿ ಸೆಂಟರ್ ಫಾರ್ ದಿ ಸ್ಟಡಿ ಆಫ್, ಸೋಸಿಯಲ್ ಎಕ್ಸ್‌ಕ್ಲೂಷನ್ ಅಂಡ್ ಇನ್‌ಕ್ಲೂಸಿವ್ ಪಾಲಿಸಿ, ಬೆಂಗಳೂರು ಯೂನಿವರ್‌ಸಿಟಿ, ಬೆಂಗಳೂರು, ಪು.೧೬-೨೪

೬೭. ಮೀನಾಕ್ಷಿ ರಾಜೀವ್ ಅಂಡ್ ಬಿ.ಬಿ ವಾಣಿ (೨೦೧೨). *ಫಾರ್ಮ್ ಸೆಕ್ಟರ್ ಇನ್ ಕರ್ನಾಟಕ; ಫಾರ್ಮರ್ಸ್ ಇನ್‌ಡೆಟ್‌ನೆಸ್ ಅಂಡ್ ರಿಸ್ಕ್ ಮ್ಯಾನೇಜ್‌ಮೆಂಟ್; ಅನ್ ಅಸೆಸ್‌ಮೆಂಟ್ ಆಫ್ ದಿ ಚಾಲೆಂಜಸ್ ಟು ದಿ ಸ್ಟೇಟ್,* ಸೆಪ್ಟಂಬರ್ ೨೦೧೨, ಇಂಡಿಯನ್ ಇಸ್ಟಿಟ್ಯೂಟ್ ಫಾರ್ ಸೋಶಿಯೋ ಎಕನಾಮಿಕ್ ಛೇಂಜ್ (ಐಸೆಕ್), ಬೆಂಗಳೂರು, ಪು.೧-೨೦

೬೮. ರೈತರ ಆತ್ಮಹತ್ಯೆಗೆ ಬೇರೆ ಬೇರೆ ಕಾರಣ ಮತ್ತು ಪರಿಣಾಮಗಳನ್ನು ಮುಜಾಫರ್ ಅಸಾದಿ ವಿಶ್ಲೇಷಿಸಿದ್ದಾರೆ. ಭಾರತ ಮತ್ತು ಕರ್ನಾಟಕದ ರೈತರ ಆತ್ಮಹತ್ಯೆಯ ಘಟನೆಗಳನ್ನು ಉಲ್ಲೇಖಿಸಿದ್ದಾರೆ. *ಕರ್ನಾಟಕದಲ್ಲಿ ಐಡೆಂಟಿಟಿ ರಾಜಕೀಯ, ರೈತ ಹೋರಾಟ ಹಾಗೂ ಸಾಮಾಜಿಕ ಚಳುವಳಿ,* ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೦೯, ಪು.೧೨೨-೧೨೯, ನೋಡಬಹುದು.

೬೯. ಎ.ಆರ್. ವಾಸವಿ (೧೯೯೯). *ಬೀದರ್ ಡಿಸ್ಟ್ರೆಸ್ ಅಂಡ್ ಫಾರ್ಮರ್ಸ್ ಸೂಸೈಡ್ಸ್;* ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಅಕ್ಟೋಬರ್, ೧೯೯೯, ಪು.೧೦-೧೨

೭೦. ಮೀನಾಕ್ಷಿ ರಾಜೀವ್, ಬಿ.ಪಿ. ವಾಣಿ ಮತ್ತು ಭಟ್ಟಾಚಾರ್ಜಿ (೨೦೧೧). *ಕ್ರೆಡಿಬಿಲಿಟಿ ಆಫ್ ಈಕ್ವಲ್ ಆಕ್ಸೆಸ್ ಟು ಕ್ರೆಡಿಟ್; ಡಸ್ಸ್ ಜೆಂಡರ್ ಮ್ಯಾಟರ್?,* ವಾಲ್ಯೂಮ್, ಎಕ್ಸ್‌ಎಲ್‌ವಿಐ, ನಂ ೩೩, ಆಗಸ್ಟ್ ೧೩ ೨೦೧೧, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಪು. ೭೬-೭೯

೭೧. ರಾವ್ ವಿ. (೨೦೦೨). *ಪ್ರಾಬ್ಲಮ್ಸ್ ಅಂಡ್ ಪ್ರಾಸ್‌ಪೆಕ್ಟ್ಸ್ ಆಫ್ ಇನ್‌ಸ್ಟಿಟೂಷನಲ್ ಫೈನಾನ್ಸ್,* ಇಂಡಿಯನ್ ಇಸ್ಟಿಟ್ಯೂಟ್ ಫಾರ್ ಸೋಶಿಯೋ ಎಕನಾಮಿಕ್ ಛೇಂಜ್ (ಐಸೆಕ್), ಬೆಂಗಳೂರು, ಪು. ೭೬-೧೦೦

೭೨. ಜಿ. ತಿಮ್ಮಯ್ಯ (೧೯೯೭). *ನ್ಯೂ ಪರ್ಸ್‌ಪೆಕ್ಟಿವ್ ಆನ್ ಲ್ಯಾಂಡ್ ರಿಫಾರ್ಮ್ಸ್* ಇನ್ ಅಬ್ದುಲ್ ಅಜೀಜ್ ಅಂಡ್ ಸುಧೀರ್ ಕ್ರಷ್ಣ (ಸಂ) ಲ್ಯಾಂಡ್ ರಿಫಾರ್ಮ್ಸ್ ಇನ್ ಇಂಡಿಯಾ ವಾಲ್ಯೂಮ್-೪, ಕರ್ನಾಟಕ ಪ್ರಾಮಿಸಸ್ ಕೆಪ್ಟ್ ಅಂಡ್ ಮಿಸ್ಡ್, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೬೨-೭೯

೭೩. ಚಂದ್ರಶೇಖರ್ ಬಿ.ದಾಮ್ಲೆ (೧೯೯೭). *ಅಗ್ರೇರಿಯನ್ ಇನ್‌ಈಕ್ವ್ಯಾಲಿಟಿ; ಪೋಸ್ಟ್ ಲ್ಯಾಂಡ್ ರಿಫಾರ್ಮ್ಸ್ ಎಕ್ಸ್‌ಪೀರಿಯನ್ಸ್* ಇನ್ ದಕ್ಷಿಣ ಕನ್ನಡ ಡಿಸ್ಟ್ರಿಕ್ಟ್ ಇನ್ ಅಬ್ದುಲ್ ಅಜೀಜ್ ಅಂಡ್ ಸುಧೀರ್ ಕ್ರಷ್ಣ (ಸಂ) ಲ್ಯಾಂಡ್ ರಿಫಾರ್ಮ್ಸ್ ಇನ್ ಇಂಡಿಯಾ ವಾಲ್ಯೂಮ್-೪, ಕರ್ನಾಟಕ ಪ್ರಾಮಿಸಸ್ ಕೆಪ್ಟ್ ಅಂಡ್ ಮಿಸ್ಡ್, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೧೬೧-೧೭೩

## ಅಧ್ಯಾಯ ಒಂದು

# ಅಧ್ಯಯನದ ಸೈದ್ಧಾಂತಿಕ ಚೌಕಟ್ಟು

ಅಧ್ಯಯನದ ಸೈದ್ಧಾಂತಿಕ ಚೌಕಟ್ಟನ್ನು ಮೂರು ಭಾಗಗಳಾಗಿ ಚರ್ಚಿಸಲಾಗಿದೆ. ಇದರಲ್ಲಿ ಜಾಗತಿಕ ದೃಷ್ಟಿಕೋನ, ರಾಷ್ಟ್ರೀಯ ಹಾಗು ಪ್ರಾದೇಶಿಕ ಅಥವಾ ಸ್ಥಳೀಯ ಅಧ್ಯಯನಗಳನ್ನು ಚರ್ಚಿಸಲಾಗಿದೆ. ಇದರೊಂದಿಗೆ ಅಧ್ಯಯನದ ವಸ್ತು ವಿಷಯಕ್ಕೆ ಸಂಬಂಧಿಸಿದ ರಾಜಕೀಯ ಆರ್ಥಿಕತೆಯ ಚರ್ಚೆಗಳನ್ನು ಇಲ್ಲಿ ನೀಡಲಾಗಿದೆ.

ಅಭಿವೃದ್ಧಿಯ ಇತಿಹಾಸ ಮತ್ತು ವಿವಿಧ ಕಾಲ ಘಟ್ಟದಲ್ಲಿ ಅಭಿವೃದ್ಧಿ ಅರ್ಥದ ಬದಲಾವಣೆಯನ್ನು ವಿವರಿಸುತ್ತಾ ಅಭಿವೃದ್ಧಿಯ ಸಿದ್ಧಾಂತಗಳನ್ನು ವಿಶ್ಲೇಷಿಸಲಾಗಿದೆ. ೧೯ನೇ ಶತಮಾನದ ಅಭಿವೃದ್ಧಿ ಚಟುವಟಿಕೆಗಳ ಮೇಲೆ ಇಂಗ್ಲೇಂಡಿನ ಪ್ರಭಾವವನ್ನು ವಿವರಿಸುತ್ತಾರೆ. ೧೯ನೇ ಶತಮಾನದಲ್ಲಿ ಕೇಂದ್ರ ಮತ್ತು ಪೂರ್ವ ಯೂರೋಪಿನಲ್ಲಿ ಕೈಗಾರಿಕೀಕರಣಕ್ಕೆ ಅಧ್ಯತೆ ನೀಡಲಾಯಿತು. ಅಭಿವೃದ್ಧಿ ಎಂದರೆ ಕೈಗಾರಿಕೀಕರಣವೆಂದು ಭಾವಿಸಲಾಯಿತು. ಆದರೆ ಕೈಗಾರಿಕೀಕರಣ ಜನರ ಬದುಕಿನ ಮೇಲೆ ದುಷ್ಪರಿಣಾಮ ಬೀರಿತು ಎನ್ನಲಾಗಿದೆ. ಅಂದರೆ ಜನರು ಉದ್ಯೋಗಗಳನ್ನು ಕಳೆದುಕೊಂಡರು ಮತ್ತು ಸಮಾಜದ ಸಂಬಂಧಗಳು ಹದಗೆಟ್ಟವು. ೨೦ನೇ ಶತಮಾನದಲ್ಲಿ ಯೂರೋಪ್‌ನ ವಸಾಹತು ಆರ್ಥಿಕತೆಗಳು ತಮ್ಮ ವೈಯುಕ್ತಿಕ ಹಿತಾಸಕ್ತಿಗಳನ್ನು ಕಾಪಾಡುವ ದೃಷ್ಟಿಯಿಂದ ಸಂಪನ್ಮೂಲ ನಿರ್ವಹಣೆಯನ್ನು ಅಭಿವೃದ್ಧಿ ಎಂದು ಭಾವಿಸಿದವು ಅಂದರೆ ಜಗತ್ತಿನಾದ್ಯಂತ ವಸಾಹತು ಸ್ಥಾಪಿಸಿ ಈ ವಸಾಹತು ಜನರ ಅಭಿವೃದ್ಧಿಗಾಗಿ ಸಂಪನ್ಮೂಲವನ್ನು ಸಂಗ್ರಹಿಸುವುದು ಅಭಿವೃದ್ಧಿ ಎಂದು ಭಾವಿಸಲಾಯಿತು. ಈ ವಸಾಹತು ಸ್ಥಳೀಯ ಉತ್ಪನ್ನವಲಯವನ್ನು ನಾಶಮಾಡಿತು. ಈ ನಿಟ್ಟಿನಲ್ಲಿ ಭಾರತದ ಜವಳಿ ಉದ್ಯಮ ನಾಶವಾದದು ಒಂದು ಉದಾಹರಣೆಯಾಗಿದೆ. ವಸಾಹತುಶಾಹಿ

ಬಂಡವಾಳಶಾಹಿ ಮನೋಭಾವದಿಂದ ಸ್ಥಳೀಯ ಉದ್ಯಮಗಳು ನಾಶವಾದವು. ಈ ರೀತಿಯ ಪರಿಣಾಮಗಳನ್ನು ಈಜಿಪ್ಟ್ ಟರ್ಕಿ ಮತ್ತು ಪರ್ಶಿಯಾದಲ್ಲೂ ಕಾಣಬಹುದು. ೧೯೪೦-೧೯೫೦ರ ಅವಧಿಯಲ್ಲಿ ಆಧುನಿಕರಣ ಸಿದ್ಧಾಂತ ಅಭಿವೃದ್ಧಿ ಎಂದರೆ ಆರ್ಥಿಕ ಬೆಳವಣಿಗೆಗೆ ಎಂದು ಪ್ರತಿಪಾದಿಸಿತು. ಈ ಹಂತದಲ್ಲಿ ಯಾಂತ್ರೀಕರಣ ಮತ್ತು ಕೈಗಾರಿಕೀಕರಣ ಆಧುನಿಕ ಆರ್ಥಿಕ ಬೆಳವವಣಿಗೆಯ ಭಾಗವಾಯಿತು. ಈ ಅವಧಿಯಲ್ಲಿ ಆಧುನೀಕರಣ ಮತ್ತು ಆರ್ಥಿಕ ಬೆಳವಣಿಗೆಗಳು ರಾಜಕೀಯ ಆಧುನೀಕರಣದೊಂದಿಗೆ ಸೇರ್ಪಡೆಯಾದವು ಅಂದರೆ ರಾಷ್ಟ್ರ ನಿರ್ಮಾಣ ಸಾಮಾಜಿಕ ಆಧುನೀಕರಣ (ಶಿಕ್ಷಣ ಸುಧಾರಣೆ) ಮತ್ತು ಉದ್ಯಮಶೀಲತೆಯನ್ನು ಪ್ರೋತ್ಸಾಹಿಸಿದವು. ೧೯೬೦ರಲ್ಲಿ ಅವಲಂಬಿತ ಸಿದ್ಧಾಂತ ಹುಟ್ಟಿಕೊಂಡಿತು. ಈ ಸಿದ್ಧಾಂತ ಆಧುನೀಕರಣ ಸಿದ್ಧಾಂತಕ್ಕೆ ಭಿನ್ನವಾದದು. ೧೯೭೦ರಲ್ಲಿ ಪರ್ಯಾಯ ಅಭಿವೃದ್ಧಿ ಸಿದ್ಧಾಂತ ಅಭಿವೃದ್ಧಿಯ ಅರ್ಥವನ್ನು ಸಾಮಾಜಿಕ ಮತ್ತು ಸಮುದಾಯ ಅಭಿವೃದ್ಧಿಯೆಂದು ವಿಭಿನ್ನವಾಗಿ ಅರ್ಥಹಿಸಿತು. ಈ ವಿಧಾನ ಮಾನವ ಅಭಿವೃದ್ಧಿಯ ಯಶಸ್ವಿ ಪ್ರಯತ್ನ ಎನ್ನಲಾಗಿದೆ. ಸ್ಥಳೀಯ ಮಟ್ಟದಲ್ಲಿ ನಾಗರೀಕ ಸಂಸ್ಥೆಗಳು ಈ ರೀತಿಯ ಅಭಿವೃದ್ಧಿಯಲ್ಲಿ ಮುಖ್ಯ ಪಾತ್ರ ವಹಿಸುತ್ತವೆ. ಆದರೂ ಸರ್ಕಾರದ ಪಾತ್ರವಿಲ್ಲದೆ ಸ್ಥಳೀಯ ಮಟ್ಟದ ಅಭಿವೃದ್ಧಿ ಸಾಧ್ಯವಿಲ್ಲ ಹಾಗೂ ಶಿಕ್ಷಣ ಮತ್ತು ಆರೋಗ್ಯ ಸೇವೆಗಳನ್ನು ಸ್ಥಳೀಯ ಪರ್ಯಾಯ ಅಭಿವೃದ್ಧಿ ಸಂಸ್ಥೆಗಳಿಗೆ (ಸ್ವಯಂ ಸೇವಾ ಸಂಸ್ಥೆಗಳು) ವಯಿಸಲು ಸಾಧ್ಯವಿಲ್ಲ. ಈ ನಿಟ್ಟಿನಲ್ಲಿ ಸರ್ಕಾರದ ಪಾತ್ರ ಅವಶ್ಯಕ. ೧೯೮೦ರ ನವ ಉದಾರೀಕರಣ ಸಿದ್ಧಾಂತವು ಅಭಿವೃದ್ಧಿ ಎಂದರೆ ಆರ್ಥಿಕ ಬೆಳವಣಿಗೆ ಎಂದು ಭಾವಿಸಿತು. ಈ ಆರ್ಥಿಕ ಬೆಳವಣಿಗೆಯ ಸಾಧನೆ ವ್ಯವಸ್ಥೆಯ ಮೂಲ ಭೂತ ಬದಲಾವಣೆಯಿಂದ ಸಾಧ್ಯ ಎಂದು ಪ್ರತಿಪಾದಿಸಿತು. ಅಂದರೆ ಇಡೀ ವ್ಯವಸ್ಥೆಯನ್ನು ಮುಕ್ತ ವ್ಯವಸ್ಥೆಯನ್ನಾಗಿಸಿ ಸರ್ಕಾರದ ಮಧ್ಯೆ ಪ್ರವೇಶವನ್ನು ಕಡಿಮೆ ಮಾಡಿ ಉದಾರೀಕರಣ, ಖಾಸಗೀಕರಣ ಮತ್ತು ನಿಯಂತ್ರಣ ಮುಕ್ತ ವ್ಯವಸ್ಥೆ ಅಥವಾ ಮುಕ್ತ ನೀತಿಯ ಮೂಲಕ ಆರ್ಥಿಕ ಪ್ರಗತಿ ಸಾಧಿಸಬಹುದು ಎಂದು ಪ್ರತಿಪಾದಿಸಿತು. ಆದರೆ ಮುಕ್ತ ವ್ಯವಸ್ಥೆ ಮತ್ತು ೧೯೯೦ರ ಅಭಿವೃದ್ಧಿ ನಂತರದ (ಪೋಸ್ಟ್ ಡೆವಲಪ್‌ಮೇಂಟ್) ದೃಷ್ಟಿಕೋನಗಳು ಅಥವಾ ಸಿದ್ಧಾಂತಗಳು ಬಹು ಸಂಖ್ಯಾತ ಜನರ ಆಶಯ ಮತ್ತು ಅಭಿವೃದ್ಧಿಯನ್ನು ಸಾದಿಸುವಲ್ಲಿ ವಿಫಲವಾದವು.[೧]

ಕಡಿಮೆ ಆದಾಯ ರಾಷ್ಟ್ರಗಳಲ್ಲಿ ಸಾಂಸ್ಥಿಕ ಕೃಷಿ ಸಾಲ ವಿಸ್ತರಣೆ ಒಂದು ಮುಖ್ಯ ನೀತಿಯಾಗಿದೆ. ಈ ರಾಷ್ಟ್ರಗಳು ವಾರ್ಷಿಕ ೩೦ ದಶಲಕ್ಷದಿಂದ ೪೦ ದಶಲಕ್ಷ ಡಾಲರ್ ಸಾಲ ಪೂರೈಕೆಯಾಗುತ್ತಿದೆ. ಕಡಿಮೆ ಬಡ್ಡಿದರ, ಹೆಚ್ಚು ಆಡಳಿತ ವೆಚ್ಚ ಹಾಗೂ ಕಡಿಮೆ ಮರುಪಾವತಿ ಅಂಶಗಳಿಗೆ ಹೆಚ್ಚಿನ ಸಹಾಯಧನ ನೀಡಲಾಗುತ್ತಿದೆ. ಆದರೆ ಈ ಸಾಲ ವ್ಯವಸ್ಥೆಯ ನಿರೀಕ್ಷಿತ ಮಟ್ಟದ ಸುಧಾರಣೆ ತಂದಿಲ್ಲ ವೆಂಬ ಅಭಿಪ್ರಾಯ ಹೆಚ್ಚುತ್ತಿದೆ. ಅಂದರೆ ಕೃಷಿ ಆದಾಯ, ಉತ್ಪನ್ನ ಮತ್ತು ಆದಾಯ ಹಂಚಿಕೆಯು ಹೆಚ್ಚುತ್ತಿಲ್ಲ ಎಂಬ ಚರ್ಚೆ ನಡೆಯುತ್ತಿವೆ. ಸಾಲವೆಂಬ ಸಂಪನ್ಮೂಲವನ್ನು ಸಾಗುವಳಿ ಕುಟುಂಬಗಳು ಉತ್ಪಾದನೆ ಅಥವಾ ಅನುಭೋಗ ಕಾರ್ಯಕ್ಕೆ ಬಳಸುವ ತೀರ್ಮಾನ ಸಂಕೀರ್ಣ

ವಾದದು. ಕೃಷಿ ಮೇಲಿನ ಸಾಲದ ಪರಿಣಾಮವನ್ನು ಗುರ್ತಿಸುವುದು ಕಷ್ಟ ಸರ್ಕಾರ ನೀಡುವ ಸಾಲ ಉತ್ಪಾದನೆ ಹೆಚ್ಚಿಸುವ ಉದ್ದೇಶ ಹೊಂದಿರುವುದರಿಂದ ಅನೇಕ ಸಂಶೋಧಕರು ವಿತರಿಸಿದ ಸಾಲ ಉತ್ಪಾದಕ ಚಟುವಟಿಕೆಗೆ ಬಳಕೆಯಾಗಿದೆ ಎಂದು ಭಾವಿಸುತ್ತಾರೆ. ಸಾಗುವಳಿ ಕುಟುಂಬ ಪಡೆಯುವ ಸಾಲದ ಒಟ್ಟು ಪ್ರಯೋಜಗಳ ಪ್ರಾಯೋಗಿಕ ಮಾಪನ ಸಂಕೀರ್ಣವಾದುದು. ಪಡೆದ ಸಾಲ ಕೃಷಿಯ ಹೂಡುವಳಿ ಮತ್ತು ಉತ್ಪನ್ನವನ್ನು ಹೆಚ್ಚಿಸಿದೆಯೇ ಎಂಬುದನ್ನು ತಿಳಿಯುವುದು ಅಗತ್ಯ ಸಾಲ ಪಡೆಯುವುದಕ್ಕೆ ಮುಂಚೆ ಮತ್ತು ನಂತರ ವ್ಯತ್ಯಾಸವನ್ನು ಗುರ್ತಿಸಿ ದಾಖಲಿಸುವುದು ಕಷ್ಟಕರ ವಿಷಯ. ಕೆಲವು ಸಂಶೋಧನೆಗಳು ಮಾತ್ರ ಕೃಷಿ ಸಾಲ ಕಾರ್ಯಕ್ರಮಗಳ ಮೇಲೆ ಖರ್ಚು ಮಾಡಿದ ಬೃಹತ್ ಪ್ರಮಾಣದ ಸಾಲದ ಪರಿಣಾಮವನ್ನು ಮಾಪನ ಮಾಡಿದೆ ಎಂಬ ಅಶ್ವರ್ಚಕರ ಸಂಗತಿ ಪ್ರಾಯೋಗಿಕ ಸಾಹಿತ್ಯವನ್ನು ಪರಾಮರ್ಶಿಸಿದಾಗ ತಿಳಿದು ಬಂದಿತು ಉದಾ: ೧೯೭೩ರಲ್ಲಿ ಅಮೇರಿಕಾದ ಅಂತರಾಷ್ಟ್ರೀಯ ಅಭಿವೃದ್ಧಿ ಏಜೆನ್ಸಿಯ ಪರಾಮರ್ಶೆ ವರದಿಯ ವಿವಿದ ಕೃಷಿ ಸಾಲ ಕಾರ್ಯಕ್ರಮಗಳ ವಿವರವನ್ನು ನೀಡಿದೆ ವಿನಃ ಕೃಷಿ ಸಾಲ ಕೃಷಿಯ ಮೇಲೆ ಯಾವ ರೀತಿಯ ಪರಿಣಾಮ ಬೀರಿದೆ ಎಂಬುದನ್ನು ತಿಳಿಸುವುದಿಲ್ಲ.[೨]

ಸಾಲ ನೀತಿ ಪರಿಣಾಮಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಸಾಂಸ್ಥಿಕ ಹಣಕಾಸು ವ್ಯವಸ್ಥೆಯಲ್ಲಿ ಸಾಲ ಮರುಪಾವತಿ ಮಾಡದವರು ಅನುಪಾತ ಹೆಚ್ಚಾಗಿರುವುದು ಈ ವ್ಯವಸ್ಥೆಯ ಒಂದು ಮುಖ್ಯ ಲಕ್ಷಣ. ಸಾಲ ಮರುಪಾವತಿ ಅವಧಿ ವಿಚಾರದಲ್ಲಿ ಸಾಂಸ್ಥಿಕೇತರ ಸಾಲಗಾರರು ಉದಾರವಾಗಿರುತ್ತಾರೆ. ಆದರೆ ಸಾಂಸ್ಥಿಕ ಹಣಕಾಸು ವ್ಯವಸ್ಥೆಯಲ್ಲಿ ನಿರ್ಧಿಷ್ಟ ಅವಧಿಯ ಒಳಗೆ ಸಾಲ ಮರುಪಾವತಿ ಮಾಡುವುದು ಕಡ್ಡಾಯವಾಗಿರುತ್ತದೆ. ಸಾಂಸ್ಥಿಕ ಸಾಲ ವ್ಯವಸ್ಥೆ ವೈಪಲ್ಯತೆಗೆ ಇನೊಂದು ಕಾರಣ. ಬಹುತೇಕ ಸಾಲಗಳು ಕೆಲವೆ ಶ್ರೀಮಂತರ ಪಾಲಾಗುತ್ತವೆ. ಶ್ರೀಮಂತರಿಗೆ ಅಥಾವ ಜಮೀನ್ದಾರರಿಗೆ ನೀಡುವ ಬೃಹತ್ ಮೊತ್ತದ ಸಾಲಗಳ ನಿರ್ವಹಣಾ ವ್ಯವಹಾರ ವೆಚ್ಚ ಕಡಿಮೆ ಇರುವುದು ಇದಕ್ಕೆ ಕಾರಣ. ಗ್ರಾಮೀಣ ಪ್ರದೇಶಗಳ ಜನರು ಉಳಿತಾಯ ಮತ್ತು ಸಾಲ ಸೇವೆಗಳಲ್ಲಿ ಪಾಲ್ಗೋಳ್ಳುವ ಪ್ರಮಾಣ ಕಡಿಮೆ ಇರಲು ಕೆಲವು ಅಂಶಗಳನ್ನು ವಿವರಿಸಲಾಗಿದೆ ೧. ಸೌಲಭ್ಯಗಳು ದೊರೆಯದೆ ಇರುವುದು, ಠೇವಣಿ ಇಡುವವರು ಮತ್ತು ಸಾಲ ಪಡೆಯಲು ಬಯಸುವವರು ದೂರದ ಸ್ಥಳಗಳಿಗೆ ಪ್ರಯಾಣ ಮಾಡಬೇಕಾಗುತ್ತದೆ ೨. ಈ ಸೌಲಭ್ಯಗಳು ದುಬಾರಿ, ಹೆಚ್ಚಿನ ಕಾಗದ ಕೆಲಸ, ವಿಳಂಬ ನೀತಿ ಹಾಗೂ ಲಂಚ ಸಾಮಾನ್ಯವಾದ ಅಂಶಗಳು.[೩]

ಆಧುನಿಕರಣದ ಮೂಲಕ ಹೆಚ್ಚುತ್ತಿರುವ ಉತ್ಪಾದಕತೆಗೆ ಹಣಕಾಸು ಪೂರೈಸಲು ಮತ್ತು ಲೇವಾದೇವಿಗಾರರ ಮೇಲಿನ ಅವಲಂಬನೆ ತಪ್ಪಿಸಲು ಸಣ್ಣ ಸಾಗುವಳಿ ಸಾಲ ವ್ಯವಸ್ಥೆಯನ್ನು ಪರಿಚಯಿಸಲಾಯಿತು. ಇತ್ತೀಚಿನ ಸಾಹಿತ್ಯ ಮತ್ತು ಸಂಶೋಧನೆಗಳು ಸಾಲ ಸಂಸ್ಥೆಗಳು ಸಣ್ಣ ಹಿಡುವಳಿದಾರರನ್ನು ತಲುಪುವಲ್ಲಿ ಅಥವಾ ಅವರ ಸಾಲ ಅಗತ್ಯಗಳನ್ನು ಪೂರೈಸುವಲ್ಲಿ ತೃಪ್ತಿಕರ ಯಶಸ್ಸು ಸಾಧಿಸಿಲ್ಲ. ಸಹಕಾರಿ ಸಾಲ ಸಂಸ್ಥೆಗಳು ತಮ್ಮ ಅಸ್ತಿತ್ವ ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದು

ಸಣ್ಣ ಸಾಗುವಳಿದಾರರ ಅವಶ್ಯಕತೆ ಪೂರೈಸುವಲ್ಲಿ ವಿಫಲವಾಗಿದೆ. ಭಾರತದಲ್ಲಿ ಸಣ್ಣ ಸಾಗುವಳಿದಾರರು ಹೆಚ್ಚು ಇಳುವರಿ ಬರುವಂತಹ ಬೆಳೆಗಳನ್ನು ಬೆಳೆಯದಿರಲು ಕಾರಣವಾಗುವ ಅಂಶಗಳಲ್ಲಿ ಬಂಡವಾಳದ ಕೊರತೆ ಮುಖ್ಯವಾದದು. ಬಂಡವಾಳ ಸಮಸ್ಯೆಯನ್ನು ತೊಡೆದು ಹಾಕುವ ಉದ್ದೇಶ ಹೊಂದಿರುವ ಸಾಲ ಸೌಲಭ್ಯಗಳು ಹೆಚ್ಚಿನ ಪ್ರಮಾಣದಲ್ಲಿ ಪೂರೈಕೆಯಾದರೆ ಹಾಗೂ ತಾಂತ್ರಿಕ ನೆರವು ದೊರೆತರೆ ಸಣ್ಣ ಸಾಗುವಳಿದಾರರ ಆರ್ಥಿಕ ಬೆಳವಣಿಗೆಯ ವೇಗ ಹೆಚ್ಚುತ್ತದೆ.[೯]

ಗ್ರಾಮೀಣ ಸಾಮಾಜಿಕ ಬದುಕು, ಗ್ರಾಮೀಣ ಬಂಡವಾಳ ಅಥವಾ ಸಂಪನ್ಮೂಲ ಒಡೆತನ, ಕೌಟುಂಬಿಕ ರಚನೆ ಮತ್ತು ಜನರ ಬದುಕಿನ ಮೇಲೆ ಸರ್ಕಾರದ ನೀತಿಗಳ ಪರಿಣಾಮವನ್ನು ಅರ್ಥ ಮಾಡಿಕೊಳ್ಳಲು ಗ್ರಾಮ ಅಧ್ಯಯನ ಸೂಕ್ತ. ಜೀನ್ ಬ್ರೆಮನ್ ತನ್ನ ವಿಲೇಜ್ ಇನ್ ಫೋಕಸ್ಸ್ ಎಂಬ ಶೀರ್ಷಿಕೆಯಡಿ ಗ್ರಾಮ (ಪಾಲಂಪುರ್) ವಸಾಹತುಕರಣ, ರಾಷ್ಟ್ರೀಕರಣ, ಅಭಿವೃದ್ಧಿಕರಣ ಮತ್ತು ಜಾಗೃತೀಕರಣ ಗೊಂಡಿದ್ದನ್ನು ವಿಶ್ಲೇಷಿಸಿದ್ದಾರೆ. ಗ್ರಾಮ ಆಧಾರಿತ ಸಂಶೋಧನೆಗಳ ಪರಾಮರ್ಶೆ ಮತ್ತು ದಕ್ಷಿಣ ಗುಜರಾತ್‌ನಲ್ಲಿ ನಡೆಸಿದ ವೈಯುಕ್ತಿಕ ಅಧ್ಯಯನದ ಮೂಲಕ ಏಷಿಯಾದ ಗ್ರಾಮೀಣ ವ್ಯವಸ್ಥೆ ವಸಾಹತು ಹಂತದಿಂದ ಪ್ರಸ್ತುತ ಜಾಗತೀಕರಣದ ವರೆಗಿನ ಸಾಮಾಜಿಕ ಆರ್ಥಿಕ ಪರಿವರ್ತನೆಯನ್ನು ವಿಶ್ಲೇಷಿಸಿದ್ದಾರೆ. ವಸಾಹತು ಕಾಲದಿಂದ ಭಾರತದಲ್ಲಿ ನಡೆದ ಗ್ರಾಮ ಅಧ್ಯಯನದಲ್ಲಿ ಹಾಗೂ ೧೯೧೬ರ ಸ್ಲೇಟರ್‌ರವರ ಗ್ರಾಮ ಆಧಾರಿತ ಆರ್ಥಿಕ ಅಧ್ಯಯನ ಮತ್ತು ಅಶ್ವನಿ ಸೇತ್‌ರವರ ಇತ್ತೀಚಿನ ೧೯೯೨-೯೩ರ ಅಧ್ಯಯನ ಹಾಗೂ ಉತ್ತರ ಪ್ರದೇಶದ ಪಾಲಂಪುರ್ ಗ್ರಾಮದ ಅಧ್ಯಯನಗಳು ಹೀಗೆ ಕಳೆದ ಕೆಲವು ದಶಕಗಳಲ್ಲಿ ನಡೆಸಿದ ಪ್ರಾಯೋಗಿಕ ಅಧ್ಯಯನ ಅಂಶಗಳನ್ನು ಕ್ರೊಢೀಕರಿಸಿ ಬ್ರೇಮನ್‌ರವರು ಕೆಲವು ಮುಖ್ಯಾಂಶಗಳನ್ನು ಈ ರೀತಿ ವಿಶ್ಲೇಷಿಸಿದ್ದಾರೆ. (೧) ವೃತ್ತಿ ಅವಲಂಬನೆ ಬದಲಾವಣೆಯ ಪ್ರಕ್ರಿಯೆ ನಡೆವೆಯೂ ಗ್ರಾಮಗಳಲ್ಲಿ ಕೃಷಿ ಬಹುತೇಕ ಜನರ ಅಸ್ತಿತ್ವವಾಗಿರುತ್ತದೆ ಆದರೂ ಉದ್ಯೋಗ ಮತ್ತು ಆದಾಯ ಗಳಿಕೆಯ ಪ್ರಮಾಣ ಕಡಿಮೆಯಾಗಿ ಬಹುಸಂಖ್ಯಾತ ಜನರ ವಾಸ ಸ್ಥಳವಾದ ಗ್ರಾಮ ಮುಖ್ಯ ದುಡಿಮೆಯ ಸ್ಥಳವಾಗಿ ಉಳಿದಿಲ್ಲ. (೨) ಕಳೆದ ಕೆಲವು ದಶಕಗಳ ಅಭಿವೃದ್ಧಿ ನೀತಿಗಳು ಸಾಮಾಜಿಕ ಪರಿವರ್ತನೆ ಮೇಲೆ ಸಾಕಷ್ಟು ಪರಿಣಾಮ ಬೀರಿವೆ. ೨೦ನೇ ಶತಮಾನದ ಮಧ್ಯಭಾಗಕ್ಕಿಂತ ಪ್ರಸ್ತುತ ಗ್ರಾಮಗಳಲ್ಲಿ ಸರ್ಕಾರಿ ಸಂಸ್ಥೆಗಳು ಹೆಚ್ಚಾಗಿವೆ. ಸ್ವಾತಂತ್ರ್ಯ ನಂತರ ಭಾರತದ ಗ್ರಾಮೀಣಾಭಿವೃದ್ಧಿ ನೀತಿಗಳ ಮುಖ್ಯ ಉದ್ದೇಶ ಕೃಷಿ ಉತ್ಪಾದನೆ ಮತ್ತು ಉತ್ಪಾದಕತೆಯನ್ನು ಹೆಚ್ಚಿಸುವುದಾಗಿತ್ತು. ಇದರ ಅನುಕೂಲ ಪಡೆದಿದ್ದು ಪ್ರಬಲ ಜಾತಿಗಳ ಜಮೀನ್ದಾರರು. ಇದರಿಂದ ಪ್ರಬಲ ಜಾತಿಗಳು ದೇಶದಾದ್ಯಂತ ಹಲವು ಗ್ರಾಮೀಣ ಪ್ರದೇಶಗಳಲ್ಲಿ ಶ್ರೀಮಂತರಾಗಲು ಅವಕಾಶವಾಯಿತು. ಸಾರ್ವಜನಿಕ ಸಂಪನ್ಮೂಲಗಳು ಖಾಸಗಿ ಸ್ವತ್ತುಗಳಾಗಿ ಪರಿವರ್ತನೆಗೊಂಡವು. ಸರ್ಕಾರದ ಸಾಲ ಯೋಜನೆಗಳ ಸಹಾಯ ಪಡೆದು ಬಂಡವಾಳ ಹೂಡಿಕೆಯ ಮೂಲಕ ಪ್ರಬಲ ಜಾತಿಗಳು ಬಂಜರು ಭೂಮಿಗಳನ್ನು ತಮ್ಮ ವೈಯುಕ್ತಿಕ ಫಲವತ್ತಾದ ಭೂಮಿಗಳನ್ನಾಗಿ ಪರಿವರ್ತಿಸಿಕೊಂಡರು. (೩) 'ಉಳುವವನೇ

ಒಡೆಯ' ಎಂಬ ಘೋಷಣೆ–ಯೋಜನೆ ಬಂದರೂ ಭೂರಹಿತ ಕಾರ್ಮಿಕರ ಪರಿಸ್ಥಿತಿಯಲ್ಲಿ ಯಾವುದೇ ಬದಲಾವಣೆಯಾಗಲಿಲ್ಲ. ಇವರು ಕೃಷಿ ಬಂಡವಾಳ ಮರುಹಂಚಿಕೆಯ ವ್ಯವಸ್ಥೆಯಿಂದ ಹೊರಗುಳಿದರು. ಗ್ರಾಮೀಣ ಪ್ರದೇಶದ ಬಂಡವಾಳ ಶಾಹಿ ಶಕ್ತಿಗಳನ್ನು ಬಲಪಡಿಸುವ ರೀತಿಯಲ್ಲೇ ಸರ್ಕಾರದ ಅಭಿವೃದ್ಧಿ ಪ್ರಯತ್ನಗಳಿದ್ದವು. ಬಡತನದ ದುಸ್ಥಿತಿಯಲ್ಲಿ ಗ್ರಾಮಾಣ ಪ್ರದೇಶದ ಬಹುಸಂಖ್ಯಾತ ಜನರನ್ನು ಸಂಘಟಿಸಲು ಪ್ರಯತ್ನಿಸುವ ಭಾರತದ ರಾಜಕೀಯ ವ್ಯವಸ್ಥೆ ಮತ್ತು ಬಂಡವಾಳ ಒಡೆತನ(ಒನರ್‌ಶಿಫ್ ಆಫ್ ಕ್ಯಾಪಿಟಲ್)ವನ್ನು ಪೋಷಿಸಿ ಪ್ರಬಲ ಸಮುದಾಯಗಳ ಹಿತಾಸಕ್ತಿಗೆ ಪೂರಕವಾದ ಅಭಿವೃದ್ಧಿ ತಂತ್ರ ವಿಧಾನಗಳನ್ನು ಅನುಸರಿಸುತ್ತಿದ್ದುದ್ದು ವ್ಯವಸ್ಥೆಯೊಳಗಿನ ವೈರುದ್ಯ.[೫]

ಉತ್ತರ ಪ್ರದೇಶದ ೧೧೧೩ ಜನಸಂಖ್ಯೆ ೧೯೩ ಕುಟುಂಬಗಳ ಪಾಲಂಪುರ್ ಗ್ರಾಮವನ್ನು ಅಧ್ಯಯನ ಕೇಂದ್ರವನ್ನಾಗಿ ಮಾಡಿಕೊಂಡು ಗ್ರಾಮದ ಜಾತಿ ಪದ್ದತಿ, ಸಾಂಪ್ರದಾಯಿಕ ವೃತ್ತಿಗಳು, ಭೂಮಾಲೀಕತ್ವ ಆರ್ಥಿಕ ಸಾಮಾಜಿಕ ಅಸಮಾನತೆ, ಆಧುನಿಕತೆಯ ಪ್ರಭಾವದಿಂದ ಹೊಸ ಉದ್ಯೋಗ ಅವಕಾಶಗಳು ಹೆಚ್ಚಾಗುವುದು ಮತ್ತು ಸಾಂಪ್ರದಾಯಿಕ ಉದ್ಯೋಗಗಳ ವ್ಯವಸ್ಥೆಯ ಬದಲಾವಣೆ, ಆರ್ಥಿಕ ಸಾಮಾಜಿಕ ಅಂಶಗಳು ಪರಿವರ್ತನೆಯನ್ನು ಗುರ್ತಿಸಿಸಲಾಗಿದೆ. ಠಾಕೂರ್ಸ್ ಈ ಗ್ರಾಮದ ಬಹುಪಾಲು ಭೂಮಿಯನ್ನು ಹೊಂದಿ ಕೃಷಿ ಚಟುವಟಿಕೆಗಳೊಂದಿಗೆ ಪ್ರಬಲ ಜಾತಿಯಾಗಿರುವುದು, ಮುರಾಸ್ ಜಾತಿ ಶ್ರೇಣಿಯಲ್ಲಿ ಎರಡನೇ ಸ್ಥಾನದಲ್ಲಿದ್ದು ಕೃಷಿಯನ್ನು ಮುಖ್ಯ ಉದ್ಯೋಗವನ್ನಾಗಿರಿಸಿಕೊಂಡಿರುತ್ತಾರೆ. ಜಾಟಬ್ ಸಮಾಜದ ಹಿಂದುಳಿದ ಜಾತಿಯಾಗಿ ಕೃಷಿ ಕಾರ್ಮಿಕರಾಗಿ ಕೆಲಸಮಾಡಿಕೊಂಡು ಭಯ ಮತ್ತು ಬಡತನದಲ್ಲೇ ವಾಸಿಸುತ್ತಾರೆ. ಗ್ರಾಮದಲ್ಲಿ ಜಜಮಾನಿ ಪದ್ದತಿ ಅಸ್ತಿತ್ವದಲ್ಲಿರುತ್ತದೆ. ಪಾಲಂಪುರ್ ಗ್ರಾಮದಲ್ಲಿ ಕೃಷಿಯೇತರ ಕೂಲಿ ಆಧಾರಿತ ಉದ್ಯೋಗವಕಾಶಗಳು ಹೆಚ್ಚಿ ಸಾಂಪ್ರದಾಯಿಕ ಉದ್ಯೋಗಗಳು ಕಡಿಮೆಯಾಗಿ ಗ್ರಾಮದ ವೃತ್ತಿ, ಭೂ ಮಾಲೀಕತ್ವ, ಸಾಮಾಜಿಕ ಆರ್ಥಿಕ ಪರಿಸ್ಥಿತಿಯಲ್ಲಿ ಬದಲಾವಣೆಗಳಾಗುತ್ತವೆ. ಕೃಷಿಯೇತರ ಕೂಲಿ ಉದ್ಯೋಗಗಳು ಹೆಚ್ಚಿ ಆಧುನಿಕ ಪ್ರಕ್ರಿಯೆಯಲ್ಲಿ ಸಾಂಪ್ರದಾಯಿಕ ಕೌಶಲ್ಯ ಆಧಾರಿತ ಕುಶಲ ಕರ್ಮಿಗಳು ವಲಸೆ ಹೋಗುವರು. ಪ್ರಬಲ ಜಾತಿಯವರು ಗ್ರಾಮೀಣ ಆರ್ಥಿಕತೆಯ ಹೊರಗೆ ಉದ್ಯೋಗವಕಾಶಗಳನ್ನು ಪಡೆಯಲು ಪ್ರಯತ್ನಿಸುತ್ತಾರೆ. ಈ ಹಂತದಲ್ಲಿ ನೈಜ ಕೂಲಿ ಹೆಚ್ಚಿ ವಿಭಜಿತ ಕುಟುಂಬಗಳು ಮತ್ತು ಸಣ್ಣ ಹಿಡುವಳಿಗಳ ಪ್ರಮಾಣ ಹೆಚ್ಚಾಗುವುದು ಹಾಗೂ ಭೂರಹಿತ ಕೃಷಿ ಕಾರ್ಮಿಕರ ಸಂಖ್ಯೆ ಹೆಚ್ಚಾಗುತ್ತದೆ. ನಗರ ಮತ್ತು ದೊಡ್ಡ ಗ್ರಾಮಗಳ ಸ್ಪರ್ದೆ, ತಾಂತ್ರಿಕ ಬದಲಾವಣೆ, ಬದಲಾದ ಆರ್ಥಿಕ ಪರಿಸ್ಥಿತಿ ಹಾಗೂ ಅನುಭೋಗಿಗಳ ಬದಲಾದ ಆಯ್ಕೆ ಅಭಿರುಚಿಗಳಿಂದ ಗ್ರಾಮದ ಕರಕುಶಲ ಕುಟುಂಬಗಳು ಉದಾ: ಆಯಿಲ್ ಪ್ರೆಸರ್ಸ್ (ಮುಸ್ಲಿಮರು), ಕುಂಬಾರರು, ಅಕ್ಕಸಾಲಿಗರು ಮತ್ತು ನೀರು ಪೂರೈಸುವವರು ಬೇರೆ ಗ್ರಾಮಗಳು ಮತ್ತು ಪಟ್ಟಣಗಳಿಗೆ ವಲಸೆ ಹೋಗುವರು ಹಾಗೂ ಬದುಕಿಗಾಗಿ ಕೂಲಿ ದುಡಿಮೆಯನ್ನು ಆಶ್ರಯಿಸುತ್ತಾರೆ.[೬]

ಸಮಕಾಲೀನ ದಕ್ಷಿಣ ಏಷಿಯಾ ಸಮಾಜ ಮತ್ತು ಆರ್ಥಿಕತೆ ಕುರಿತ ಪ್ರಬಂಧದಲ್ಲಿ ಬರ್ಬರಾ ಹ್ಯಾರೀಸ್ ವೈಟ್‌ರವರು ಭೂಮಿ, ಶ್ರಮ, ಬಂಡವಾಳ, ಜಾತಿ, ವರ್ಗ, ಲಿಂಗ, ಸರ್ಕಾರ ಮತ್ತು ಸಂಪನ್ಮೂಲ ಕ್ರೂಢೀಕರಣ ಅಂಶಗಳು, ಭಾರತದ ಆರ್ಥಿಕತೆ ಕಾರ್ಯನಿರ್ವಹಿಸುವ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆ ಬಗ್ಗೆ ವಿಶ್ಲೇಷಣೆ ನೀಡಿದ್ದಾರೆ. ಕಾರ್ಖಾನೆ ಮಾಲೀಕರು, ಬೃಹತ್ ವ್ಯಾಪಾರಸ್ಥರು, ಅಧಿಕಾರಿಗಳು, ರಾಜಕಾರಣಿಗಳು, ಸಣ್ಣ ಕೈಗಾರಿಕಾ ಉತ್ಪನ್ನ ಮತ್ತು ಸಣ್ಣ ವ್ಯಾಪಾರಸ್ಥರು ಭಾರತದ ಸಂಪನ್ಮೂಲ ಕ್ರೂಢೀಕರಣದ ಮುಖ್ಯ ವ್ಯಕ್ತಿಗಳು. ಕಪ್ಪು ಹಣ ಆರ್ಥಿಕತೆ ಮತ್ತು ಈ ಹಣದ ಹೂಡಿಕೆ ಯಾವ ಕ್ಷೇತ್ರದಲ್ಲಿ ಆಗುತ್ತದೆ ಎಂಬುದನ್ನು ತಿಳಿಸುತ್ತಾರೆ. ೧೯೯೦ರ ಮದ್ಯದಲ್ಲಿ ಸ್ಥಳೀಯ ಪಟ್ಟಣದ ವ್ಯವಹಾರ ಕುಟುಂಬವೊಂದರ ಸರಾಸರಿ ಆಸ್ತಿಯ ಮೌಲ್ಯ ಹತ್ತಿರದ ಗ್ರಾಮದ ಕುಟುಂಬವೊಂದರ ಸರಾಸರಿ ಆಸ್ತಿ ಮೌಲ್ಯಕ್ಕಿಂತ ೨೦ ಪಟ್ಟು ಹೆಚ್ಚಾಗಿದೆ. ೧೯೮೩-೮೪ರಲ್ಲಿ ದಕ್ಷಿಣ ಭಾರತದ ಗ್ರಾಮೀಣ-ನಗರ ಪ್ರದೇಶದ ಆದಾಯ ವ್ಯತ್ಯಾಸವನ್ನು ತಿಳಿಸುತ್ತಾ ಹಣಕಾಸು ವ್ಯವಹಾರದಲ್ಲಿ ತೊಡಗಿದ್ದ ಆರು ಜನರಿಂದ ಕೂಡಿರುವ ಕುಟುಂಬವೊಂದರ ಸರಾಸರಿ ತಲಾದಾಯ ಹೆಚ್ಚಾಗಿದ್ದು ಆದರೆ ನಾಲ್ಕು ಸದಸ್ಯರಿಂದ ಕೂಡಿದ ಪುರುಷ ಕೃಷಿ ಕಾರ್ಮಿಕರ ಕುಟುಂಬವೊಂದರ ಮತ್ತು ಮಹಿಳಾ ಕಾರ್ಮಿಕ ಕುಟುಂಬವೊಂದರ ಆದಾಯ ಕ್ರಮವಾಗಿ ಕಡಿಮೆ ಇರುತ್ತದೆ. ಭಾರತದ ಕೃಷಿ ಕ್ಷೇತ್ರದ ಭೂಮಿ ಮತ್ತು ಶ್ರಮ ಸಂಬಂಧಗಳು ವರ್ಗ ವ್ಯವಸ್ಥೆ ಮತ್ತು ಪ್ರಬಲ ವರ್ಗಗಳ ಸಂಪನ್ಮೂಲ ಕ್ರೂಢೀಕರಣವನ್ನು ಸೂಚಿಸುತ್ತದೆ. ಬಂಡವಾಳ ಶಾಹಿ ಭೂ ಮಾಲೀಕರು ದುಡಿಮೆಗಾರರ ಕೂಲಿಗೆ ಸಂಬಂಧಿಸಿದಂತೆ ತಮ್ಮದೆ ನೀತಿ ನಿಯಮಗಳನ್ನು ಅನುಸರಿಸುತ್ತಾರೆ. ಹಸಿರು ಕ್ರಾಂತಿಯ ಪ್ರಾರಂಭದ ಅವಧಿಯಲ್ಲಿ ಶ್ರಮ ಶಕ್ತಿಯ ಬಳಕೆ ಹೆಚ್ಚಾಯಿತು. ಭೂ ಮಾಲಿಕರು ಶ್ರಮ ಶಕ್ತಿಯ ವೆಚ್ಚವನ್ನು (ಕಾಸ್ಟ್ ಆಫ್ ಲೇಬರ್) ತಗ್ಗಿಸಲು ಗುತ್ತಿಗೆ ಆಧಾರದ ಮೇಲೆ ದುಡಿಮೆಗಾರರನ್ನು ಕೃಷಿ ಚಟುವಟಿಕೆಗಳಿಕೆಯಲ್ಲಿ ಬಳಸಿಕೊಂಡರು. ಈ ಅವಧಿಯಲ್ಲಿ ಹತ್ತಿ ಮತ್ತು ಭತ್ತ ಬೆಳೆಗಳಲ್ಲಿ ತಂತ್ರಜ್ಞಾನ ಬಳಕೆ ಹೆಚ್ಚಿ ಶ್ರಮ ಶಕ್ತಿ ಸ್ಥಳಾಂತರಗೊಳ್ಳಲು ಪ್ರಾರಂಭವಾಯಿತು ಈ ಹಂತದಲ್ಲಿ ಭೂ ಮಾಲೀಕರು ವಲಸೆ ದುಡಿಮೆಗಾರರನ್ನು ಬಳಸಿಕೊಳ್ಳಲಾರಂಭಿಸಿದರು. ಇದು ಮೂಲತಃ ದುಡಿಮೆಗಾರರ ಸಂಖ್ಯೆ ಕಡಿಮೆಯಾಗಿರುವುದನ್ನು ಸರಿದೂಗಿಸುವ ಪ್ರಯತ್ನಕ್ಕಿಂತ ದುಡಿಮೆಗಾರರ ಮೇಲೆ ನಿಯಂತ್ರಣವನ್ನು ಸಾಧಿಸುವುದಾಗಿತ್ತು. ಗ್ರಾಮೀಣ ಭಾಗದ ಶ್ರಮ ಶಕ್ತಿಯಲ್ಲಿ (ವರ್ಕ್ ಪೋರ್ಸ್) ಅತೀ ಸಣ್ಣ ರೈತ ಮತ್ತು ಭೂರಹಿತ ಕೃಷಿ ಕಾರ್ಮಿಕರ ಸಂಖ್ಯೆ ಹೆಚ್ಚು, ಇವರು ತಮ್ಮನ್ನು ಅವಲಂಭಿಸಿರುವ ಇತರ ಕುಟುಂಬದ ಸದಸ್ಯರ ಜೀವನ ನೀರ್ವಹಣೆಗೆ ಅನುಭೋಗ ಸಾಲಗಳನ್ನು ಅತಿ ಹೆಚ್ಚಿನ ಬಡ್ಡಿದರದಲ್ಲಿ ಪಡೆಯುತ್ತಾರೆ. ಇದಕ್ಕೆ ಯಾವುದೆ ಪರ್ಯಾಯ ಬದುಕಿನ ಮಾರ್ಗಗಳಿಲ್ಲದಿರುವುದೇ ಕಾರಣ. ಸಣ್ಣ ಹಿಡುವಳಿದಾರರು ಹೆಚ್ಚಿ ಸಣ್ಣ ಹಿಡುವಳಿಗಳ ಪ್ರಮಾಣ ಸಹಾ ಹೆಚ್ಚಾಯಿತು. ಕುಟುಂಬದ ಗಾತ್ರಗಳು ಜಾಸ್ತಿ ಇದ್ದು ಜೀವನ ನಿರ್ವಹಣೆಗಾಗಿ ಕುಟುಂಬದ ಮಕ್ಕಳು ಮತ್ತು ದೈಹಿಕವಾಗಿ ದುರ್ಬಲರಾಗಿರುವವರೂ

ಕೂಡಾ ದುಡಿಮೆ ಮಾಡಬೇಕಾದ ಪರಿಸ್ಥಿತಿ ಇತ್ತು. ದುಡಿಮೆಗಾರರಲ್ಲಿ ಕೆಳಜಾತಿಗಳ ಜನರೇ ಹೆಚ್ಚು, ಇದರಲ್ಲೂ ಮಹಿಳೆಯರ ಸಂಖ್ಯೆ ಹೆಚ್ಚು. ೧೯೬೧ರಲ್ಲಿ ೩ ಸಾಗುವಳಿದಾರರಿಗೆ ಒಬ್ಬ ಭೂರಹಿತ ಕಾರ್ಮಿಕ ಇದ್ದದ್ದು ೧೯೯೧ರ ಹೊತ್ತಿಗೆ ಈ ಅನುಪಾತ ಹೆಚ್ಚು ಕಡಿಮೆ ಸಮವಾಯಿತು. ಅಂದರೆ ೩ ಸಾಗುವಳಿದಾರರಿಗೆ ೩ ಭೂರಹಿತ ಕಾರ್ಮಿಕರು ಇದ್ದರು.[೬]

ಭಾರತ; ಆರ್ಥಿಕ ಅಭಿವೃದ್ಧಿ ಮತ್ತು ಸಾಮಾಜಿಕ ಅವಕಾಶ ಎಂಬ ಗ್ರಂಥದಲ್ಲಿ ದಕ್ಷಿಣ ಕೋರಿಯಾ, ಹಾಂಕಾಂಗ್, ಸಿಂಗಾಪುರ್ ಮತ್ತು ಥೈಲ್ಯಾಂಡ್‌ಗಳು ಮಾರುಕಟ್ಟೆ ಆಧಾರಿತ ಆರ್ಥಿಕ ಅವಕಾಶಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡು ಉತ್ತಮ ಅಭಿವೃದ್ಧಿಯನ್ನು ಸಾಧಿಸಿದ್ದನ್ನು ಭಾರತದೊಂದಿಗೆ ಹೋಲಿಸಿ ವಿಶ್ಲೇಷಣೆ ಮಾಡಿದ್ದಾರೆ. ಶಿಕ್ಷಣ ಕ್ಷೇತ್ರ, ಆರೋಗ್ಯ ಸೇವೆಗಳು, ಸಾಮಾಜಿಕ ಭದ್ರತೆ, ಭೂ ಸುಧಾರಣೆ, ಲಿಂಗ ಸಂಬಂಧಿ ವಿಷಯಗಳು ಮತ್ತು ಮುಖ್ಯವಾಗಿ ಸಾಮಾಜಿಕ ಗುರಿಯನ್ನು ಆಧಾರವಾಗಿಟ್ಟುಕೊಂಡಿರುವ ಸಾರ್ವಜನಿಕ ಕ್ರಿಯೆಯ (ಪಬ್ಲಿಕ್ ಆಕ್ಷನ್) ಕ್ಷೇತ್ರಗಳಲ್ಲಿ ಈ ದೇಶಗಳು ಸುಧಾರಣೆ ತಂದಿದ್ದು, ಉತ್ತಮವಾಗಿ ಸಾಧನೆ ಮಾಡಲು ಸಾಧ್ಯವಾಯಿತು. ವಾಸ್ತವ ಆಧಾರಗಳ ಪ್ರಕಾರ (ಎಂಪಿರಿಕಲ್ ಎವಿಡೆನ್ಸ್) ಮಾರುಕಟ್ಟೆ ಅವಕಾಶಗಳ ವಿಸ್ತರಣೆಯೊಂದಿಗೆ ಶೈಕ್ಷಣಿಕ ವಿಸ್ತರಣೆಯೂ ಸಹಾ ಆಗಬೇಕಾಗಿದೆ. ಶಿಕ್ಷಣ ಜೀವನದ ಗುಣಮಟ್ಟವನ್ನು ಸುಧಾರಿಸುತ್ತದೆ. ಶ್ರೀಲಂಕಾದಲ್ಲಿ ಆರ್ಥಿಕ ಬೆಳವಣಿಗೆಗಿಂತ ಶಿಕ್ಷಣ ಸುಧಾರಣೆಯ ಮೂಲಕ ಜನರ ಜೀವನದ ಗುಣಮಟ್ಟವನ್ನು ಸುಧಾರಿಸಿದೆ. ಭಾರತದ ಮಟ್ಟಿಗೆ ಕೇರಳದಲ್ಲಿ ಉತ್ತಮ ಶೈಕ್ಷಣಿಕ ಸಾಧನೆ ಕಂಡುಬಂದರೂ ಆರ್ಥಿಕ ಸಾಧನೆಯು ಕಡಿಮೆ ಇದೆ. ಥೈಲೆಂಡ್ ಮತ್ತು ದಕ್ಷಿಣ ಕೋರಿಯಾ, ಇತ್ತೀಚೆಗೆ ಚೀನಾ ದೇಶಗಳ ರೀತಿಯಲ್ಲಿ ತ್ವರಿತ ಆರ್ಥಿಕ ಸಾಧನೆಯಲ್ಲಿ ಕೇವಲ ಶಿಕ್ಷಣವಲ್ಲದೇ ಇತರ ಸಾಮಾಜಿಕ ಅಂಶಗಳು ಸಹ ಮುಖ್ಯವಾಗುತ್ತವೆ. ಕೇರಳದಂತಹ ಮಾನವ ಸಂಪನ್ಮೂಲವನ್ನು ಬಳಸಿಕೊಳ್ಳಬೇಕಾದಲ್ಲಿ ಭಾರತದ ಗಡಿಯೊಳಗೆ ಆರ್ಥಿಕ ಅವಕಾಶಗಳನ್ನು ವಿಸ್ತರಿಸಬೇಕಾಗಿದೆ. ಅನಕ್ಷರತೆ ಮತ್ತು ಅನಾರೋಗ್ಯದ ವ್ಯಕ್ತಿಗೆ ಉತ್ತಮ ಮಾರುಕಟ್ಟೆ ಆಧಾರಿತ ವ್ಯವಸ್ಥೆಯು ಒದಗಿಸುವ ಆರ್ಥಿಕ ಅವಕಾಶಗಳನ್ನು ಬಳಸಿಕೊಳ್ಳುವ ಸಾಮರ್ಥ್ಯವಿರುವುದಿಲ್ಲ. ಹಾಗೆಯೇ ಆರ್ಥಿಕ ಅವಕಾಶಗಳು ಮಿತವಾಗಿದ್ದರೆ ಆರೋಗ್ಯವಂತ ಮತ್ತು ಶಿಕ್ಷಣ ಪಡೆದ ವ್ಯಕ್ತಿ ತನ್ನ ಸಾಮರ್ಥ್ಯವನ್ನು ಬಳಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಸಾಮಾಜಿಕ ಅವಕಾಶಗಳು ಬೇರೆ ಬೇರೆ ಅಂಶಗಳಿಂದ ಪ್ರಭಾವಿತಗೊಳ್ಳುತ್ತವೆ. ಈ ಅಂಶಗಳೆಂದರೆ ಶಿಕ್ಷಣ ಮತ್ತು ಆರೋಗ್ಯ ಸೇವೆಗಳ ಸ್ಥಿತಿ ಇವುಗಳಿಗೆ ಸಂಬಂಧಿಸಿದ ಸಾರ್ವಜನಿಕ ನೀತಿಗಳು, ಹಣಕಾಸಿನ ಲಭ್ಯತೆ ಮತ್ತು ಸ್ವರೂಪ ಇದಕ್ಕೆ ಸಂಬಂಧಿಸಿದ ಆರ್ಥಿಕ ನೀತಿಗಳು, ಮಾರುಕಟ್ಟೆಗಳ ಇರುವಿಕೆ ಅಥವಾ ಇಲ್ಲದಿರುವಿಕೆ ಇವುಗಳನ್ನು ಉತ್ತೇಜಿಸುವ ಅಥವಾ ನಿಯಂತ್ರಿಸುವ ನೀತಿಗಳು ಅಧಿಕಾರ ಶಾಹಿಯ ನಿಯಂತ್ರಣ.[೭]

ಭಾರತದ ಆರ್ಥಿಕತೆ ಕುರಿತು ಪ್ರಬಂಧದಲ್ಲಿ ಕೃಷ್ಣ ಭಾರದ್ವಾಜ್‌ರವರು ಇಂಗ್ಲೆಂಡಿನಲ್ಲಿ ಕೃಷಿ ಮತ್ತು ಕೈಗಾರಿಕೆಯಲ್ಲಿ ಬಂಡವಾಳ ಶಾಹಿ ಸಂಬಂಧಗಳು ತ್ವರಿತವಾಗಿ ಬೆಳೆಯುತ್ತಿದ್ದವು. ಕೃಷಿಯಲ್ಲಿ

ಬಂಡವಾಳಶಾಹಿ ಬೆಳೆವಣಿಗೆಯ ಪ್ರಕ್ರಿಯೆ ಪ್ರಾರಂಭವಾಗಿ ಈ ಬೆಳೆವಣಿಗೆ ಅಭಿವೃದ್ಧಿಯ ಪ್ರತಿ ಹಂತದಲ್ಲೂ ಬೇರೆ ಬೇರೆ ರೂಪ ಪಡೆಯಲಾರಂಭಿಸಿತು. ಕೃಷಿ ಮತ್ತು ಕೈಗಾರಿಕೆಯಲ್ಲಿ ವೈಶಿಷ್ಟತೆ ಮತ್ತು ಶ್ರಮ ವಿಭಜನೆ ಬಳಕೆಯಾಗತೊಡಗಿದವು. ಉತ್ಪಾದಕತೆ ದೃಷ್ಟಿಯಿಂದ ಶ್ರಮ ವಿಭಜನೆ ಕೃಷಿಗಿಂತ ಕೈಗಾರಿಕೆಯಲ್ಲಿ ಹೆಚ್ಚು ಉಪಯುಕ್ತ ಎಂಬುದನ್ನು ಸ್ಮಿತ್ ಗುರ್ತಿಸಿದರು ಆದರೆ ಮಾರ್ಕ್ಸ್ ಬಂಡವಾಳಶಾಹಿ ಸಂಬಂಧಗಳು ಕೃಷಿ ಮತ್ತು ಕೈಗಾರಿಕೆ ಎರಡು ಕ್ಷೇತ್ರಗಳಲ್ಲಿ ಆಸ್ತಿ ಸಂಗ್ರಹಣೆಗೆ ದಾರಿಮಾಡಿಕೊಡುತ್ತದೆ. ಬಂಡವಾಳಶಾಹಿ ವ್ಯವಸ್ಥೆಯು ಹೆಚ್ಚು ಕೃಷಿ ಉತ್ಪಾದಕತೆಗೆ ಅವಕಾಶ ಮಾಡಿ, ಸಣ್ಣ ಹಿಡುವಳಿ ಮತ್ತು ಕರಕುಶಲ ಉತ್ಪನ್ನ ಕ್ಷೇತ್ರದ ದುಡಿಯುವ ಬಂಡವಾಳವನ್ನು ಮತ್ತು ಶಮ್ರ ಶಕ್ತಿಯನ್ನು ಸ್ಥಳಾಂತರಿಸುತ್ತದೆ. ಗ್ರಾಮೀಣ ಆರ್ಥಿಕತೆಯ ಉತ್ಪಾದನೆ ಮತ್ತು ವಿನಿಮಯ ಸಂಬಂಧಗಳನ್ನು ಶ್ರೇಣಿ ವ್ಯವಸ್ಥೆ ಹಿನ್ನೆಲೆಯಲ್ಲಿ ನೋಡಬಹುದು. ಉತ್ಪನ್ನ, ಭೂಮಿ, ಸಾಲ, ಶ್ರಮವನ್ನು ಮುಖ್ಯ ಮಾರುಕಟ್ಟೆಗಳೆಂದು ಪರಿಗಣಿಸುತ್ತಾ ಹೆಚ್ಚುವರಿ ಉತ್ಪನ್ನ ಮಾಡುವ ಸಾಮರ್ಥ್ಯವಿರುವ ಕುಟುಂಬಗಳು ತಮ್ಮದೇ ಆದ ವಿನಿಮಯ ನೀತಿ ನಿಯಮಗಳನ್ನುರೂಪಿಸುತ್ತಾರೆ. ಪ್ರಬಲ ಜನಾಂಗಗಳ ಈ ತೀರ್ಮಾನ ತೆಗೆದುಕೊಳ್ಳುವ ಅಥವಾ ತಮ್ಮದೇ ನೀತಿ ನಿಯಮಗಳನ್ನು ರೂಪಿಸುವ ಅಧಿಕಾರ ಅವರ ಶೋಷಣೆಯ ತಂತ್ರಗಾರಿಕೆಯನ್ನು ತೋರಿಸುತ್ತದೆ. ನಗದು ಅಥವಾ ಇತರೆ ಕೂಲಿ ಅಥವಾ ಮುಂಗಡ ಕೂಲಿ, ದಿನಗೂಲಿ ಅಥವಾ ವಾರ್ಷಿಕ ಕೂಲಿ ಮತ್ತು ಇತರೆ ಇನ್ನಾವುದೇ ರೀತಿಯಲ್ಲಿ ಕೂಲಿ ನೀಡುವ ವ್ಯವಸ್ಥೆಯನ್ನು ಅಳವಡಿಸಿಕೊಳ್ಳುವ ಮೂಲಕ ಪ್ರಬಲ ವರ್ಗಗಳ ಜಮೀನ್ದಾರರು ದುಡಿಮೆಗಾರರನ್ನು ಅಥವಾ ಕೃಷಿ ಕಾರ್ಮಿಕರನ್ನು ತಾತ್ಕಾಲಿಕವಾಗಿ ಅಥವಾ ಖಾಯಂ ಆಗಿ ಬಳಸಿಕೊಳ್ಳುವುದು. ನಿರಂತರ ಹಣಕಾಸಿನ ಕೊರತೆ ಮತ್ತು ಬಡತನ ಅನುಭವಿಸುತ್ತಿದ್ದು, ಜೀವನಾಧಾರ ಮಟ್ಟಕ್ಕಿಂತ ಕೆಳಗೆ ಬದುಕನ್ನು ನಡೆಸುತ್ತಿರುವ ಕುಟುಂಬಗಳು ಈ ರೀತಿಯ ವಿನಿಮಯ ವ್ಯವಸ್ಥೆಯಲ್ಲಿ ತೊಡಗಿಕೊಡುತ್ತಾರೆ. ಅಂದರೆ ಕೂಲಿಗಾಗಿ ಆಹಾರ ನೀಡುವಂತಹದ್ದು ಅಥವಾ ಇನ್ನಾವುದೇ ರೀತಿಯಲ್ಲಿ ಕೂಲಿ ನೀಡುವಂತಹ ಪದ್ಧತಿ. ಬದುಕಲು ಸಂಪನ್ಮೂಲಗಳಿಲ್ಲದೇ ಅನಿವಾರ್ಯವಾಗಿ ಭೂರಹಿತ ಕಾರ್ಮಿಕರು ಅನುಭೋಗ ಸಾಲವನ್ನು ಮಾಡಬೇಕಾಗುತ್ತದೆ. ಭಾರತದಲ್ಲಿ ಯೋಜನೆಗಳ ಪ್ರಯೋಜನೆ ನೇರವಾಗಿ ಪ್ರಬಲ ವರ್ಗಗಳನ್ನು ತಲುಪುತ್ತದೆ ಉದಾ: ಸಹಕಾರಿ ಸಾಲ ಸಂಸ್ಥೆಗಳಲ್ಲಿ ಲೇವಾದೇವಿಗಾರರು ಮತ್ತು ಸ್ಥಳೀಯ ಪ್ರಭಾವಿಗಳು ವ್ಯವಸ್ಥಾಪಕ ನಿರ್ದೇಶಕರ ಮಂಡಳಿಗೆ ತಾವೇ ಆಯ್ಕೆಯಾಗಿ ಸಹಕಾರಿ ಸಾಲ ಸಂಸ್ಥೆಗಳಿಂದ ಸಾಲಗಳನ್ನು ಪಡೆದು ಅದನ್ನು ಖಾಸಗಿಯಾಗಿ ತಾವು ಹೊರಗಡೆ ಸಾಲ ನೀಡಲು ಬಳಸುತ್ತಾರೆ.[೯]

ವಸಾಹತುಶಾಹಿ ಅವಧಿಯಲ್ಲಿ ಭಾರತದ ಆರ್ಥಿಕತೆಯ ಸ್ವರೂಪವನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಬ್ಯಾಂಕುಗಳು ಕೈಗಾರಿಕೆಗಳಿಗೆ ಮತ್ತು ಯೂರೋಪಿನ್ ಕಂಪನಿಗಳ ನಿಯಂತ್ರಣದಲ್ಲಿದ್ದ ಬೃಹತ್ ಟೀಪ್ಲಾಂಟೇಶನ್‌ಗಳಿಗೆ ಸಾಲಗಳನ್ನು ಒದಗಿಸುತ್ತಿದ್ದವು. ಸಣ್ಣ ಟೀಪ್ಲಾಂಟೇಶನ್‌ಗಳಿಗೆ ಸಾಲ ಸೌಲಭ್ಯಗಳು

ಸಿಗುತ್ತಿರಲಿಲ್ಲ. ಜನಾಂಗೀಯ (ರೇಶಿಯಲ್ ಬ್ಯಾರಿಯರ್ಸ್) ಅಂಶಗಳು ಇದಕ್ಕೆ ಕಾರಣ ಎನ್ನಲಾಗಿದೆ. ೧೮೭೬ರಲ್ಲಿ ಪ್ರಾರಂಭವಾದ ಬ್ಯಾಂಕ್ ಆಫ್ ಬೆಂಗಾಲ್ ನಿಂದಲೂ ಭಾರತದ ಟೀಪ್ಲಾಂಟೇಶನ್‌ಗಳಿಗೆ ದೊರೆಯುವ ಸಾಲಸೌಲಭ್ಯಗಳು ಮಿತವಾಗಿದ್ದವು. ಬ್ಯಾಂಕ್ ಆಫ್ ಬೆಂಗಾಲ್ ಶಾಖೆಯೊಂದನ್ನು ಸ್ಥಾಪಿಸಿ ಟೀಬ್ರೋಕರ್‌ಗಳ ಗ್ಯಾರಂಟಿ ಆಧಾರದ ಮೇಲೆ ಭಾರತದ ಸ್ಥಳೀಯ ಟೀ ಗಾರ್ಡನ್‌ಗಳಿಗೆ ಸಾಲ ಒದಗಿಸಿತು. ಮುಂದೆ ಭಾರತೀಯ ಟೀ ಗಾರ್ಡನ್‌ಗಳಿಗೆ ಭಾರತದ ಕೇಂದ್ರ ಬ್ಯಾಂಕ್ ಹಣಕಾಸು ಒದಗಿಸಿತು. ಪೂರ್ವ ಭಾರತದ ಆಧುನಿಕ ಕೈಗಾರಿಕೆಗಳು (ಸೆಣಬು ಮತ್ತು ಟೀ ಉದ್ಯಮ) ಕಲ್ಲಿದ್ದಲು ಗಣಿಗಾರಿಕೆ ಸಹ ಒಂದು ಈ ಉದ್ಯಮದ ಕಂಪನಿಗಳು ಬೆಂಗಾಲ್ ಮತ್ತು ಬಿಹಾರಗಳ ಜಮೀನ್ದಾರಿ ಹಕ್ಕುಗಳನ್ನು ಪಡೆದು ತಮಗೆ ಬೇಕಾದ ರೀತಿಯಲ್ಲಿ ಜಮೀನನ್ನು ಬಳಸಿಕೊಳ್ಳುತ್ತಿದ್ದರು. ಇದನ್ನು ನಿಯಂತ್ರಿಸುವ ಕಾಯಿದೆಗಳು ಕಡಿಮೆ. ಗಣಿಗಾರಿಕೆಯಲ್ಲಿ ಕಂಪನಿಗಳು ಸುತ್ತಮುತ್ತ ಪ್ರದೇಶದ ಆದಿವಾಸಿಗಳು ಮತ್ತು ಪರಿಶಿಷ್ಟ ಜಾತಿ ಕೂಲಿ ಕಾರ್ಮಿಕರನ್ನು ಬಳಸಿಕೊಂಡವು. ಇಲ್ಲಿನ ಕೆಲಸದ ಪರಿಸ್ಥಿತಿ ತುಂಬಾ ಕೆಟ್ಟದಾಗಿತ್ತು. ಕೆಲಸದ ಸ್ಥಳದಲ್ಲಿ ಅಪಘಾತಗಳು ಹೆಚ್ಚಾಗಿ ನಡೆದವು. ಈ ಒಂದು ರೀತಿಯ ಗುಲಾಮಗಿರಿ ಪರಿಸ್ಥಿತಿಯಾಗಿತ್ತು. ಭೂಮಿಯನ್ನು ಆಧಾರವಾಗಿಟ್ಟು ಕೊಂಡು ಬದುಕುತ್ತಿದ್ದ ಜನರ ಭೂಮಿ ಸಹ ಗಣಿಗಳಾಗಿ ಬದಲಾದವು. ಈ ಹಂತದಲ್ಲಿ ಗಣಿ ಕಂಪನಿಗಳಿಗೆ ಕಾರ್ಮಿಕರ ಕೊರತೆ ಹೆಚ್ಚಾಗಿ ಕಂಪನಿಗಳು ಕಾರ್ಮಿಕರನ್ನು ಉಳಿಸಿಕೊಳ್ಳಲು ತುಂಡು ಭೂಮಿಗಳನ್ನು ನೀಡಿ ಬೆಳೆ ಬೆಳೆಯುವಂತೆ ಪ್ರೇರೇಪಿಸಿದವು. ಇದೇ ಪರಿಸ್ಥಿತಿ ಟೀ ಪ್ಲಾಂಟೇಶನ ಗಳಲ್ಲೂ ಇತ್ತು. ಲಾಭಗಳಿಸಲು ಕಂಪನಿಗಳು ಅಗ್ಗದ ಕೂಲಿ ಕಾರ್ಮಿಕರ ಮೇಲೆ ಅವಲಂಬಿತರಾಗಿ ಅವರನ್ನು ಅವೈಜ್ಞಾನಿಕ ರೀತಿಯಲ್ಲಿ ಬಳಸಿಕೊಂಡು ಕಲ್ಲಿದಲ್ಲು ಗಣಿಗಾರಿಕೆಯನ್ನು ಹೆಚ್ಚಿಸಿದವು.[೧೦]

ದಿ ಎಕನಾಮಿ ಅನ್ ಇಂಟರ್‌ಪ್ರಿಟೇಟಿವ್ ಇಂಟ್ರೊಡಕ್ಷನ್ ಎಂಬ ಪುಸ್ತಕದಲ್ಲಿ ಭಾರತದ ಆರ್ಥಿಕತೆ ಕಾರ್ಯನಿರ್ವಹಿಸುವ ರೀತಿಯನ್ನು ವಿಶ್ಲೇಷಿಸಲಾಗಿದೆ. ಆರ್ಥಿಕತೆಯನ್ನು ವಿವಿಧ ಘಟಕಗಳಾಗಿ ವಿಗಂಡಿಸಿ ಈ ಘಟಕಗಳ ಸಂಬಂಧಗಳು ಮತ್ತು ಈ ಘಟಕಗಳು ಹೊಂದಿರುವ ಸಂಪನ್ಮೂಲ ಹಾಗೂ ಸಂಪನ್ಮೂಲವನ್ನು ನಿಯಂತ್ರಿಸಿ ಅದನ್ನು ಉತ್ಪಾದನೆಯಲ್ಲಿ ಬಳಸಿಕೊಳ್ಳುವ ರೀತಿಯನ್ನು ವಿಶ್ಲೇಷಿಸಲಾಗಿದೆ. ಈ ಘಟಕಗಳಲ್ಲಿ ಒಂದಾದ ಶ್ರಮ ಶಕ್ತಿಯನ್ನು (ಲೇಬರ್ ಪವರ್) ನಾಲ್ಕನೇ ಘಟಕವೆಂದು ಪರಿಗಣಿಸಲಾಗಿದೆ. ಇವರು ಸಂಪನ್ಮೂಲಗಳಾದ ಭೂಮಿ ಮತ್ತು ಬಂಡವಾಳವಿಲ್ಲದೆ ಶ್ರಮಶಕ್ತಿ ಬಳಸಿಕೊಂಡು ಅಥವಾ ದುಡಿಮೆ ಮಾಡಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಶ್ರಮಿಸುತ್ತಾರೆ. ಭೂಮಾಲೀಕರೊಂದಿಗೆ ದುಡಿಮೆಗಾರರು ಶಾಶ್ವತವಾಗಿ ನಿರ್ಧಿಷ್ಟ ಅವಧಿ ಮತ್ತು ಪೇಮೆಂಟ್ ಆಧಾರದ ಮೇಲೆ ಉದ್ಯೋಗ ಮಾಡಿಕೊಂಡಿರುವವರು. ಭಾರತದಲ್ಲಿ ಸ್ವಾತಂತ್ರ್ಯಪೂರ್ವ ಮತ್ತು ನಂತರದ ಅವಧಿಯಲ್ಲಿ ಈ ಪರಿಸ್ಥಿತಿ ಇತ್ತು ಇತ್ತೀಚಿನ ದಶಕಗಳಲ್ಲಿ ಈ ಪ್ರಕ್ರಿಯೆಯಲ್ಲಿ ಬದಲಾವಣೆಯಾಗಿ ಇದು ಕ್ಯಾಶುಯಲ್ ಲೇಬರ್ ಆಗಿ ಪರಿವರ್ತನೆಗೊಂಡಿದೆ. ಈ ಪರಿಸ್ಥಿತಿಯು ಜೀತ ಪದ್ಧತಿಯ ರೀತಿಯಲ್ಲಿದ್ದು, ಪರಿವರ್ತನೆಯ ಅಲೆ ಇಲ್ಲದ ಗ್ರಾಮೀಣ ಭಾಗದಲ್ಲಿ ಇತ್ತು. ಇಲ್ಲಿ ದುಡಿಮೆಗಾರರು

ದುರ್ಬಲರಾಗಿದ್ದು, ಈ ಸಾಂಪ್ರದಾಯಿಕ ಜೀತ ಪದ್ಧತಿಯನ್ನು ಒಪ್ಪಿಕೊಂಡು ತಮ್ಮ ಹಕ್ಕುಗಳನ್ನು ರಕ್ಷಣೆ ಮಾಡಿಕೊಳ್ಳುವ ಅಧಿಕಾರವನ್ನು ದುಡಿಮೆಗಾರರು ಹೊಂದಿರಲಿಲ್ಲ. ಅಧಿಕಾರ ಮತ್ತು ಸಂಪತ್ತನ್ನು ಹೊಂದಿದ್ದ ಭೂ ಮಾಲೀಕರು ದುಡಿಮೆಗಾರರನ್ನು ತಮಗೆ ಅನುಕೂಲವಾಗುವ ರೀತಿಯಲ್ಲಿ ಬಳಸಿಕೊಳ್ಳುತ್ತಿದ್ದರು. ದುಡಿಮೆಗಾರರು ಬದುಕಲು ಅನಿವಾರ್ಯವಾಗಿ ಭೂ ಮಾಲೀಕರಿಂದ ಸಾಲ ಪಡೆಯುತ್ತಿದ್ದರು. ಸಾಲ ಪಡೆಯಲು ಯಾವುದೇ ಆಸ್ತಿಯನ್ನು ಭದ್ರತೆಯನ್ನಾಗಿ ನೀಡುವ ಶಕ್ತಿ ಇಲ್ಲದೇ ತಮ್ಮ ವಿಧೇಯಕತೆಯ ಮೂಲಕವೇ ಶ್ರಮ ಶಕ್ತಿಯನ್ನು ಭದ್ರತೆಯನ್ನಾಗಿ ಬಳಸಿಕೊಂಡು ಸದಾ ಭೂ ಮಾಲೀಕರ ಬಳಿ ಶಾಶ್ವತವಾಗಿ ದುಡಿಮೆ ಮಾಡುವಂತಹ ಪರಿಸ್ಥಿತಿಯಲ್ಲಿದ್ದರು. ಈ ರೀತಿಯ ಭೂರಹಿತ ಕೃಷಿ ಕಾರ್ಮಿಕರಿಗೆ ಅಥವಾ ದುಡಿಮೆಗಾರರು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳನ್ನು ಹೊಂದಿದ್ದರು. ಗುಜರಾತ್‌ನಲ್ಲಿ ಬಾಲಿ (bali), ಪಂಜಾಬ್‌ನಲ್ಲಿ ಸಿರಿ (siri) ಕಾರ್ಮಿಕ, ಮಹಾರಾಷ್ಟ್ರದಲ್ಲಿ ಸಲ್ದಾರ್ಸ್ (saldars), ಪಶ್ಚಿಮ ಬಂಗಾಳದಲ್ಲಿ ಮಹಿಂದಾರ್ಸ್ ಮತ್ತು ಬಗಲ್ಸ್ ತಮಿಳುನಾಡಿನಲ್ಲಿ ಪನ್ನಿಯಾಲ್ಸ್. ಈ ರೀತಿಯ ಕಾರ್ಮಿಕರು ಉಳ್ಳವರ ಸೇವಕರಂತೆ ದುಡಿಯುತ್ತಿದ್ದರು. ದುಡಿಮೆಯ ಅವಧಿಯು ನಿರ್ಧಿಷ್ಟವಾಗಿರಲಿಲ್ಲ. ಅಗತ್ಯದ ಆಧಾರದ ಮೇಲೆ ಮುಂಜಾನೆಯಿಂದ ರಾತ್ರಿಯವರೆಗೂ ದುಡಿಮೆ ಮಾಡಬೇಕಾಗಿತ್ತು. ದುಡಿಮೆಗಾರರು ಕೃಷಿಗೆ ಸಂಬಂಧಿಸಿದ ವಿವಿಧ ರೀತಿಯ ಕೆಲಸಗಳನ್ನು ಮಾಡುತ್ತಿದ್ದರು. ಉದಾ: ಗಾಡಿಗಳನ್ನು ಓಡಿಸುವುದು, ದನಕರುಗಳನ್ನು ಮೇಯಿಸುವುದು ಮತ್ತು ನೀರು ತರುವುದು. ಈ ದುಡಿಮೆಗೆ ಕೂಲಿ ವಿವಿಧ ರೀತಿಯಲ್ಲಿತ್ತು. ಗ್ರಾಮೀಣ ಪ್ರದೇಶಗಳ ಭೂರಹಿತ ಕಾರ್ಮಿಕರು ಹೀಗೆ ಜೀತದಾಳುಗಳಂತೆ ದುಡಿಯುತ್ತಿದ್ದರೆ ನಗರ ಪ್ರದೇಶಗಳಲ್ಲಿ ಬದುಕಲು ಬೇರೆ ಮಾರ್ಗಗಳನ್ನು ಕಂಡುಕೊಂಡಿರುತ್ತಾರೆ. ಉದಾ: ವೇಸ್ಟ್ ಪೇಪರ್ ಸಂಗ್ರಹ ಅಥವಾ ಇತರ ವಸ್ತುಗಳ ಉತ್ಪಾದನೆಯಲ್ಲಿ ಬಳಸಹುದಾದಂತಹ ವೇಸ್ಟ್ ಮೆಟರೀಯಲ್‌ನ ಸಂಗ್ರಹ. ಇಲ್ಲಿ ಕುರಿಯನ್‌ರವರು ಸಂಪನ್ಮೂಲರಹಿತ ಬಡವರು ಗ್ರಾಮೀಣ ಪ್ರದೇಶದಲ್ಲಿ ಜೀತದಾಳುಗಳಂತೆ ಮತ್ತು ನಗರ ಪ್ರದೇಶಗಳಲ್ಲಿ ಬಿಕ್ಷುಕರಂತೆ ಬದುಕುತ್ತಿದ್ದಾರೆ ಎಂಬ ವಿಶ್ಲೇಷಣೆಯನ್ನು ವಿಭಿನ್ನವಾಗಿ ಹಾಗೂ ಆರ್ಥಿಕತೆಯಲ್ಲಿ ವಿವಿಧ ಘಟಕಗಳು ಹೇಗೆ ಕಾರ್ಯ ನಿರ್ವಹಿಸುತ್ತವೆ ಎಂಬುದನ್ನು ವಿಶ್ಲೇಷಿಸುತ್ತಾರೆ. ಈ ವಿಶ್ಲೇಷಣೆಯಲ್ಲಿ ಭೂಮಿಯಂತಹ ಸಂಪನ್ಮೂಲ ಹೊಂದಿರುವವರನ್ನು ೧ನೇ ಘಟಕವೆಂದು ಭೂರಹಿತ ಕಾರ್ಮಿಕರು ಅಥವಾ ದುಡಿಮೆಗಾರರನ್ನು ಆರ್ಥಿಕತೆಯ ಕೊನೆ ಘಟಕವೆಂದು ವರ್ಗೀಕರಿಸಿದ್ದಾರೆ.[೧೧]

ವಿಫಲಗೊಂಡ ಮಾರುಕಟ್ಟೆ, ಭಾರತದಲ್ಲಿ ನವ ಉದಾರೀಕರಣದ ಆರ್ಥಿಕ ಸುಧಾರಣೆಗಳನ್ನು ಕುರಿತು ವಿಶ್ಲೇಷಿಸಲಾಗಿದೆ. ಭಾರತದಂತಹ ರಾಷ್ಟ್ರದಲ್ಲಿ ಸಮಾನ ಆದಾಯ ಹಂಚಿಕೆ ಮತ್ತು ಬಡತನ ಪ್ರಮಾಣ ತಗ್ಗಿಸುವುದರೊಂದಿಗೆ ಸುಸ್ಥಿರ ಆರ್ಥಿಕ ವಿಸ್ತರಣೆಗೆ ಜನ ಸಂಖ್ಯಾಧಾರಿತ ಉತ್ಪಾದಕ ಉದ್ಯೋಗ ಅವಕಾಶಗಳನ್ನು ಸೃಷ್ಟಿಸಿ ಶ್ರಮ ಶಕ್ತಿಯ ಸಮಗ್ರ ಉತ್ಪಾದಕೆಯನ್ನು ಸುಧಾರಿಸಬೇಕಾಗುತ್ತದೆ. ಆದರೆ ಭಾರತದಲ್ಲಿ ಬಡತನ ಪ್ರಮಾಣ ಮತ್ತು ಮಾನವ ಅಭಿವೃದ್ಧಿ

ಸೂಚ್ಯಾಂಕಗಳ ಬೆಳವಣಿಗೆಗೆ ನಿಧಾನಗತಿಯಲ್ಲಿರುವುದನ್ನು ಗಮನಿಸಿದರೆ ಕಳೆದ ಕೆಲವು ದಶಕಗಳ ಆರ್ಥಿಕ ಅಭಿವೃದ್ಧಿಯ ಪ್ರಕ್ರಿಯೆಯು ವಿಫಲವಾಗಿದೆ ಎನ್ನಬಹುದು. ಇದು ಯೋಗಕ್ಷೇಮ ಪರಿಕಲ್ಪನೆಯ ಸಮಸ್ಯೆ ಮಾತ್ರವಲ್ಲದೇ ಅಪಾರ ಮಾನವ ಸಂಪನ್ಮೂಲದ ವ್ಯರ್ಥವೂ ಹೌದು. ಅಗಾದ ಪ್ರಮಾಣದ ಶ್ರಮ ಶಕ್ತಿಯನ್ನು ಉತ್ಪಾದಕತೆಯಿಂದ ಬಳಸಿಕೊಳ್ಳುವ ಪ್ರಯತ್ನದ ಮೂಲಕ ತ್ವರಿತ ಮತ್ತು ಸಮಾನತೆಯ ರಾಷ್ಟ್ರ ನಿರ್ಮಾಣ ಮಾಡಬಹುದು. ರಾಷ್ಟ್ರದಾದ್ಯಂತ ಸಾಕಷ್ಟು ಉತ್ಪಾದಕ ಉದ್ಯೋಗಗಳು ಸೃಷ್ಟಿಯಾಗದಿರುವುದರಿಂದ ಕೃಷಿ ಮತ್ತು ಕೃಷಿಯೇತರ ಆದಾಯಗಳ ನಡುವೆ ಅಂತರ ಹೆಚ್ಚಿದೆ. ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗವಾಶಗಳು ಕಡಿಮೆಯಾಗಿ ಶ್ರಮ ಶಕ್ತಿ ಸ್ಥಳಾಂತರಗೊಳ್ಳುತ್ತಿದೆ. ಗ್ರಾಮೀಣ ಭಾಗದ ಜನರು ಉದ್ಯೋಗಗಳನ್ನು ಹುಡುಕಿಕೊಂಡು ನಗರಗಳತ್ತ ವಲಸೆ ಹೋಗುತ್ತಿದ್ದಾರೆ. ಕೈಗಾರಿಖಾಭಿವೃದ್ದಿ ಮತ್ತು ವಾಣಿಜ್ಯ ಅಭಿವೃದ್ಧಿ ಪ್ರದೇಶಗಳಲ್ಲಿನ ಸಂಘಟಿತ ವಲಯವು ಕೂಲಿ ಕಾರ್ಮಿಕರನ್ನು ಕ್ಯಾಶುಯಲ್ ದುಡಿಮೆಗಾರರಂತೆ ಬಳಸಿಕೊಳ್ಳುತ್ತಿದ್ದಾರೆ.

೧೯೯೧ರ ಪ್ರಾರಂಭದ ಅವಧಿಯಲ್ಲಿ ಸಾರ್ವಜನಿಕ ನೀತಿಗಳು ಗ್ರಾಮೀಣ ಪ್ರದೇಶಗಳ ಉದ್ಯೋಗ ಹೆಚ್ಚಳ ಮತ್ತು ಬಡತನ ಕಡಿಮೆ ಮಾಡುವಲ್ಲಿ ಕೊಡುಗೆ ನೀಡಿದರೂ ಈ ಅವಧಿಯ ಸಮಗ್ರ ಆರ್ಥಿಕ ನೀತಿ ಮತ್ತು ತಂತ್ರಗಳು ಸಂಘಟಿತ ವಲಯ ಮತ್ತು ಸಾರ್ವಜನಿಕ ಕ್ಷೇತ್ರ ಹೀಗೆ ಎಲ್ಲಾ ವಲಯಗಳಲ್ಲಿ ಉದ್ಯೋಗವಕಾಶಗಳು ಸ್ಥಿರಗೊಂಡವು. ಗ್ರಾಮೀಣ ಉದ್ಯೋಗ ಮತ್ತು ಬಡತನ ನಿರ್ಮೂಲನಾ ಕಾರ್ಯಕ್ರಮಗಳಿಗೆ ಕೇಂದ್ರದಿಂದ ರಾಜ್ಯಗಳಿಗೆ ಬರುವ ಸಂಪನ್ಮೂಲಗಳು ಸಹ ಕಡಿಮೆಯಾದವು. ರಾಜ್ಯಗಳು ಹಣಕಾಸಿನ ಸಮಸ್ಯೆಗಳಿಗೆ ಸಿಲುಕಿದವು. ಶಿಕ್ಷಣ ಆರೋಗ್ಯ, ನೈರ್ಮಲ್ಯದಂತಹ ಸಾಮಾಜಿಕ ಕ್ಷೇತ್ರಗಳ ಮೇಲಿನ ಸಾರ್ವಜನಿಕ ವೆಚ್ಚಗಳು ಕಡಿಮೆಯಾದವು. ಹಾಗೆ ೧೯೯೧ರ ಹಣಕಾಸು ಖಾಸಗೀಕರಣ ಗ್ರಾಮೀಣ ಸಾಲಗಳನ್ನು ಅಗಾದ ಪ್ರಮಾಣದಲ್ಲಿ ಕಡಿತಗೊಳಿಸಿತು. ಇದು ಗ್ರಾಮೀಣ ಉದ್ಯಮ ಅಭಿವೃದ್ಧಿ ಸಾಧ್ಯತೆಗಳ ಮೇಲೆ ವ್ಯತಿರಿಕ್ತ ಪರಿಣಾಮ ಬೀರಿತು. ಭೂ ಒಡೆತನ, ಕುಟುಂಬದ ಗಾತ್ರ, ಜಾತಿ, ಲಿಂಗ, ಶಿಕ್ಷಣ, ಸಾಕ್ಷರತೆ, ವೃತ್ತಿ ಇತ್ಯಾದಿಗಳು ಬಡತನದ ಮೇಲೆ ಪರಿಣಾಮ ಬೀರುತ್ತವೆ. ಯಾವುದೇ ರೀತಿಯ ಆಸ್ತಿಗಳು ಇಲ್ಲದೆ, ಶಿಕ್ಷಣವಿಲ್ಲದೆ ಕೂಲಿ ಆಧಾರಿತ ಉದ್ಯೋಗಗಳಲ್ಲಿ ತೊಡಗಿರುವುದು ಭಾರತದಲ್ಲಿ ಬಡತನ ಹೆಚ್ಚಲು ಕಾರಣವೆನ್ನಬಹುದು. ಸಮಾಜದ ಕೆಲವು ವರ್ಗಗಳಲ್ಲಿ ಬಡತನದ ಪ್ರಮಾಣ ಹೆಚ್ಚು, ಅಂತಹ ವರ್ಗಗಳೆಂದರೆ ಪರಿಶಿಷ್ಟ ಜಾತಿ ಮತ್ತು ಪಂಗಡಗಳು. ಸಂಪನ್ಮೂಲ ಅಥವಾ ಆಸ್ತಿಯಲ್ಲಿನ ಅಸಮಾನತೆ ಮತ್ತು ಆದಾಯ ಹಂಚಿಕೆಯ ಅಸಮಾನತೆ ಬಡತನಕ್ಕೆ ಮುಖ್ಯ ಕಾರಣಗಳಾಗುತ್ತವೆ. ಮಹಿಳಾ ಮುಖ್ಯಸ್ಥರಿರುವ ಕುಟುಂಬಗಳಲ್ಲಿ ಬಡತನದ ಪ್ರಮಾಣ ಹೆಚ್ಚಾಗಿರುತ್ತದೆ. ಇದು ಮಹಿಳೆಯರ ಮತ್ತು ಮಕ್ಕಳ ಮೇಲೆ ವ್ಯತಿರಿಕ್ತ ಪರಿಣಾಮ ಬೀರುವುದು. ಈ ರೀತಿಯ ಪರಿಸ್ಥಿತಿಗೆ ಕಡಿಮೆ ಉತ್ಪಾದಕತೆ ಮತ್ತು ಕೆಳಮಟ್ಟದ ಅಭಿವೃದ್ಧಿಯು ಕಾರಣವಾಗುವುದು. ಈ ಹಿನ್ನೆಲೆಯಲ್ಲಿ ಆರ್ಥಿಕ ನೀತಿಗಳು ಮತ್ತು ಆರ್ಥಿಕ ಪ್ರಕ್ರಿಯೆಗಳು ಮುಖ್ಯ ನಿರ್ಧಾರಕ ಅಂಶಗಳಾಗಿರುತ್ತವೆ. ೧೯೯೧ರ

ಆರ್ಥಿಕ ನೀತಿಗಳು ಮತ್ತು ಆರ್ಥಿಕ ಸುಧಾರಣೆ ಉದ್ಯೋಗವಕಾಶಗಳ ಸೃಷ್ಟಿ ಮತ್ತು ಬಡತನ ಕಡಿಮೆ ಮಾಡುವಂತಹ ನೇರ ಉದ್ದೇಶವನ್ನು ಹೊಂದಿರದೆ ಮಾರುಕಟ್ಟೆ ಉದಾರೀಕರಣಗೊಳಿಸುವುದು, ವಿದೇಶಿ ಹೂಡಿಕೆಗೆ ಸಂಬಂಧಿಸಿದ ನಿರ್ಭಂದಗಳನ್ನು ತೆಗೆದುಹಾಕಿ ಮುಕ್ತ ಅವಕಾಶವನ್ನು ಕಲ್ಪಿಸುವುದು,ರಪ್ತು ಉತ್ತೇಜನ ಮುಖ್ಯವಾಗಿ ಕೃಷಿ ಕ್ಷೇತ್ರದಲ್ಲಿ ಉದ್ಯೋಗವಕಾಶಗಳನ್ನು ಹೆಚ್ಚಿಸಿದರೆ ಬಡತನ ಪ್ರಮಾಣ ಕಡಿಮೆಯಾಗುವುದು ಮತ್ತು ಆರ್ಥಿಕ ಬೆಳವಣಿಗೆಯ ಫಲ ಅಥವಾ ಪ್ರಯೋಜನೆ ಎಲ್ಲರಿಗೂ ಲಭಿಸುತ್ತದೆ ಎಂದು ನಂಬಲಾಗಿತ್ತು. ಆದರೆ ಉದ್ಯೋಗವಕಾಶಗಳು ಸೃಷ್ಠಿಯಾಗುವ ಬದಲು ಕಡಿತಗೊಂಡವು ಅದೇ ರೀತಿ ಬಡತನ ಪ್ರಮಾಣವು ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಯಿತು. ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗ ಬೆಳವಣಿಗೆಯ ದರ ಕ್ರಮವಾಗಿ ೧೯೮೭-೮೮ರಲ್ಲಿ ಶೇಕಡಾ ೧.೩೬ರಷ್ಟು ಇದ್ದದ್ದು ೧೯೮೭-೮೮ರಲ್ಲಿ ಶೇಕಡಾ ೨.೦೩ರಕ್ಕೆ ಹೆಚ್ಚಾಯಿತು. ಆದರೆ ೧೯೯೯-೨೦೦೦ರದ ಅವಧಿಯಲ್ಲಿ ಇದು ಶೇಕಡಾ ೦.೬೬ಗೆ ಕಡಿಮೆಯಾಯಿತು ಎನ್ನಲಾಗಿದೆ.[೨]

ಭಾರತದ ರಾಜಕೀಯ ಅಭಿವೃದ್ಧಿಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಬ್ರಿಟೀಷ್ ಆಡಳಿತದಲ್ಲಿ ಹಲವು ದರ್ಶಕಗಳ ಕಾಲ ಆರ್ಥಿಕತೆ ಸ್ಥಗಿತತೆಯನ್ನು ಅನುಭವಿಸಿ, ೧೯೪೭ರ ಸ್ವಾತಂತ್ರ್ಯ ಪಡೆದ ಅವಧಿಯಲ್ಲಿ ಭಾರತ ಜಗತ್ತಿನ ಅತಿ ಬಡತನದ ರಾಷ್ಟ್ರಗಳಲ್ಲಿ ಒಂದಾಗಿತ್ತು. ಸ್ವಂತಂತ್ರ್ಯ ನಂತರ ಬಡತನ ನಿರ್ಮೂಲನೆ ಗಣತಂತ್ರ ಸ್ಥಾಪಕರ ಮುಖ್ಯ ದ್ಯೇಯವಾಗಿತ್ತು. ಭಾರತದಲ್ಲಿ ಪಂಚವಾರ್ಷಿಕ ಯೋಜನೆಗಳು, ರಾಜಕೀಯ ಭಾಷಣಗಳು, ಚುನಾವಣಾ ಘೋಷಣೆಗಳ ಮೂರು ನಾಲ್ಕು ದಶಕಗಳ ನಂತರವು ಭಾರತ ಜಗತ್ತಿನ ಅತೀ ಬಡತನದ ರಾಷ್ಟ್ರಗಳಲ್ಲಿ ಒಂದಾಗಿ ಉಳಿದಿದೆ ಹಾಗೂ ಪ್ರಪಂಚದ ಬಡತನಕ್ಕೆ ಭಾರತ ಹೆಚ್ಚು ಕೊಡುಗೆ ನೀಡಿದೆ. ೧೯೮೧ರಲ್ಲಿ ಶಿಶುಮರಣಹತ್ಯೆ ೧೦೦೦ಕ್ಕೆ ೧೨೧ ಇತ್ತು. ಇದು ಚೀನಾಕ್ಕಿಂತ ಒಂದುವರೆ ಪಟ್ಟು ಹೆಚ್ಚಾಗಿತ್ತು. ೪ ವರ್ಷದ ಮಕ್ಕಳ ಮರಣದರ ಪುರಷರಲ್ಲಿ ಸರಾಸರಿ ೪೫ ಮಹಿಳೆಯರಲ್ಲಿ ೫೨ ಇತ್ತು. ೧೯೭೬ರಲ್ಲಿ ಭಾರತದ ಮುಕ್ಕಾಲು ಪಾಲು ಗ್ರಾಮಸ್ಥರಿಗೆ ಆರೋಗ್ಯ ಸೌಲಭ್ಯಗಳಿರಲಿಲ್ಲ. ಭಾರತದ ೨/೩ರಷ್ಟು ಜನಸಂಖ್ಯೆಗೆ ಕುಡಿಯುವ ನೀರು ಇರಲಿಲ್ಲ. ಅರ್ದದಷ್ಟು ಗ್ರಾಮಕ್ಕೆರಸ್ತೆ ವಿದ್ಯುತ್ ಇರಲಿಲ್ಲ. ೧/೩ ಮಕ್ಕಳು ಶಾಲೆಗೆ ದಾಖಲಾಗುತ್ತಿರಲ್ಲಿಲ್ಲ. ೨/೩ರಷ್ಟು ಅನಕ್ಷರಸ್ತರಾಗಿದ್ದರು. ಭಾರತದಲ್ಲಿ ಆರ್ಥಿಕ ಬೆಳವಣಿಗೆಯ ಪಲ ಬಡವರಿಗೆ ತಲುಪಿದೆಯೆ, ಇಲ್ಲವೆ (ಟ್ರಿಕಲ್ ಡೌನ್) ಎಂಬ ಚರ್ಚೆ ಕೊನೆ ಇಲ್ಲದಂತೆ ನಡೆಯುತ್ತಿದೆ. ಕಳೆದ ಕೆಲವು ದಶಕಗಳಲ್ಲಿ ಸರ್ಕಾರ ಬಡತನ ನಿರ್ಮೂಲನೆ, ಆದ್ಯತಾ ಸಾಲ, ಸಾಕ್ಷರತೆ, ಶಿಕ್ಷಣ, ಆರೋಗ್ಯ ಸುಧಾರಣೆ ಕಾರ್ಯಕ್ರಮಗಳನ್ನು ಜಾರಿಗೆ ತಂದು ಯಶಸ್ಸುನ್ನು ಸಹಾ ಕಂಡಿತು. ಮಹಾರಾಷ್ಟ್ರದ ಉದ್ಯೋಗ ಖಾತರಿ ಯೋಜನೆ, ರಾಜಸ್ಥಾನದ ಅಂತ್ಯೋದಯ ಕಾರ್ಯಕ್ರಮಗಳು ಇದಕ್ಕೆ ಉದಾಹರಣೆ. ಆದರೆ ಒಟ್ಟು ಕನಿಷ್ಠ ಅಗತ್ಯಗಳಿಗೆ ಹೋಲಿಸಿದರೆ ಇದರ ಪ್ರಮಾಣ ತುಂಬಾ ಕಡಿಮೆ. ಅಭಿವೃದ್ಧಿಯ ಸಮಸ್ಯೆಯೊಂದಿಗೆ ಆಡಳಿತ ವ್ಯವಸ್ಥೆ ಮತ್ತು ಮೂಲಭೂತ ಸೌಕರ್ಯಗಳು ಹಿಂದುಳಿದ ಪ್ರದೇಶಗಳಲ್ಲಿ ಇಲ್ಲದೆ ಇರುವುದು, ವ್ಯವಸ್ಥಾಪಕ ಮತ್ತು ಸಾಂಸ್ಥಿಕ

ಸಮಸ್ಯೆಗಳಿರುವುದು, ಹಣಕಾಸು ಸೋರಿಕೆ, ಮಧ್ಯವರ್ತಿಗಳು, ಗುತ್ತಿಗೆದಾರರು, ಭ್ರಷ್ಟಅಧಿಕಾರಿಗಳು ಮತ್ತು ಸರ್ಕಾರದ ಅಭಿವೃದ್ಧಿ ಕಾರ್ಯಕ್ರಮಗಳು (ಕಡಿಮೆ ಖರ್ಚಿನ ವಸತಿ ಸೌಕರ್ಯ, ಶಿಕ್ಷಣ, ಸಾರಿಗೆ, ಸಂಪರ್ಕ, ಸಾಲ ಸೌಲಭ್ಯಗಳು ಮತ್ತು ಸಹಾಯಧನ ಆಧಾರಿತ ಸಹಕಾರಿ ಸಾಲಗಳು) ವುಳ್ಳವರ (ಶ್ರೀಮಂತರ) ಪರವಾಗಿದ್ದುದ್ದು ಇದಕ್ಕೆ ಕಾರಣ.

ದೊಡ್ಡ ರೈತರು ಸ್ವತಃ ತಾವೇ ಸಾಗುವಳಿ ಮಾಡಲಾರಂಬಿಸಿ ಗೇಣಿದಾರರನ್ನು ದೂರತಳ್ಳಿರುವುದು ಹಾಗೂ ನೀರಾವರಿಯನ್ನು ಖಾಸಗಿಯವರು ನಿಯಂತ್ರಿಸುವುದು ಸಣ್ಣ ರೈತರ ಸಂಪನ್ಮೂಲಗಳು ಮತ್ತು ಸಾಲ ಸೌಲಭ್ಯಗಳ ಅವಕಾಶಗಳನ್ನು ಮಿತವಾಗಿಸಿವೆ. ಬಂಡವಾಳ ಆಧಾರಿತ ಕೈಗಾರಿಕೀಕರಣ ಮತ್ತು ನಗರೀಕರಣದಿಂದ ಕೃಷಿಯೇತರ ಉದ್ಯಮ ತೊಂದರೆಗೀಡಾಗಿದೆ. ಕೂಲಿ ಕಾರ್ಮಿಕರ ಸಂಖ್ಯೆ ಹೆಚ್ಚಾಗಿದೆ. ಗ್ರಾಮೀಣ ಕರಕುಶಲ ಕುಟುಂಬಗಳು ಒಕ್ಕಲೆದ್ದಿವೆ. ಸಾರ್ವಜನಿಕ ವಲಯದ ಕ್ಷೇತ್ರದಲ್ಲಿ ಸಾವಿರಾಟು ಕೋಟಿ ಬಂಡವಾಳ ವೆಚ್ಚ ಮಾಡಲಾಗಿದೆ. ಈ ವೆಚ್ಚ ನೀರಾವರಿ, ಕಬ್ಬಿಣ ಮತ್ತು ಉಕ್ಕು ಕಾರ್ಖಾನೆ ಸ್ಥಾಪನೆ, ರೈಲ್ವೆ ಮತ್ತು ವಿದ್ಯುತ್ ಯೋಜನೆಗಳ ಮೇಲೆ ವೆಚ್ಚ ಮಾಡಲಾಗಿದೆ. ಸ್ಥಿರ ಆಸ್ತಿಗಳಿಗಿಂತ ಇತರೆ ವೆಚ್ಚಗಳ ಮೇಲೆ ಇಲ್ಲಿ ಸಾಕಷ್ಟು ವೆಚ್ಚ ಮಾಡಲಾಗಿದೆ. ಯೋಜನೆ ಪ್ರಾರಂಭಿಸಲು ಮಾಡಿದ ವೆಚ್ಚ ಮತ್ತು ಯೋಜನೆ ಅಂತಿಮಗೊಳಿಸಲು ವಿಳಂಬವಾಗಿ ವೆಚ್ಚಗಳು ಹೆಚ್ಚಾಗುತ್ತವೆ. ಯೋಜನೆಯ ವಿಳಂಬಕ್ಕೆ ತಾಂತ್ರಿಕ ಮತ್ತು ಆಡಳಿತಾತ್ಮಕ ಕಾರಣಗಳು ಮುಖ್ಯವಾಗಿವೆ. ಇದು ಬೇಜವಾಬ್ದಾರಿ ರಾಜಕೀಯ ತೀರ್ಮಾನವೆನ್ನಬಹುದು. ಇವುಗಳ ಹಿನ್ನೆಲೆಯಲ್ಲಿ ಭಾರತದ ಆರ್ಥಿಕ ಬೆಳವಣಿಗೆಯ ಸಮಸ್ಯೆಗಳೇನು? ಇದರಲ್ಲಿ ರಾಜಕೀಯ ಅಧಿಕಾರದ ಪಾತ್ರವೇನು? ಎಂಬ ಅಂಶಗಳ ಮೇಲೆ ಇಲ್ಲಿ ಹೆಚ್ಚು ಗಮನ ಹರಿಸಲಾಗಿದೆ.[೩]

ಭಾರತೀಯ ಆರ್ಥಿಕತೆ ೧೯೪೭–೯೨, ವಾಲ್ಯೂಮ್ ೧ರಲ್ಲಿ ಸಂಘಟಿತ ಮತ್ತು ಅಸಂಘಟಿತ ಹಣಕಾಸು ವಲಯಗಳ ಕಾರ್ಯ ಮತ್ತು ಸಮಸ್ಯೆಗಳನ್ನು ಚರ್ಚಿಸಲಾಗಿದೆ. ಸಾಂಪ್ರದಾಯಕವಾಗಿ ಸ್ಥಳೀಯ ಲೇವಾದೇವಿಗಾರರು ಅಧಿಕ ಬಡ್ಡಿದರದಲ್ಲಿ ಸಾಲಗಳನ್ನು ನೀಡುತ್ತಿದ್ದು, ಸಾಗುವಳಿದಾರರನ್ನು ಶೋಷಣೆ ಮಾಡಲಾಗುತ್ತಿತ್ತು. ಸಾಗುವಳಿದಾರರ ಅಗತ್ಯಗಳನ್ನು ಪೂರೈಸುವ ಅಧಿಕೃತ ಪ್ರಯತ್ನಗಳು ೧೭೯೩ರಲ್ಲಿ ತಕ್ಕಾವಿ ಸಾಲ ವ್ಯವಸ್ಥೆಯೊಂದಿಗೆ ಪ್ರಾರಂಭವಾದವು. ಸ್ಥಳೀಯ ವ್ಯಾಪಾರಸ್ಥರ ಮತ್ತು ಲೇವಾದೇವಿಗಾರರ ಶೋಷಣೆ ತಪ್ಪಿಸಲು ೧೯೦೪ರಲ್ಲಿ ಸಹಕಾರಿ ತತ್ವದ ಮೇಲೆ ಸಾಗುವಳಿದಾರರ ಕೃಷಿ ಸಾಲ ಅಗತ್ಯಗಳನ್ನು ಪೂರೈಸಲು ಸಹಕಾರ ಚಳುವಳಿ ಪ್ರಾರಂಭವಾಗಿ ಸಹಕಾರಿ ಸಾಲ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದವು. ಹಾಗೆ ೧೯೬೯ರಲ್ಲಿ ಆದ್ಯತಾ ವಲಯದ ಹಣಕಾಸು ಬೇಡಿಕೆಯನ್ನು ಪೂರೈಸಲು ಅನುಕೂಲವಾಗುವಂತೆ ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಣಗೊಳಿಸಲಾಯಿತು. ಗ್ರಾಮೀಣ ಪ್ರದೇಶದ ಸಣ್ಣ ಉದ್ಯಮಗಳು ಕರಕುಶಲ ಕುಟುಂಬಗಳಿಗೆ ಬಡವರಿಗೆ ಹಣಕಾಸನ್ನು ಪೂರೈಸಲು ೧೯೭೫ರಲ್ಲಿ ಪ್ರಾದೇಶಿಕ ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳು ಸ್ಥಾಪನೆಯಾದವು. ಅದೇ ರೀತಿ ಕೃಷಿ ಮತ್ತು ಕೃಷಿಯೇತರ ಉದ್ಯಮಗಳ ಅಭಿವೃದ್ಧಿಗೆ ಪೂರಕವಾದ ನೆರವನ್ನು ಒದಗಿಸಲು

ಹಾಗೂ ಸಮಗ್ರ ಗ್ರಾಮೀಣಾಭಿವೃದ್ಧಿ ಸಾಧನೆಯ ಉದ್ದೇಶದಿಂದ ೧೯೮೨ರಲ್ಲಿ ಸಾಂಸ್ಥಿಕ ಹಣಕಾಸು ವ್ಯವಸ್ಥೆಯ ಸುಧಾರಣೆ ಮತ್ತು ಈ ವ್ಯವಸ್ಥೆಯ ಮೇಲ್ವಿಚಾರಣೆಯ ಹಿನ್ನೆಲೆಯಲ್ಲಿ ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಬಾರ್ಡ್ ಸ್ಥಾಪನೆಯಾಯಿತು. ಈ ಹಿನ್ನೆಲೆಯಲ್ಲಿ ನಿರ್ದಿಷ್ಟ ಉದ್ದೇಶದೊಂದಿಗೆ ಗ್ರಾಮೀಣ ಪ್ರದೇಶದ ಕೃಷಿ ಮತ್ತು ಕೃಷಿಯೇತರ ಸಾಲ ಅಗತ್ಯಗಳನ್ನು ಪೂರೈಸಲು ಸಾಂಸ್ಥಿಕ ಹಣಕಾಸು ವ್ಯವಸ್ಥೆ ಸ್ಥಾಪನೆಯಾಯಿತು. ಈ ವ್ಯವಸ್ಥೆ ಪ್ರಸ್ತುತ ಜಾಗತೀಕರಣ, ಖಾಸಗೀಕರಣದ ಹಿನ್ನೆಲೆಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ಹಣಕಾಸು ಸಂಸ್ಥೆಗಳು ಸ್ಥಾಪನೆಯಾದ ಉದ್ದೇಶದ ಪ್ರಕಾರ ಕಾರ್ಯನಿರ್ವಹಿಸುತ್ತಿವೆಯೇ? ಎಂಬುದನ್ನು ಪರೀಕ್ಷಿಸುವ ಪ್ರಯತ್ನವನ್ನು ಮಾಡುವ ಅಗತ್ಯವಿದೆ.[೧೪]

ಭಾರತದಲ್ಲಿ ಆರ್ಥಿಕವಾಗಿ ಸಮರ್ಥವಲ್ಲದ ಅತೀ ಸಣ್ಣ ಮತ್ತು ಭೂರಹಿತ ಕೃಷಿ ಕಾರ್ಮಿಕರ ಅಭಿವೃದ್ಧಿ ಸಂಸ್ಥೆಗಳನ್ನು ಸ್ಥಾಪಿಸಿ ಸಾಲ ಸೌಲಭ್ಯಗಳನ್ನು ಕಲ್ಪಿಸಿ, ಈ ವರ್ಗಗಳ ಆರ್ಥಿಕ ಸಾಮರ್ಥ್ಯವನ್ನು ಹೆಚ್ಚಿಸಲು ಪ್ರಯತ್ನಿಸಲಾಯಿತು. ಈ ನಿಟ್ಟಿನಲ್ಲಿ ವಿಶೇಷ ಎಸ್‌ಎಫ್‌ಡಿಎ ಸ್ಥಾಪಿಸಲಾಯಿತು. ಇದನ್ನು ಮುಂದೆ ಐ.ಆರ್.ಡಿ.ಪಿ. ಯೋಜನೆಯನ್ನಾಗಿ ತರಲಾಯಿತು. ಭೂಮಿಯಂತಹ ಉತ್ಪಾದಕ ಸಂಪನ್ಮೂಲ ಅಥವಾ ಉತ್ಪಾದಕ ಕೃಷಿಯೇತರ ಉದ್ಯೋಗಗಳ ಕೊರತೆಯಿಂದ ಬಹುತೇಕ ಭೂರಹಿತ ಕೃಷಿ ಕಾರ್ಮಿಕ ಕುಟುಂಬಗಳು ಮತ್ತು ಅತೀ ಸಣ್ಣ ಸಾಗುವಳಿ ಕುಟುಂಬಗಳು ಅತ್ಯಂತ ಕೆಳಮಟ್ಟದ ಬದುಕನ್ನು ನಡೆಸುತ್ತಿವೆ ಎಂದು ಚರ್ಚಿಸಿದ್ದಾರೆ.[೧೫] ಭಾರತದ ಬ್ಯಾಂಕಿಂಗ್ ಇತಿಹಾಸವನ್ನು ಕುರಿತು ಇಲ್ಲಿ ವಿವರಿಸಲಾಗಿದೆ. ಬ್ರಿಟೀಷರ ಕಾಲದಲ್ಲಿ ಸ್ವಾತಂತ್ರ್ಯ ನಂತರದಲ್ಲಿ ಭಾರತದ ಬಹು ಹಣಕಾಸು ಸಂಸ್ಥೆಯ ವಿಧಾನ, ರಾಷ್ಟ್ರೀಕರಣದ ಯುಗ, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಹಿನ್ನೆಲೆ ಉದ್ದೇಶಗಳನ್ನು ವಿವರಿಸುತ್ತಾ ಅವದ್ ಗ್ರಾಮೀಣ ಬ್ಯಾಂಕ್ ಲಕ್ನೋದ ಗ್ರಾಮೀಣ ಬ್ಯಾಂಕ್‌ನ್ನು ಅಧ್ಯಯನವಾಗಿಟ್ಟುಕೊಂಡು ಈ ಬ್ಯಾಂಕಿನ ನಿರ್ದೇಶಕ ಮಂಡಳಿ, ಸಿಬ್ಬಂದಿ ಸಾಮರ್ಥ್ಯ, ಠೇವಣಿ ಸಂಗ್ರಹ ವಿಧಾನ ಈ ಬ್ಯಾಂಕಿನ ಸಾಧನೆ ಸಮಸ್ಯೆಗಳನ್ನು ವಿವರಿಸಲಾಗಿದೆ. ಈ ಬ್ಯಾಂಕಿನ ಹಿನ್ನೆಲೆಯಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಸಾಧನೆಯನ್ನು ತಿಳಿಸಲಾಗಿದೆ. ಅಂದರೆ ೧೯೭೫ರಲ್ಲಿ ಒಂದು ಗ್ರಾಮೀಣ ಬ್ಯಾಂಕ್ ಇದ್ದದ್ದು ೨೦೦೨ರ ಹೊತ್ತಿಗೆ ೧೯೬ಕ್ಕೆ ಹೆಚ್ಚಿ ೧೪ ಸಾವಿರಕ್ಕೂ ಹೆಚ್ಚು ಶಾಖೆಗಳು ಪ್ರಾರಂಭವಾದವು ಎನ್ನಲಾಗಿದೆ. ಈ ಅಧ್ಯಯನ ಕೇವಲ ಪರಿಮಾಣಾತ್ಮಕ ಪ್ರಗತಿಯನ್ನು ತಿಳಿಸುತ್ತದೆ ವಿನಾಃ ಗ್ರಾಮೀಣ ಬ್ಯಾಂಕುಗಳ ಸಾಧನೆಯನ್ನು ಗುಣಾತ್ಮಕ ಪ್ರಗತಿ ಹಿನ್ನೆಲೆಯಲ್ಲಿ ವಿವರಿಸದಿರುವುದು ಕಂಡುಬರುತ್ತದೆ. ಅಂದರೆ ಯಾವ ಉದ್ದೇಶಕ್ಕೆ ಸಾಲ ನೀಡಲಾಗಿದೆ. ಸಾಲ ಪಡೆದವರ ಆರ್ಥಿಕ ಹಿನ್ನೆಲೆ ಏನು? ಸಾಲದ ಬಳಕೆ ಕೃಷಿ, ಕೃಷಿಯೇತರ ಅಥವಾ ಉತ್ಪಾದನೆ ಮತ್ತು ಅನುಭೋಗಕ್ಕೆ ಬಳಕೆಯಾಗಿದೆಯಾ ಎಂಬ ವಿಶ್ಲೇಷಣೆಗಳು ಕಂಡು ಬಂದಿರುವುದಿಲ್ಲ. ಈ ಅಂಶಗಳ ಆಧಾರದ ಮೇಲೆ ಅಪೆಕ್ಸ್ ಬ್ಯಾಂಕುಗಳ ಸಾಲ ನೀತಿಗಳು, ಧೋರಣೆಗಳು, ಸಾಲಸೌಲಭ್ಯಗಳಿಂದ ವಂಚಿತವಾದ ಜನತೆ

ಯಾರು? ಇವರ ಅಗತ್ಯಗಳೇನು? ಈ ಅಗತ್ಯಗಳ ಪೂರೈಕೆಯಲ್ಲಿ ಹಣಕಾಸು ಸಂಸ್ಥೆಗಳ ಮನೋಭಾವ ಹೇಗಿರಬೇಕು? ಎಂಬ ಅಂಶಗಳು ಅಧ್ಯಯನದಲ್ಲಿ ಕಂಡುಬಂದಿರುವುದಿಲ್ಲ.[೧೬]

ಗ್ರಾಮೀಣ ಪ್ರದೇಶದಲ್ಲಿ ಯಾವ ಹಣಕಾಸು ಸಂಸ್ಥೆಗಳು ಹಣಕಾಸು ಪೂರೈಕೆಯಲ್ಲಿ ತೊಡಗಿವೆ, ಅವುಗಳ ಸಂಖ್ಯೆ ಎಷ್ಟು? ಕಛೇರಿಗಳೆಷ್ಟು? ಸದಸ್ಯತ್ವದ ಸಂಖ್ಯೆ ಎಷ್ಟು? ಬೇರೆ ಬೇರೆ ರಾಜ್ಯಗಳಲ್ಲಿ ವಿತರಿಸಿದ ಸಾಲವೆಷ್ಟು? ಎಂಬ ಮಾಹಿತಿಗಳನ್ನು ಪ್ರಸ್ತಾಪಿಸಲಾಗಿದೆ. ಉದಾ: ಪ್ರಾಥಮಿಕ ಕೃಷಿ ಸಹಕಾರ ಸಂಸ್ಥೆಗಳು ೧೯೫೧-೫೨ರಲ್ಲಿ ೧.೧೦ ಲಕ್ಷದಷ್ಟು ಇದ್ದದ್ದು ೧೯೫೯-೬೦ರಲ್ಲಿ ೨.೦೩ರಷ್ಟಾಯಿತು. ಹಾಗೆಯೇ ಸದಸ್ಯತ್ವ ಕ್ರಮವಾಗಿ ೪೭.೭೬ ಲಕ್ಷದಷ್ಟಿದ್ದು ೧೯೫೯-೬೦ರಲ್ಲಿ ೧೪೪.೪೩ರಕ್ಕೆ ಹೆಚ್ಚಿತು. ಇದು ೧೯೮೪-೮೫ರಲ್ಲಿ ೬೯೧.೮೨ ಲಕ್ಷಕ್ಕೆ ಹೆಚ್ಚಾಯಿತು. ಅದೇ ರೀತಿ ವಾಣಿಜ್ಯ ಬ್ಯಾಂಕುಗಳ ಕಛೇರಿಗಳು ೧೯೬೮-೬೯ರಲ್ಲಿ ಗ್ರಾಮೀಣ ಪ್ರದೇಶದಲ್ಲಿ ೧೮೩೨ರಷ್ಟಿದ್ದು, ೧೯೮೪-೮೫ರಲ್ಲಿ ೩೦೩೩೬ರಕ್ಕೆ ಹೆಚ್ಚಿತು. ಅದೇ ರೀತಿ ಕೇಂದ್ರ ಸಹಕಾರಿ ಬ್ಯಾಂಕುಗಳ ಕಛೇರಿಗಳ ಸಂಖ್ಯೆ ೧೯೫೯-೬೦ರಲ್ಲಿ ೧೨೭೭ರಷ್ಟಿದ್ದು, ೧೯೮೧-೮೨ರಲ್ಲಿ ೬೯೧ಕ್ಕೆ ಹೆಚ್ಚಾಯಿತು. ಹಾಗ್ಗೆ ರಾಜ್ಯ ಸಹಕಾರಿ ಬ್ಯಾಂಕುಗಳು ಭೂ ಅಭಿವೃದ್ಧಿ ಬ್ಯಾಂಕುಗಳ ಸಂಖ್ಯೆ ಸಹಾ ಹೆಚ್ಚಾಯಿತು ಎನ್ನಲಾಗಿದೆ. ೧೯೭೦ ರಿಂದ ೧೯೮೪ರವರೆಗೆ ಪ್ರಾಥಮಿಕ ಸಹಕಾರ ಸಂಘಗಳು ವಿವಿಧ ರಾಜ್ಯಗಳಲ್ಲಿ ವಿತರಿಸಿದ ಸಾಲದ ಬಗ್ಗೆ ವಿವರ ನೀಡಲಾಗಿದ್ದು, ಈ ವಿವರಗಳಲ್ಲಿ ಸಾಲ ನೀಡಿದ ರಾಜ್ಯಗಳ ಸ್ಥಾನದಲ್ಲಿ ಕರ್ನಾಟಕ ೭ನೇ ಸ್ಥಾನದಲ್ಲಿದೆ ಎಂದು ಹೇಳಲಾಗಿದೆ. ಹೀಗೆ ಹಣಕಾಸು ಸಂಸ್ಥೆಗಳ ಸಾಧನೆ ಮತ್ತು ಬೆಳವಣಿಗೆಯನ್ನು ಬ್ಯಾಂಕುಗಳ ಶಾಖೆಗಳ ವಿಸ್ತರಣೆಗೆ ಸಂಬಂಧಿಸಿದಂತೆ ಹೆಚ್ಚು ಗಮನ ಹರಿಸಿರುವುದು ತಿಳಿದುಬರುತ್ತದೆ. ಆದರೆ ಸಾಲ ಪಡೆದವರು ಯಾರು? ಅವರ ಆರ್ಥಿಕ ಹಿನ್ನೆಲೆ ಏನು? ಪಡೆದ ಸಾಲ ಯಾವ ಉದ್ದೇಶಕ್ಕೆ ಬಳಕೆಯಾಗಿದೆ? ವಿತರಿಸಿದ ಸಾಲದ ಪರಿಣಾಮವೇನು? ಎಂಬ ಗುಣಾತ್ಮಕ ಅಂಶಗಳ ಬಗ್ಗೆ ಚರ್ಚಿಸಿರುವುದು ಕಂಡು ಬಂದಿರುವುದಿಲ್ಲ.[೧೭]

ಭಾರತದ ಸಂಘಟಿತ ಹಣಕಾಸು ವ್ಯವಸ್ಥೆ ೧೯೯೧ರ ಹಣಕಾಸು ಸುಧಾರಣೆ ಗಿಂತ ಹಿಂದೆ ಗ್ರಾಮೀಣ ಹಣಕಾಸಿನ ಅಗತ್ಯಗಳನ್ನು ಪೂರೈಸುತ್ತಿತ್ತು. ಆದರೆ ೧೯೯೧ರ ಹಣಕಾಸು ಸುಧಾರಣೆ ನಂತರ ಸಾಂಸ್ಥಿಕ ಹಣಕಾಸು ವ್ಯವಸ್ಥೆ ಗ್ರಾಮೀಣ ಪ್ರದೇಶವನ್ನು ನಿರ್ಲಕ್ಷಿಸಿತು. ಸಣ್ಣ ಮೊತ್ತದ ಸಾಲ ನೀಡಲು ಬ್ಯಾಂಕುಗಳು ಹಿಂಜರಿದವು. ವಾಣಿಜ್ಯ ಬ್ಯಾಂಕುಗಳು ತಮ್ಮ ಶಾಖೆಗಳನ್ನು ಕಡಿತಗೊಳಿಸಿದವು.[೧೮] ಗ್ರಾಮೀಣ ಹಣಕಾಸು ವ್ಯವಸ್ಥೆಯು ಬಹುರೂಪ ಪದ್ದತಿಯಿಂದ ಕೂಡಿದೆ. ಅಂದರೆ ಇದನ್ನು ಔಪಚಾರಿಕ ಹಣಕಾಸು ವ್ಯವಸ್ಥೆ ಎಂದು ಸಹ ಕರೆಯಲಾಗುತ್ತಿದೆ. ೧.೦೯ ಲಕ್ಷ ಪ್ರಾಥಮಿಕ ಸಹಕಾರ ಸಂಘಗಳು, ೩೫೦ ರಾಜ್ಯ/ಕೇಂದ್ರ ಸಹಕಾರಿ ಬ್ಯಾಂಕುಗಳು, ಎನ್.ಜಿ.ಓ ಮತ್ತು ಸ್ವಯಂ ಸೇವಾ ಸಂಸ್ಥೆಗಳು, ೨೦ಕ್ಕೂ ಹೆಚ್ಚು ಸಣ್ಣ ಹಣಕಾಸು ಸಂಸ್ಥೆಗಳು ಮೂರು ದಶಲಕ್ಷ ಮಹಿಳಾ ಸ್ವಸಹಾಯ ಸಂಘಗಳು ಮತ್ತು ಲೇವಾದೇವಿಗಾರರು, ವ್ಯಾಪಾರಸ್ಥರು ಈ ಬಹುರೂಪ ಹಣಕಾಸು ಪದ್ಧತಿಯಲ್ಲಿ ಇದ್ದಾರೆ. ಹಾಗೆ ಗ್ರಾಮೀಣ ಬ್ಯಾಂಕುಗಳು ೧೪೯೦೦ ಶಾಖೆಗಳನ್ನು

ಹೊಂದಿದ್ದು ೬೮೨೦೦ ಸಿಬ್ಬಂದಿ ಕಾರ್ಯ ನಿರ್ವಹಿಸುತ್ತಿದ್ದು, ೬೩೦೦೦ ಕೋಟಿ ಮುಂಗಡಗಳನ್ನು ನೀಡಲಾಗಿದ್ದು, ೭೨:೬೩ರಷ್ಟು ಸಾಲ ಠೇವಣಿ ಅನುಪಾತ ಹೊಂದಿದ್ದು, ೪೫ ಲಕ್ಷ ಕಿಸಾನ್ ಕ್ರೆಡಿಟ್ ಕಾರ್ಡ್‌ಗಳ ಮೂಲಕ ೧೧೨೬೫ ಕೋಟಿಯಷ್ಟು ಮುಂಗಡ ವಿತರಿಸಲಾಗಿದೆ ಎಂದು ವಿವರಗಳನ್ನು ನೀಡಲಾಗಿದೆ. ಆದರೆ ಬಹು ಹಣಕಾಸು ವ್ಯವಸ್ಥೆಯ ಮುಖ್ಯ ಭಾಗವಾಗಿ ಸಾರ್ವಜನಿಕ ಹಣಕಾಸು ಸಂಸ್ಥೆಯಾಗಿ ಗ್ರಾಮೀಣ ಬ್ಯಾಂಕುಗಳು ವಿತರಿಸಿದ ಮುಂಗಡಗಳು ಗ್ರಾಮೀಣ ಭಾಗದ ಯಾವ ಜನತೆಗೆ ತಲುಪಿವೆ. ಈ ಮುಂಗಡಗಳ ಬಳಕೆ ಮತ್ತು ಗುಣಾತ್ಮಕ ಪರಿಣಾಮಗಳೇನು? ಎಂಬುದನ್ನು ವಿವರಿಸಿರುವ ಅಂಶಗಳು ಇಲ್ಲಿ ಕಂಡು ಬಂದಿರುವುದಿಲ್ಲ.[೧೯]

ಲಾಭಗಳಿಕೆಯನ್ನು ಉದ್ದೇಶವಾಗಿರಿಸಿಕೊಂಡಿರುವ ಸಾಲ ನೀಡುವ ಹಣಕಾಸು ಸಂಸ್ಥೆಗಳು ಮುಖ್ಯವಾಗಿ ವಾಣಿಜ್ಯ ಬ್ಯಾಂಕುಗಳು ಗ್ರಾಮೀಣ ಭಾಗಗಳಲ್ಲಿ ತನ್ನ ಶಾಖೆಗಳನ್ನು ತೆರೆಯಲು ಇಚ್ಛಿಸುವುದಿಲ್ಲ. ಇದರಿಂದ ಸ್ಥಳೀಯ ಲೇವಾದೇವಿಗಾರರ ಏಕಸ್ವಾಮ್ಯತೆ ಹೆಚ್ಚಿ, ಅಧಿಕ ಬಡ್ಡಿದರದಲ್ಲಿ ಸಾಲ ನೀಡಿ ಗ್ರಾಮೀಣ ಬಡವರನ್ನು ಶೋಷಣೆ ಮಾಡುವ ಸಾಧ್ಯತೆ ಹೆಚ್ಚುವುದು. ಗ್ರಾಮೀಣ ಭಾಗದಲ್ಲಿ ವಾಣಿಜ್ಯ ಬ್ಯಾಂಕುಗಳ ಶಾಖೆಗಳ ಸಂಖ್ಯೆ ೨೦೦೫ರ ಹೊತ್ತಿಗೆ ೩೦೦೦೦ ಗಳಿಗೆ ಕಡಿಮೆಯಾಯಿತು. ೧೯೮೦ರಲ್ಲಿ ಕೇಂದ್ರ ಬ್ಯಾಂಕ್ ನಿರ್ದೇಶಿತ ಸಾಲ ನೀತಿಯನ್ನುರಚಿಸಿ ೧೯೮೫ರ ಹೊತ್ತಿಗೆ ಆದ್ಯತಾ ವಲಯಗಳಿಗೆ ಶೇಕಡಾ ೪೦ರಷ್ಟು ಸಾಲ ಪೂರೈಸಬೇಕು, ಇದರಲ್ಲಿ ಶೇಕಡಾ ೨೫ರಷ್ಟು ಸಾಲ ಸೌಲಭ್ಯ ದುರ್ಬಲ ವರ್ಗಗಳಿಗೆ ವಿತರಣೆಯಾಗಬೇಕೆಂದು ತಿಳಿಸಿತು. ಆದರೆ ೧೯೯೧ರ ನಂತರ ಹಲವು ಅಧ್ಯಯನಗಳು ಗ್ರಾಮೀಣ ಬಡವರ ಹಣಕಾಸು ಸೌಲಭ್ಯಗಳು ಕಡಿಮೆಯಾಗಿದೆ ಎಂಬುದನ್ನು ದೃಢಪಡಿಸಿದೆ. ಒಟ್ಟು ಬ್ಯಾಂಕುಗಳಲ್ಲಿ ಗ್ರಾಮೀಣ ಪ್ರದೇಶದ ಬ್ಯಾಂಕುಗಳ ಪಾಲು ೧೯೯೦ರಲ್ಲಿ ಶೇಕಡಾ ೫೮ರಷ್ಟಿದ್ದು, ೨೦೦೦ರದ ಹೊತ್ತಿಗೆ ಇದು ಶೇಕಡಾ ೫೦ ತಕ್ಕೆ ಕಡಿಮೆಯಾಯಿತು. ಅದೇ ರೀತಿ ಒಟ್ಟು ಬ್ಯಾಂಕು ಹಣಕಾಸಿನಲ್ಲಿ ಗ್ರಾಮೀಣ ಭಾಗಗಳಿಗೆ ಪೂರೈಕೆಯಾದ ಹಣಕಾಸಿನ ಪಾಲು ೧೯೮೮ರಲ್ಲಿ ಶೇಕಡಾ ೧೫.೩ರಷ್ಟಿದ್ದದ್ದು ೨೦೦೦ರದ ಹೊತ್ತಿಗೆ ಶೇಕಡಾ ೧೦.೬ರಕ್ಕೆ ಕಡಿಮೆಯಾಯಿತು. ಗ್ರಾಮೀಣ ಭಾಗದ ಅತೀ ಸಣ್ಣ ರೈತರು ಕೃಷಿ ಚಟುವಟಿಕೆಗಳಲ್ಲಿ ಆಧುನಿಕ ತಂತ್ರಜ್ಞಾನವನ್ನು ಬಳಕೆ ಮಾಡಿಕೊಳ್ಳಲು ಸಾಧ್ಯವಾಗದೇ ಇರುವುದಕ್ಕೆ ಹಣಕಾಸಿನ ತೊಂದರೆಯೇ ಮುಖ್ಯ ಕಾರಣ ಎನ್ನಲಾಗಿದೆ. ಈ ಹಿನ್ನೆಲೆಯಲ್ಲಿ ಅನೇಕ ಅಧ್ಯಯನಗಳು ಮಹಿಳಾ ಸ್ವಸಹಾಯ ಸಂಘಗಳ ಮೂಲಕ ನಿರ್ವಹಿಸಲ್ಪಡುವ ಸಣ್ಣ ಹಣಕಾಸು ಕಾರ್ಯಕ್ರಮ ಸಾಂಸ್ಥಿಕ ಹಣಕಾಸು ವ್ಯವಸ್ಥೆಗೆ ಪರ್ಯಾಯವಾಗಿ ಕಾರ್ಯ ನಿರ್ವಹಿಸುತ್ತದೆ ಎನ್ನಲಾಗಿದೆ.[೨೦]

ಭಾರತದ ಆರ್ಥಿಕತೆಯಲ್ಲಿ ಕೃಷಿ ಹಲವು ದೃಷ್ಟಿಕೋನಗಳಿಂದ ಮಹತ್ವವಾದುದು. ಹೆಚ್ಚುತ್ತಿರುವ ಜನಸಂಖ್ಯೆಗೆ ಆಹಾರ ಪೂರೈಸುವುದು, ಕೈಗಾರಿಕೆಗಳಿಗೆ ಬೇಕಾದ ಕಚ್ಚಾಸಾಮಗ್ರಿಗಳ ಪೂರೈಕೆ, ಕೃಷಿ ಮತ್ತು ಕೃಷಿಯೇತರ ಸರಕುಗಳಲ್ಲಿರಪ್ತು ಹಾಗೂ ಮುಖ್ಯವಾಗಿ ಉದ್ಯೋಗವಕಾಶಗಳ ಸೃಷ್ಟಿ ಮತ್ತು ಬಡತನ ನಿರ್ಮೂಲನೆಯಲ್ಲಿ ಕೃಷಿ ವಲಯದ ಪಾತ್ರ ದೊಡ್ಡದು. ಆದರೆ ಕೃಷಿ ಕ್ಷೇತ್ರದ ಬೆಳವಣಿಗೆಗೆ

ಬೇಕಾದ ಪೂರಕ ಪ್ರಯತ್ನಗಳನ್ನು ಸರ್ಕಾರ ಮಾಡಬೇಕಾಗಿದೆ. ಸಾಲ ಸೌಲಭ್ಯಗಳ ಪೂರೈಕೆ, ನೀರಾವರಿ ವಿಸ್ತರಣೆ, ತಂತ್ರಜ್ಞಾನ ಸುಧಾರಣೆ ಇತ್ಯಾದಿ.[೨೧]

ಸಾಂಸ್ಥಿಕ ಹಣಕಾಸು ಸಂಸ್ಥೆಗಳ ಸಾಲ ನೀಡಿಕೆ ಗಣನೀಯವಾಗಿ ಹೆಚ್ಚಿದ್ದು, ೧೯೫೧ರಲ್ಲಿ ಶೇಕಡಾ ೭.೬ರಷ್ಟಿದ್ದದ್ದು ೧೯೭೦-೭೧ರಲ್ಲಿ ಶೇಕಡಾ ೩೧.೭ತಕ್ಕೆ ಹೆಚ್ಚಿತು. ಅದೇ ರೀತಿ ಸಾಂಸ್ಥಿಕೇತರ ಹಣಕಾಸು ಸಂಸ್ಥೆಗಳ ಸಾಲ ಗಣನೀಯವಾಗಿ ಕಡಿಮೆಯಾಯಿತು. ೧೯೫೧ರಲ್ಲಿ ಶೇಕಡಾ ೯೨.೪ರಷ್ಟಿದ್ದು ೧೯೭೧ರ ಹೊತ್ತಿಗೆ ೬೮.೩ರಕ್ಕೆ ಕಡಿಮೆಯಾಯಿತು. ಗ್ರಾಮೀಣ ಹಣಕಾಸಿನ್ನು ಪೂರೈಸುವಾಗ ನಿರುದ್ಯೋಗ, ಅರೆನಿರುದ್ಯೋಗ, ಬಡತನ, ಅನಕ್ಷರತೆ ಹಾಗೂ ಕರಕುಶಲ ಕುಟುಂಬಗಳನ್ನು ಪರಿಗಣಿಸಬೇಕು. ಸಾಲಸೌಲಭ್ಯ ಕಲ್ಪಿಸುವಾಗ ಗ್ರಾಮೀಣ ಜನತೆಯ ಅಗತ್ಯಗಳೇನು?[೨೨]

ಬ್ಯಾಂಕಿನ ನಿವ್ವಳ ಸಾಲಗಳಲ್ಲಿ ಶೇಕಡಾ ೧೮ರಷ್ಟು ಕೃಷಿ ಕ್ಷೇತ್ರಕ್ಕೆ ಪೂರೈಕೆಯಾಗಬೇಕು. ಕೃಷಿಗೆ ನಿರಂತರವಾಗಿ ಹಣಕಾಸು ಪೂರೈಕೆಯಾಗುವಂತೆ ಮಾಡಲು ನಬಾರ್ಡ್ ೧೯೯೮ರಲ್ಲಿ ಕಿಸಾನ್ ಕ್ರೆಡಿಟ್ ಕಾರ್ಡ್ ಯೋಜನೆಯನ್ನು ಪ್ರಾರಂಭಿಸಿತು. ಈ ಯೋಜನೆಯನ್ನು ಇತ್ತೀಚಿನ ವರ್ಷಗಳ ಗಮನಾರ್ಹವಾದಂತಹ ಬೆಳವಣಿಗೆ ಎನ್ನಲಾಗಿದೆ. ಹಾಗೆ ನಿರಂತರ ಕೃಷಿ ಸಾಲ ಸೌಲಭ್ಯ ಪೂರೈಕೆಯನ್ನು ಖಾತರಿಪಡಿಸಿಕೊಳ್ಳಲು ವಿಶೇಷ ಕೃಷಿ ಸಾಲ ಯೋಜನೆಯನ್ನು ಬ್ಯಾಂಕುಗಳು ರೂಪಿಸಬೇಕಾಗುತ್ತದೆ. ಈ ಯೋಜನೆಯಡಿ ಪೂರೈಕೆಯಾಗುವ ಸಾಲಸೌಲಭ್ಯಗಳನ್ನು ಆರ್.ಬಿ.ಐ ನೇರವಾಗಿ ಮೇಲುಸ್ತುವಾರಿಯನ್ನು ಮಾಡುವುದು. ಈ ಯೋಜನೆಯಡಿಯಲ್ಲಿ ಸಾರ್ವಜನಿಕ ಬ್ಯಾಂಕುಗಳು ವಿತರಿಸಿದ ಸಾಲಗಳು ಈಗಿವೆ. ೧೯೯೬-೯೭ರಲ್ಲಿ ಶೇಕಡಾ ೮೯ರಷ್ಟು ಅಂದರೆ ೧೪೨೫೩ ಕೋಟಿ ಸಾಲ ವಿತರಿಸಲಾಗಿದೆ. ಹಾಗೆ ಕ್ರಮವಾಗಿ ೧೯೯೭-೯೮ರಲ್ಲಿ ೧೬೦೮೯ ಕೋಟಿ, ೧೯೯೮-೯೯ರಲ್ಲಿ ೧೮೫೦೪ ಕೋಟಿ, ೧೯೯೯-೨೦೦೦ರಲ್ಲಿ ೨೧೩೦೫ ಕೋಟಿ, ೨೦೦೦-೦೧ರಲ್ಲಿ ೨೪೮೯೩ ಕೋಟಿಯಷ್ಟು ಸಾಲ ವಿತರಿಸಲಾಗಿದೆ ಎನ್ನಲಾಗಿದೆ. ಈ ಯೋಜನೆ ಯಡಿಯಲ್ಲಿ ಕರ್ನಾಟಕ ೧೦೮೫೦ ಟ್ರಾಕ್ಟರ್ ಮತ್ತು ಪವರ್ ಟ್ರಿಲ್ಲರ್‌ಗಳು, ಉತ್ತರ ಪ್ರದೇಶ ೩೧೪೬೪೪, ಆಂಧ್ರ ಪ್ರದೇಶ ೭೬೬೭೨, ತಮಿಳುನಾಡು ೬೬೦೨೪ ಟ್ರಾಕ್ಟರ್ ಮತ್ತು ಟ್ರಿಲ್ಲರ್‌ಗಳನ್ನು ಖರೀದಿಸಲು ಸಾಲ ಸೌಲಭ್ಯ ಒದಗಿಸಲಾಗಿದೆ.[೨೩]

ಸಹಕಾರಿ ಬ್ಯಾಂಕುಗಳು ಮತ್ತು ಗ್ರಾಮೀಣ ಬ್ಯಾಂಕುಗಳ ಸಾಧನೆ ಉತ್ತಮವಾಗಿದೆ. ಆದರೆ ಸಾರ್ವಜನಿಕ ಬ್ಯಾಂಕುಗಳು ಮತ್ತು ಖಾಸಗಿ ಬ್ಯಾಂಕುಗಳು ಆಧ್ಯತಾ ವಲಯಕ್ಕೆ ನಿಗದಿತ ಪ್ರಮಾಣದಲ್ಲಿ ಸಾಲ ಸೌಲಭ್ಯ ಕಲ್ಪಿಸಿಲ್ಲ. ೨೦೦೯ತಕ್ಕೆ ವಿಶೇಷ ಸಾಲ ಯೋಜನೆಯಡಿ ಸಾರ್ವಜನಿಕ ಬ್ಯಾಂಕುಗಳು ೨.೧೭ ಲಕ್ಷ ಕೋಟಿಯಷ್ಟು ಸಾಲ ನೀಡುವಂತೆ ಟಾರ್ಗೆಟನ್ನು ನಿಗದಿಗೊಳಿಸಲಾಗಿತ್ತು. ಆದರೆ ವಿತರಿಸಿದ ಸಾಲದ ಮೊತ್ತ ೯೦೦೨೩ ಕೋಟಿಯಷ್ಟು ಮಾತ್ರ. ಹಾಗೆ ಖಾಸಗಿ ಬ್ಯಾಂಕುಗಳಿಗೆ ೬೨೩೫೨ ಕೋಟಿಯಷ್ಟು ಸಾಲ ವಿತರಿಸಲು ಗುರಿಯನ್ನು ನೀಡಲಾಗಿತ್ತು. ಆದರೆ ವಿತರಿಸಿದ ಸಾಲದ ಮೊತ್ತ ೩೦೦೯೨ ಕೋಟಿ ಮಾತ್ರ.[೨೪]

ಕೃಷಿ ಮತ್ತು ಪೂರಕ ಚಟುವಟಿಕೆಗಳ ಸವಾಲುಗಳು ಎಂಬ ಶೀರ್ಷಿಕೆಯಡಿ ಹಣಕಾಸು ಸಮಿತಿಯ ವರಧಿಯ ಪ್ರಕಾರ ಶೇಕಡಾ ೭೩ರಕ್ಕೂ ಹೆಚ್ಚು ರೈತ ಕುಟುಂಬಗಳು ಸಾಂಸ್ಥಿಕ ಹಣಕಾಸು ಸಾಲ ಮೂಲಗಳಿಂದ ವಂಚಿತರಾಗಿದ್ದಾರೆ. ಇದು ಕೃಷಿ ಮತ್ತು ಪೂರಕ ಚಟುವಟಿಕೆಗಳ ಮುಖ್ಯ ಸವಾಲಾಗಿರುತ್ತದೆ. ಹಾಗೆ ಗ್ರಾಮೀಣ ಪ್ರದೇಶಗಳಲ್ಲಿ ಕೃಷಿಯೇತರ ಚಟುವಟಿಕೆಗಳಾದ ಕೃಷಿ ಉತ್ಪನ್ನಗಳ ಸಂಸ್ಕರಣೆ, ತೋಟಗಾರಿಕೆ ಮತ್ತು ಕೋಳಿ ಸಾಕಾಣಿಕೆ ಇತ್ಯಾದಿ ಉದ್ಯಮಗಳನ್ನು ಪ್ರೋತ್ಸಾಹಿಸಿ, ಬೆಳೆಸುವುದು ಸಹ ಅತೀ ಮುಖ್ಯವಾದ ಸವಾಲಾಗಿರುತ್ತದೆ.[೨೫]

**ಡೈರೆಕ್ಷನ್ ಇನ್ ಡೆವಲಪ್‌ಮೆಂಟ್**: ಇಂಪ್ರೂವಿಂಗ್ ಆಕ್ಸಸ್, ಪೈನಾನ್ಸ್ ಫಾರ್ ಇಂಡಿಯಾಸ್ ರೂರಲ್ ಪೂರ್ ಇಲ್ಲಿ ವಾಣಿಜ್ಯ ಬ್ಯಾಂಕುಗಳು, ಸಹಕಾರ ಬ್ಯಾಂಕುಗಳು, ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು, ಇತರೆ ಮಾನ್ಯತೆ ಪಡೆದ ಹಣಕಾಸು ಸಂಸ್ಥೆಗಳು ಹಾಗೂ ಸಾಂಸ್ಥಿಕೇತರ ವ್ಯವಸ್ಥೆಯಾದ ಸಣ್ಣ ಹಣಕಾಸು ಸಂಸ್ಥೆಗಳು, ಮಹಿಳಾ ಸ್ವಸಹಾಯ ಸಂಘಗಳು ಗ್ರಾಮೀಣ ಪ್ರದೇಶಕ್ಕೆ ಹಣಕಾಸು ಸೌಲಭ್ಯಗಳನ್ನು ಒದಗಿಸುತ್ತವೆ. ಇತ್ತೀಚೆಗೆ ಮುಖ್ಯವಾಗಿ ಭಾರತದಲ್ಲಿ ಸಾಂಸ್ಥಿಕ ವ್ಯವಸ್ಥೆಯ ಮೂಲಕ ಮತ್ತು ಸಾಂಸ್ಥಿಕೇತರ ವ್ಯವಸ್ಥೆಯ ಮೂಲಕ ಗ್ರಾಮೀಣ ಸಾಲಸೌಲಭ್ಯ ವ್ಯವಸ್ಥೆಯನ್ನು ಸುಧಾರಣೆಗೊಳಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ನಬಾರ್ಡ್ ಜಾರಿಗೆ ತಂದಿರುವ ಕಿಸಾನ್ ಸಾಲ ಪತ್ರ ಮುಖ್ಯ ಸಾಲ ಯೋಜನೆ ಆಗಿರುತ್ತದೆ. ಆದರೆ ಗ್ರಾಮೀಣ ಪ್ರದೇಶಗಳಲ್ಲಿ ಸಾಲ ಸೌಲಭ್ಯವನ್ನು ಒದಗಿಸುವಲ್ಲಿ ಸಾಂಸ್ಥಿಕ ಹಣಕಾಸು ವ್ಯವಸ್ಥೆಯ ವಿಫಲತೆಯಿಂದ ಸರ್ಕಾರೇತರ ಸ್ವಯಂ ಸಂಸ್ಥೆಗಳು ಗ್ರಾಮೀಣ ಸಾಲ ವಿತರಣೆಯನ್ನು ಸುಧಾರಿಸಲು ಪ್ರಯತ್ನಿಸಿದವು ಈ ಹಿನ್ನೆಲೆಯಲ್ಲಿ ಸಣ್ಣ ಹಣಕಾಸು ಸಂಸ್ಥೆಗಳು, ರಾಷ್ಟ್ರೀಯ ಮಹಿಳಾ ಕೋಶ ಮತ್ತು ಮಹಿಳಾ ಸ್ವಸಹಾಯ ಸಂಘಗಳು ಮುಖ್ಯ ಪಾತ್ರವಹಿಸಿವೆ.[೨೬] ಶೇಕಡಾ ೮೭ರಷ್ಟು ಅತೀ ಸಣ್ಣ ರೈತರು ತಮ್ಮ ಸಾಲ ಖಾತೆಗಳನ್ನು ಹೊಂದಿರುವುದಿಲ್ಲ ಹಾಗೂ ಶೇಕಡಾ ೭೦ರಷ್ಟು ಉಳಿತಾಯ ಖಾತೆಗಳನ್ನು ಹೊಂದಿರುವುದಿಲ್ಲ. ಅದೇ ರೀತಿ ಸಣ್ಣ ರೈತರಲ್ಲಿ ಶೇಕಡಾ ೬೯.೨ರಷ್ಟು ಜನ ಸಾಲ ಸೌಲಭ್ಯವನ್ನು ಪಡೆದಿರುವುದಿಲ್ಲ. ಒಟ್ಟಾರೆ ಶೇಕಡಾ ೭೯ರಷ್ಟು ಸಣ್ಣ ಮತ್ತು ಅತೀ ಸಣ್ಣ ಸಾಗುವಳಿದಾರರು ಸಾಲ ಸೌಲಭ್ಯ ಪಡೆಯದೇ ಸಾಂಸ್ಥಿಕ ಹಣಕಾಸು ವ್ಯವಸ್ಥೆಯಿಂದ ಹೊರಗುಳಿದಿದ್ದಾರೆ.[೨೭]

ಭಾರತ ಮತ್ತು ಬಾಂಗ್ಲಾದ ಗ್ರಾಮೀಣ ಪ್ರದೇಶಗಳ ಬಿಕ್ಷಾಟನೆ: ದೀಪ್ತಿಮಾ ಮೆಸ್ಸೀ, ಅಬ್ದುಲ್‌ರಫೀಕ್, ಜಾನೆಟ್ ಶೀಲಿ: ಇಪಿಡಬ್ಲೂ: ಏಪ್ರಿಲ್ ೨೦೧೦: ಸಂಪುಟ ೪: ಕೃಷಿ ಮತ್ತು ಕೃಷಿಯೇತರ ದುಡಿಮೆಗಾರರ ವಲಸೆ ಕುರಿತ ಅಧ್ಯಯನದ ಅಂಶಗಳನ್ನು ತಿಳಿಸಿರುತ್ತಾರೆ. ಆಹಾರ ಮತ್ತು ಸಣ್ಣ ಮೊತ್ತದ ನಗದು ಹಣ ಗಳಿಸಲು ಗ್ರಾಮಾಂತರ ಪ್ರದೇಶದ ಭೂರಹಿತ ಕೃಷಿ ಕಾರ್ಮಿಕ ಕುಟುಂಬಗಳಿಗೆ ಭಿಕ್ಷಾಟನೆ ಅನಿವಾರ್ಯ ಮತ್ತು ಅಗತ್ಯ ಎಂದು ಕಂಡು ಬಂದಿದೆ. ಭಿಕ್ಷಾಟನೆ ಭೂರಹಿತ ಕೃಷಿ ವಲಸೆಗಾರರಿಗೆ ಒಂದು ಜೀವನಾದಾರ ತಂತ್ರವಾಗಿ/ಮಾರ್ಗವಾಗಿ ಕಂಡು ಬಂದಿದೆ. ಇದಕ್ಕೆ ಸಂಬಂಧಿಸಿದಂತೆ ಕ್ಲಾರ್ಕ್ ೧೯೬೬ರ ಪ್ರಕಾರ ಇರಾನ್ ದೇಶದಲ್ಲಿ

ಹೆಚ್ಚು ಜನಸಂಖ್ಯೆಯ ಒಡತ್ತದಿಂದ ಮಹಿಳೆಯರು ಭಿಕ್ಷಾಟನೆಗಿಳಿದು ರಸ್ತೆ ಬೀದಿಗಳ ಮೇಲೆ ವಾಸಿಸುವಂತಹ ಪರಿಸ್ಥಿತಿ ಬಂದಿದೆ ಹಾಗೆ ಕ್ರೇಗ್ ೧೯೯೮ರ ಪ್ರಕಾರ ಇಂಗ್ಲೆಂಡ್‌ನಲ್ಲಿ ಬಡತನ ಯುವಕರನ್ನು ಭಿಕ್ಷಾಟಣೆಗೆ ತಳ್ಳುತ್ತಿದೆ.[೫೮]

ಕಿರು ಹಣಕಾಸು ಕಂಪನಿಗಳ ಲಾಭ ಗಳಿಸುವ ಪ್ರವೃತ್ತಿ ಮತ್ತು ಈ ಕ್ಷೇತ್ರದ ಹೂಡಿಕೆದಾರರ ಲಾಭದ ತಂತ್ರಗಾರಿಕೆಯನ್ನು ವಿಧಾನವನ್ನು ಗಮನಿಸಿದರೆ ಗ್ರಾಮೀಣ ಪ್ರದೇಶದ ಬಡವರ ಹಣಕಾಸು ಅಗತ್ಯಗಳಿಗೆ ಸ್ಪಂದಿಸುವ ಮನೋಭಾವಕ್ಕಿಂತ ಲಾಭಗಳಿಸುವುದೇ ಇವರ ಮುಖ್ಯ ಉದ್ದೇಶವಾಗಿದ್ದಂತಿದೆ. ಬಡತನ ನಿರ್ಮೂಲನೆಯಂತಹ ಸಾಮಾಜಿಕ ಪರಿವರ್ತನೆಕ್ಕಿಂತ ಲಾಭಗಳಿಕೆಯನ್ನು ಉದ್ದೇಶವಾಗಿರಿಸಿಕೊಂಡಿರುವ ಸಣ್ಣ ಹಣಕಾಸು ಸಂಸ್ಥೆಗಳ ವ್ಯವಸ್ಥೆಯನ್ನು ಮತ್ತು ಇವುಗಳ ಸಾಮಾಜಿಕ ಸಾಧನೆಯ ಬದ್ಧತೆಯನ್ನು ಪರಿಶೀಲಿಸುವ ಕಾರ್ಯವಾಗಬೇಕಾಗಿದೆ.[೫೯]

ಲಾಭಗಳಿಕೆಯ ತೀವ್ರ ಪೈಪೋಟಿಗಿಳಿದಿರುವ ಸಣ್ಣ ಹಣಕಾಸು ಸಂಸ್ಥೆಗಳು ಬಡವರಿಗೆ ಸಾಲ ನೀಡಲು ಸ್ಪರ್ದೆ ಮಾಡುತ್ತಿವೆ. ಈ ಬೆಳವಣಿಗೆ ಬಡವರ ಸಾಲ ಅಗತ್ಯಗಳನ್ನು ಅರ್ಥಮಾಡಿಕೊಂಡು ಸಾಮಾಜಿಕ ಪರಿವರ್ತನೆಗೆ ಸ್ಪಂದಿಸುವ ಮನೋಭಾವನ್ನು ಪಕ್ಕಕ್ಕೆ ಸರಿಸಿ ಸಾಲ ನೀಡಿಕೆಯ ಗುರಿಗಳ ಮತ್ತು ಲಾಭಗಳ ಬೆನ್ನು ಹತ್ತಿವೆ. ಬಡವರನ್ನು ಮಾನವರನ್ನಾಗಿ ಕಾಣುವ ಹಣಕಾಸು ಸಂಸ್ಥೆಗಳ ಮನೋಭಾವ ಬದಲಾಗಿದೆ.[೬೦] ಬಡವರನ್ನು ಅಭಿವೃದ್ಧಿಯ ಅಥವಾ ಪರಿವರ್ತನೆಯ ನಿಯೋಗಿಗಳೆಂದು ಗುರುತಿಸಬೇಕಾಗಿದೆಯೇ ವಿನಾಃ ಕೇವಲ ಕಲ್ಯಾಣವನ್ನು ಸ್ವೀಕರಿಸುವವರಂತೆ ಪರಿಗಣಿಸಬಾರದು. ವಿಶ್ವಬ್ಯಾಂಕ್ ೨೦೦೮ರ ಪ್ರಕಾರ ಜಗತ್ತಿನಲ್ಲಿ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವ ೨.೧ ಬಿಲಿಯನ್ ಜನರ ಆದಾಯ ದಿನಕ್ಕೆ ೨ ಡಾಲರ್‌ಗಿಂತ ಕಡಿಮೆ. ಸುಮಾರು ೮೮೦ ದಶಲಕ್ಷ ಜನರು ದಿನಕ್ಕೆ ೧ ಡಾಲರ್‌ಗಿಂತ ಕಡಿಮೆ ಆದಾಯ ಗಳಿಸುತ್ತಿದ್ದಾರೆ. ಇವರಲ್ಲಿ ಬಹುತೇಕರು ಕೃಷಿಯಲ್ಲಿ ತೊಡಗಿದ್ದಾರೆ. ಇವರಲ್ಲಿ ಸಣ್ಣ ಮತ್ತು ಅತಿ ಸಣ್ಣ ರೈತರು ಹಾಗೂ ಭೂರಹಿತ ಕೃಷಿ ಕಾರ್ಮಿಕರು ಇದ್ದಾರೆ. ಅದರಲ್ಲೂ ಮಹಿಳೆಯರೇ ಹೆಚ್ಚು ಇದ್ದು ಕಳೆದ ಎರಡು ದಶಕಗಳಲ್ಲಿ ಇಂತಹ ಮಹಿಳೆಯರ ಸಂಕ್ಯೆ ಇನ್ನು ಹೆಚ್ಚಾಗಿದೆ. ಯುನಿಫೆಮ್ ವೇಬ್ ಸೈಟ್ ೨೦೦೮ರ ಪ್ರಕಾರ ಬಡತನದಲ್ಲಿ ವಾಸಿಸುತ್ತಿರುವ ಮಹಿಳೆಯರ ಸಂಖ್ಯೆ ಕಳೆದ ಎರಡು ದಶಕಗಳಲ್ಲಿ ಶೇಕಡಾ ೩೦ ರಿಂದ ೫೦ಕ್ಕೆ ಹೆಚ್ಚಾಗಿದೆ. ಭಾರತದ ಕೃಷಿ ಕ್ಷೇತ್ರದಲ್ಲಿ ಪುರುಷ ದುಡಿಮೆಗಾರರ ಸಂಖ್ಯೆ ಕಡಿಮೆ ಯಾಗುತ್ತಿದ್ದು ಪುರುಷರು ಕೃಷಿಯಿಂದ ಕೃಷಿಯೇತರ ಉದ್ಯೋಗಳ ಕಡೆ ಚಲಿಸುತ್ತಿದ್ದಾರೆ. ಭಾರತದಲ್ಲಿ ಶೇಕಡಾ ಇಂದಿಗೂ ೬೦ರಷ್ಟು ಜನ ಕೃಷಿಯಲ್ಲಿ ಉದ್ಯೋಗಳನ್ನು ಕಂಡುಕೊಳ್ಳುತ್ತಿದ್ದಾರೆ. ಕೃಷಿ ಚಟುವಟಿಕೆಗಳಲ್ಲಿ ಮಹಿಳಾ ದುಡಿಮೆಗಾರರ ಸಂಖ್ಯೆ ಹೆಚ್ಚುತ್ತಿದೆ. ಎನ್‌ಎಸ್‌ಎಸ್‌ಓ ೨೦೦೪-೦೫ರ ಶೇಕಡಾ ೪೯ರಷ್ಟು ಪುರಷ ದುಡಿಮೆಗಾರರಿದ್ದು ಶೇಕಾಡ ೬೫ರಷ್ಟು ಮಹಿಳಾ ದುಡಿಮೆ ಗಾರರಿದ್ದಾರೆ. ಪ್ರಕಾರ ಒಟ್ಟಾರೆ ಶೇಕಡಾ ೮೩ರಷ್ಟು ಗ್ರಾಮೀಣ ಮಹಿಳಾ ದುಡಿಮೆಗಾರರು ಕೃಷಿಯಲ್ಲಿ ತೊಡಗಿಕೊಂಡಿದ್ದಾರೆ. ಇವರಲ್ಲಿ ಭೂರಹಿತ ಮಹಿಳಾ ಕೃಷಿ ಕಾರ್ಮಿಕರ ಸಂಖ್ಯೆಯ ಹೆಚ್ಚು.[೬೧]

ಕೃಷಿ ಬಡತನ ರೇಖೆಯ ಕೆಳಗೆ ವಾಸಿಸುತ್ತಿರುವವರಿಗೆ ಒಂದು ಮುಖ್ಯ ಜೀವನಾದಾರ ವೃತ್ತಿಯಾಗಿರುತ್ತದೆ. ಆಹಾರ ಭದ್ರತೆ ಮತ್ತು ಬಡತನ ನಿರ್ಮೂಲನೆ ಕೃಷಿಯ ಪಾತ್ರ ಮುಖ್ಯವಾಗಿದ್ದು, ಈ ಹಿನ್ನೆಲೆಯಲ್ಲಿ ಕೃಷಿಯಲ್ಲಿ ತೊಡಗಿಕೊಂಡಿರುವ ಮಹಿಳಾ ದುಡಿಮೆಗಾರರ ಪಾತ್ರವನ್ನು ಮುಖ್ಯವೆಂದು ಪರಿಗಣಿಸಬೇಕಾಗುತ್ತದೆ. ಈ ದೃಷ್ಟಿಯಿಂದ ಕೃಷಿ ಬೆಳವಣಿಗೆ ಅತೀ ಮುಖ್ಯ ಆದರೆ ಕೃಷಿಯ ಮಹತ್ವ ಕ್ಷೀಣಿಸುತ್ತಿದೆ. ೯ನೇ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿ ವಾರ್ಷಿಕ ಬೆಳವಣಿಗೆಯ ದರ ೨ರಷ್ಟಿದ್ದು, ೧೧ನೇ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿ ವಾರ್ಷಿಕ ಬೆಳವಣಿಗೆ ದರ ಶೇಕಡಾ ೧.೮ರಷ್ಟು ಆಗುವ ಸಾಧ್ಯತೆ ಇದೆ. ಕೃಷಿಯಲ್ಲಿನ ಸಾಗುವಳಿದಾರರ ಹತಾಶೆ ಮತ್ತು ರೈತರ ಆತ್ಮ ಹತ್ಮಗೆ ಸಾಗುವಳಿದಾರರಿಗೆ ಸೂಕ್ತ ತಾಂತ್ರಿಕ ನೆರವಿನ ಕೊರತೆ, ನಕಲಿ ಬೀಜ ಮತ್ತುರಸ ಗೊಬ್ಬರದ ಬಳಕೆ, ಅಸಮರ್ಪಕ ಬೆಳೆ ನಿರ್ವಹಣೆ ಮತ್ತು ಅಧಿಕ ಬಡ್ಡಿ ದರದ ಸಾಲಗಳೇ ಕಾರಣ ಎನ್ನಲಾಗಿದೆ. ರೈತರನ್ನು ಕುರಿತು ರಾಷ್ಟ್ರೀಯ ಆಯೋಗ ನೀಡಿರುವ ಮೂರನೇ ವರದಿಯಲ್ಲಿ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಸಾಂಸ್ಥಿಕ ನೆರವು ಅಂದರೆ ತಾಂತ್ರಿಕ ಮಾಹಿತಿ, ಸಾಲ ಸೌಲಭ್ಯಗಳು ಹಾಗೂ ಬೆಳೆ ವಿಮೆ ಕಡಿಮೆ ಎನ್ನಲಾಗಿದೆ. ಕೃಷಿಯಲ್ಲಿ ತೊಡಗಿರುವ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಸಾಲ ಸೌಲಭ್ಯಗಳನ್ನು ಒದಗಿಸಬೇಕು ಹಾಗೂ ಮಹಿಳೆಯರಿಗೆ ಸಣ್ಣ ಪ್ರಮಾಣದ ಸಾಲಗಳು ದೊರೆಯುವಂತಾಗಬೇಕು. ಈ ಸಾಲಸೌಲಭ್ಯಗಳು ಕೃಷಿಯಲ್ಲಿ ತೊಡಗಿರುವವರ ಜೀವನಾದಾರ ಸಾಮರ್ಥ್ಯವನ್ನು ಹೆಚ್ಚಿಸುವುವು. ಅದೇ ರೀತಿ ಮಹಿಳೆಯರಿಗೆ ಆಸ್ತಿಯ ಜಂಟಿ ಪಟ್ಟಾವನ್ನು ಭದ್ರತೆಯಾಗಿಟ್ಟುಕೊಂಡು ಕಿಸಾನ್ ಸಾಲ ಪತ್ರಗಳನ್ನು ಒದಗಿಸಬೇಕು ಎಂದು ಶಿಪಾರಸ್ಸು ಮಾಡಲಾಗಿದೆ.[೩೨]

ಸಾರ್ವಜನಿಕರಂಗದ ಬ್ಯಾಂಕುಗಳು ವಿಶೇಷ ಕೃಷಿ ಸಾಲ ಯೋಜನೆಯನ್ನು ರೂಪಿಸಿ ಸಾಲ ಸೌಲಭ್ಯವನ್ನು ಗ್ರಾಮೀಣ ಪ್ರದೇಶದ ಕೃಷಿ ಸಮುದಾಯಕ್ಕೆ ಒದಗಿಸಬೇಕು ಹಾಗೂ ಗ್ರಾಮೀಣ ಮಟ್ಟದ ಮೂಲಭೂತ ಸೌಕರ್ಯಗಳ ವಿಸ್ತರಣೆ ಕಾರ್ಯಕ್ರಮಗಳನ್ನು ಗ್ರಾಮ ಪಂಚಾಯಿತಿ ಮತ್ತು ಮಹಿಳಾ ಸ್ವಸಹಾಯ ಸಂಘಗಳಿಗೆ ನೀಡಬೇಕು.[೩೩] ರೂರಲ್ ಕ್ರಡಿಟ್ ಇನ್ ಡಿಸಾರೆ ಎಂಬ ಪುಸ್ತಕದಲ್ಲಿ ಜಾಗತೀಕರಣದ ದಿನಗಳಲ್ಲಿ ಬಡತನ ನಿರ್ಮೂಲನೆ ಮತ್ತು ಉದ್ಯೋಗ ಸೃಷ್ಟಿಯಲ್ಲಿ ಸರ್ಕಾರದ ನೆರವಿನ ಪ್ರಮಾಣ ಕಡಿಮೆಯಾಗುತ್ತಿದೆ. ಇದು ಮುಂದೆ ಗ್ರಾಮೀಣ ಸಾಲ ಮಾರುಕಟ್ಟೆಗಳಲ್ಲಿ ಸಾಂಸ್ಥಿಕೇತರ ಸಾಲ ವ್ಯವಸ್ಥೆ ತನ್ನ ಹಿಡಿತವನ್ನು ಮತ್ತಷ್ಟು ಹೆಚ್ಚಿಸಿಕೊಳ್ಳುವ ಸಾಧ್ಯತೆ ಇದೆ. ಇದು ಗ್ರಾಮೀಣ ಸಮುದಾಯಗಳ ಮೇಲೆ ಋಣಾತ್ಮಕ ಪರಿಣಾಮ ಬೀರಬಹುದು. ಖಾಸಗಿ ಲೇವಾದೇವಿಗಾರರ ಶೊಷಣೆಯನ್ನು ತಪ್ಪಿಸಿ, ಗ್ರಾಮೀಣ ಜನತೆಯ ಸಾಲ ಸೌಲಭ್ಯಗಳ ಅಗತ್ಯಗಳನ್ನು ಪೂರೈಸುವಲ್ಲಿ ಸಾಂಸ್ಥಿಕ ಹಣಕಾಸು ವ್ಯವಸ್ಥೆ ಮುಖ್ಯ ಪಾತ್ರ ವಹಿಸಿತ್ತು. ಆದರೆ ೧೯೯೧ರ ಉದಾರೀಕರಣದ ನಂತರ ಸಾಂಸ್ಥಿಕ ಹಣಕಾಸು ವ್ಯವಸ್ಥೆಯ ಸಾಲ ಸೌಲಭ್ಯಗಳ ಪ್ರಮಾಣ ಗ್ರಾಮೀಣ ಪ್ರದೇಶಗಳಿಗೆ ಕಡಿಮೆಯಾಗಿದೆ. ಈ ಹಿನ್ನೆಲೆಯಲ್ಲಿ ಗ್ರಾಮೀಣ ಭಾಗದಲ್ಲಿ ಸ್ಥಳೀಯ ಲೇವಾದೇವಿಗಾರರ ನಿಯಂತ್ರಣ ಮತ್ತು ಪ್ರಾಬಲ್ಯ ಹೆಚ್ಚಾಗುವ ಸಾಧ್ಯತೆ ಇದೆ.[೩೪]

ಈಗ ನಾವು ನೋಡುತ್ತಿರುವ ಸಾಂಸ್ಥಿಕ ಹಣಕಾಸು ವ್ಯವಸ್ಥೆ ಬಡವರ ಹಣಕಾಸು ಅಗತ್ಯಗಳನ್ನು ಪೂರೈಸುವ ಸಾಮಾಜಿಕ ಹೊಣೆಗಾರಿಕೆಯನ್ನು ಈಡೇರಿಸುವಲ್ಲಿ ಯಶಸ್ವಿಯಾಗಿರುವುದಿಲ್ಲ. ಇದಕ್ಕೆ ಕಾರಣಗಳು ಗ್ರಾಮೀಣ ಪ್ರದೇಶದಲ್ಲಿ ಸಾಕಷ್ಟು ಸಂಖ್ಯೆ ಬ್ಯಾಂಕ್ ಶಾಖೆಗಳು ಇಲ್ಲದಿರುವುದು, ಬ್ಯಾಂಕುಗಳಿಂದ ಸಾಲ ಪಡೆಯುವಾಗ ತೃಪ್ತಿಕರವಾದಂತಹ ಭದ್ರತೆ ನೀಡುವ ಶಕ್ತಿ ಬಡವರಿಗೆ ಇಲ್ಲದಿರುವುದು ಹಾಗೂ ಬಡವರಿಗೆ ತಿಳುವಳಿಕೆ ಕೊರತೆ ಇರುವುದು. ಈ ಹಿನ್ನೆಲೆಯಲ್ಲಿ ಅಂದರೆ ಸಾಂಸ್ಥಿಕ ಹಣಕಾಸು ವ್ಯವಸ್ಥೆಯ ವಿಫಲತೆಯು ಕಿರು ಹಣಕಾಸು ವ್ಯವಸ್ಥೆ ಭಾರತದಲ್ಲಿ ಒಂದು ಪರ್ಯಾಯ ಸಾಲ ಸೌಲಭ್ಯ ವ್ಯವಸ್ಥೆಯಾಗಿ ಬೆಳೆಯಲು ಕಾರಣವಾಯಿತು. ಇಂದು ಭಾರತದಲ್ಲಿ ವ್ಯಾಪಕವಾದಂತಹ ಬ್ಯಾಂಕಿಂಗ್ ಸೌಕರ್ಯವಿದೆ, ವಾಣಿಜ್ಯ ಬ್ಯಾಂಕುಗಳ ೩೦೦೦೦ಕ್ಕೂ ಹೆಚ್ಚು ಗ್ರಾಮೀಣ ಹಾಗೂ ಅತೀ ಗ್ರಾಮೀಣ ಶಾಖೆಗಳಿವೆ. ೧೪೦೦೦ಕ್ಕೂ ಹೆಚ್ಚು ಪ್ರಾದೇಶಿಕ ಬ್ಯಾಂಕುಗಳಿವೆ. ಸುಮಾರು ೧೨೦೦೦ ಸಾವಿರ ಜಿಲ್ಲಾ ಸಹಕಾರಿ ಪತ್ತಿನ ಬ್ಯಾಂಕು ಶಾಖೆಗಳಿವೆ. ಗ್ರಾಮ ಮಟ್ಟದಲ್ಲಿ ೧ ಲಕ್ಷಕ್ಕೂ ಹೆಚ್ಚು ಪ್ರಾಥಮಿಕ ಕೃಷಿ ಪತ್ತಿನ ಸಾಲ ಸಹಕಾರ ಸಂಘಗಳಿವೆ. ಇವುಗಳ ಪೈಕಿ ಸುಮಾರು ೬೬ ಸಾವಿರ ಸಂಘಗಳು ಕ್ರಿಯಾಶೀಲವಾಗಿವೆ ಉಳಿದವು ನಿಷ್ಕ್ರಿಯವಾಗಿವೆ ಎನ್ನಲಾಗಿದೆ. ಭಾರತದಲ್ಲಿ ಬಡವರ ಸಾಲದ ಅಗತ್ಯ ವರ್ಷಕ್ಕೆ ೫೦ ಸಾವಿರ ಕೋಟಿಗಳು ಎಂದು ಅಂದಾಜು ಮಾಡಲಾಗಿದೆ ಆದರೆ ಸಾಂಪ್ರದಾಯಿಕ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಲಭ್ಯವಿರುವ ಬಡವರ ಸಾಲ ಕೇವಲ ೫೦೦೦ ಕೋಟಿಗಳು ಅಥವಾ ಒಟ್ಟು ಬೇಡಿಕೆಯಲ್ಲಿ ಶೇಕಡಾ ೧೦ರಷ್ಟು ಮಾತ್ರ. ಬಡವರಿಗೆ ಆರ್ಥಿಕ ನೆರವು ನೀಡಲೆಂದೇ ಅಸ್ತಿತ್ವಕ್ಕೆ ಬಂದ ಸಹಕಾರಿ ಸಾಲ ವ್ಯವಸ್ಥೆಯ ವೈಫಲ್ಯ ಬಡವರ ಕಷ್ಟ ಕೋಟಲೆಗಳು ಹೆಚ್ಚಾಗಲು ಕಾರಣವಾಯಿತು. ತಮ್ಮ ಸಾಲದ ಅಗತ್ಯಗಳಿಗೆ ಬಡವರು ಲೇವಾದೇವಿಗಾರರನ್ನೇ ಅವಲಂಬಿಸಬೇಕಾಗಿ ಬಂದು ಗ್ರಾಮೀಣ ಸಾಲ ಸಂಕೋಲೆಯ ಬಿಗಿತ ಮತ್ತಷ್ಟು ಹೆಚ್ಚಾಯಿತು. ವಿಶ್ವಬ್ಯಾಂಕ್ ಹಾಗೂ ಎನ್‌ಸಿಎಇಆರ್ ೨೦೦೩ರಲ್ಲಿ ನಡೆಸಿದ ಮಾದರಿ ಸಮೀಕ್ಷೆ ಪ್ರಕಾರ ಆಂದ್ರ ಪ್ರದೇಶ ಮತ್ತು ಉತ್ತರ ಪ್ರದೇಶಗಳಲ್ಲಿ ಶೇಕಡಾ ೮೬ರಷ್ಟು ಅತೀ ಸಣ್ಣ ರೈತರು ಮತ್ತು ಕೃಷಿ ಕಾರ್ಮಿಕರು ತಮ್ಮ ಸಾಲದ ಅಗತ್ಯಗಳಿಗೆ ಬ್ಯಾಂಕುಗಳಿಗೆ ಹೋಗುತ್ತಿಲ್ಲ ಎಂದು ತಿಳಿದು ಬಂದಿತು. ಇಂದು ವ್ಯಾಪಕವಾಗಿದೆ ಎಂದು ಹೇಳಲಾಗುವ ಬ್ಯಾಂಕಿಂಗ್ ಜಾಲದ ಬಹಳಷ್ಟು ಸಾಲ ಸೌಲಭ್ಯ ಏನಿದ್ದರೂ ಶ್ರೀಮಂತರ ಪಾಲಿಗೆ ಹೋಗಿದೆ. ದೊಡ್ಡ ರೈತರಲ್ಲಿ ಶೇಕಡಾ ೬೬ರಷ್ಟು ಮಂದಿ ಬ್ಯಾಂಕುಗಳಲ್ಲಿ ಸಾಲ ಖಾತೆ ಹೊಂದಿದ್ದು, ಈ ಪೈಕಿ ಶೇಕಡಾ ೬೬ರಷ್ಟು ಮಂದಿಗೆ ಸಾಲ ಸೌಲಭ್ಯ ದೊರೆತಿದೆ ಎನ್ನಲಾಗಿದೆ. ಹೀಗೆ ಗ್ರಾಮೀಣ ಬಡವರ ಸಾಲ ಅಗತ್ಯಗಳನ್ನು ಪೂರೈಸುವಲ್ಲಿ ಸಾಂಸ್ಥಿಕ ಹಣಕಾಸು ಸಂಸ್ಥೆಗಳ ವಿಫಲತೆಯು ಕಿರು ಹಣಕಾಸು ನೀಡಿಕೆಯು ಗ್ರಾಮೀಣ ಪ್ರದೇಶದಲ್ಲಿ ಮಹತ್ವ ಪಡೆಯಿತು. ಈ ಕಿರು ಹಣಕಾಸು ವ್ಯವಸ್ಥೆಯು ಬಡವರಿಗೆ ಕಿರು ಸಾಲ ಸೌಲಭ್ಯ ಕಲ್ಪಿಸಿ ಸ್ವಉದ್ಯೋಗ ಕೈಗೊಳ್ಳಲು ಸಹಾಯಕಾರಿ ಯಾಗಿರುತ್ತದೆ.[೨೫]

ಗ್ರಾಮೀಣ ಕೃಷಿಯೇತರ ಉದ್ಯಮ ೪೦ ದಶಲಕ್ಷಕ್ಕಿಂತ ಹೆಚ್ಚು ಜನರಿಗೆ ಉದ್ಯೋಗವಕಾಶಗಳನ್ನು ಒದಗಿಸುತ್ತದೆ. ಗ್ರಾಮೀಣ ಪ್ರದೇಶದ ಅರ್ಧದಷ್ಟು ಉದ್ಯೋಗಗಳು ಕೃಷಿಯೇತರ ಉದ್ಯಮದಲ್ಲಿ

ಸೃಷ್ಠಿಯಾಗುತ್ತವೆ. ಇವುಗಳಲ್ಲಿ ಸಣ್ಣ ಮತ್ತು ಅತೀ ಸಣ್ಣ ರೈತರು ಹಾಗೂ ಭೂರಹಿತ ಕೃಷಿ ಕಾರ್ಮಿಕರು ಹೆಚ್ಚು ಉದ್ಯೋಗವಕಾಶಗಳನ್ನು ಪಡೆಯುತ್ತಿದ್ದಾರೆ. ಈ ಉದ್ಯೋಗಗಳಲ್ಲಿ ಮುಖ್ಯವಾಗಿ ಕೌಟುಂಬಿಕ ಆಧಾರಿತ ಉತ್ಪನ್ನಗಳು ಕಡಿಮೆಯಾಗಿ ಗ್ರಾಮೀಣ ಪ್ರದೇಶದಲ್ಲಿ ಸಾರಿಗೆ ಮತ್ತು ಕೃಷಿ ಸಂಸ್ಕರಣಾ ಉದ್ಯೋಗವಕಾಶಗಳು ಹೆಚ್ಚಾಗುತ್ತಿವೆ. ಗ್ರಾಮೀಣ ಪ್ರದೇಶದಲ್ಲಿ ಸುಮಾರು ೧೨.೫ ದಶಲಕ್ಷ ಸಣ್ಣ ಉದ್ಯಮಗಳು ೨೯ ದಶಲಕ್ಷ ಜನರಿಗೆ ಉದ್ಯೋಗವಕಾಶವನ್ನು ಕಲ್ಪಿಸಿರುತ್ತವೆ. ಇವುಗಳಲ್ಲಿ ಶೇಕಡಾ ೩೯ರಷ್ಟು ಜನ ವ್ಯಾಪಾರ ಆಧಾರಿತ ಚಟುವಟಿಕೆಗಳಲ್ಲಿ ತೊಡಗಿದ್ದಾರೆ ಶೇಕಡಾ ೨೮ರಷ್ಟು ಜನ ಸೇವಾ ವಲಯಗಳಲ್ಲಿ ತೊಡಗಿದ್ದಾರೆ ಹಾಗೆ ಶೇಕಡಾ ೨೭ರಷ್ಟು ಜನ ಸಣ್ಣ ಉತ್ಪನ್ನ ವಲಯದಲ್ಲಿ ಉದ್ಯೋಗಗಳನ್ನು ಪಡೆದಿರುತ್ತಾರೆ. ೧೯೯೧ರ ಜನಗಣತಿಯ ಪ್ರಕಾರ ಶೇಕಡಾ ೪೮.೪ರಷ್ಟು ಜನರು ಕೃಷಿಯಲ್ಲಿ ತೊಡಗಿದ್ದರು, ಶೇಕಡಾ ೩೧.೬ರಷ್ಟು ಜನ ಕೃಷಿ ಕಾರ್ಮಿಕರಿದ್ದರು ಹಾಗೂ ಶೇಕಡಾ ೬ರಷ್ಟು ಜನ ಗ್ರಾಮೀಣ ಸೇವಾ ವಲಯದಲ್ಲಿ ತೊಡಗಿ ಕೊಂಡಿದ್ದರು. ನರಸಿಂಹಂ ಸಮಿತಿ ವರದಿ ೧೯೯೧ರಲ್ಲಿ ನೇರ ಸಾಲ ಕಾರ್ಯಕ್ರಮಗಳು ಸಾಕಷ್ಟು ಹಣಕಾಸು ಪೂರೈಸಿದ್ದರೂ ಅನುತ್ಪಾದಕ ಸಾಲಗಳನ್ನು ಹೆಚ್ಚಾಗಿ ನೀಡಿರುವುದನ್ನು ತಿಳಿಸುತ್ತದೆ. ಹಾಗೆಯೇ ಆದ್ಯತಾ ವಲಯವನ್ನು ಮರುವ್ಯಾಖ್ಯಾನಿಸಿ ಆದ್ಯತಾ ವಲಯದಿಂದ ದೊಡ್ಡ ರೈತರನ್ನು ತೆಗೆದು ಸಣ್ಣ ರೈತರು ಅತೀ ಸಣ್ಣ ರೈತರು ಸಣ್ಣ ಕೈಗಾರಿಕಾ ಚಟುವಟಿಕೆಗಳು, ಗುಡಿ ಕೈಗಾರಿಕೆ, ಗ್ರಾಮೀಣ ಕರಕುಷಲ ಚಟುವಟಿಕೆಗಳನ್ನು ಆದ್ಯತಾ ವಲಯದ ಒಳಗೆ ಸೇರಿಸಿ, ಈ ವಲಯಕ್ಕೆ ಪೂರೈಕೆಯಾಗುವ ಒಟ್ಟು ಹಣಕಾಸಲ್ಲಿ ಶೇಕಡಾ ೧೦ರಷ್ಟನ್ನು ನೀಡಬೇಕೆಂದು ಸರ್ಕಾರಕ್ಕೆ ಸಲಹೆ ಮಾಡಿತು.[೩೬]

೧೯೯೦ಕ್ಕಿಂತ ಹಿಂದೆ ಆದ್ಯತಾ ವಲಯಕ್ಕೆ ಅಂದರೆ ಕೃಷಿ ಮತ್ತು ಸಣ್ಣ ಕೈಗಾರಿಕೆಗಳಿಗೆ ಶೇಕಡಾ ೪೦ರಷ್ಟು ಸಾಲ ನೀಡಬೇಕೆಂದು ನಿರ್ದೇಶನವಿದ್ದು ಆದರೆ ೧೯೯೦ಕ್ಕೆ ಸಾಲ ನೀಡಿಕೆಯಲ್ಲಿ ಕೃಷಿ ಪಾಲು ಶೇಕಡಾ ೧೮ಕ್ಕೆ ಇಳಿಯಿತು. ೧೯೯೦ರ ನಂತರ ಶೇಕಡಾ ೧೩ಕ್ಕೆ ಕಡಿಮೆಯಾಯಿತು. ಹಾಗೆ ಗ್ರಾಮೀಣ ಬ್ಯಾಂಕುಗಳ ಶಾಖೆಗಳ ಸಂಖ್ಯೆ ಶೇಕಡಾ ೫೮ ರಿಂದ ೪೫ಕ್ಕೆ ಇಳಿಯಿತು. ಹೀಗೆ ಬ್ಯಾಂಕಿಂಗ್ ವ್ಯವಸ್ಥೆ ಗ್ರಾಮೀಣ ಪ್ರದೇಶಗಳನ್ನು ನಿರ್ಲಕ್ಷಿಸುವ ಅನುಭವ ಹೆಚ್ಚಿ ಕೃಷಿ ಕ್ಷೇತ್ರದಲ್ಲಿ ತೊಡಗಿರುವ ಸಾಗುವಳಿದಾರರು ತಮ್ಮ ಸಾಲ ಸೌಲಭ್ಯಗಳನ್ನು ಲೇವಾದೇವಿಗಾರರಿಂದ ಅಧಿಕ ಬಡ್ಡಿದರದಲ್ಲಿ ಪಡೆಯುವ ಪ್ರಮಾಣ ಹೆಚ್ಚಿದ ಪರಿಣಾಮವಾಗಿ ಸಾಗುವಳಿದಾರರಲ್ಲಿ ಹತಾಶೆಯು ಹೆಚ್ಚಿ ಆತ್ಮಹತ್ಯೆಯಂತಹ ಘಟನೆಗಳಿಗೆ ಪ್ರೇರಣೆಯಾಯಿತು.[೩೭]

ಇವರು ಹಣಕಾಸು ವ್ಯವಸ್ಥೆ ಕುರಿತ ವರದಿಯಲ್ಲಿ ನಿರ್ದೇಶಿತ ಸಾಲ ವ್ಯವಸ್ಥೆಯ ಮೂಲಕ ಬ್ಯಾಂಕುಗಳು ಅನುತ್ಪಾದಕ ಸಾಲ ವಿತರಣೆ ಹೆಚ್ಚಾಗಿದ್ದು ಕೃಷಿ ಮತ್ತೆ ಸಣ್ಣ ಉದ್ಯಮಗಳಲ್ಲಿ ಒಳ್ಳೆಯ ಪರಿಣಾಮ ಬೀರಿದ್ದರೂ ನಿರ್ದೇಶಿತ ಸಾಲ ಕಾರ್ಯಕ್ರಮಗಳನ್ನು ಮರು ಪರಿಶೀಲಿಸುವ ಅಗತ್ಯವಿದ್ದು ಸಾಲ ನೀಡುವ ಪರಿಮಾಣಾತ್ಮಕ ಗುರಿಗಳಿಂತ ಗುಣಾತ್ಮಕ ಸಾಲ ನೀಡಿಕೆಯು ಸುಧಾರಿಸಬೇಕಿದೆ.

ಈ ವ್ಯವಸ್ಥೆಯ ಅಡಿ ಸಾಲ ಅಗತ್ಯವಿರುವ ಸಣ್ಣ ಮತ್ತು ಅತೀ ಸಣ್ಣ ರೈತರು ಮತ್ತು ಗುಡಿಕೈಗಾರಿಕೆಗಳಿಗೆ ಸಾಲವನ್ನು ನೀಡಬೇಕಾಗುತ್ತದೆ. ದೊಡ್ಡ ರೈತರಿಗೆ ಮತ್ತು ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ತಾವೇ ಹಣಕಾಸನ್ನು ನಿರ್ವಹಿಸುವ ಸಾಮರ್ಥ್ಯವಿರುತ್ತದೆ. ಈ ಹಿನ್ನೆಲೆಯಲ್ಲಿ ಸಮಿತಿಯು ನಿರ್ದೇಶಿತ ಸಾಲ ಕಾರ್ಯಕ್ರಮಗಳನ್ನು ನಿಲ್ಲಿಸಬೇಕು ಎಂದು ಸರ್ಕಾರಕ್ಕೆ ಸಲಹೆ ನೀಡಿತು. ಹಾಗೆ ಅಗತ್ಯವಿರುವ ವಲಯಗಳಿಗೆ ಸಾಲ ನೆರವನ್ನು ಮುಂದುವರಿಸಬೇಕೆಂದು ಸಲಹೆ ನೀಡಿತು. ಈ ದೃಷ್ಟಿಯಿಂದ ಆದ್ಯತಾ ವಲಯವನ್ನು ಸಣ್ಣ ಅತೀ ಸಣ್ಣ ರೈತರು ಮತ್ತು ಗುಡಿ ಕೈಗಾರಿಕೆಗಳು ಗ್ರಾಮೀಣ ಸಾರಿಗೆ, ಕರಕುಶಲ ಕರ್ಮಿಗಳು ಹಾಗೂ ದುರ್ಬಲ ವರ್ಗಗಳಿಗೆ (ವೀಕರ್ಸ್ ಸೆಕ್ಷನ್ಸ್) ಆದ್ಯತಾ ವಲಯದ ಒಳಗೆ ಸೇರ್ಪಡಿಸಿ ದೊಡ್ಡ ರೈತರು ಮತ್ತು ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಈ ವಲಯದಿಂದ ಹೊರಗಿಡುವಂತೆ ಆದ್ಯತಾ ವಲಯವನ್ನು ಮರು ವ್ಯಾಖ್ಯಾನಿಸಿ ಸಮಿತಿಯು ಒಟ್ಟು ಬ್ಯಾಂಕ್ ಸಾಲಗಳಲ್ಲಿ ಶೇಕಡಾ ೧೦ರಷ್ಟನ್ನು ಆದ್ಯತಾ ವಲಯಕ್ಕೆ ನಿಗದಿಗೊಳಿಸುವಂತೆ ಸಲಹೆ ನೀಡಿತು. ಈ ವರದಿ ರಾಷ್ಟ್ರೀಕೃತ ಬ್ಯಾಂಕುಗಳು ಲಾಭ ಗಳಿಕೆಗೆ ಆದ್ಯತೆ ನೀಡಬೇಕೆಂದು ಹಾಗು ಸರ್ಕಾರ ಬ್ಯಾಂಕಿಂಗ್ ಉದ್ಯಮವನ್ನು ಖಾಸಗೀಕರಣ ಗೊಳಿಸಬೇಕೆಂದು ಸಲಹೆ ನೀಡಿತು.[೩೮]

ಭಾರತೀಯ ಸಮಾಜದಲ್ಲಿ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಬಡವರನ್ನು ಗುರುತಿಸುವ ವಿಧಾನದಲ್ಲಿನ ದೋಷಗಳನ್ನು ಇಲ್ಲಿ ವಿಶ್ಲೇಷಣೆ ಮಾಡಲಾಗಿದೆ. ರಾಜಕೀಯ ಹಿತಾಸಕ್ತಿಗಳು ಮತ್ತು ಅಧಿಕಾರ ಸೂತ್ರಗಳು, ಬಡವರನ್ನು ಗುರ್ತಿಸುವ ಮಾನದಂಡ ಮತ್ತು ಪ್ರಕ್ರಿಯೆಯ ಮೇಲೆ ಪ್ರಭಾವ ಬೀರುತ್ತವೆ. ಇದರಿಂದ ದುರ್ಬಲ ಮತ್ತು ಅಧಿಕಾರರಹಿತ ಕುಟುಂಬಗಳು ಬಡವರೆಂದು ಗುರುತಿಸಲ್ಪಡುವ ಬದಲಾಗಿ ಬಡವರೇತರರಾಗಿ ಗುರುತಿಸಲ್ಪಡುತ್ತಾರೆ. ೬೧ನೇ ಸುತ್ತಿನ ರಾಷ್ಟ್ರೀಯ ಮಾದರಿ ಸಮೀಕ್ಷೆಯ ಪ್ರಕಾರ ಭಾರತದ ಗ್ರಾಮೀಣ ಪ್ರದೇಶಗಳಲ್ಲಿ ಶ್ರೀಮಂತ ವರ್ಗದ ಶೇಕಡಾ ೨೩.೫ರಷ್ಟು ಕುಟುಂಬಗಳು ಅಂತ್ಯೋದಯ ಅನ್ನ ಯೋಜನೆ ಅಥವಾ ಬಿ.ಪಿ.ಎಲ್ ಕಾರ್ಡುಗಳನ್ನು ಪಡೆದಿದ್ದಾರೆ. ಆದರೆ ಶೇಕಡಾ ೫೧.೪ರಷ್ಟು ಅತೀ ಬಡತನದ ಕುಟುಂಬಗಳು ಯಾವುದೇ ಸಾಮಾಜಿಕ ನೆರವಿನ ಯೋಜನೆಯ ಕಾರ್ಡುಗಳನ್ನು ಹೊಂದಿಲ್ಲ. ಮೊದಲನೇ ಅಂಶವನ್ನು ಸೇರ್ಪಡೆಯ ದೋಷವೆಂತಲೂ, ಎರಡನೇಯದನ್ನು ಬಿಟ್ಟಿರುವ ದೋಷವೆಂತಲೂ ಕರೆಯ ಬಹುದಾಗಿದೆ. ಬಡವರನ್ನು ಗುರುತಿಸುವ ವಿಧಾನ ತೃಪ್ತಿಕರವಾಗಿಲ್ಲದಿರುವುದೇ ಬಹಳಷ್ಟು ಬಡವರು ಸಾಮಾಜಿಕ ನೆರವು ಯೋಜನೆಯ ಪ್ರಯೋಜನ ಪಡೆಯಲು ಸಾಧ್ಯವಾಗದೇ ವಂಚಿತರಾಗಲು ಕಾರಣ ಎನ್ನಲಾಗಿದೆ. ಈ ರೀತಿಯ ಗುರುತಿಸುವ ಪ್ರಕ್ರಿಯೆಯು ಸರ್ಕಾರದ ನೀತಿಗಳ ಮಟ್ಟದ ದೋಷಗಳನ್ನು ತೋರಿಸುತ್ತದೆ ಹಾಗೂ ಯೋಜನೆಯನ್ನುರೂಪಿಸಿ ಜಾರಿಗೊಳಿಸುವಲ್ಲಿ ಸರ್ಕಾರ ಮತ್ತು ಸಮಾಜಗಳ ನಡುವಿನ ದುರ್ಬಲ ಸಮನ್ವಯತೆಯನ್ನು ಸಹಾ ಇದು ಸ್ಪಷ್ಟಪಡಿಸುತ್ತದೆ.[೩೯]

ಅಭಿವೃದ್ಧಿ ನೀತಿಗಳಿಗೆ ಸಂಬಂಧಿಸಿದ ರಾಜಕೀಯ ವೈಪಲ್ಯತೆಯ ವಿಶ್ಲೇಷಣೆಯನ್ನು ಇಲ್ಲಿ ಕಾಣಬಹುದು. ಗ್ರಾಮೀಣ ಅಬಿವೃದ್ದಿಯು ಕೂಲಿಕಾರರು ಮತ್ತು ಬಡ ರೈತರನ್ನು ಒಳಗೊಳ್ಳಬೇಕಾಗಿದೆ.

ಗ್ರಾಮೀಣಾಭಿವೃದ್ಧಿಯ ವ್ಯಾಪ್ತಿಯು ವಿಶಾಲವಾದುದು. ಗ್ರಾಮಗಳ ಮೂಲ ಸೌಕರ್ಯಗಳ ಬೆಳವಣಿಗೆ ಮತ್ತು ಕೃಷಿ ಬೆಳವಣಿಗೆಗಳ ಜೊತೆಗೆ ಗ್ರಾಮೀಣಾಭಿವೃದ್ಧಿಯು ಕೈಗಾರಿಕೆಗಳ ನಿರ್ಮಾಣ, ಹಣಕಾಸು ವ್ಯವಸ್ಥೆ, ಬ್ಯಾಂಕುಗಳ ಸೌಲಭ್ಯಗಳ ವಿಸ್ತರಣೆ, ಪೌಷ್ಠಿಕ ಆಹಾರ ಒದಗಿಸುವುದು, ಸಾಕ್ಷರತೆಯನ್ನು ಉತ್ತಮ ಪಡಿಸುವುದು ಮತ್ತು ಮಾರುಕಟ್ಟೆಯನ್ನು ಸಂಘಟಿಸುವುದು ಮುಂತಾದ ಸಂಗತಿಗಳನ್ನು ಸಹಾ ಒಳಗೊಂಡಿದೆ. ಗ್ರಾಮೀಣಾಭಿವೃದ್ಧಿಯು ಬಹುವಲಯ ಚಟುವಟಿಕೆಯಾಗಿದೆ. ಇದು ಆರ್ಥಿಕ ಪ್ರಗತಿ ಹಾಗೂ ಸಾಮಾಜಿಕ ಪ್ರಗತಿ ಎರಡನ್ನೂ ಒಳಗೊಂಡ ಒಂದು ಚಟುವಟಿಕೆ.

ಅಭಿವೃದ್ಧಿಯನ್ನು ತಳಮಟ್ಟದಿಂದ ಮೇಲ್ಮಟ್ಟಕ್ಕೆ ಹರಿಯುವಂತೆ ಮಾಡಬೇಕು. ವಿಕೇಂದ್ರೀಕರಣ ಈ ನಿಟ್ಟಿನಲ್ಲಿ ಒಂದು ತಾತ್ವಿಕ ಸಮರ್ಥನೆ ಮಾತ್ರ. ಅಭಿವೃದ್ಧಿಯು ಜನರ ಸಹಬಾಗಿತ್ವದಲ್ಲಿ ನಡೆಯಬೇಕಾದರೆ ಅದು ತಳಮಟ್ಟದಿಂದ ಆರಂಭವಾಗಿ ಮೇಲ್ಮಟ್ಟಕ್ಕೆ ಹರಿಯುವಂತಾಗಬೇಕು. ತಳಮಟ್ಟದಲ್ಲಿ ಅಭಿವೃದ್ಧಿಯಿಂದ ಯಾರು ವಂಚಿತರಾಗಿದ್ದಾರೋ ಅವರನ್ನು ಒಳಗೊಳ್ಳುವ ಪ್ರಕ್ರಿಯೆಯನ್ನು ತಳಮಟ್ಟದ ಅಭಿವೃದ್ಧಿ ಎನ್ನಬಹುದು. ಅಭಿವೃದ್ಧಿಯ ಫಲಗಳು ಮೇಲಿನಿಂದ ಕೆಳಮುಖಿಯಾಗಿ ಹರಿಯುವಂತೆ ಮಾಡುವ ಅಭಿವೃದ್ಧಿಯ ತಂತ್ರವು ಪ್ರಚಲಿತದಲ್ಲಿದೆ. ಮೇಲಿನಿಂದ ಕೆಳಗಿನ ಮಜಲಿಗೆ ಹರಿಯುವ ಅಭಿವೃದ್ಧಿ ತಂತ್ರವನ್ನು ತಲೆಕೆಳಗೆ ಮಾಡಬೇಕಾಗಿದೆ. ಇದನ್ನು ತಲೆಕೆಳಗೆ ಮಾಡಲು ಸಾಧ್ಯವಾಗದ ಪರಿಯನ್ನು ರಾಜಕೀಯ ವೈಪಲ್ಯವೆಂದು ಕರೆಯಲಾಗುತ್ತದೆ. ಇದನ್ನು ಜೀನ್‌ಡ್ರೆಜ್ ಮತ್ತು ಅಮರ್ಥ್ಯಸೇನ್‌ರವರು ಸಾಮಾಜಿಕ ವೈಪಲ್ಯವೆಂದು ಕರೆದಿದ್ದಾರೆ. ಬಡವರನ್ನು, ದುರ್ಬಲರನ್ನು, ದಲಿತರನ್ನು, ಮಹಿಳೆಯರನ್ನು ಸಾಧನವಾಗಿ ಹಾಗೂ ಸಾಧ್ಯವೂ ಆಗಿ ಒಳಗೊಳ್ಳದಿರುವ ಅಭಿವೃದ್ಧಿ ಪ್ರಕ್ರಿಯೆನ್ನು ರಾಜಕೀಯ ವೈಪಲ್ಯವೆನ್ನಬಹುದು. ತಳಮಟ್ಟದ ಅಭಿವೃದ್ಧಿ ಸಹಬಾಗಿತ್ವದ ಅಭಿವೃದ್ಧಿ ಎಂದೆಲ್ಲಾ ಏನೇ ಹೇಳಿದರೂ ಅದು ಸಮಾಜದ ಉನ್ನತ ಜಾತಿ ವರ್ಗಗಳ ಅಗತ್ಯಗಳನ್ನು ಪೂರೈಸುವಲ್ಲಿ ಹೆಚ್ಚು ಕ್ರಿಯಾಶೀಲವಾಗಿರುವಂತೆ ಕಾಣುತ್ತದೆ. ಗ್ರಾಮೀಣ ಪ್ರದೇಶದಲ್ಲಿ ವಂಚಿತರ, ಬಡವರ, ಅನಕ್ಷರಸ್ಥರ, ದುರ್ಬಲರ ಮಹಿಳೆ ಮತ್ತು ದಲಿತರ ಅಗತ್ಯಗಳನ್ನು ಈಡೇರಿಸುವಲ್ಲಿ ಅಭಿವೃದ್ಧಿ ಪ್ರಕ್ರಿಯೆ ವಿಫಲಗೊಂಡಿದೆ ಎನ್ನಬಹುದು. ಅಮರ್ಥ್ಯಸೇನ್‌ರ ಪ್ರಕಾರ ಜನರು ಅಭಿವೃದ್ಧಿಯ ನಿಯೋಗಿಗಳಾದಾಗ ಮಾತ್ರ ಅದರಲ್ಲಿ ಅವರಿಗೆ ಪಾಲು ದೊರೆಯುತ್ತದೆ. ಆದರೆ ಸದ್ಯ ಜನರು ಕೇವಲ ಫಲಾನುಭವಿಗಳಾಗಿದ್ದಾರೆ ಹೊರತು ಪಾಲುದಾರರಲ್ಲ.[೯೦]

ಸಾರ್ವಜನಿಕ ಬ್ಯಾಂಕುಗಳು ಪ್ರಸ್ತುತ ಅಡ್ಡರಸ್ತೆಯಲ್ಲಿವೆ. ಸಾಮಾಜಿಕ ಹಣಕಾಸಿನ ಗೊಂದಲದಲ್ಲಿ ಸಿಲುಕಿವೆ. ಒಂದು ಕಡೆ ಸಾಲಗಳ ಸಮಾನ ಹಂಚಿಕೆಗಾಗಿ ಸಾಮಾಜಿಕ ರಾಜಕೀಯ ಒತ್ತಡ ಹೆಚ್ಚುತ್ತಿದ್ದರೆ ಇನ್ನೊಂದು ಕಡೆ ಬ್ಯಾಂಕುಗಳ ಸಂಪನ್ಮೂಲಗಳನ್ನು ಉತ್ಪಾದಕ ಮತ್ತು ದಕ್ಷತೆಯಿಂದ ಬಳಸಿಕೊಳ್ಳುವ ಅಗತ್ಯ ಕೂಡಾ ಹೆಚ್ಚುತ್ತಿದೆ. ಸಾರ್ವಜನಿಕ ಬ್ಯಾಂಕುಗಳು ಹಣಕಾಸು ವ್ಯವಸ್ಥೆಯ ಮುಖ್ಯ ಭಾಗವಾಗಿದ್ದು, ಸಾಮಾಜಿಕ ಜವಾಬ್ದಾರಿಯನ್ನು ಹೊಂದಿರುತ್ತವೆ. ಆದರೂ ಸರ್ಕಾರ ನಿರ್ವಹಿಸಬೇಕಾದ ಸಂಪನ್ಮೂಲ ಮರು ಹಂಚಿಕೆಯಂತಹ ಕರ್ತವ್ಯಗಳನ್ನು ಬ್ಯಾಂಕುಗಳು

ನಿರ್ವಹಿಸುವಂತೆ ಒತ್ತಾಯಿಸಬಾರದು. ಈ ಹಿನ್ನೆಲೆಯಲ್ಲಿ ದಕ್ಷ ಉತ್ಪಾದಕ ಬ್ಯಾಂಕಿಂಗ್ ವ್ಯವಸ್ಥೆ ಕಟ್ಟುವ ಉದ್ದೇಶ ಮತ್ತು ಸಾಲಗಳನ್ನು ಸಮಾನವಾಗಿ ಹಂಚಿಕೆ ಮಾಡುವ ಉದ್ದೇಶಗಳ ನಡುವೆ ಸಮತೋಲನ ಇರಬೇಕು. ೧೯೬೯ರಲ್ಲಿ ವಾಣಿಜ್ಯ ಬ್ಯಾಂಕುಗಳನ್ನು ಕೆಲವು ಮುಖ್ಯ ಉದ್ದೇಶಗಳ ಸಾಧನೆಗಾಗಿ ರಾಷ್ಟ್ರೀಕರಣ ಮಾಡಲಾಯಿತು. ಇದನ್ನು ಭಾರತದ ಅಭಿವೃದ್ಧಿಯ ಬಹುಮುಖ್ಯ ಲ್ಯಾಂಡ್ ಮಾರ್ಕ್ ಎನ್ನಲಾಗಿದೆ. ಹೆಚ್ಚಿನ ಪ್ರತಿಫಲ ನೀಡುವ ಹೂಡಿಕೆಗಳ ಯೋಜನೆಗಳಿಗೆ ಹೆಚ್ಚಿನ ಹಣಕಾಸು ಹಂಚಿಕೆ ಮಾಡುವುದು, ಸಾಮಾಜಿಕ ಆರ್ಥಿಕ ಉದ್ದೇಶಗಳ ಸಾಧನೆಗಳಲ್ಲಿ ಸರ್ಕಾರಕ್ಕೆ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಸಹಾಯ ಮಾಡುವುದು, ಅತೀ ಸಣ್ಣ ರೈತರು, ಕೃಷಿ ಕಾರ್ಮಿಕರು, ಗ್ರಾಮೀಣ ಕರಕುಶಲ ಕರ್ಮಿಗಳು, ಪರಿಶಿಷ್ಟ ಜಾತಿ, ಪಂಗಡ ಇತ್ಯಾದಿ ದುರ್ಬಲ ವರ್ಗಗಳಿಗೆ ಅಭಿವೃದ್ಧಿಯ ಪಾಲನ್ನು ಹೆಚ್ಚಿಸುವುದು. ಇವು ಬ್ಯಾಂಕುಗಳ ರಾಷ್ಟ್ರೀಕರಣದ ಕೆಲವು ಮುಖ್ಯ ಉದ್ದೇಶಗಳೆನ್ನಬಹುದು. ಸರ್ಕಾರ ಬ್ಯಾಂಕಿಂಗ್ ವ್ಯವಸ್ಥೆಯ ಸಂಪನ್ಮೂಲ ಹೆಚ್ಚಳ ಹಾಗೂ ಬ್ಯಾಂಕ್ ಕಛೇರಿಗಳ ವಿಸ್ತರಣೆಗೆ ಪ್ರಯತ್ನಿಸಿದೆ. ಗ್ರಾಮೀಣ ಪ್ರದೇಶಗಳಲ್ಲಿ ೧೯೬೯-೮೭ರ ಅವಧಿಯಲ್ಲಿ ಗಣನೀಯವಾಗಿ ಬ್ಯಾಂಕ್ ಕಛೇರಿಗಳು ವಿಸ್ತರಣೆಯಾದವು. ಜೂನ್ ೧೯೬೯ರಲ್ಲಿ ೮೨೬೨ ಇದ್ದ ಬ್ಯಾಂಕ್ ಕಛೇರಿಗಳ ಸಂಖ್ಯೆ ೧೯೮೭ರ ಹೊತ್ತಿಗೆ ಭಾರತದಲ್ಲಿ ೫೩೮೯೫ಕ್ಕೆ ಹೆಚ್ಚಿತು. ಇದರಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ೧೮೮೩ರಷ್ಟಿದ್ದದ್ದು ೩೦೦೨೨ಕ್ಕೆ ಹೆಚ್ಚಿತು. ಸಾವಿರಕ್ಕೆ ೬೫ ಜನರಿಗೆ ಒಂದು ಕಛೇರಿ ಇದದ್ದು ೧೯೮೭ ಜೂನ್‌ರಲ್ಲಿ ಇದು ೧೪ಕ್ಕೆ ಕಡಿಮೆಯಾಯಿತು. ವಾಣಿಜ್ಯ ಬ್ಯಾಂಕುಗಳ ಠೇವಣಿ ೪೬೪೬ ಕೋಟಿಯಷ್ಟಿದ್ದದ್ದು ೧೦೭೩೪೫ರಷ್ಟಾಯಿತು. ಆದ್ಯತಾ ವಲಯಕ್ಕೆ ಸಾಲ ಮುಂಗಡಗಳು ೫೦೪ ಕೋಟಿಯಷ್ಟಿದ್ದದ್ದು ೧೯೮೯೫ ಕೋಟಿಗಳಷ್ಟಾಯಿತು. ವಾಣಿಜ್ಯ ಬ್ಯಾಂಕುಗಳ ಒಟ್ಟು ಸಾಲ ವಿತರಣೆಯಲ್ಲಿ ಆದ್ಯತಾ ವಲಯದಲ್ಲಿ ಶೇಕಡಾವಾರು ಪಾಲು ೧೪ರಷ್ಟಿದ್ದದ್ದು ೩೮.೯ರಷ್ಟಾಯಿತು. ಆದರೆ ಬ್ಯಾಂಕು ಕಛೇರಿಗಳ ವಿಸ್ತರಣೆ, ಸಾಲ ಹಂಚಿಕೆಯ ಹೆಚ್ಚಳದಿಂದ ಪ್ರಯೋಜನ ಪಡೆದವರು ಯಾರು? ಬ್ಯಾಂಕುಗಳಿಗೆ ಆರ್ಥಿಕ ಭದ್ರತೆ ನೀಡಿ, ಸಾಲ ಸೌಲಭ್ಯ ಪಡೆಯಲು ಸಾಮರ್ಥ್ಯವಿಲ್ಲದ ವರ್ಗಗಳಿಗೆ ಈ ಸಾಲ ಹಂಚಿಕೆಯು ತಲುಪಿದೆಯಾ? ಸಾಲ ಪಡೆದವರ ಆರ್ಥಿಕ ಸಾಮಾಜಿಕ ಹಿನ್ನೆಲೆ ಎಂತಹದು? ಭದ್ರತೆ ಒದಗಿಸಲು ಯಾವುದೇ ರೀತಿಯ ಸಂಪನ್ಮೂಲ ಹೊಂದಿರದ ಬಡವರ ಹಣಕಾಸಿನ ಅಗತ್ಯಗಳಿಗೆ ಸ್ಪಂದಿಸುವಲ್ಲಿ ಬ್ಯಾಂಕುಗಳ ಪಾತ್ರವೇನು? ಎಂಬ ಮೂಲಭೂತ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು ಪ್ರಯತ್ನಿಸದಿರುವುದನ್ನು ಇಲ್ಲಿ ಕಾಣಬಹುದು.[೧೧]



ಕೃಷಿ ಬೆಳವಣಿಗೆ ಮತ್ತು ಬಡತನ ಕಡಿಮೆ ಮಾಡುವಲ್ಲಿ ಭಾರತದ ಹಣಕಾಸು ಸಂಸ್ಥೆಗಳು ಪ್ರಮುಖ ಪಾತ್ರ ವಹಿಸುತ್ತವೆ. ಗ್ರಾಮೀಣ ಜನತೆಗೆ ಔಪಚಾರಿಕ ಸಾಲ ವ್ಯವಸ್ಥೆಯಿಂದ ಅನುಕೂಲ ಒದಗಿಸಲು ಭಾರತ ಸರ್ಕಾರ ನೀತಿಗಳಿಗೆ ಸಂಬಂಧಿಸಿದ ಅನೇಕ ಸುಧಾರಣೆಗಳನ್ನು ಜಾರಿಗೆ ತಂದಿದೆ. ಗ್ರಾಮೀಣ ಹಣಕಾಸಿನ ವ್ಯವಸ್ಥೆಯಲ್ಲಿ ಸಾರ್ವಜನಿಕ ಮತ್ತು ಖಾಸಗಿ ವಾಣಿಜ್ಯ

ಬ್ಯಾಂಕುಗಳು ಮೂರು ಜಿಲ್ಲೆಗಳಲ್ಲಿ ಒಂದರಂತೆ ಕಾರ್ಯನಿರ್ವಹಿಸಿರುತ್ತಿರುವ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿವೆ. ಅಲ್ಪಾವಧಿ ದೀರ್ಘಾವದಿ ಸಾಲ ಪೂರೈಸುವ ಸಹಕಾರಿ ಬ್ಯಾಂಕುಗಳಿವೆ. ಸುಧಾರಣೆ ಅವಧಿಗಿಂತ ಪೂರ್ವದಲ್ಲಿ ೧೯೬೯ರಲ್ಲಿ ಖಾಸಗಿ ಬ್ಯಾಂಕುಗಳ ರಾಷ್ಟ್ರೀಕರಣ ಸಂದರ್ಭದಲ್ಲಿ ಆದ್ಯತಾ ವಲಯಕ್ಕೆ ಸಂಪನ್ಮೂಲ ಪೂರೈಸುವುದು ಮತ್ತು ಅಭಿವೃದ್ಧಿಯ ವೇಗವನ್ನು ಹೆಚ್ಚಿಸುವುದು ಹಣಕಾಸು ಸಂಸ್ಥೆಗಳ ಮುಖ್ಯ ಉದ್ದೇಶವಾಗಿತ್ತು. ೧.೫ ಲಕ್ಷಕ್ಕೂ ಹೆಚ್ಚು ಗ್ರಾಮೀಣ ಸಾಲ ಸಂಸ್ಥೆಗಳಿದ್ದು, ಶೇಕಡಾ ೫೫ರಷ್ಟು ಗ್ರಾಮೀಣ ಕುಟುಂಬಗಳಿಗೆ ಹಣಕಾಸು ಸೇವೆ ಒದಗಿಸಲಾಗುತ್ತಿದೆ. ಹಾಗೆ ೧೯೮೯ರಲ್ಲಿ ಶೇಕಡಾ ೧೮ರಷ್ಟು ನಿವ್ವಳ ಬ್ಯಾಂಕ್ ಸಾಲವನ್ನು ಕೃಷಿ ಕ್ಷೇತ್ರಕ್ಕೆ ಪೂರೈಸುವ ಗುರಿಯನ್ನು ಸಹಾರೂಪಿಸಲಾಯಿತು. ಆದರೆ ಶೇಕಡಾ ೧೫ರಷ್ಟು ಸಾರ್ವಜನಿಕ ಬ್ಯಾಂಕುಗಳು ಮತ್ತು ೧೮ರಷ್ಟು ಖಾಸಗಿ ಬ್ಯಾಂಕುಗಳು ಗುರಿಸಾದನೆ ಮಾಡಿದವು. ಶೇಕಡ ೮೫ಕ್ಕೂ ಹೆಚ್ಚು ಸಾರ್ವಜನಿಕ ಬ್ಯಾಂಕುಗಳು ಮತ್ತು ಶೇಕಡಾ ೯೦ಕ್ಕೂ ಹೆಚ್ಚು ಖಾಸಗಿ ಬ್ಯಾಂಕುಗಳು ಈ ಗುರಿಯನ್ನು ಸಾಧಿಸಲಿಲ್ಲ. ಹೀಗೆ ಸಾರ್ವಜನಿಕ ಬ್ಯಾಂಕುಗಳು ಗ್ರಾಮೀಣ ಪ್ರದೇಶವನ್ನು ನಿರ್ಲಕ್ಷಿಸಿದವು. ವಾಣಿಜ್ಯ ಬ್ಯಾಂಕುಗಳು ಲಾಭಗಳಿಗೆ ಆಧ್ಯತೆ ನೀಡಲಾರಂಭಿಸಿವೆ. ಗ್ರಾಮೀಣ ಬ್ಯಾಂಕುಗಳು ಮತ್ತು ಸಹಕಾರಿ ಬ್ಯಾಂಕುಗಳು ಅದಕ್ಷತೆ ಮತ್ತು ಆಡಳಿತಾತ್ಮಕ ಸಮಸ್ಯೆಗಳಿಂದ ಕೂಡಿವೆ. ಇದು ಗ್ರಾಮೀಣ ಜನತೆಯ ಮುಖ್ಯವಾಗಿ ಸಣ್ಣ, ಅತೀಸಣ್ಣ ಭೂರಹಿತ ಕಾರ್ಮಿಕರನ್ನು ನಿರ್ಲಕ್ಷಿಸಲು ಕಾರಣ ಎನ್ನಲಾಗಿದೆ. ಇದರಿಂದ ಗ್ರಾಮೀಣ ಬ್ಯಾಂಕ್ ವ್ಯವಸ್ಥೆಯ ದೋಷವನ್ನು ಅರ್ಥಮಾಡಿಕೊಳ್ಳಬಹುದು. ಗ್ರಾಮೀಣ ಪ್ರದೇಶಗಳಲ್ಲಿ ಶೇಕಡಾ ೨೧ರಷ್ಟು ಜನ ಮಾತ್ರ ಔಪಚಾರಿಕ ಮೂಲಗಳಿಂದ ಹಣಕಾಸು ಸೌಲಭ್ಯ ಪಡೆಯುತ್ತಾರೆ. ಶೇಕಡಾ ೮೭ರಷ್ಟು ಸೀಮಾಂತ ರೈತರು ಸಾಂಸ್ಥಿಕ ಹಣಕಾಸು ಸೌಲಭ್ಯಗಳಿಂದ ವಂಚಿತರಾಗಿದ್ದಾರೆ.[೨]

ಕಡಿಮೆ ಬಡ್ಡಿದರಲ್ಲಿ ರೈತರಿಗೆ ಅಲ್ಪಾವಧಿ ಸಾಲ ಪೂರೈಕೆ ಮಾಡಿರುವ ಬ್ಯಾಂಕುಗಳಿಗೆ ಕೇಂದ್ರ ಸರ್ಕಾರ ಪರಿಹಾರ ಧನವಾಗಿ ಅಥವಾ ಉತ್ತೇಜನ ಹಣವಾಗಿ ೮೩೦೦ ಕೋಟಿ ಹಣ ಬಿಡುಗಡೆ ಮಾಡಿದೆ. ಕಾಲಕಾಲಕ್ಕೆ ಸಾಲ ಮರುಪಾವತಿ ಮಾಡುತ್ತಿರುವ ರೈತರು ಇದರ ಅನುಕೂಲ ಪಡೆಯಲಿದ್ದಾರೆ. ಹಣಕಾಸು ಇಲಾಖೆ ನಿರಂತರವಾಗಿ ಸಾಲ ಮರುಪಾವತಿ ಮಾಡುತ್ತಿರುವ ರೈತರ ಮಾಹಿತಿ ನೀಡುವಂತೆ ಬ್ಯಾಂಕುಗಳನ್ನು ಕೇಳಿದೆ. ನಾನ್‌ಪರ್‌ಫಾರ್ಮಿಂಗ್ ಸಾಲಗಳನ್ನು ಕಡಿಮೆ ಮಾಡುವ ಉದ್ದೇಶದಿಂದ ಸರ್ಕಾರ ಈ ಕ್ರಮ ಕೈಗೊಂಡಿದೆ. ಅದೇ ರೀತಿ ಸಹಕಾರಿ ಬ್ಯಾಂಕುಗಳು ಮತ್ತು ಗ್ರಾಮೀಣ ಬ್ಯಾಂಕುಗಳು ಅಲ್ಪಾವಧಿ ಬೆಳೆ ಸಾಲಗಳನ್ನು ಒದಗಿಸಲು ಸರ್ಕಾರ ನಬಾರ್ಡ್‌ಗೆ ಹೆಚ್ಚುವರಿಯಾಗಿ ೧೦೦೦೦ ಕೋಟಿಯನ್ನು ಬಿಡುಗಡೆ ಗೊಳಿಸಿದೆ. ಸರ್ಕಾರ ಕೃಷಿಗೆ ಒದಗಿಸಬೇಕಾದ ಸಾಲದ ಪ್ರಮಾಣವನ್ನು ಶೇಕಡಾ ೨೫ಕ್ಕೆ ಹೆಚ್ಚಿಸಿದೆ. ಆದ್ಯತಾ ವಲಯದ ನಿಯಮದಡಿ ಬ್ಯಾಂಕುಗಳು ಕೃಷಿ ಕ್ಷೇತ್ರಕ್ಕೆ ಶೇಕಡಾ ೧೮ರಷ್ಟು ಮುಂಗಡ ಸಾಲಗಳನ್ನು ನೀಡಬೇಕಾಗಿದೆ. ಇದರಿಂದ ಹಣಕಾಸು ಸಂಸ್ಥೆಗಳು ಮತ್ತು ಸರ್ಕಾರದ ಧೋರಣೆಯಿಂದ ತಿಳಿದುಬರುವುದೇನೆಂದರೆ ಬ್ಯಾಂಕುಗಳಿಂದ

ಸ್ಥಿರಾಸ್ತಿ ಭದ್ರತೆಯನ್ನು ನೀಡಿ ಸಾಲ ಸೌಲಭ್ಯ ಪಡೆಯಲು ಶಕ್ತರಾಗಿರುವವರು ಮಾತ್ರ ಹಣಕಾಸು ಸೌಲಭ್ಯಗಳನ್ನು ಪಡೆಯುವರು. ಸ್ಥಿರಾಸ್ತಿಗಳಿಲ್ಲದ ಸಾಮಾನ್ಯರಿಗೆ ಬಡವರಿಗೆ ಭೂರಹಿತ ಕೃಷಿ ಕಾರ್ಮಿಕರಿಗೆ ಸರ್ಕಾರದ ಮೇಲಿನ ಸೌಲಭ್ಯಗಳ ಪ್ರಯೋಜನ ದೊರೆಯುವುದಿಲ್ಲ.[೪೩]

ಬಡತನ ವಿರುದ್ಧದ ಸರ್ಕಾರದ ಹೋರಾಟದಲ್ಲಿ ಸಾಲ ಸೌಲಭ್ಯಗಳನ್ನು ಹೆಚ್ಚಿಸುವುದು ಸರ್ಕಾರದ ಪ್ರಮುಖ ಯೋಜನೆಯ ಅಂಶಗಳಲ್ಲಿ ಒಂದು. ಸ್ವಾತಂತ್ರ್ಯ ಬಂದಾಗಿನಿಂದಲೂ ಭಾರತ ಸರ್ಕಾರ ಈ ನಿಟ್ಟಿನಲ್ಲಿ ಪ್ರಯತ್ನಿಸುತ್ತಿದೆ. ಇಂತಹ ಪ್ರಯತ್ನಗಳಲ್ಲಿ ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣ, ಗ್ರಾಮೀಣ ಪ್ರದೇಶಗಳಲ್ಲಿ ಶಾಖೆಗಳ ವಿಸ್ತರಣೆ, ಆದ್ಯತಾ ವಲಯಕ್ಕೆ ಕಡ್ಡಾಯವಾದ ನೇರ ನಿರ್ದೇಶನ ಸಾಲ ಪೂರೈಕೆ, ಕಡಿಮೆ ಬಡ್ಡಿದರದ ಹಣಕಾಸು ಪೂರೈಕೆ, ಜಿಲ್ಲಾ ಮಟ್ಟದ ಗ್ರಾಮೀಣ ಬ್ಯಾಂಕುಗಳ ಸ್ಥಾಪನೆ, ಅಪೆಕ್ಸ್–ನಬಾರ್ಡ್‌ನ ಸ್ಥಾಪನೆ ಪ್ರಮುಖ ಪ್ರಯತ್ನಗಳಾಗಿವೆ. ಆದರೆ ಗ್ರಾಮೀಣ ಸಾಲ ಪೂರೈಕೆ ಲಾಭದಾಯಕವಾಗಲೂ ಇಲ್ಲ ಮತ್ತು ಬಡವರ ಅಗತ್ಯಗಳು ಪೂರೈಸುವುದೂ ಸಾಧ್ಯವಾಗಲಿಲ್ಲ. ಸಾಂಸ್ಥಿಕ ವ್ಯವಸ್ಥೆಯು ಪರಿಮಾಣಾತ್ಮಕ ಪ್ರಗತಿಯನ್ನು ಕಂಡಿತೇ ವಿನಃ ಗುಣಾತ್ಮಕ ಪ್ರಗತಿ ದೌರ್ಬಲ್ಯವಾಗಿಯೇ ಉಳಿಯಿತು.[೪೪]

ಗ್ರಾಮೀಣ ಸಾಲ ಮಾರುಕಟ್ಟೆಗಳು ಹೇಗೆ ಕಾರ್ಯನಿರ್ವಹಿಸುತ್ತವೆ. ಸ್ಥಳೀಯ ಲೇವಾದೇವಿಗಾರರ ಶೋಷಣೆಯ ಮನೋಭಾವ, ಸಾಂಸ್ಥಿಕ ಹಣಕಾಸು ಸಂಸ್ಥೆಗಳು ಭೂಮಿಯಂತಹ ಆಸ್ತಿ ಇಲ್ಲದೇ ಸಾಲ ಭದ್ರತೆ ನೀಡಲು ಸಾಧ್ಯವಾಗದೇ ಇರುವ ಬಡವರನ್ನು ನಿರ್ಲಕ್ಷಿಸಿರುವ ರೀತಿಯನ್ನು ಜಿನ್‌ಡ್ರಜ್‌ರವರು ವಿಶ್ಲೇಷಿಸಿದ್ದಾರೆ. ರೈತ ಸೇವಾ ಸಂಸ್ಥೆ (ಫಾರ್ಮರ್ಸ್ ಸರ್ವೀಸ್ ಸೊಸೈಟೀಸ್) ಕೆಲವೇ ಶ್ರೀಮಂತರ ನಿಯಂತ್ರಣದಲ್ಲಿರುವುದು ಲೇವಾದೇವಿಗಾರರು ಸಾಲ ನೀಡುವಾಗ ಬಳಸುವ ತಂತ್ರಗಳನ್ನು ಸಹಾ ಇವರು ವಿಶ್ಲೇಷಿಸಿದ್ದಾರೆ. ಸಾಲ ಸೌಲಭ್ಯ ಪಡೆಯುವಲ್ಲಿನ ಸಾಮಾಜಿಕ ಅಸಮಾನತೆ ಮುಂತಾದ ಅಂಶಗಳನ್ನು ಪಶ್ಚಿಮ ಉತ್ತರ ಪ್ರದೇಶದ ಪಾಲಂಪುರ್ ಎಂಬ ಗ್ರಾಮದಲ್ಲಿ ೧೯೮೭ರಲ್ಲಿ ಕೈಗೊಂಡ ಪ್ರಾಯೋಗಿಕ ಅಧ್ಯಯನದಲ್ಲಿ ಮೇಲಿನ ವಿಶ್ಲೇಷಣೆಯನ್ನು ಮಾಡಲಾಗಿದೆ. ಬಡವರು ಸಾಂಸ್ಥಿಕ ಹಣಕಾಸು ಸಂಸ್ಥೆಗಳಿಗೆ ಸಾಲ ಭದ್ರತೆ ನೀಡಲು ಸಾಧ್ಯವಾಗದೇ ಅನಿವಾರ್ಯವಾಗಿ ಲೇವಾದೇವಿಗಾರರಿಂದ ಹಣಕಾಸು ಪಡೆದು ಶೋಷಣೆಗೆ ಒಳಗಾಗುವರು. ಸಾಂಸ್ಥಿಕ ಸಂಸ್ಥೆಗಳು ಭೂ ಮಾಲೀಕರು ಮತ್ತು ಶ್ರೀಮಂತರಿಗೆ ಹಣಕಾಸನ್ನು ಒದಗಿಸುವುದನ್ನು ವಿಶ್ಲೇಷಿಸಲಾಗಿದೆ.[೪೫]

ಸ್ವಾತಂತ್ರ್ಯ ನಂತರ ಭಾರತದ ಗ್ರಾಮೀಣ ಸಾಲ ವ್ಯವಸ್ಥೆಗೆ ಸಂಬಂಧಿಸಿದ ಹಲವು ಸಮಿತಿಗಳ ವರದಿಗಳು ಈ ವ್ಯವಸ್ಥೆಯನ್ನು ಸರಿಪಡಿಸುವ ಮರು ಸಂಘಟಿಸುವ ಅಥವಾ ಅದಕ್ಕೆ ಹೊಸರೂಪ ಕೊಡುವ ಪ್ರಯತ್ನದಲ್ಲಿ ಇಡೀ ವ್ಯವಸ್ಥೆಯನ್ನು ಸಕೀರ್ಣಗೊಳಿಸಿರುವುದನ್ನು ಕಾಣಬಹುದು. ಗ್ರಾಮೀಣ ಸಾಲ ವ್ಯವಸ್ಥೆ ಮತ್ತು ಅದಕ್ಕೆ ಸಂಬಂಧಿಸಿದ ನೀತಿಯ ಮಟ್ಟದ ಬದಲಾವಣೆಗಳನ್ನು ಅನುಕ್ರಮವಾಗಿ ಇಲ್ಲಿ ವಿಶ್ಲೇಷಿಸಲಾಗಿದೆ. ಸ್ವಾತಂತ್ರ್ಯ ನಂತರದ ಗ್ರಾಮೀಣ ಅಭಿವೃದ್ಧಿಯ ಸಾಲದ

ಕತೆಯು ೧೯೫೪ರಲ್ಲಿ ಆರ್‌ಬಿಐ ರಚಿಸಿದ ಅಖಿಲ ಭಾರತ ಗ್ರಾಮೀಣ ಸಾಲ ಸಮೀಕ್ಷೆಯಿಂದ ಪ್ರಾರಂಭವಾಗುತ್ತದೆ. ಈ ಸಮೀಕ್ಷೆಯ ಪ್ರಕಾರ ೧೯೫೧-೫೨ರಲ್ಲಿ ಸಾಗುವಳಿದಾರರು ಪಡೆದ ಒಟ್ಟು ಸಾಲದಲ್ಲಿ ಶೇಕಡಾ ೯೩ರಷ್ಟನ್ನು ಖಾಸಗಿ ಹಣಕಾಸು ಸಂಸ್ಥೆಗಳು (ವಾಣಿಜ್ಯ ಬ್ಯಾಂಕುಗಳನ್ನು ಹೊರತುಪಡಿಸಿ) ಪೂರೈಸಿದವು. ಇದರಲ್ಲಿ ಶೇಕಡಾ ೫೦ರಷ್ಟು ಸಾಲವನ್ನು ಸಾಗುವಳಿದಾರರು ಕೌಟುಂಬಿಕ ವೆಚ್ಚಕ್ಕೆ ಬಳಸಿಕೊಂಡಿದ್ದರು. ಶೇಕಡಾ ೨೮ರಷ್ಟನ್ನು ಬಂಡವಾಳ ವೆಚ್ಚಕ್ಕೆ ಹಾಗೂ ಶೇಕಡಾ ೧೦ರಷ್ಟನ್ನು ಪ್ರಸ್ತುತ ಕೃಷಿ ಚಟುವಟಿಕೆಗೆ ಬಳಸಿಕೊಂಡಿದ್ದರು. ದೊಡ್ಡಸಾಗುವಳಿದಾರರು ಸಾಂಸ್ಥಿಕ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದಿದ್ದರು. ಆದರೆ ಸಣ್ಣ ಸಾಗುವಳಿದಾರರು ಖಾಸಗಿ ಹಣಕಾಸು ಮೂಲದಿಂದ ಹಣಕಾಸು ಪಡೆದಿದ್ದರು. ೧೯೫೪ರ ಅಖಿಲ ಭಾರತ ಸಾಲ ಸಮೀಕ್ಷೆ, ೧೯೬೯ರ ಗ್ರಾಮೀಣ ಸಾಲ ಪರಿಶೀಲನಾ ಸಮಿತಿ, ೧೯೭೧ರ ರಾಷ್ಟ್ರೀಯ ಕೃಷಿ ಆಯೋಗದ ಸ್ಥಾಪನೆ, ೧೯೭೫ರ ವರ್ಕಿಂಗ್ ಗ್ರೂಪ್ಸ್ ಆನ್‌ರೂರಲ್ ಬ್ಯಾಂಕ್ ಮತ್ತು ೧೯೭೮ರ ಕೃಷಿ ಸಾಂಸ್ಥಿಕ ಸಾಲ ಮತ್ತು ಗ್ರಾಮೀಣಾಭಿವೃದ್ಧಿಗೆ ಸಂಬಂಧಿಸಿದ ಆರ್‌ಬಿಐನ ಸಮಿತಿ (ಸಿಆರ್‌ಎಎಫ್‌ಐಸಿಎಆರ್‌ಡಿ. ಹಲವು ಸಮಿತಿ-ವರದಿಗಳು ಕೃಷಿ ಸಾಲ ವ್ಯವಸ್ಥೆಯನ್ನು ಸಂಕೀರ್ಣಗೊಳಿಸಿದವು. ಬಹುಸಂಸ್ಥೆ ವಿಧಾನದಲ್ಲಿ ಹಲವು ಸಮಸ್ಯೆಗಳು ಸೃಷ್ಟಿಯಾದವು. ಗ್ರಾಮೀಣ ಸಾಲ ವ್ಯವಸ್ಥೆಗಿಂತ ಕೃಷಿ ಉತ್ಪಾದನಾ ವ್ಯವಸ್ಥೆಯಲ್ಲಿ ಮುಖ್ಯವಾಗಿ ಪರಿಗಣಿಸಬೇಕಾಗುತ್ತಿದೆ ಎನ್ನಲಾಗಿದೆ.[೬]

ಸಂಘಟಿತ ಬ್ಯಾಂಕುಗಳ ಪಾತ್ರದ ವಿಸ್ತರಣೆಯಿಂದ ಅಸಂಘಟಿತ ಹಣಕಾಸು ಮಾರುಕಟ್ಟೆಗಳ ಮಹತ್ವ ಕಡಿಮೆಯಾಗಿದ್ದರೂ ಭಾರತದ ಆರ್ಥಿಕತೆಯಲ್ಲಿ ಇಂದಿಗೂ ಇದು ತನ್ನ ಶಕ್ತಿಯನ್ನು ಉಳಿಸಿಕೊಂಡಿದೆ. ಅನೌಪಚಾರಿಕ ಹಣಕಾಸು ಮಾರುಕಟ್ಟೆಗಳು ನಗದು ಹಣಕಾಸು ಪೂರೈಕೆಯಲ್ಲಿ ತೊಡಗಿರುತ್ತವೆ. ವಿಶ್ವದ ಎಲ್ಲಾ ಭಾಗಗಳಲ್ಲೂ ಈ ಮಾರುಕಟ್ಟೆಗಳು ಕಾರ್ಯ ನಿರ್ವಹಿಸುತ್ತಿವೆ. ಅಮೇರಿಕಾದಲ್ಲಿ ೧೯೭೦ರ ನಂತರ ಅಸಂಘಟಿತ ಹಣಕಾಸು ಮಾರುಕಟ್ಟೆಗಳ ವ್ಯವಹಾರ ದ್ವಿಗುಣಗೊಂಡಿತು. ೧೯೭೭ರಲ್ಲಿ ಅಮೇರಿಕಾದಲ್ಲಿ ಅಸಂಘಟಿತ ಮತ್ತು ಬ್ಯಾಂಕೇತರ ವಾಣಿಜ್ಯ ಸಾಲ ಮಾರುಕಟ್ಟೆಗಳು $ ೭೦ ಬಿಲಿಯನ್‌ನಷ್ಟು ಹಣಕಾಸನ್ನು ಪೂರೈಸಿದವು. ಭಾರತದಲ್ಲಿ ಅಸಂಘಟಿತ ಹಣಕಾಸು ಮಾರುಕಟ್ಟೆಗಳು ಹಣಕಾಸನ್ನು ಪೂರೈಸುತ್ತಿವೆ. ಕಲ್ಕತ್ತಾ, ಗುಜರಾತ್, ದೆಹಲಿ, ಅಮೃತ್‌ಸರ, ಕಾನ್ಪುರ, ಕೇಂದ್ರ ಭಾರತ, ಬಾಂಬೆಗಳಲ್ಲಿ ನಡೆಸಿದ ಅಧ್ಯಯನದ ಪ್ರಕಾರ ನಗರ ಪ್ರದೇಶಗಳಲ್ಲಿ ಅಸಂಘಟಿತ ಹಣಕಾಸು ಮಾರುಕಟ್ಟೆ ಕ್ರಿಯಾಶೀಲವಾಗಿದೆ. ಅಸಂಘಟಿತ ಮಾರುಕಟ್ಟೆ ಸಂಸ್ಥೆಗಳೆಂದರೆ ಶಿಕಾರ್‌ಪುರೀಸ್, ಗುಜರಾತೀಸ್, ಚೆಟ್ಟಿಆರ್ಸ್ ಮತ್ತುರಸ್ತೋಗೀಸ್ ಇತ್ಯಾದಿ. ಈ ಸಂಸ್ಥೆಗಳು ಸಂಘಟಿತ ಮತ್ತು ಅಸಂಘಟಿತ ಉದ್ಯಮ ಚಟುವಟಿಕೆಗಳಿಗೆ ಹಣಕಾಸನ್ನು ಪೂರೈಸುತ್ತವೆ. ೧೯೭೨ರ ಬ್ಯಾಂಕಿಂಗ್ ಆಯೋಗ ಈ ಸಂಸ್ಥೆಗಳನ್ನು ಸ್ಥಳೀಯ ಬ್ಯಾಂಕರ್‌ಗಳೆಂದು ವ್ಯಾಖ್ಯಾನಿಸಿತು. ಸಾಲಗಾರರು ಈ ಅಸಂಘಟಿತ ಮಾರುಕಟ್ಟೆಗಳಿಂದ ದುಬಾರಿ ಬಡ್ಡಿದರದಲ್ಲಿ ಸಾಲ ಪಡೆಯಲು ಇಚ್ಚಿಸುತ್ತಾರೆ ಕಾರಣ ಈ ವಲಯದಿಂದ ಅತ್ಯಂತ ವೇಗವಾಗಿ ನಗದು ಸಾಲ

ದೊರೆಯುತ್ತದೆ. ಹಣಕಾಸು ಒದಗಿಸುವ ನಿಯಮಗಳು ಸಂಘಟಿತ ಬ್ಯಾಂಕಿಂಗ್ ವ್ಯವಸ್ಥೆಗೆ ಹೋಲಿಸಿದರೆ ಸರಳ. ಗ್ರಾಮೀಣ ಪ್ರದೇಶಗಳಲ್ಲೂ ಅಸಂಘಟಿತ ಹಣಕಾಸು ಮಾರುಕಟ್ಟೆಗಳು ಸಕ್ರೀಯವಾಗಿ ಕಾರ್ಯ ನಿರ್ವಹಿಸುತ್ತಿವೆ. ೧೯೭೧–೭೨ರ ಅಖಿಲ ಭಾರತ ಸಾಲ ಮತ್ತು ಹೂಡಿಕೆ ಸಮೀಕ್ಷೆ ಪ್ರಕಾರ ಶೇಕಡಾ ೭೫ರಷ್ಟು ಗ್ರಾಮೀಣ ಕುಟುಂಬಗಳು ಶೇಕಡಾ ೨೫ಕ್ಕಿಂತಲೂ ಅದಿಕ ಬಡ್ಡಿದರದಲ್ಲಿ ಅನೌಪಚಾರಿಕ/ಅಸಂಘಟಿತ ಹಣಕಾಸು ಮಾರುಕಟ್ಟೆಗಳಿಂದ ಸಾಲವನ್ನು ಪಡೆಯುತ್ತವೆ. ೧೯೭೧ರ ಅಧ್ಯಯನವೊಂದರ ಪ್ರಕಾರ ಸ್ಥಳೀಯ ಬ್ಯಾಂಕರ್ಸ್‌ಗಳು ಭಾರತದ ಹಣಕಾಸು ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ನಿರ್ವಹಿಸುತ್ತವೆ.[೪೭]

೨೦೦೮–೦೯ರ ಆಯವ್ಯಯದಲ್ಲಿ ಸಾಲ ಮನ್ನಾ ಯೋಜನೆ ಜಾರಿಗೆ ತರಲಾಯಿತು. ೪೦ ದಶಲಕ್ಷ ರೈತರು ಈ ಯೋಜನೆಯ ಅನುಕೂಲ ಪಡೆದರು. ಇದಕ್ಕೆ ಅರ್ಥಶಾಸ್ತ್ರಜ್ಞರು ಮತ್ತು ಇತರೆ ಪ್ರಜ್ಞಾವಂತರಿಂದ ವಿರೋದ ಬಂದಿತು. ಹಣಕಾಸು ಮಂತ್ರಿಗಳು ಸಾಲ ಮನ್ನಾ ಮಾಡದೇ ಇದ್ದರೆ ರೈತರು ಇನ್ನಷ್ಟು ಕಷ್ಟಕ್ಕೆ ಸಿಲುಕುತ್ತಿದ್ದರು ಹಾಗೂ ಅವರ ಋಣಬಾರ ಹೆಚ್ಚಾಗುತ್ತಿತ್ತು. ೧೯೮೯ರಲ್ಲಿ ಗ್ರಾಮೀಣ ಸಾಲ ವಿನಾಯಿತಿ ಯೋಜನೆಯನ್ನು ಜಾರಿಗೆ ತಂದಿದರ ಪರಿಣಾಮ ಸಾಲ ಪಡೆದವರುರೂ. ೧೦ ಸಾವಿರ ವರೆಗೂ ಸಾಲದಲ್ಲಿ ವಿನಾಯಿತಿ ಪಡೆದರು. ನಿರಂತರವಾಗಿ ಸಾಲ ಪಡೆದು ಡಿಫಾಲ್ಟ್‌ಗಳಾಗಿದ್ದವರೂ ಸಹಾ ಈ ಯೋಜನೆಯ ಪ್ರಯೋಜನ ಪಡೆದರು. ಹೀಗೆ ಸಾಲ ಮನ್ನಾ ಯೋಜನೆಯಿಂದ ಪ್ರಯೋಜನ ಪಡೆದ ಶ್ರೀಮಂತ ಜಮೀನ್ದಾರರು ಇದರಿಂದ ಸಂತೋಷ ಹೊಂದಿದರು ಎಂದು ಈ ಅಧ್ಯಯನ ವಿಶ್ಲೇಷಿಸುತ್ತದೆ. ಅನೇಕ ಅಧ್ಯಯನಗಳ ಪ್ರಕಾರ ಇಂದಿಗೂ ಸಹಕಾರಿ ಸಂಸ್ಥೆಗಳು ಶ್ರೀಮಂತರ ಹಿಡಿತದಲ್ಲಿವೆ. ಶ್ರೀಮಂತ ಜಮೀದ್ದಾರರು ಈ ಸಂಸ್ಥೆಗಳಿಂದ ಸಾಲ ಪಡೆಯುತ್ತಾರೆ ಹಾಗೂ ಸಾಲಮನ್ನಾ ಯೋಜನೆಗಳಿಂದ ಲಾಭ ಪಡೆಯುತ್ತಾರೆ ಆದರೆ ಸಾಲ ಪಡೆಯುವ ಸಾಮರ್ಥ್ಯವಿಲ್ಲದವರು, ಸಾಮಾಜಿಕವಾಗಿ ನಿರ್ಲಕ್ಷಿತರಾದ ಬಡವರು ಸಹಕಾರಿ ಸಂಸ್ಥೆಗಳಿಂದ ಯಾವುದೇ ಪ್ರಯೋಜನ ಪಡೆಯದೇ ಇರುವುದನ್ನು ಕಾಣಬಹುದು. ಈ ಹಿನ್ನೆಲೆಯಲ್ಲಿ ಸಹಕಾರಿ ಸಂಸ್ಥೆಗಳ ಉದ್ದೇಶಗಳು, ಸಾಮಾಜಿಕ ತತ್ವಗಳು ಮತ್ತು ಸಾಲ ನೀತಿಗಳನ್ನು ಪರಿಶೀಲಿಸುವ ಅಗತ್ಯವಿದೆ.[೪೮]

ಕೇಂದ್ರ ಕಾರ್ಮಿಕ ಸಚಿವಾಲಯ ೧೯೭೪–೭೫ರಲ್ಲಿ ನಡೆಸಿದ ಗ್ರಾಮೀಣ ಕಾರ್ಮಿಕ ತನಿಖೆಯಿಂದ ಗ್ರಾಮೀಣ ಪ್ರದೇಶದ ಕೂಲಿ ಕಾರ್ಮಿಕರ ಆರ್ಥಿಕ ಪರಿಸ್ಥಿತಿ ನಿರ್ಲಕ್ಷಿಸಲ್ಪಟ್ಟಿರುವುದನ್ನು ತಿಳಿದುಕೊಳ್ಳಬಹುದು. ಕನಿಷ್ಟ ಕೂಲಿ ಕಾಯ್ದೆ ಬಗೆಗಿನ ಕೃಷಿ ಕಾರ್ಮಿಕರ ತಿಳುವಳಿಕೆ ಮಟ್ಟ ಮತ್ತು ಟ್ರೇಡ್ ಯೂನಿಯನ್ ಚಳುವಳಿಗಳಲ್ಲಿ ಕೃಷಿ ಕಾರ್ಮಿಕರ ಪಾಲ್ಗೊಳ್ಳುವಿಕೆಯ ಪರಿಸ್ಥಿತಿಯನ್ನು ಈ ತನಿಖೆ ತಿಳಿಸುತ್ತದೆ. ಈ ತನಿಖೆ ಪ್ರಕಾರ ಕೃಷಿ ಕಾರ್ಮಿಕರ ಕನಿಷ್ಠ ಕೂಲಿ ಕಾಯ್ದೆ ಬಗೆಗಿನ ತಿಳುವಳಿಕೆ ತುಂಬಾ ಕಡಿಮೆ ಇದ್ದು, ಕೇವಲ ಶೇಕಡಾ ೧ರಷ್ಟು ಮಾತ್ರ ಟ್ರೇಡ್ ಯೂನಿಯನ್‌ಗಳಲ್ಲಿ ಸದಸ್ಯರಾಗಿದ್ದಾರೆ. ಈ ತನಿಖೆ ಪ್ರಕಾರ ೧೯೭೪–೭೫ರ ಅವಧಿಯಲ್ಲಿ ಕೃಷಿ ಕಾರ್ಮಿಕ ಕುಟುಂಬಗಳು

೧೫.೩೪ ಮಿಲಿಯನ್ ಇದ್ದದ್ದು ೨೦.೨೪ ಮಿಲಿಯನ್‌ಗೆ ಹೆಚ್ಚಾಗಿವೆ. ಇದರ ಪ್ರಮಾಣ ಶೇಕಡಾ ೨೧.೭೯ರಷ್ಟಿದ್ದದ್ದು ಶೇಕಡಾ ೨೫.೨೬ರಕ್ಕೆ ಹೆಚ್ಚಾಗಿದೆ. ಅದೇ ರೀತಿ ಕೃಷಿಯಲ್ಲಿ ದುಡಿಯುವ ಕಾರ್ಮಿಕರ ಸಂಖ್ಯೆ ೧೧೮.೨೯ ಮಿಲಿಯನ್‌ನಿಂದ ೧೨೯.೧೦ ಮಿಲಿಯನ್‌ಗೆ ಹೆಚ್ಚಾಗಿದೆ. ಒಟ್ಟಾರೆ ಕೃಷಿ ಕಾರ್ಮಿಕ ಕುಟುಂಬಗಳ ಸಂಖ್ಯೆ ಹೆಚ್ಚಾಗಲು ಕೆಲವು ಅಂಶಗಳನ್ನು ಗುರ್ತಿಸಲಾಗಿದೆ. ಅವುಗಳೆಂದರೆ, ಗುತ್ತಿಗೆದಾರರಿಗೆ (ಟೆನೆಂಟ್) ಭೂ ಮಾಲೀಕತ್ವ ದೊರೆಯದಿರುವುದು, ಬಡ ರೈತರು ಜಮೀನುಗಳನ್ನು ಮಾರಾಟ ಮಾಡಿರುವುದು ಮುಖ್ಯವಾದ ಅಂಶಗಳು. ೧೯೭೪-೭೫ರ ಅಂಕಿಅಂಶಗಳ ಪ್ರಕಾರ ಜಮೀನು ಹೊಂದಿರುವ ಮತ್ತು ಭೂಮಿ ಹೊಂದಿರದ ಕೃಷಿ ಕಾರ್ಮಿಕ ಕುಟುಂಬಗಳು ಹೆಚ್ಚಾಗಿರುವುದನ್ನು ನೋಡಬಹುದು. ಜೀವನ ವೆಚ್ಚ ಹೆಚ್ಚಾಗಿರುವುದರಿಂದ ಸಣ್ಣ ಮತ್ತು ಅತೀ ಸಣ್ಣ ರೈತರು ಬೇರೆಯವರ ಜಮೀನುಗಳಲ್ಲಿ ದುಡಿಯುವಂತಾಗಿದೆ. ವಸ್ತುಗಳ ಬೆಲೆ ಹೆಚ್ಚಳದಿಂದ ಸಣ್ಣ ರೈತರು, ಕೃಷಿ ಕಾರ್ಮಿಕರು ತೊಂದರೆಗೊಳಗಾಗಿದ್ದರೆ ಶ್ರೀಮಂತ ರೈತರು ಮತ್ತು ವ್ಯಾಪಾರಸ್ಥರು ಇದರಿಂದ ಪ್ರಯೋಜನ ಪಡೆದಿದ್ದಾರೆ. ಹಾಗೆ ಕೃಷಿ ಕಾರ್ಮಿಕ ಕುಟುಂಬಗಳ ಉದ್ಯೋಗವಕಾಶಗಳು ಸಹಾ ಕಡಿಮೆಯಾಗಿವೆ. ಹಣದ ಲೇವಾದೇವಿಗಾರರು ಗ್ರಾಮೀಣ ಕೃಷಿ ಕುಟುಂಬಗಳ ಮುಖ್ಯ ಸಾಲದ/ ಹಣಕಾಸು ಮೂಲವಾಗಿ ಉಳಿದರು. ಈ ಮೂಲದ ಮೇಲಿನ ಅವಲಂಭನೆ ೧೯೬೪-೬೫ರಲ್ಲಿ ಶೇಕಡಾ ೩೦.೬ರಷ್ಟಿದ್ದದ್ದು ೧೯೭೪-೭೫ರಲ್ಲಿ ಶೇಕಡಾ ೪೯.೮ಕ್ಕೆ ಹೆಚ್ಚಾಯಿತು. ಬಹುತೇಕ ಹಣಕಾಸು ಅಥವಾ ಸಾಲ ಉದ್ಯೋಗಸ್ತರು, ವ್ಯಾಪಾರಸ್ಥರು, ಅಂಗಡಿ ಮಾಲೀಕರು ಮುಂತಾದ ಸಾಂಸ್ಥಿಕೇತರ ಮೂಲಗಳಿಂದ ಪೂರೈಕೆಯಾಗುತ್ತಿತ್ತು. ಸಾಂಸ್ಥಿಕ ಹಣಕಾಸು ಮೂಲದ ಪ್ರಮಾಣ ಅತೀ ಕಡಿಮೆ ಇತ್ತು. ಒಟ್ಟು ಸಾಲದಲ್ಲಿ ಸಹಕಾರಿ ಸಂಸ್ಥೆಗಳ ಪ್ರಮಾಣ ೧೯೬೪-೬೫ರಲ್ಲಿ ಶೇಕಡಾ ೫.೧ರಷ್ಟಿದ್ದದ್ದು ೧೯೭೪-೭೫ರಲ್ಲಿ ಶೇಕಡಾ ೫.೩ರಷ್ಟಾಗಿತ್ತು. ಪರಿಶಿಷ್ಟ ಜಾತಿ ಜನರಿಗೆ ಸಹಕಾರಿ ಸಾಲ ಲಭ್ಯತೆಯ ಪ್ರಮಾಣ ಶೇಕಡಾ ೪.೭ ರಿಂದ ೩.೮ಕ್ಕೆ ಕಡಿಮೆಯಾಯಿತು. ಸಾಂಸ್ಥಿಕ ಹಣಕಾಸು ಸಂಸ್ಥೆಗಳು ಕೃಷಿ ಕಾರ್ಮಿಕ ಕಟುಂಬಗಳು ತಾವು ಪಡೆಯುವ ಸಾಲವನ್ನು ಅನುಭೋಗಕ್ಕೆ ಬಳಸಿಕೊಳ್ಳುತ್ತಾರೆ ವಿನಃ ಉತ್ಪಾದಕ ಉದ್ದೇಶಗಳಿಗಲ್ಲ ಎಂದು ವಾದಿಸುತ್ತವೆ ಆದರೆ ಗ್ರಾಮೀಣ ಬಡವರ ಸಾಲ ಅಗತ್ಯಗಳನ್ನು ಪೂರೈಸುವಲ್ಲಿ ಅವುಗಳು ವಿಫಲವಾಗಿರುವುದನ್ನು ಮುಚ್ಚಿಕೊಳ್ಳಲು ಈ ರೀತಿ ವಾದಿಸುತ್ತವೆ. ಕೃಷಿ ಕಾರ್ಮಿಕರ ಅನುಭೋಗದ ಮೇಲಿನ ವೆಚ್ಚ ೧೯೬೪-೬೫ರಲ್ಲಿ ಶೇಕಡಾ ೫೩.೩ರಷ್ಟಿದ್ದದ್ದು ೧೯೭೪-೭೫ರಲ್ಲಿ ಶೇಕಡಾ ೪೮.೨ಕ್ಕೆ ಕಡಿಮೆ ಯಾಗಿರುವುದು ಇದಕ್ಕೆ ನಿದರ್ಶನ.[೯]

ಸಾಲ (ಕ್ರೆಡಿಟ್) ಗ್ರಾಮೀಣ ಅಭಿವೃದ್ಧಿಯ ಪರಿಣಾಮಕಾರಿ ಸಾಧನ ಮತ್ತು ಕೃಷಿಯ ಪ್ರಮುಖ ಹೂಡುವಳಿ (ಇನ್‌ಪುಟ್). ಗ್ರಾಮೀಣ ಸಾಲ ನೀಡಿಕೆ ವ್ಯವಸ್ಥೆಯು ಸಹಕಾರಿ ಸಂಸ್ಥೆಗಳು, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕುಗಳು, ವಿಸ್ತೃತವಾಗಿ ಹರಡಿಕೊಂಡಿರುವ ಅನೌಪಚಾರಿಕ ಸಾಲ ಮೂಲಗಳು ಇತ್ಯಾದಿ ಅನೇಕ ಸಂಸ್ಥೆಗಳನ್ನು ಒಳಗೊಂಡಿದೆ.

ಸರ್ಕಾರದ ಸಾಲ ನೀತಿಯ ಮುಖ್ಯ ಉದ್ದೇಶ ಸಾಂಸ್ಥಿಕೇತರ ಹಣಕಾಸು ಮೂಲದ ಪಾತ್ರವನ್ನು ಕಡಿಮೆ ಮಾಡುವುದು. ಈ ನಿಟ್ಟಿನಲ್ಲಿ ಸ್ವಾತಂತ್ರ್ಯ ಬಂದಾಗಿನಿಂದ ಗ್ರಾಮೀಣ ಸಾಲ/ ಹಣಕಾಸಿಗೆ ಸಂಬಂಧಿಸಿದಂತೆ ಅನೇಕ ಕ್ರಮಗಳನ್ನು ಕೈಗೊಂಡಿದೆ. ಈ ಎಲ್ಲಾ ಕ್ರಮಗಳ ನಡುವೆಯು ಗ್ರಾಮಿಣ ಹಣಕಾಸು ಒಂದು ಮುಖ್ಯ ಕಳಕಳಿ ಅಂಶವಾಗಿಯೇ ಉಳಿದಿದೆ. ಹಣದ ಲೇವಾದೇವಿಗಾರರು ಗ್ರಾಮೀಣ ಪ್ರದೇಶಗಳ ಸಾಲ ನೀಡಿಕೆ ವ್ಯವಸ್ಥೆಯಲ್ಲಿ ಹಿಂದಿಗೂ ಪ್ರಬಲ ಮೂಲವಾಗಿ ಉಳಿದಿದ್ದಾರೆ. ಗ್ರಾಮೀಣ ಕುಟುಂಬಗಳು ಹಣಕಾಸು ಅಗತ್ಯಗಳಿಗೆ ಇವರನ್ನೇ ಆಶ್ರಯಿಸಿವೆ. ಸಾಂಸ್ಥಿಕ ಹಣಕಾಸು ವ್ಯವಸ್ಥೆ ಬಡವರಿಗೆ ತಲುಪದ ಮೂಲವಾಗಿಯೇ ಉಳಿದಿದೆ.

೧೯೯೧ರ ಹಣಕಾಸು ಸುಧಾರಣೆ ಬ್ಯಾಂಕುಗಳ ಲಾಭ ಗಳಿಕೆಗೆ ಹೆಚ್ಚಿನ ಆದ್ಯತೆ ನೀಡಿದ್ದು ಮತ್ತು ಸಹಕಾರಿ ಸಂಸ್ಥೆಗಳು ಮತ್ತು ಗ್ರಾಮೀಣ ಬ್ಯಾಂಕುಗಳು ತಮ್ಮ ಪ್ರಾಥಮಿಕ ಜವಾಬ್ದಾರಿಗಳನ್ನು ನಿರ್ಲಕ್ಷಿಸಿ ಬಡವರು ಶೋಷಣೆಯ ಮೂಲಕ್ಕೆ ಹಿಂತಿರುಗುವಂತಾಯಿತು. ಸಮಾಜದ ದುರ್ಬಲ ವರ್ಗಗಳೆಂದು ಪರಿಗಣಿಸಿರುವ ಪರಿಶಿಷ್ಟ ಜಾತಿ ಮತ್ತು ಹಿಂದುಳಿದ ಜನಾಂಗಗಳು ಶೋಷಿತ ಮೂಲದಿಂದಲೇ ಇಂದಿಗೂ ಹಣಕಾಸನ್ನು ಪಡೆಯುತ್ತಾರೆ. ಅನೇಕ ಕಾರಣಗಳಿಂದಾಗಿ ಗ್ರಾಮೀಣ ಬಡ ಕುಟುಂಬಗಳು ಅನೌಪಚಾರಿಕ ಸಾಲ ಮೂಲಗಳನ್ನು ಅವಲಂಭಿಸುತ್ತಾರೆ. ಲೇವಾದೇವಿಗಾರರು, ವ್ಯಾಪಾರಸ್ಥರು ಮತ್ತು ಜಮೀನ್ದಾರರಿಂದ ಬಡವರು ಅನುಭೋಗಕ್ಕಾಗಿ (ಕನ್ಸಮ್‌ಶನ್) ಮತ್ತು ದುಡಿಯುವ ಬಂಡವಾಳಕ್ಕಾಗಿ (ವರ್ಕಿಂಗ್ ಕ್ಯಾಪಿಟಲ್) ಸಾಲ ಪಡೆಯುತ್ತಾರೆ. ಅನೌಪಚಾರಿಕ ಮೂಲದ ಕಡಿಮೆ ವ್ಯವಹಾರ ವೆಚ್ಚ ಸರಳ ಸಾಲ ನೀಡಿಕೆ ನಿಯಮಗಳು, ತ್ವರಿತವಾಗಿ ನಗದುರೂಪದಲ್ಲಿ ಸಾಲ ನೀಡಿಕೆ, ಸಾಲ ನೀಡುವವರು ಸ್ಥಳೀಯವಾಗಿ ಲಭಿಸುವುದು ಇತ್ಯಾದಿಗಳು ಮುಖ್ಯ ಕಾರಣ ಗಳಾಗಿವೆ. ಸಾಂಸ್ಥಿಕೇತರ ಹಣಕಾಸು ಮೂಲದ ಬಡ್ಡಿದರ ಅಧಿಕ. ೧೯೯೧-೯೨ರಲ್ಲಿ ಬಡ್ಡಿದರ ಶೇಕಡಾ ೩೬ರಷ್ಟಿದ್ದದ್ದು ೨೦೦೨-೦೩ರಕ್ಕೆ ಶೇಕಡಾ ೪೨ಕ್ಕೆ ಹೆಚ್ಚಿತು. ಅಂದರೆ ಸಾಂಸ್ಥಿಕ ಹಣಕಾಸು ವ್ಯವಸ್ಥೆಗಿಂತ ಮೂರು ಪಟ್ಟು ಹೆಚ್ಚು. ಸಾಂಸ್ಥಿಕ ಸಾಲ ವಿತರಣೆಯಲ್ಲಿ ಪ್ರಾದೇಶಿಕ ಅಸಮಾನತೆಯನ್ನು ಕಾಣಬಹುದು. ಕೃಷಿ ಮತ್ತು ಆರ್ಥಿಕವಾಗಿ ಮುಂದುವರೆದ ಉತ್ತರ ಪಶ್ಚಿಮ ಮತ್ತು ಕೇಂದ್ರ ಪ್ರದೇಶಗಳು ಹೆಚ್ಚು ಸಾಲ/ಹಣಕಾಸನ್ನು ಪಡೆದರೆ ಬಿಹಾರ ಮತ್ತು ಈಶಾನ್ಯ ಭಾರತದ ರಾಜ್ಯಗಳು ಅತೀ ಕಡಿಮೆ ಪಡೆದಿವೆ. ಕರ್ನಾಟಕದಲ್ಲಿ ಸಾಂಸ್ಥಿಕ ಮತ್ತು ಸಾಂಸ್ಥಿಕೇತರ-ಎರಡು ಮೂಲಗಳು ಸಮಪಾಲನ್ನು ಹೊಂದಿವೆ. ಗ್ರಾಮೀಣ ಕೃಷಿಕರ ಅಲ್ಪಾವಧಿ ಸಾಲ ಅಗತ್ಯಗಳ ಪೂರೈಸಲು ಜಾರಿಗೆ ತಂದ ಕಿಸಾನ್ ಕ್ರೆಡಿಟ್ ಕಾರ್ಡ್‌ಗಳಿಂದ ಶ್ರೀಮಂತರು ಮತ್ತು ಸಾಮಾನ್ಯ ವರ್ಗ/ಜಾತಿಗಳು ಇದರಿಂದ ಹೆಚ್ಚು ಪ್ರಯೋಜನೆ ಪಡೆಯುತ್ತಿವೆ.[೫೦]

ಸ್ವಾತಂತ್ರ್ಯ ನಂತರ ಭಾರತ ಸರ್ಕಾರ ಆಹಾರ ಉತ್ಪಾದನೆಯ ಕುಸಿತವನ್ನು ತಡಯುವ ಕಡೆ ಗಮನ ಹರಿಸಿತು. ಈ ಕುಸಿತಕ್ಕೂ ಕೃಷಿ ವ್ಯವಸ್ಥೆಯ ಅಸಮಾನತೆಗೂ ಸಂಬಂಧವಿದೆ. ಅಧಿಕ ಪ್ರಮಾಣದ ಸಾಗುವಳಿ ಭೂಮಿ ಶ್ರೀಮಂತರ ಹಿಡಿತದಲ್ಲಿತ್ತು. ವಿಶೇಷವಾಗಿ ಉತ್ತರ ಪ್ರದೇಶ,

ಬಿಹಾರ ಮತ್ತು ಪಶ್ಚಿಮ ಬಂಗಾಳದ ಜಮೀನ್ದಾರರು ಅಧಿಕ ಪ್ರಮಾಣದ ಹಿಡುವಳಿ ಭೂಮಿಯನ್ನು ತಮ್ಮ ನಿಯಂತ್ರಣದಲ್ಲಿ ಹಿಟ್ಟುಕೊಂಡಿದ್ದರು. ಸಮತೋಲನ ಕೃಷಿ ವ್ಯವಸ್ಥೆ, ಭೂ ಉತ್ಪಾದಕತೆಯ ಹೆಚ್ಚಳ ಹಾಗೂ ಭೂ ಸುಧಾರಣೆಗಳ ಮೂಲಕ ಆಹಾರ ಉತ್ಪಾದನೆಯನ್ನು ಹೆಚ್ಚಿಸಲು ಉದ್ದೇಶಿಸಲಾಗಿತ್ತು. ಜಮೀನ್ದಾರಿ ಮತ್ತು ಜಹಗೀರ್‌ದ್ದಾರಿ ಪದ್ಧತಿಯ ನಿಷೇದ ಮತ್ತು ಉಳುವವನೇ ಹೊಡೆಯ ಕಾನೂನಿನ ಮೂಲಕ ಈ ಉದ್ದೇಶ ಸಾಧಿಸಲು ಆಶಿಸಲಾಗಿತ್ತು. ಭೂ ಸುಧಾರಣೆಗಳು ಭೂ ಹೊಡೆತನದಲ್ಲಿನ ಒಟ್ಟು ಅಸಮಾನತೆಯನ್ನು ಸರಿಪಡಿಸುವ ಆಶಯ ಹೊಂದಿದ್ದವು. ಆದರೆ ಭೂ ಸುಧಾರಣೆಯ ಕಾನೂನುಗಳು ಭೂ ಮಾಲೀಕರಿಗೆ ಅನುಕೂಲವಾಗುವ ರೀತಿಯಲ್ಲಿದ್ದವು. ಶ್ರೀಮಂತ ಭೂ ಮಾಲೀಕರ ರಾಜಕೀಯ ಅಧಿಕಾರ ಮತ್ತು ಪ್ರಭಾವ ಬೀರುವ ಅಂಶಗಳಿಂದಾಗಿ ಭೂ ಸುಧಾರಣೆ ನಿರೀಕ್ಷಿತ ಬದಲಾವಣೆ ತರುವಲ್ಲಿ ವಿಫಲವಾಯಿತು. ಭೂ ಸುಧಾರಣೆಯ ದೋಷಪೂರಿತ ಅನುಷ್ಠಾನದಿಂದ ಭೂ ಮಾಲೀಕತ್ವದಲ್ಲಿ ಯಾವುದೇ ಬದಲಾವಣೆಗಳಾಗಲಿಲ್ಲ. ಬದಲಾಗಿ ಆಂದ್ರದ ಕರ್ನೂಲ್ ಜಿಲ್ಲೆಯ ಒಂದು ಗ್ರಾಮದಲ್ಲಿ ನಡೆಸಿದ ಅಧ್ಯಯನದ ಪ್ರಕಾರ ಗ್ರಾಮದ ಹೊರಗೆ ವಾಸಿಸುತ್ತಿದ್ದ ಜಮೀನ್ದಾರರು ತಮ್ಮ ಜಮೀನುಗಳಲ್ಲಿ ದುಡಿಯುತ್ತಿದ್ದ ಗುತ್ತಿಗೆದಾರರನ್ನು ಹೊರದಬ್ಬಿ ತಮ್ಮ ಜಮೀನುಗಳನ್ನು ಸ್ಥಳೀಯ ಶ್ರೀಮಂತ ಭೂ ಮಾಲೀಕರಿಗೆ ಮಾರಾಟ ಮಾಡಿದರು. ಇದರಿಂದ ೧೯೪೮-೧೯೬೧ರ ಅವಧಿಯಲ್ಲಿ ಶ್ರೀಮಂತ ಜಮೀನ್ದಾರರ ಪ್ರಮಾಣ ಶೇಕಡಾ ೫೮ ರಿಂದ ೬೫.೬೬ರಕ್ಕೆ ಹೆಚ್ಚಾಯಿತು. ಭೂ ಸುಧಾರಣೆ ಪ್ರಕ್ರಿಯೆ ಮತ್ತು ಗುತ್ತಿಗೆ ಪದ್ದತಿಗೆ ಸಂಬಂಧಿಸಿದ ಸುಧಾರಣೆಯಿಂದ ಲಾಭ ಪಡೆದವರೆಂದರೆ ಶ್ರೀಮಂತ ಭೂ ಮಾಲೀಕರು. ಹಸಿರು ಕ್ರಾಂತಿ ಅವಧಿಯಲ್ಲಿ (೧೯೬೬-೮೮) ಆಹಾರ/ಕೃಷಿ ಉತ್ಪಾದನೆಯನ್ನು ಹೆಚ್ಚಿಸಲು ಕೃಷಿಯನ್ನು ಹೊಸ ತಂತ್ರಜ್ಞಾನ ಅಳವಡಿಕೆ ಪ್ರಾರಂಭವಾಯಿತು. ಅಧಿಕ ಇಳುವರಿ ತಳಿಗಳ ಬಳಕೆ, ನೀರಾವರಿ ಸೌಲಭ್ಯಗಳ ವಿಸ್ತರಣೆ, ರಸಗೊಬ್ಬರ ಕ್ರಿಮಿನಾಷಕಗಳ ಬಳಕೆ, ಕೃಷಿ ಉತ್ಪನ್ನಗಳ ಕನಿಷ್ಟ ಬೆಲೆ ನೀತಿಗಳು ಗ್ರಾಮೀಣ ಪ್ರದೇಶಗಳಿಗೆ ಬ್ಯಾಂಕಿಂಗ್ ವ್ಯವಸ್ಥೆಯ ವಿಸ್ತರಣೆ ಮತ್ತು ಅಗ್ಗದ ಸಾಲ ನೀಡಿಕೆ ನೀತಿಗಳು ಪ್ರಾರಂಭವಾದವು. ಆದರೆ ಈ ಹೊಸ ತಂತ್ರಜ್ಞಾನದ ಲಾಭವನ್ನು ಶ್ರೀಮಂತ ರೈತರು ಪಡೆದರು ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

೧೯೮೨ರ ೩೭ನೇ ಸುತ್ತು, ೧೯೮೩ರ ೩೮ನೇ ಸುತ್ತು ಮತ್ತು ೧೯೮೬-೮೭ರ ನಲವತ್ತೆರಡನೇ ಸುತ್ತಿನ ನ್ಯಾಷನಲ್ ಸ್ಯಾಂಪಲ್ ಸರ್ವೆ ಆರ್ಗನೈಜೇಷನ್ ಪ್ರಕಾರ ಒಟ್ಟು ಕೃಷಿ ಕಾರ್ಮಿಕ ಕುಟುಂಬಗಳಲ್ಲಿ ಶೇಕಡಾ ೭೨.೫ರಷ್ಟು ಕುಟುಂಬಗಳು ೦.೦೨ ಹೆಕ್ಟೇರ್ ಭೂಮಿಗಿಂತ ಕಡಿಮೆ ಆಸ್ತಿಯನ್ನು ಹೊಂದಿವೆ. ಒಟ್ಟು ಗ್ರಾಮೀಣ ಕುಟುಂಬಗಳಲ್ಲಿ ೧/೩ರಷ್ಟು ಕೃಷಿ ಕಾರ್ಮಿಕ ಕುಟುಂಬಗಳಿವೆ. ಪ್ರತಿ ಕುಟುಂಬಕ್ಕೆರೂ. ೫೦೦೦ಕ್ಕಿಂತ ಕಡಿಮೆ ಆಸ್ತಿಗಳನ್ನು ಹೊಂದಿರುವ ಕುಟುಂಬಗಳ ಸಂಖ್ಯೆ ಶೇಕಡಾ ೭೧.೧೨ರಷ್ಟಿದೆ. ಆಸ್ತಿ ಇಲ್ಲದಿರುವಿಕೆ (ಅಸೆಟ್‌ಲೆಸ್) ಬಡತನದ ಮೇಲೆ ತನ್ನದೇ ಆದ ಪರಿಣಾಮವನ್ನು ಬೀರುತ್ತದೆ ಹಾಗೂ ಇತರೆ ಸೌಲಭ್ಯಗಳಿಂದ ವಂಚಿತ

ರಾಗುವಂತೆ ಮಾಡುತ್ತದೆ. ನೀರಾವರಿ, ರಸ್ತೆ ಮುಂತಾದ ಸಾರ್ವಜನಿಕ ಹೂಡಿಕೆಯಿಂದ ಪ್ರಯೋಜನ ಪಡೆಯುವವರು ಆಸ್ತಿ ಹೊಂದಿರುವವರಾಗಿರುತ್ತಾರೆ ವಿನಃ ಆಸ್ತಿ ಇಲ್ಲದವರಲ್ಲ. ಉದ್ಯೋಗ ಮತ್ತು ಕೂಲಿ ಹೆಚ್ಚಿಸುವ ಕಾರ್ಯಕ್ರಮಗಳಿಂದ ಮಾತ್ರ ಆಸ್ತಿ ರಹಿತರು ಪ್ರಯೋಜನ ಪಡೆಯುತ್ತಾರೆ. ಆಸ್ತಿರಹಿತರು ಎಲ್ಲಾ ಪ್ರಯೋಜನಗಳಿಂದಲೂ ವಂಚಿತರಾಗುತ್ತಾರೆ. ಆಸ್ತಿರಹಿತ ಬಡವರು ಸಾಂಸ್ಥಿಕ ಸಾಲ ಸೌಲಭ್ಯಗಳಿಂದಲೂ ವಂಚಿತರಾಗುತ್ತಾರೆ. ಇವರು ಅನುಭೋಗ ಸಾಲಗಳನ್ನು ಅಧಿಕ ಬಡ್ಡಿದರದಲ್ಲಿ ಪಡೆದು ಶೋಷಣೆಗೊಳಗಾಗುತ್ತಾರೆ. ಬಡತನದಿಂದಾಗಿ ಕಾರ್ಮಿಕ ಮಾರುಕಟ್ಟೆಗಳಲ್ಲಿ ಅನುಭೋಗ ಸಾಲಗಳನ್ನು ಪಡೆಯುವ ಅನಿವಾರ್ಯತೆ ಮತ್ತು ಅವಲಂಬನೆಯಿಂದ ಮಾಲೀಕರುಗಳು ರೂಪಿಸುವ ಕಾರ್ಮಿಕ ನೀತಿಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಅನಾನುಕೂಲ ಕೂಲಿ ಒಪ್ಪಂದ–ನಿಯಮಗಳಿಂದ ಕೂಲಿ–ಸಾಲ ಸುಳಿಗೆ ಸಿಲುಕುತ್ತಾರೆ. ಈ ಹಿನ್ನೆಲೆಯಲ್ಲಿ ಕಾರ್ಮಿಕ ಮಾರುಕಟ್ಟೆಗಳನ್ನು ನಿಯಂತ್ರಿಸಿ ಸಾಂಸ್ಥಿಕ ಸಾಲ ಸೌಲಭ್ಯ ಕಲ್ಪಿಸುವ ಮೂಲಕ ಆಸ್ತಿರಹಿತರ/ಭೂರಹಿತ ಕಾರ್ಮಿಕರ ಬದುಕಿನಲ್ಲಿ ಸುಧಾರಣೆ ತರಬಹುದು.[೫೧]

ಭಾರತದ ಆರ್ಥಿಕ ಪ್ರಗತಿ ಒಳಗೊಳ್ಳುವ ಪ್ರಗತಿ ಅಲ್ಲ. ಪ್ರಗತಿ ಅಥವಾ ಅಭಿವೃದ್ಧಿಯ ಪ್ರಯೋಜನಗಳು ಸರಿಯಾಗಿ ಹಂಚಿಕೆಯಾಗಿಲ್ಲ. ಕೃಷಿಯ ವಾರ್ಷಿಕ ಬೆಳವಣಿಗೆ ಶೇಕಡಾ ೨–೩ರಷ್ಟಿದೆ. ಇದು ಒಟ್ಟು ಆದಾಯದಲ್ಲಿ ಕೃಷಿಯ ಪಾಲಿನ ಕುಸಿತವನ್ನು ತೋರಿಸುತ್ತದೆ. ಕೃಷಿಯ ಉತ್ಪಾದಕತೆ ಇತರೆ ವಲಯಗಳಲ್ಲಿನ ಉತ್ಪಾದಕತೆಗಿಂತ ೫ರಷ್ಟು ಕಡಿಮೆ ಇದೆ. ಹಾಗೆಯೇ ಬಡತನ ೧೯೯೩–೯೪ರಲ್ಲಿ ಶೇಕಡಾ ೩೬ರಷ್ಟಿತ್ತು. ೨೦೦೪–೦೫ರಲ್ಲಿ ಇದು ಶೇಕಡಾ ೨೮ರಷ್ಟಾಯಿತು. ವಾರ್ಷಿಕ ಬೆಳವಣಿಗೆಯ ದರ ೦.೮ರಷ್ಟು ಕಡಿಮೆಯಾಗಿದ್ದು ಇದು ಬಾಂಗ್ಲಾ, ನೇಪಾಳ ರಾಷ್ಟ್ರಗಳ ಶೇಕಡಾ ೧.೬ಕ್ಕಿಂತ ಕಡಿಮೆ ಇದೆ. ಪರಿಶಿಷ್ಟ ಜಾತಿ ವರ್ಗಗಳಲ್ಲಿ ಪ್ರಗತಿ ಕಂಡುಬಂದಿದ್ದರೂ ಬಹುತೇಕ ಜನರು ಕೃಷಿ ಕಾರ್ಮಿಕರಾಗಿಯೇ ಉಳಿದಿದ್ದು ಅತೀ ಕಡಿಮೆ ಆದಾಯ ಗಳಿಸುವವರಾಗಿದ್ದಾರೆ. ಗ್ರಾಮೀಣ ಪ್ರದೇಶಗಳಲ್ಲಿ ಹಣಕಾಸು ಸೌಲಭ್ಯಗಳು ತುಂಬಾ ಕಡಿಮೆ. ಶೇಕಡಾ ೮೭ರಷ್ಟು ಅತೀ ಬಡ ಕುಟುಂಬಗಳು, ಅತೀ ಸಣ್ಣ ರೈತರು, ಕೃಷಿ ಕಾರ್ಮಿಕರಿಗೆ ಸಾಲ ಸೌಲಭ್ಯಗಳು ಇಲ್ಲ. ಬಡವರು ಶೇಕಡಾ ೧೦೪ರಷ್ಟು ಸಾಲಗಳ ಮೇಲೆ ಬಡ್ಡಿ ನೀಡುತ್ತಿದ್ದಾರೆ ಶ್ರೀಮಂತರು ಕೇವಲ ಶೇಕಡಾ ೨೩ರಷ್ಟನ್ನು ನೀಡುತ್ತಿದ್ದು ಶೇಕಡಾ ೮೭ರಷ್ಟು ಸಾಲಗಳನ್ನು ಪಡೆಯುತ್ತಿದ್ದಾರೆ (೨೦೦೭ರ ವಿಶ್ವಬ್ಯಾಂಕ್ ವರದಿ ಪ್ರಕಾರ).[೫೨]

ಸಂಶೋಧನಾಧಾರಿತ ಅಧ್ಯಯನಗಳ ಪ್ರಕಾರ (ಕುಮಾರ್ ಮತ್ತು ವರಿಂದರ್) ಯಾದೃಚ್ಛಿಕ ಅಧ್ಯಯನ ಮಾಹಿತಿ ಆಧಾರದ ಮೇಲೆ ಆತ್ಮಹತ್ಯೆಗಳ ದರ ೨೦೦೧ರಲ್ಲಿ ೧೨.೩೫ರಷ್ಟಿದ್ದದ್ದು ೨೦೦೫ದಕ್ಕೆ ೧೩.೧೦ರಷ್ಟಾಗಿತ್ತು. ಅದೇ ರೀತಿ ೨೦೦೩ರಲ್ಲಿ ಪಂಜಾಬ್ ಕೃಷಿ ವಿಶ್ವವಿದ್ಯಾಲಯ (ಗ್ರೋವರ್ ಸಂಪಾದನೆ) ನಡೆಸಿದ ಅದ್ಯಯನ ವಾಸ್ತವವನ್ನು ಪ್ರತಿಬಿಂಬಿಸಿತು. ಆ ಪ್ರಕಾರ ಆತ್ಮಹತ್ಯೆಗೆ ಬಹು ಕಾರಣಗಳಿದ್ದವು. ಅದ್ಯಯನ ಗುರುತಿಸಿದ ಕಾರಣಗಳು ಕೆಳಕಂಡಂತಿವೆ.

| ಕ್ರಸಂ | ಕಾರಣಗಳು | ಆತ್ಮಹತ್ಯೆ ಬಲಿಪಶುಗಳು | |
|---|---|---|---|
| | | ನಂ | ಶೇಕಡವಾರು |
| ೧. | ತುರ್ತು ಖರ್ಚುಗಳು + ಸಾಲಭಾರ + ಕೌಟುಂಬಿಕ ಅಶಾಂತಿ | ೪ | ೧೩.೩೨ |
| ೨. | ಲೇವಾದೇವಿಗಾರರ ಶೋಷಣೆ + ಸಾಲ | ೬ | ೧೯.೯೮ |
| ೩. | ಸಾಲದ ಹೊರೆ + ಸಾಮಾಜಿಕ ಅಂತಸ್ಥು ನಷ್ಟ | ೩ | ೧೦.೦೦ |
| ೪. | ಕೌಟುಂಬಿಕ ಜವಾಬ್ದಾರಿಗಳು + ಸಾಲಭಾರ | ೪ | ೧೩.೩೨ |
| ೫. | ಬೆಳೆ ವೈಫಲ್ಯ + ಕೊಳವೆ ಬಾವಿ + ಸಾಲಭಾರ | ೩ | ೧೦.೦೦ |
| ೬. | ಕುಡಿತ + ಸಾಲಭಾರ | ೧ | ೩.೩೩ |
| ೭. | ಕೌಟುಂಬಿಕ ಸಂಘರ್ಷ | ೪ | ೧೩.೩೨ |

ಮೂಲ: ಪಂಜಾಬ್ ಕೃಷಿ ವಿಶ್ವವಿದ್ಯಾಲಯದ ಕ್ಷೇತ್ರ ಮಾಹಿತಿ

ಮೇಲೆ ತಿಳಿಸಿದ ಆತ್ಮ ಹತ್ಯೆಯ ಕಾರಣಗಳಲ್ಲಿ ಲೇವಾದೇವಿಗಾರರ ಶೋಷಣೆಯಿಂದ ನಡೆದ ಘಟನೆಗಳು ಹೆಚ್ಚಾಗಿರುವುದನ್ನು ಕಾಣಬಹುದು. ಅಧ್ಯಯನಗಳ ಪ್ರಕಾರ ಆರ್ಥಿಕ, ಸಾಮಾಜಿಕ, ಸಾಲಭಾರ ಕಾರಣಗಳು ಮುಖ್ಯವಾದವು. ೨೦೦೦ರಲ್ಲಿ ಐಯರ್ ಮತ್ತು ಮಾಣಿಕ್‌ರವರ ನಡೆಸಿದ ಅಧ್ಯಯನದ ಪ್ರಕಾರ ಕೃಷಿ ಕಾರ್ಮಿಕರು, ಸಣ್ಣ ಅತೀ ಸಣ್ಣ ರೈತರು ಆತ್ಮಹತ್ಯೆಯ ಮುಖ್ಯ ಬಲಿಪಶುಗಳು. ಆತ್ಮಹತ್ಯೆ ಘಟನೆಗಳಿಂದ ತರುಣ ಮಹಿಳೆಯರು ವಿದವೆಯರಾದರು ಮತ್ತು ಮಕ್ಕಳು ಶಾಲೆಗಳನ್ನು ತೊರೆದರು. ರೈತರ ಋಣಬಾದೆ ಮತ್ತು ಆತ್ಮಹತ್ಯೆ ಗಂಬೀರತೆಯನ್ನು ಪಂಜಾಬ್ ಸರ್ಕಾರ ನಿರ್ಲಕ್ಷಿಸಿತು. ಆತ್ಮಹತ್ಯೆಗೊಳಗಾದ ಕುಟುಂಬಗಳಿಗೆ ಪರಿಹಾರ ಒದಗಿಸಿ ಪುನರ್ ವಸತಿ ಕಲ್ಪಿಸುವಲ್ಲಿ ಆಂದ್ರ ಪ್ರದೇಶ, ಮಹಾರಾಷ್ಟ್ರ ಮತ್ತು ಕರ್ನಾಟಕದಂತೆ ಪಂಜಾಬ್ ಸರ್ಕಾರ ವಿಫಲವಾಯಿತು. ಹಾಗೆಯೇ ಕೇಂದ್ರ ಸರ್ಕಾರ ಸಹ ತನ್ನ ನಿರ್ಲಕ್ಷತೆಯನ್ನು ಪ್ರದರ್ಶಿಸಿತು. ಸಣ್ಣ ಅತೀ ಸಣ್ಣ ಮತ್ತು ಕೃಷಿಕಾರ್ಮಿಕರು ತಮ್ಮ ಸಾಲ ಸೌಲಭ್ಯಕ್ಕೆ ಅಥವಾ ಹಣಕಾಸು ಸೌಲಭ್ಯಗಳಿಗೆ ಕಮೀಷನ್ ಏಜೆಂಟ್ಸ್‌ಗಳನ್ನು ಅವಲಂಭಿಸಿದ್ದಾರೆ. ಕೃಷಿ ಕಾರ್ಮಿಕರು ಜೀವನಾದಾರಕ್ಕೆ ಅನಿವಾರ್ಯವಾಗಿ ಶ್ರೀಮಂತ ರೈತರು ಮತ್ತು ಕಮೀಷನ್ ಏಜೆಂಟ್ಸ್‌ಗಳನ್ನು ಅವಲಂಬಿಸಿರುವುದು ಆತ್ಮಹತ್ಯೆಗೆ ಮುಖ್ಯ ಅಂಶ ಎನ್ನಲಾಗಿದೆ.[೫೩]

ಪಂಜಾಬ್ ಕೃಷಿ ವಿಶ್ವವಿದ್ಯಾಲಯ ಲೂದಿಯಾನದಲ್ಲಿ ೧೯೮೭ರಂದು ನಡೆದ ಪ್ರಾದೇಶಿಕ ಸೆಮಿನಾರ್‌ನಲ್ಲಿ ಸಂಶೋಧಕರು ಮಂಡಿಸಿದ ಮಂಡನೆಗಳ ಮುಖ್ಯಾಂಶಗಳ ವಿಶ್ಲೇಷಣೆಗಳನ್ನು ನೀಡಲಾಗಿದೆ. ಹಸಿರು ಕ್ರಾಂತಿ ದೊಡ್ಡ ಮತ್ತು ಸಣ್ಣ ರೈತರಿಬ್ಬರಿಗೂ ಪ್ರಯೋಜನವನ್ನುಂಟು ಮಾಡಿವೆ. ಗ್ರಾಮಗಳ ಜೀವನ ಮಟ್ಟದಲ್ಲಿ ಬೆಳವಣಿಗೆಗಳು ಕಂಡು ಬಂದವು ತಂತ್ರಜ್ಞಾನ ಬಳಕೆ

ಹೆಚ್ಚಿ ಉತ್ಪಾದನೆ ಹೆಚ್ಚಾಯಿತು ಆದರೆ ಭೂಮಿಯ ಉತ್ಪಾದಕತೆ ಕುಸಿಯಿತು. ಇದರಿಂದ ಸಾಗುವಳಿ/ಉತ್ಪಾದನಾ ವೆಚ್ಚ ಹೆಚ್ಚಾಯಿತು. ಸಣ್ಣ ಮತ್ತು ಅತೀ ಸಣ್ಣ ರೈತರ ಉಳಿತಾಯ ಪ್ರಮಾಣ ಕಡಿಮೆ ಇತ್ತು. ಇಂತಹ ಪರಿಸ್ಥಿತಿಯಲ್ಲಿ ಸಣ್ಣ ಮತ್ತು ಅತೀ ಸಣ್ಣ ರೈತರ ಪ್ರಮಾಣ ಕಡಿಮೆಯಾಯಿತು ಇಂತಹ ಪರಿಸ್ಥಿತಿಯಲ್ಲಿ ಸಣ್ಣ ಮತ್ತು ಅತೀ ಸಣ್ಣ ರೈತರು ಜೀವನಾಶ್ಯಕತೆಗಳನ್ನು ಪೂರೈಸಿಕೊಳ್ಳುವುದು ಕಷ್ಟವಾಯಿತು. ಇದು ಅವರಲ್ಲಿ ಹತಾಷೆ ಮತ್ತು ಮಾನಸಿಕ ಉದ್ವಿಗ್ನತೆ ಸೃಷ್ಟಿಸಿತು. ಹಸಿರು ಕ್ರಾಂತಿಯ ಪ್ರತಿಫಲ/ಪ್ರಯೋಜನ ಶ್ರೀಮಂತರ ಪಾಲಾಯಿತು. ಬಡವ ಮತ್ತು ಶ್ರೀಮಂತರ ನಡುವೆ ಅಂತರ ಹೆಚ್ಚಾಯಿತು. ಕಾರ್ಮಿಕರ ವಲಸೆ ಹೆಚ್ಚಾಯಿತು. ಹೊಸ ಪ್ರದೇಶಗಳಿಂದ ಕಾರ್ಮಿಕರು ವಲಸೆ ಬರುವ ಪ್ರಮಾಣ ಹೆಚ್ಚಿ ಸ್ಥಳೀಯ ಕಾರ್ಮಿಕರಿಗೆ ತೀವ್ರ ತೊಂದರೆಯಾದವು. ಇದರಿಂದ ಸ್ಥಳೀಯ ಕಾರ್ಮಿಕರು ಉದ್ಯೋಗಕ್ಕಾಗಿ ನಗರಗಳ ಕಡೆ ವಲಸೆ ಹೋಗಲು ಪ್ರಾರಂಬಿಸಿದರು. ಕೌಟುಂಬಿಕ ವಿವಾದಗಳ ಸಂಖ್ಯೆ ಹೆಚ್ಚಾದವು.[೫೪]

ಜವಾಬ್ದಾರಿಯುತ ಸಾಲ ವ್ಯವಸ್ಥೆಯಲ್ಲಿ ಸಾಲದ ಲಭ್ಯತೆ ಒಂದು ಮುಖ್ಯ ಅಂಶ. ಬಡತನ ನಿರ್ಮೂಲನೆಯಲ್ಲಿ ಸಾಲದ ಪೂರೈಕೆ ಮತ್ತು ಬೇಡಿಕೆ ಅಂಶಗಳು ಪ್ರಮುಖವಾದವುಗಳು. ಲಭ್ಯವಿರುವ ಸಾಲ/ಹಣಕಾಸನ್ನು ಬಳಸಿಕೊಳ್ಳಲು ಅನುಕೂಲವಾಗುವಂತೆ ಬಡವರ ಆದಾಯ ಗಳಿಸುವ ಸಾಮರ್ಥ್ಯವನ್ನು ಬಲಪಡಿಸಬೇಕು. ಅವರ ಕೌಶಲ್ಯವನ್ನು ಹೆಚ್ಚಿಸಬೇಕು ಮತ್ತು ಆಸ್ತಿ/ಸ್ವತ್ತುಗಳನ್ನು ಗಳಿಸಿಕೊಳ್ಳುವಂತೆ ಅವರನ್ನು ಬಲವರ್ದನೆಗೊಳಿಸಿಕೊಳ್ಳಬೇಕು. ಈ ನಿಟ್ಟಿನಲ್ಲಿ ಸಮಾಜದ ಆರ್ಥಿಕ ವ್ಯವಸ್ಥೆಯನ್ನು ಸುಧಾರಿಸಬೇಕಾಗಿದೆ. ಬಡವರ ಆಸ್ತಿ ಮತ್ತು ಆದಾಯವನ್ನು ವೃದ್ಧಿಸಲು ಅನುಕೂಲವಾಗುವಂತೆ ಉದ್ಯೋಗ ಒದಗಿಸುವ ಹಲವು ಕಾರ್ಯಕ್ರಮಗಳನ್ನು ಜಾರಿಗೊಳಿಸಲಾಯಿತು. ಐಆರ್‌ಡಿಪಿ, ಎನ್‌ಆರ್‌ಇಪಿ, ಜೆಆರ್‌ವೈ ಹಾಗೂ ಇತ್ತೀಚಿನ ಎಸ್‌ಜೆಎಸ್‌ವೈ ಈ ಎಲ್ಲಾ ಕಾರ್ಯ ಕ್ರಮಗಳಿಂದ ಬಡತನ ನಿರ್ಮೂಲನೆಗಿಂತ ರಾಜಕೀಯ ಮೈಲೇಜ್ ಗಳಿಸುವುದೇ ಮುಖ್ಯವಾಗಿತ್ತು.[೫೫]

ಗ್ರಾಮೀಣ ಸಾಲ ವ್ಯವಸ್ಥೆಯನ್ನು ಮರುಪರಿಶೀಲಿಸುವ ಅಗತ್ಯವಿದೆ. ಗ್ರಾಮೀಣ ಅನೌಪಚಾರಿಕ ವಲಯ (ರೂರಲ್ ಇನ್‌ಫಾರ್ಮಲ್ ಸೆಕ್ಟರ್) ಮತ್ತು ಅನಭಿವೃದ್ದಿ ಪ್ರದೇಶಗಳಲ್ಲಿ ಸಾಲ ಹಂಚಿಕೆ ವ್ಯವಸ್ಥೆಯನ್ನು ಮರುರೂಪಿಸಬೇಕಾಗುತ್ತದೆ. ಗ್ರಾಮೀಣ ಆರ್ಥಿಕತೆಯಲ್ಲಿ ರೈತರ ಸಾಲ-ಋಣಭಾರ ಮತ್ತು ಕೃಷಿ ಸಮಸ್ಯೆಗಳೇ ಮುಖ್ಯ ವಿಷಯಗಳು. ಈ ಸಮಸ್ಯೆಗಳು ರೈತ ಸಮುದಾಯಕ್ಕೆ ಸೀಮಿತವಾಗಿರದೇ ಅಸಂಘಟಿತ ಕೃಷಿಯೇತರ ವಲಯಕ್ಕೂ ಸಂಭವಿಸಿವೆ. ಎನ್‌ಎಸ್‌ಎಸ್‌ಓ ಹಣಕಾಸು ಸೌಲಭ್ಯದಿಂದ ಹೊರಗುಳಿಯುವಿಕೆ ಅಂಶಗಳನ್ನು ದಾಖಲಿಸಿದೆ. ೧೪೮ ದಶಲಕ್ಷ ಗ್ರಾಮೀಣ ಕುಟುಂಬಗಳಲ್ಲಿ ಶೇಕಡಾ ೬೮ರಷ್ಟು ಕುಟುಂಬಗಳು ಸಾಂಸ್ಥಿಕ ಹಣಕಾಸು ಸೌಲಭ್ಯಗಳಿಂದ ಹೊರಗುಳಿದಿದ್ದಾರೆ. ಇವರು ಸಾಂಸ್ಥಿಕೇತರ ಹಣಕಾಸು ಮೂಲಗಳಿಂದ ಸಾಲ ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ. ೮೯ ಮಿಲಿಯನ್ ರೈತ ಕುಟುಂಬಗಳಲ್ಲಿ ಶೇಕಡಾ ೪೩ರಿಂದ ೫೦ರಷ್ಟು ಕುಟುಂಬಗಳು ಖಾಸಗಿ ಲೇವಾದೇವಿಗಾರರಿಂದ ಹಣಕಾಸನ್ನು ಪಡೆಯುತ್ತಾರೆ. ಸ್ವಾತಂತ್ರ್ಯ ನಂತರ

ಪ್ರಥಮವಾಗಿ ಗ್ರಾಮೀಣ ಹಣಕಾಸು ಪೂರೈಕೆಯಲ್ಲಿ ಸಾಂಸ್ಥಿಕ ವ್ಯವಸ್ಥೆಯ ಪಾಲು ೧೯೫೧ರಲ್ಲಿ ಶೇಕಡಾ ೬೪ರಷ್ಟಿದ್ದದ್ದು ೨೦೦೨ರಲ್ಲಿ ಶೇಕಡಾ ೫೭ಕ್ಕೆ ಕಡಿಮೆಯಾಯಿತು. ಲೇವಾದೇವಿಗಾರರ ಪಾಲು ಶೇಕಡಾ ೧೭.೫ರಷ್ಟಿದ್ದದ್ದು ಶೇಕಡಾ ೨೯ಕ್ಕೆ ಹೆಚ್ಚಾಯಿತು.[೫೬]

ಭಾರತದಲ್ಲಿ ಯೋಜನ ಅವಧಿಯ ಪ್ರಾರಂಭದಿಂದಲೂ ಬಡತನ ನಿರ್ಮೂಲನೆ ಉದ್ದೇಶದ ದೃಷ್ಟಿಯಿಂದ ಅಭಿವೃದ್ಧಿಯ ತಂತ್ರಗಳು ಮತ್ತು ಕಾರ್ಯಕ್ರಮಗಳನ್ನು ವಿನ್ಯಾಸ, ಮರುವಿನ್ಯಾಸ ಗಳಿಸಲಾಗುತ್ತಿದೆ. ಯೋಜನಾ ದಾಖಲೆಗಳ ಪ್ರಕಾರ ಸಮಾಜದಲ್ಲಿ ಸೌಲಭ್ಯ ವಂಚಿತರಿಗೆ, ದುರ್ಬಲ ವರ್ಗಗಳಿಗೆ ಮತ್ತು ಸಾಮಾನ್ಯರಿಗೆ ಮಹತ್ವ ನೀಡಲಾಗಿದೆ. ಬಡತನ ನಿರ್ಮೂಲನೆ, ನಿರುದ್ಯೋಗ ಮತ್ತು ಅಸಮಾನತೆ ನಿವಾರಣೆ ಯೋಜನೆಗಳ ಪ್ರಮುಖ ಉದ್ದೇಶಗಳಾಗಿದ್ದವು. ಆದರೆ ಕಡಿಮೆ ಆದಾಯ ಗುಂಪುಗಳ, ವರ್ಗಗಳ ಜೀವನ ಮಟ್ಟದಲ್ಲಿ ಸುಧಾರಣೆ/ಬದಲಾವಣೆ ತರುವಲ್ಲಿ ಯೋಜನೆಗಳು ವಿಫಲವಾಗಿವೆ. ಭೂರಹಿತ ಕುಟುಂಬಗಳು, ಅತಿಸಣ್ಣ ಮತ್ತು ಸಣ್ಣ ರೈತರು, ಕೃಷಿ ಕಾರ್ಮಿಕರು ಮತ್ತು ಸಾಮಾನ್ಯ ಕೂಲಿಕಾರರು ಗ್ರಾಮೀಣ ಪ್ರದೇಶಗಳಲ್ಲಿ ಬಡವರಾಗಿಯೇ ಉಳಿದಿದ್ದಾರೆ. ಜೀವನಕ್ಕೆ ಕೃಷಿ ಚಟುವಟಿಕೆಗಳನ್ನು ಅವಲಂಬಿಸಿರುವ ಕುಟುಂಬಗಳ ಸಣ್ಣ ಭೂ ಹಿಡುವಳಿಗಳು ಮತ್ತು ಅವುಗಳ ಕಡಿಮೆ ಉತ್ಪಾದಕತೆ ಬಡತನಕ್ಕೆ ಮುಖ್ಯ ಕಾರಣಗಳಾಗಿವೆ. ಆರ್ಥಿಕವಾಗಿ ಹಿಂದುಳಿದ ಪ್ರದೇಶಗಳು ಮತ್ತು ಜನರು ಯೋಜನೆಗಳಿಂದ ಪಡೆದಿರುವ ಪ್ರಯೋಜನಗಳು ಅತ್ಯಂತ ಕಡಿಮೆ. ಈಗಾಗಲೇ ಶ್ರೀಮಂತರಾಗಿರುವವರು ಮತ್ತು ಆರ್ಥಿಕ-ಸಾಮಾಜಿಕವಾಗಿ ಸದೃಢರಾಗಿರುವವರೇ ದುರ್ಬಲರಿಗಿಂತ ಹೆಚ್ಚು ಪ್ರಯೋಜನ/ಲಾಭ ಪಡೆದಿದ್ದಾರೆ.[೫೭]

ಆರ್‌ಬಿಐ ೧೯೮೬ನಲ್ಲಿ ಕೇಂದ್ರ ಸರ್ಕಾರ ಮತ್ತು ವಿಶ್ವಬ್ಯಾಂಕು ಸಮಾಲೋಚನೆಯೊಂದಿಗೆ ಹಿರಿಯ ತಜ್ಞರ ಸಮಿತಿಯನ್ನು ಪ್ರೊ. ಕುಸ್ರೋ ಅಧ್ಯಕ್ಷತೆಯಲ್ಲಿ ರಚಿಸಿತು. ಈ ಸಮಿತಿಯನ್ನು ಕೃಷಿ ಸಾಲ ಸಮಿತಿ ಎಂದು ಹೆಸರು ಬದಲಾಯಿತು. ಕೃಷಿ ಸಾಲ ವ್ಯವಸ್ಥೆಯ ಸಮಸ್ಯೆಗಳನ್ನು ಈ ಸಮಿತಿ ಮೌಲ್ಯಮಾಪನ ಮಾಡಿ ಈ ವ್ಯವಸ್ಥೆಯನ್ನು ಬಲಪಡಿಸಲು ಬೇಕಾದ ಶಿಫಾರಸ್ಸುಗಳನ್ನು ಒಳಗೊಂಡ ವರದಿ ನೀಡಬೇಕಾಗಿತ್ತು. ಈ ಸಮಿತಿಯು ಗ್ರಾಮೀಣ ಸಾಲ ವ್ಯವಸ್ಥೆಯ ಹಲವು ಸಂಗತಿಗಳನ್ನು ಪರಿಶೀಲಿಸಿತು. ಈ ವ್ಯವಸ್ಥೆಯ ರಚನಾತ್ಮಕತೆ, ಕಾರ್ಯಾಚರಣೆ ಮತ್ತು ವ್ಯವಸ್ಥಾಪನೆಗೆ ಸಂಬಂಧಿಸಿದ ಸಮಸ್ಯೆಗಳನ್ನು ಗುರ್ತಿಸಿತು ಹಾಗು ಅದರ ಸುಧಾರಣೆಗೆ ನೀತಿ ಮಟ್ಟದ ಕ್ರಮಗಳನ್ನು ಶಿಫಾರಸ್ಸುಗಳನ್ನು ಮಾಡಿತು. ಅವುಗಳೆಂದರೆ ಬ್ಯಾಂಕಿಂಗ್ ವ್ಯವಸ್ಥೆಯ ದಕ್ಷತೆ ಸುಧಾರಿಸಬೇಕು. ಜಿಲ್ಲೆ, ತಾಲ್ಲೂಕು ಮತ್ತು ಗ್ರಾಮ ಮಟ್ಟದಲ್ಲಿ ಯೋಜನೆ ಮತ್ತು ಸಾಲ ಯೋಜನೆ ವ್ಯವಸ್ಥೆಯನ್ನು ರೂಪಿಸಿಕೊಳ್ಳಬೇಕು. ಈ ಪ್ರಯತ್ನದಲ್ಲಿ ಎಲ್ಲಾ ಸಂಸ್ಥೆಗಳ ಸಕ್ರೀಯ ಪಾಲ್ಗೊಳ್ಳುವಿಕೆ ಮುಖ್ಯ ವಿಷಯ. ಈ ಕಾರ್ಯವನ್ನು ಲೀಡ್ ಬ್ಯಾಂಕ್ ವ್ಯವಸ್ಥಾಪಕರು ಸಂಯೋಜಿಸಬೇಕು. ಸಹಕಾರಿ ಸಂಸ್ಥೆಗಳು ಉತ್ತಮ ಸಿಬ್ಬಂದಿಯನ್ನು ಆಯ್ಕೆ ಮಾಡಿ ತರಬೇತಿ ನೀಡಬೇಕು. ನಬಾರ್ಡ್ ಸಾಲ ನೀಡಿಕೆ, ಬಳಕೆ ಮತ್ತು ಮರುಪಾವತಿಗಳ ವಿಚಾರದಲ್ಲಿ ಸರಿಯಾದ ಮೇಲ್ವಿಚಾರಣೆ ವಹಿಸಬೇಕು.

ಸಾಲ ನೀಡಿಕೆ ವಿಚಾರದಲ್ಲಿ ರಾಜಕೀಯ ಅಂಶಗಳು ಸುಳಿಯದಂತೆ ಎಚ್ಚರ ವಹಿಸಬೇಕು. ಸಾಲ ಮರುಪಾವತಿಗೆ ಸೂಕ್ತ ವಾತಾವರಣವನ್ನು ಸೃಷ್ಟಿಸಬೇಕು.[೫೮]

ಭಾರತದ ಕೃಷಿ ಕ್ಷೇತ್ರದ ಶೋಚನೀಯ ಸ್ಥಿತಿಗೆ ಸರ್ಕಾರದ ಕೃಷಿ ನೀತಿಯೇ ಕಾರಣ, ಕೃಷಿಯ ಬಹುದೊಡ್ಡ ಸಮಸ್ಯೆ ಎಂದರೆ ಆತ್ಮಹತ್ಯೆ ಎನ್ನುತ್ತಾ ಕೃಷಿ ಮತ್ತು ಸಂಘಟಿತ ಸಾಲ ವ್ಯವಸ್ಥೆಯ ಅಂತರವನ್ನು ವಿಶ್ಲೇಷಿಸಿದ್ದಾರೆ. ಮಹಾರಾಷ್ಟ್ರದಲ್ಲಿ ಸಂಭವಿಸಿದ ರೈತರ ಆತ್ಮಹತ್ಯೆಗೆ ಕಾರಣಗಳನ್ನು ಇಲ್ಲಿ ಚರ್ಚಿಸಲಾಗಿದೆ. ಆತ್ಮಹತ್ಯೆಯ ಹಲವು ಕಾರಣಗಳಲ್ಲಿ ಉತ್ಪಾದನಾ ವೆಚ್ಚ ಮತ್ತು ಉತ್ಪನ್ನ ಬೆಲೆಗಳ ನಡುವಿನ ಅಂತರ ಒಂದು ಮುಖ್ಯ ಕಾರಣ. ಸಾಲ ಬಾಕಿ ಅಥವಾ ಋಣಭಾರದ ಹೆಚ್ಚಳ ಎರಡನೆಯ ಪ್ರಮುಖ ಕಾರಣ. ಹೀಗೆ ರೈತ ಕುಟುಂಬಗಳು ಅನಿವಾರ್ಯವಾಗಿ ಮುಕ್ತ ಮಾರುಕಟ್ಟೆಗಳಿಂದ ಸಾಲ ಮತ್ತು ಕೃಷಿ ಹೂಡುವಳಿ ಸೌಲಭ್ಯಗಳನ್ನು ಪಡೆಯುವ ಪರಿಸ್ಥಿತಿ ಸೃಷ್ಟಿಯಾಗಿ ಅದು ಆತ್ಮಹತ್ಯೆಯಂತಹ ಗಂಭೀರ ಪರಿಣಾಮಗಳನ್ನು ಹುಟ್ಟು ಹಾಕುತ್ತಿರುವುದುನ್ನು ಇಲ್ಲಿ ವಿಶ್ಲೇಷಿಸಲಾಗಿದೆ.[೫೯]

ತಮಿಳುನಾಡಿನಲ್ಲಿ ನಡೆದ ಪ್ರಯೋಗಿಕ ಅಧ್ಯಯನದ ಪಲಿತಾಂಶಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಸಣ್ಣ ರೈತರ ಸಾಲದ ಅಗತ್ಯ ಮತ್ತು ಅದರ ಪರಿಣಾಮಗಳಿಗೆ ಅದ್ಯತೆ ನೀಡಿ ರೈತರೊಂದಿಗೆ ಸಂದರ್ಶನ ನಡೆಸಿ ಸಂಗ್ರಹಿಸಿದ ಮಾಹಿತಿ ವಿಶ್ಲೇಷಣೆ ಪ್ರಕಾರ ಆಧುನಿಕ ಕೃಷಿ ತಂತ್ರಜ್ಞಾನ ಅಳವಡಿಸಿಕೊಂಡು ಉತ್ಪನ್ನ ಹೆಚ್ಚಿಸಿಕೊಳ್ಳಲು ರೈತರಿಗೆ ಹಣಕಾಸಿನ ಅಗತ್ಯವಿದ್ದು ಅದು ಧನಾತ್ಮಕ ಪರಿಣಾಮ ಬೀರುತ್ತದೆ ಎಂದು ಇಲ್ಲಿ ವಾದಿಸಲಾಗಿದೆ. ಸಾಲದ ಅಗತ್ಯಗಳು ಯಾವ ಮೂಲದಿಂದ ಪೂರೈಕೆಯಾದವು ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ. ಸಹಕಾರಿ ಸಾಲ ಸಂಸ್ಥೆಗಳಿಂದ ಅಗತ್ಯ ಪ್ರಮಾಣದಲ್ಲಿ ನೆರವು ಸಿಗದಿದ್ದಾಗ ಅಧಿಕ ಬಡ್ಡಿದರದಲ್ಲಿ ಅಸಂಘಟಿತ ಮೂಲಗಳಿಂದ ಸಾಲ ಪಡೆಯುತ್ತಿದ್ದರು. ಹಣದ ಲೇವಾದೇವಿಗಳಿಂದ ಸಾಲ ಪಡೆಯಲು ಒಡವೆ ಮತ್ತು ಮನೆಗಳನ್ನು ಭದ್ರತೆಯಾಗಿ ನೀಡದ್ದರು. ಸಹಕಾರ ಸಂಸ್ಥೆಗಳಲ್ಲಿ ದೊಡ್ಡ ರೈತರ ಪ್ರಭಾವ ಹೆಚ್ಚಾಗಿದ್ದರಿಂದ ಕಡಿಮೆ ಸಂಖ್ಯೆಯ ರೈತರು ಈ ಸಂಸ್ಥೆಗಳಲ್ಲಿ ಸದಸ್ಯರಾಗಿದ್ದರು.[೬೦]

ಗ್ರಾಮೀಣ ಅಭಿವೃದ್ಧಿ ಪರಿಕಲ್ಪನೆಯನ್ನು ಕುರಿತು ಚರ್ಚಿಸಿದ್ದಾರೆ. ಗ್ರಾಮೀಣ ಅಭಿವೃದ್ಧಿ ಒಂದು ಪ್ರಕ್ರಿಯೆಯಾಗಿದ್ದು ಗ್ರಾಮೀಣ ಕಾರ್ಮಿಕರು ಮತ್ತು ಕಡಿಮೆ ಆದಾಯದ ಕುಟುಂಬಗಳ ಆದಾಯ ಮತ್ತು ಉತ್ಪಾದಕತೆಯಲ್ಲಿ ಸುಸ್ಥಿರ ಹೆಚ್ಚಳ ತರುವ ಮೂಲಕ ಗ್ರಾಮೀಣ ಬಡತನ ನಿರ್ಮೂಲನೆ ಮಾಡುವುದೇ ಗ್ರಾಮೀಣ ಅಭಿವೃದ್ಧಿ. ಹಾಗೆಯೇ ಕನಿಷ್ಠ ಆಹಾರ, ವಸತಿ, ಶಿಕ್ಷಣ ಮತ್ತು ಆರೋಗ್ಯ ಸೇವೆಗಳನ್ನು ನೀಡುವುದಾಗಿದೆ. ಈ ಉದ್ದೇಶ ಈಡೇರ ಬೇಕಾದರೆ ಗ್ರಾಮೀಣ ಬಡವರಿಗೆ ಸರುಕು ಮತ್ತು ಸೇವೆಗಳು ದೊರೆಯುವಂತೆ ಮಾಡಬೇಕು. ಅದೇ ರೀತಿ ಆರ್ಥಿಕ ಮತ್ತು ಸಾಮಾಜಿಕ ಸೇವೆಗಳ ಪ್ರಯೋಜನ ಗ್ರಾಮೀಣ ಬಡವರಿಗೆ ತಲುಪುವಂತಹ ಸಂಸ್ಥೆಗಳನ್ನು ಮತ್ತು ನೀತಿಗಳನ್ನುರೂಪಿಸಬೇಕು. ಗ್ರಾಮೀಣ ಬಡತನದ ನಿರ್ಧಿಷ್ಟ ಗುಂಪುಗಳೆಂದರೆ ಕಡಿಮೆ

ಆದಾಯದ ಕುಟುಂಬಗಳು, ಸಣ್ಣ ಹಿಡುವಳಿದಾರರು, ಭೂರಹಿತರು, ಬೆಳೆ ಪಾಲುದಾರರು. ಅಂದರೆ ಸೀಮಿತ ನೈಸರ್ಗಿಕ ಸಂಪನ್ಮೂಲ ಹೊಂದಿರುವವರು. ತಂತ್ರಜ್ಞಾನ ಮತ್ತು ಸಾಲ ಸೌಲಭ್ಯಗಳು ಸೀಮಿತವಾಗಿರುತ್ತವೆ. ಪಟ್ಟಭದ್ರ ಹಿತಾಸಕ್ತಿಗಳು ಉತ್ಪಾದಕ ಸಂಪನ್ಮೂಲಗಳ ಪ್ರಯೋಜನ ಬಡವರಿಗೆ ತಲುಪದಂತೆ ನೋಡಿಕೊಂಡು ಅಸಮಾನತೆ ಹೆಚ್ಚಾಗಿರುವಂತೆ ಮಾಡಿರುತ್ತಾರೆ.[೮]

ಜುಲೈ ೨೦, ೨೦೧೨ರಂದು ಆರ್‌ಬಿಐ ಆದ್ಯತಾ ವಲಯ ಸಾಲ ನೀಡಿಕೆಗೆ ಸಂಬಂಧಿಸಿದ ನಿಯಾಮಾವಳಿಗಳಲ್ಲಿ ತಿದ್ದುಪಡಿ ಮಾಡಿದೆ. ಇದು ನೇರ ಕೃಷಿ ಮತ್ತು ಪರೋಕ್ಷ ಕೃಷಿಗಳಿಗೆ ಸಂಬಂಧಿಸಿದೆ. ಕೃಷಿ ಮತ್ತು ಕೃಷಿ ಪೂರಕ ಚಟುವಟಿಕೆಗಳಲ್ಲಿ ತೊಡಗಿರುವ ಉದಾಹರಣೆ, ಡೈರಿ ಉದ್ಯಮ, ಮೀನುಗಾರಿಕೆ, ಕೋಳಿ ಸಾಕಾಣಿಕೆ ಮತ್ತು ರೇಷ್ಮೆ ಚಟುವಟಿಕೆಗಳು. ರೈತ ಸಹಕಾರಿ ಸಂಘಗಳು, ಸಹಭಾಗಿತ್ವದ ಉದ್ಯಮಗಳು ಮತ್ತು ವೈಯುಕ್ತಿಕವಾಗಿ ರೈತರು ನಡೆಸುವ ಕೃಷಿ ಉತ್ಪನ್ನಗಳಿಗೆ ಸಂಬಂಧಿಸಿದ ಕಂಪನಿಗಳು ಮತ್ತು ಕಾರ್ಪೊರೇಟ್‌ಗಳಿಗೆ ೨ ಕೋಟಿ ವರೆಗೂ ಸಾಲ ಸೌಲಭ್ಯ ನೀಡಬಹುದು. ಇದರ ಉದ್ದೇಶಗಳೆಂದರೆ ೧. ಸಾಂಪ್ರದಾಯಿಕ ಮತ್ತು ಅಸಾಂಪ್ರದಾಯಿಕ ಬೆಳೆಗಳು ಅಲ್ಪಾವಧಿ ಸಾಲ ೨. ಕೃಷಿ ಮತ್ತು ಕೃಷಿ ಪೂರಕ ಚಟುವಟಿಕೆಗಳು, ಕೃಷಿ ಸಲಕರಣೆಗಳು ಮತ್ತು ಯಂತ್ರೋಪಕರಣಗಳ ಖರೀದಿ, ನೀರಾವರಿ ಸೌಲಭ್ಯಗಳು, ಭೂ ಅಭಿವೃದ್ಧಿ ಚಟುವಟಿಕೆಗಳಿಗೆ ಮದ್ಯಮಾವಧಿ ಮತ್ತು ದೀರ್ಘಾವಧಿ ಸಾಲ ನೀಡಿಕೆ ೩. ಕಟಾವು ಪೂರ್ವ ಮತ್ತು ಕಟಾವು ನಂತರದ ಚಟುವಟಿಕೆಗಳಿಗೆ ಸಾಲ ನೀಡಿವುದು ಉದಾಹರಣೆಗೆ ಔಷಧಿ ಸಿಂಪಡನೆ, ಕಳೆ ತೆಗೆಯುವುದು, ಕಟಾವು ಮತ್ತು ಉತ್ಪನ್ನ ವರ್ಗೀಕರಣ ಇತ್ಯಾದಿ. ೪. ಸ್ವಂತ ಕೃಷಿ ಉತ್ಪನ್ನಗಳರಫ್ತಿಗಾಗಿರಫ್ತು ಸಾಲ ನೀಡವುದು. ಆದರೆ ಈ ಎಲ್ಲಾ ಸೌಲಭ್ಯಗಳನ್ನು ಪಡೆಯುವ ಅವಕಾಶ ಮತ್ತು ಸಾಮರ್ಥ್ಯ ಹೊಂದಿರುವವರು ಉಳ್ಳವರು, ಶ್ರೀಮಂತ ಭೂ ಮಾಲೀಕರು ಮಾತ್ರ.[೨]

ಬಡವರ ಹಣಕಾಸು ಸೇವಗಳು, ನೀತಿಗಳನ್ನು ಮತ್ತು ಕಾರ್ಯಕ್ರಮಗಳನ್ನುರೂಪಿಸುವುದಕ್ಕೆ ಸಂಬಂಧಿಸಿದ ಸಮಸ್ಯೆಗಳ ಮೇಲೆ ಈ ಅಧ್ಯಯನ ಬೆಳಕು ಚೆಲ್ಲುತ್ತದೆ. ಬಡವರಿಗೆ ಕೊಡಲು ಭದ್ರತೆಗಳಿರುವುದಿಲ್ಲ. ಬಡ ಕುಟುಂಬಗಳ ಉತ್ಪಾದನೆ ಮತ್ತು ಅನುಭೋಗ ಚಟುವಟಿಕೆಗಳು ಅಂತರ್ ಸಂಬಂಧಿತ ವಿಷಯವಾಗಿರುವುದರಿಂದ ಸಾಲ ಅಥವಾ ಹಣಕಾಸು ಈ ಎರಡೂ ಚಟುವಟಿಕೆಗಳಿಗೆ ಅಗತ್ಯವಿರುತ್ತದೆ. ಬರಗಾಲ ಅಥವಾ ಪ್ರವಾಹ ಮತ್ತು ವೈಯುಕ್ತಿಕ ಗಂಡಾಂತರಗಳು ಬಡವರ ಮುಖ್ಯ ಸಮಸ್ಯೆಗಳಾಗಿವೆ. ಬಡವರು ಸಾಂಪ್ರದಾಯಿಕವಾಗಿ ಹಣಕಾಸು ಸೇವೆಗಳನ್ನು ಅಸಂಘಟಿತ ಜಾಲ ಅಥವಾ ವಲಯದಿಂದ ಪಡೆಯುತಿದ್ದರು. ಅಸ್ತಿತ್ವದಲ್ಲಿರುವ ಅಸಂಘಟಿತ ಸಂಸ್ಥೆಗಳ ವ್ಯವಸ್ಥೆಯನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುವ ಮೂಲಕ ಸುಸ್ಥಿರ ಗ್ರಾಮೀಣ ಹಣಕಾಸು ವ್ಯವಸ್ಥೆಯನ್ನು ರೂಪಿಸಿ ಬಡವರಿಗೆ ಹಣಕಾಸು ಸೇವೆಗಳನ್ನು ಒದಗಿಸಬಹುದು. ತಳ ಮಟ್ಟದಿಂದ ಕಟ್ಟಲ್ಪಟ್ಟ ಅಸಂಘಟಿತ ವ್ಯವಸ್ಥೆಯನ್ನು ಗ್ರಾಮೀಣ ಬ್ಯಾಂಕಿಂಗ್ ಸಂಸ್ಥೆಗಳು ಮತ್ತು ಸಹಕಾರಿ ಸಂಘಗಳ ಸಂಘಟಿತ ಸಾಲ ಮತ್ತು ಉಳಿತಾಯ ವ್ಯವಸ್ಥೆಯೊಂದಿಗೆ ಬೆಸೆಯುವಂತಹ

ಹೊಸ ವಿಧಾನಗಳ ಅಗತ್ಯವಿದೆ. ಜನರ ಪಾಲ್ಗೋಳ್ಳುವಿಕೆಯಂತಹ ಹೊಸ ಸಾಂಸ್ಥಿಕ ವಿಧಾನಗಳ ಮೂಲಕ ಉತ್ತಮ ಹಣಕಾಸು ಸೇವೆಗಳನ್ನು ಒದಗಿಸಬಹುದು. ಆ ಮೂಲಕ ಬಡವರ ಆದಾಯ ವೃದ್ಧಿ ಮತ್ತು ಅನಭೋಗ ಸ್ಥಿರತೆಯನ್ನು ಪರಿಣಾಮಕಾರಿಯಾಗಿ ಸುಧಾರಿಸಬಹುದು. ಇದು ಅವರ ದೀರ್ಘ ಮತ್ತು ಅಲ್ಪಾವಧಿ ಆಹಾರ ಭದ್ರತೆ ಸಮಸ್ಯೆಗಳನ್ನು ಪರಿಹರಿಸುತ್ತದೆ.[೬]

ಕರ್ನಾಟಕದ ಗ್ರಾಮ ಮಟ್ಟದಲ್ಲಿ ಮತ್ತು ರಾಜ್ಯ ಮಟ್ಟದಲ್ಲಿ ೧೯೭೨ ರಿಂದ ಸಂಭವಿಸಿದ ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಕರ್ನಾಟಕದ ರಾಜಕೀಯ ನಾಯಕತ್ವವನ್ನು ವಿಶ್ಲೇಷಿಸಲಾಗಿದೆ. ಕರ್ನಾಟಕ ರಾಜ್ಯದಲ್ಲಿ ಸಂಭವಿಸಿದ ಮುಖ್ಯ ಬದಲಾವಣೆಗಳನ್ನು ಚರ್ಚಿಸಲಾಗಿದೆ. ೧. ಸ್ವಾತಂತ್ರ್ಯದ ಅವಧಿಯಿಂದಲೂ ರಾಜ್ಯ ಮಟ್ಟದ ರಾಜಕೀಯದಲ್ಲಿ ಲಿಂಗಾಯತ ಮತ್ತು ಒಕ್ಕಲಿಗರ ಪ್ರಾಬಲ್ಯ ವಿದ್ದದ್ದು. ೨. ೧೯೮೩ರಲ್ಲಿ ರಾಜ್ಯದಲ್ಲಿ ಕಾಂಗ್ರೆಸ್ ಸೋಲುವುದರೊಂದಿಗೆ ರಾಜ್ಯದ ಪಕ್ಷ ವ್ಯವಸ್ಥೆ ಬದಲಾಯಿತು. ೩. ೧೯೮೦ರ ನಂತರ ಬೆಂಗಳೂರಿನಲ್ಲಿ ಸಾಫ್ಟ್‌ವೇರ್ ಮತ್ತು ಹೊರಗುತ್ತಿಗೆ ಪ್ರಮುಖ ಚಟುವಟಿಕೆಗಳು. ರಾಜ್ಯದ ಮುಖ್ಯ ಮಂತ್ರಿಗಳಾದ ರಾಮಕೃಷ್ಣ ಹೆಗಡೆ, ಬಂಗಾರಪ್ಪ, ಗುಂಡೂರಾವ್ ಮತ್ತು ದೇವರಾಜ್ ಅರಸ್‌ರ ಆಡಳಿತ ವ್ಯವಸ್ಥೆಯನ್ನು ವಿಶ್ಲೇಷಿಸಲಾಗಿದೆ.[೪]

ಕರ್ನಾಟಕದ ಅಭಿವೃದ್ಧಿ ರಾಜಕಾರಣದ ವಿಶ್ಲೇಷಣೆಯಲ್ಲಿ ಕರ್ನಾಟಕ ಮತ್ತು ಕೇರಳದ ಅಭಿವೃದ್ಧಿ ನೀತಿಗಳ ವಿಶ್ಲೇಷಣೆ ಮಾಡಲಾಗಿದೆ. ಬಹುತೇಕ ಅಭಿವೃದ್ಧಿ ಮಾನದಂಡಗಳ ಪ್ರಕಾರ ದೇಶದಲ್ಲೇ ಮಂಚೂಣಿಯಲ್ಲಿರುವ ರಾಜ್ಯವೆಂದರೆ ಕೇರಳ ಎನ್ನಲಾಗಿದೆ. ಕೇರಳದ ಈ ಸಾಧನೆಯ ಹಿಂದೆ ಕೆಲವೊಂದು ಅಭಿವೃದ್ಧಿ ನೀತಿಗಳ ಪಾತ್ರ ಬಹುದೊಡ್ಡದು ಎನ್ನಲಾಗಿದೆ. ಅವುಗಳೆಂದರೆ ಭೂ ಸುಧಾರಣೆ ಮಸೂದೆ, ಅಭಿವೃದ್ಧಿ ಆಡಳಿತ ವಿಕೇಂದ್ರೀಕರಣ, ಎಲ್ಲರಿಗೂ ಸಿಗುವ ಶಿಕ್ಷಣ ಮತ್ತು ಆರೋಗ್ಯ ಸವಲತ್ತುಗಳು ಇತ್ಯಾದಿ ನೀತಿಗಳು ಸಾಕಷ್ಟು ಕೆಲಸ ಮಾಡಿವೆ. ಕರ್ನಾಟಕ ಕೂಡಾ ಮೇಲಿನ ಎಲ್ಲಾ ಅಭಿವೃದ್ಧಿ ಕ್ರಮಗಳನ್ನು ಕೈಗೊಂಡಿದೆ. ಆದರೆ ಕರ್ನಾಟಕದ ಸಾಧನೆ ಮತ್ತು ಕೇರಳ ಸಾಧನೆಯ ನಡುವೆ ಸಾಕಷ್ಟು ವ್ಯತ್ಯಾಸವಿದೆ ಎಂದು ವಿಶ್ಲೇಷಿಸಲಾಗಿದೆ. ಕೆಲವು ಅಂಕಿ ಅಂಶಗಳ ಮೂಲಕ ಈ ವ್ಯತ್ಯಾಸವನ್ನು ಅರ್ಥ ಮಾಡಿಕೊಳ್ಳಬಹುದು. ಕೇರಳದಂತೆ ಕರ್ನಾಟಕದಲ್ಲಿ ೭೦ರ ದಶಕದಲ್ಲೇ ಭೂ ಸುಧಾರಣೆಯನ್ನು ಜಾರಿಗೆ ತರಲಾಗಿದೆ. ಆದರೆ ಭೂರಹಿತರಿಗೆ ಭೂಮಿ ನೀಡುವ ವಿಚಾರದಲ್ಲಿ ಕರ್ನಾಟಕದ ಸಾಧನೆ ಏನೇನೂ ಇಲ್ಲ. ೧೯೭೧ರಲ್ಲಿ ಕರ್ನಾಟಕದಲ್ಲಿ ಸುಮಾರು ಶೇಕಡಾ ೩೨.೭ರಷ್ಟು ಭೂರಹಿತ ಮತ್ತು ಅರೆ ಭೂರಹಿತ ಕುಟುಂಬಗಳಿದ್ದವು. ೧೯೯೨ರಲ್ಲಿ ಅಂತಹ ಕುಟುಂಬಗಳ ಪ್ರಮಾಣ ಶೇಕಡಾ ೩೨ಕ್ಕೆ ಇಳಿದಿದೆ. ಅಂದರೆ ಶೇಕಡಾ ೦.೭ರಷ್ಟು ಮಾತ್ರ ಕಡಿಮೆಯಾಗಿದೆ. ಆದರೆ ಕೇರಳದಲ್ಲಿ ಈ ಪ್ರಮಾಣ ೧೯೭೧ರಲ್ಲಿ ಶೇಕಡಾ ೧೫ರಷ್ಟಿದ್ದ ಭೂರಹಿತ ಕುಟುಂಬಗಳ ಸಂಖ್ಯೆ ೧೯೯೦-೯೧ರಲ್ಲಿ ಶೇಕಡಾ ೮ಕ್ಕೆ ಇಳಿದಿದೆ.[೮]

ಒಂದು ಭಾಷೆ, ಸಂಸ್ಕೃತಿ, ಚರಿತ್ರೆ ಇತ್ಯಾದಿಗಳ ನೆಲೆಯಲ್ಲಿ ತನ್ನ ಪ್ರತ್ಯೇಕತೆಯನ್ನು ಸಾಧಿಸಿ ಪ್ರತ್ಯೇಕ ರಾಜ್ಯ ಪಡೆದ ಕರ್ನಾಟಕ ಪಂಚವಾರ್ಷಿಕ ಯೋಜನೆಗಳಲ್ಲಿ ತನ್ನ ಪತ್ಯೇಕತೆಯನ್ನು ಉಳಿಸಿಕೊಂಡಿಲ್ಲ. ಕೇಂದ್ರ ಸರ್ಕಾರ ಮಂಚೂಣಿಗೆ ತಂದ ಅಭಿವೃದ್ಧಿ ಮಾದರಿ ಹಾಗೂ ಯೋಜನೆಗಳನ್ನು ಯತಾವತ್ತಾಗಿ ಅಥವಾ ಸಣ್ಣ ಬದಲಾವಣೆಗಳೊಂದಿಗೆ ಕರ್ನಾಟಕ ಸಹಾ ಅನುಸರಿಸಿದೆ ಎನ್ನಲಾಗಿದೆ. ಉತ್ಪಾದನಾ ಪ್ರಮಾಣವನ್ನು ಹೆಚ್ಚಿಸುವುದಕ್ಕೆ ಈ ಮಾದರಿ ಹೆಚ್ಚು ಆದ್ಯತೆ ನೀಡಿದೆ. ಕೇಂದ್ರ ಅನುಸರಿಸಿದ ಅಭಿವೃದ್ಧಿ ಮಾದರಿಯಲ್ಲಿ ಭೂಮಿ, ಬಂಡವಾಳ ಮತ್ತು ಆಧುನಿಕ ಕೌಶಲ್ಯ ಮುಖ್ಯ ಪಾತ್ರ ವಹಿಸುತ್ತವೆ. ಈ ಸಂಪನ್ಮೂಲಗಳನ್ನು ಹೊಂದಿರುವವರು ಮಾತ್ರ ಕೇಂದ್ರ ಅನುಸರಿಸಿದ ಅಭಿವೃದ್ಧಿ ಮಾದರಿಯಿಂದ ಹೆಚ್ಚು ಲಾಭ ಪಡೆಯಲು ಸಾಧ್ಯ ಎಂದು ವಿಶ್ಲೇಷಿಸಿದ್ದಾರೆ. ಆದರೆ ಈ ಸಂಪನ್ಮೂಲಗಳಲ್ಲಿ ಯಾವುದಾದರೂ ಒಂದು ಇಲ್ಲದಿದ್ದರೂ ಇಂತಹ ಅಭಿವೃದ್ಧಿ ಮಾದರಿಯ ಪ್ರಯೋಜನದಿಂದ ಹೊರಗುಳಿಯಬೇಕಾಗುತ್ತದೆ. ಇದೇ ರೀತಿಯ ಮಾದರಿಯನ್ನು ಕರ್ನಾಟಕ ತನ್ನ ಪಂಚವಾರ್ಷಿಕ ಯೋಜನೆಗಳಲ್ಲಿ ಅನುಸರಿಸುತ್ತಿರುವುದನ್ನು ಕಾಣಬಹುದು ಎನ್ನಲಾಗಿದೆ. ಭೂ ಮಾಲೀಕರು, ಬಂಡವಾಳಿಗರು ಮತ್ತು ಸಮಾಜದ ಕೆಳಸ್ಥರ ಜನತೆ ಪಂಚವಾರ್ಷಿಕ ಯೋಜನೆಗಳಿಂದ ಪಡೆದ ಲಾಭಗಳನ್ನೂ ಸಹಾ ವಿಶ್ಲೇಷಿಸುತ್ತಾ ಕೃಷಿ, ನೀರಾವರಿ, ವಿದ್ಯುತ್ ಮತ್ತು ಕೈಗಾರಿಕಾ ಕ್ಷೇತ್ರದಲ್ಲಿನ ಯೋಜನೆಯ ಖರ್ಚಿನಲ್ಲಿ ಶೇಕಡಾ ೯೦ರಷ್ಟು ಭೂ ಮಾಲೀಕರು ಮತ್ತು ಬಂಡವಾಳಿಗರ ಪಾಲಾಗಿದೆ ಎನ್ನಲಾಗಿದೆ. ಹೀಗೆ ಕರ್ನಾಟಕ ಪಂಚವಾರ್ಷಿಕ ಯೋಜನೆಗಳನ್ನು ಅಭಿವೃದ್ಧಿ ರಾಜಕಾರಣದ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಿರುವುದನ್ನು ಕಾಣಬಹುದು. ಈ ರೀತಿಯ ಪ್ರಯತ್ನಗಳು/ಅಧ್ಯಯನಗಳು ಕರ್ನಾಟಕದಲ್ಲಿ ವಿರಳ ಎನ್ನಬಹುದು.[೬೬]

ಭೂರಹಿತರಲ್ಲಿ ಬಹುತೇಕರು ದಲಿತರು ಮತ್ತು ಭೂ ಮಾಲೀಕರಲ್ಲಿ ಬಹುತೇಕರು ಬಲಾಢ್ಯ ಸಮುದಾಯಗಳವರೇ ಇದ್ದಾರೆ. ಏಕೀಕೃತ ಕರ್ನಾಟಕದಲ್ಲಿ ಬಂದು ಹೋದ ಮೂರು ಭೂ ಸುಧಾರಣೆಗಳು ಏಕೀಕರಣ ಸಂದರ್ಭದಲ್ಲಿದ್ದ ಭೂಮಿ ಸಂಬಂಧವನ್ನು ಮೂಲಭೂತವಾಗಿ ಪರಿವರ್ತಿಸಲು ವಿಫಲವಾಗಿವೆ. ೧೯೭೪ರ ಕಾಯಿದೆಯ ಅನುಷ್ಠಾನ ಮತ್ತು ಪರಿಣಾಮದ ಬಗ್ಗೆ ಸಾಕಷ್ಟು ಅದ್ಯಯನಗಳು ನಡೆದಿವೆ. ಈ ಅಧ್ಯಯನಗಳಲ್ಲಿ ಬಹುತೇಕ ಅಧ್ಯಯನಗಳು ೧೯೭೪ರ ಕಾಯಿದೆ ಕರ್ನಾಟಕದಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಂಡಿದೆ ಎನ್ನುವ ತೀರ್ಮಾನಕ್ಕೆ ಬರುತ್ತವೆ. ಆದರೆ ೧೯೭೪ರ ಕಾಯಿದೆಯ ಅನುಷ್ಠಾನದಿಂದ ಕರ್ನಾಟಕದ ಭೂ ಸಂಬಂಧಗಳು ಸಂಪೂರ್ಣವಾಗಿ ಬದಲಾಗಿದೆ ಎನ್ನುವುದು ಸತ್ಯಕ್ಕೆ ದೂರವಾದ ಸಂಗತಿ ಎನ್ನಲಾಗಿದೆ. ಇಲ್ಲಿ ಭೂ ಸುಧಾರಣೆ ಕಾಯಿದೆಗಳ ವಿಫಲತೆಗೆ ಸಾಕಷ್ಟು ಕಾರಣಗಳನ್ನು ಪಟ್ಟಿ ಮಾಡಲಾಗಿದೆ. ಕಾನೂನುಗಳ ಮೂಲಕ ಭೂ ಸುಧಾರಣೆ ಪರಿಣಾಮಕಾರಿಯಾಗಿ ಜಾರಿಯಾದರೆ ಬಡವ ಶ್ರೀಮಂತರ, ಉಳ್ಳವರ ಉಳ್ಳದವರ ನಡುವಿನ ಅಭಿವೃದ್ಧಿಯ ಅಂತರ ಕಡಿಮೆಯಾಗುತ್ತದೆ. ಭೂರಹಿತರ ಸಂಖ್ಯೆ ಕಡಿಮೆಯಾಗುತ್ತದೆ. ಕೃಷಿ ಮಾಡುವವರು ಹೆಚ್ಚಿ, ಕೃಷಿ ಉತ್ಪನ್ನವು ಹೆಚ್ಚುವುದು ಎನ್ನಲಾಗಿದೆ. ಈ

ಹಿನ್ನೆಲೆಯಲ್ಲಿ ಅಭಿವೃದ್ಧಿ ಮತ್ತು ಅಭಿವೃದ್ಧಿ ರಾಜಕಾರಣವನ್ನು ಆ ಮೂಲಕ ರಾಜಕೀಯ ಆರ್ಥಿಕತೆಯ ಸ್ವರೂಪವನ್ನು ಇಲ್ಲಿ ವಿಶ್ಲೇಷಿಸಲಾಗಿದೆ ಹಾಗೂ ಇವುಗಳನ್ನು ಬೇರೆ ದೃಷ್ಟಿಕೋನದಿಂದ ನೋಡಬೇಕಾದ ಅನಿವಾರ್ಯತೆಯನ್ನು ಪ್ರತಿಪಾದಿಸಲಾಗಿದೆ.[೬೬]

ಅಭಿವೃದ್ಧಿ ನೀತಿಗಳಿಗೆ ಸಂಬಂಧಿಸಿದ ರಾಜಕೀಯ ವೈಪಲ್ಯತೆಯ ವಿಶ್ಲೇಷಣೆಯನ್ನು ಇಲ್ಲಿ ಕಾಣಬಹುದು. ಗ್ರಾಮೀಣ ಅಬಿವೃದ್ಧಿಯು ಕೂಲಿಕಾರರು ಮತ್ತು ಬಡ ರೈತರನ್ನು ಒಳಗೊಳ್ಳಬೇಕಾಗಿದೆ. ಗ್ರಾಮೀಣಾಭಿವೃದ್ಧಿಯ ವ್ಯಾಪ್ತಿಯು ವಿಶಾಲವಾದುದು. ಗ್ರಾಮಗಳ ಮೂಲ ಸೌಕರ್ಯಗಳ ಬೆಳವಣಿಗೆ ಮತ್ತು ಕೃಷಿ ಬೆಳವಣಿಗೆಗಳ ಜೊತೆಗೆ ಗ್ರಾಮೀಣಾಭಿವೃದ್ಧಿಯು ಕೈಗಾರಿಕೆಗಳ ನಿರ್ಮಾಣ, ಹಣಕಾಸು ವ್ಯವಸ್ಥೆ ಬ್ಯಾಂಕುಗಳ ಸೌಲಭ್ಯಗಳ ವಿಸ್ತರಣೆ, ಪೌಶ್ಟಿಕ ಆಹಾರ ಒದಗಿಸುವುದು, ಸಾಕ್ಷರತೆಯನ್ನು ಉತ್ತಮ ಪಡಿಸುವುದು ಮತ್ತು ಮಾರುಕಟ್ಟೆಯನ್ನು ಸಂಘಟಿಸುವುದು ಮುಂತಾದ ಸಂಗತಿಗಳನ್ನು ಸಹಾ ಒಳಗೊಂಡಿದೆ. ಗ್ರಾಮೀಣಾಭಿವೃದ್ಧಿಯು ಬಹುವಲಯ ಚಟುವಟಿಕೆಯಾಗಿದೆ. ಇದು ಆರ್ಥಿಕ ಪ್ರಗತಿ ಹಾಗೂ ಸಾಮಾಜಿಕ ಪ್ರಗತಿ ಎರಡನ್ನೂ ಒಳಗೊಂಡ ಒಂದು ಚಟುವಟಿಕೆ.

ಅಭಿವೃದ್ಧಿಯನ್ನು ತಳಮಟ್ಟದಿಂದ ಮೇಲ್ಮಟ್ಟಕ್ಕೆ ಹರಿಯುವಂತೆ ಮಾಡಬೇಕು. ವಿಕೇಂದ್ರೀಕರಣ ಈ ನಿಟ್ಟಿನಲ್ಲಿ ಒಂದು ತಾತ್ವಿಕ ಸಮರ್ಥನೆ ಮಾತ್ರ. ಅಭಿವೃದ್ಧಿಯು ಜನರ ಸಹಬಾಗಿತ್ವದಲ್ಲಿ ನಡೆಯಬೇಕಾದರೆ ಅದು ತಳಮಟ್ಟದಿಂದ ಆರಂಭವಾಗಿ ಮೇಲ್ಮಟ್ಟಕ್ಕೆ ಹರಿಯುವಂತಾಗಬೇಕು. ತಳಮಟ್ಟದಲ್ಲಿ ಅಭಿವೃದ್ಧಿಯಿಂದ ಯಾರು ವಂಚಿತರಾಗಿದ್ದಾರೋ ಅವರನ್ನು ಒಳಗೊಳ್ಳುವ ಪ್ರಕ್ರಿಯೆ ಯನ್ನು ತಳಮಟ್ಟದ ಅಭಿವೃದ್ಧಿ ಎನ್ನಬಹುದು. ಅಭಿವೃದ್ಧಿಯ ಫಲಗಳು ಮೇಲಿನಿಂದ ಕೆಳಮುಖಿಯಾಗಿ ಹರಿಯುವಂತೆ ಮಾಡುವ ಅಭಿವೃದ್ಧಿಯ ತಂತ್ರವು ಪ್ರಚಲಿತದಲ್ಲಿದೆ. ಮೇಲಿನಿಂದ ಕೆಳಗಿನ ಮಜಲಿಗೆ ಹರಿಯುವ ಅಭಿವೃದ್ಧಿ ತಂತ್ರವನ್ನು ತಲೆಕೆಳಗೆ ಮಾಡಬೇಕಾಗಿದೆ. ಇದನ್ನು ತಲೆಕೆಳಗೆ ಮಾಡಲು ಸಾಧ್ಯವಾಗದ ಪರಿಯನ್ನು ರಾಜಕೀಯ ವೈಪಲ್ಯವೆಂದು ಕರೆಯಲಾಗುತ್ತದೆ. ಇದನ್ನು ಜೀನ್‌ಡ್ರಿಜ್ ಮತ್ತು ಅಮರ್ತ್ಯಸೇನ್‌ರವರು ಸಾಮಾಜಿಕ ವೈಪಲ್ಯವೆಂದು ಕರೆದಿದ್ದಾರೆ. ಬಡವರನ್ನು, ದುರ್ಬಲರನ್ನು, ದಲಿತರನ್ನು, ಮಹಿಳೆಯರನ್ನು ಸಾಧನವಾಗಿ ಹಾಗೂ ಸಾಧ್ಯವೂ ಆಗಿ ಒಳಗೊಳ್ಳದಿರುವ ಅಭಿವೃದ್ಧಿ ಪ್ರಕ್ರಿಯೆನ್ನು ರಾಜಕೀಯ ವೈಪಲ್ಯವೆನ್ನಬಹುದು. ತಳಮಟ್ಟದ ಅಭಿವೃದ್ಧಿ ಸಹಬಾಗಿತ್ವದ ಅಭಿವೃದ್ಧಿ ಎಂದೆಲ್ಲಾ ಏನೇ ಹೇಳಿದರೂ ಅದು ಸಮಾಜದ ಉನ್ನತ ಜಾತಿ ವರ್ಗಗಳ ಅಗತ್ಯಗಳನ್ನು ಪೂರೈಸುವಲ್ಲಿ ಹೆಚ್ಚು ಕ್ರಿಯಾಶೀಲವಾಗಿರುವಂತೆ ಕಾಣುತ್ತದೆ. ಗ್ರಾಮೀಣ ಪ್ರದೇಶದಲ್ಲಿ ವಂಚಿತರ, ಬಡವರ, ಅನಕ್ಷರಸ್ಥರ, ದುರ್ಬಲರ ಮಹಿಳೆ ಮತ್ತು ದಲಿತರ ಅಗತ್ಯಗಳನ್ನು ಈಡೇರಿಸುವಲ್ಲಿ ಅಭಿವೃದದ್ಧಿ ಪ್ರಕ್ರಿಯೆ ವಿಫಲಗೊಂಡಿದೆ ಎನ್ನಬಹುದು. ಅಮರ್ತ್ಯಸೇನ್‌ರ ಪ್ರಕಾರ ಜನರು ಅಭಿವೃದ್ಧಿಯ ನಿಯೋಗಿಗಳಾದಾಗ ಮಾತ್ರ ಅದರಲ್ಲಿ ಅವರಿಗೆ ಪಾಲು ದೊರೆಯುತ್ತದೆ. ಆದರೆ ಸದ್ಯ ಜನರು ಕೇವಲ ಫಲಾನುಭವಿಗಳಾಗಿದ್ದಾರೆ ಹೊರತು ಪಾಲುದಾರರಲ್ಲ.[೬೮]

ಕರ್ನಾಟಕದ ಗ್ರಾಮೀಣ ಪ್ರದೇಶದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಆದರೆ ಈ ಬದಲಾವಣೆಗಳು ಯಾವತ್ತು ಜಮೀನ್ದಾರಿ ಯಜಮಾನ ಜಾತಿಗಳ ಪ್ರಾಬಲ್ಯವನ್ನು ಕಡಿಮೆ ಮಾಡಿಲ್ಲ. ಜೇಮ್ಸ್ ಮೇನರನ ಪ್ರಕಾರ ಕರ್ನಾಟಕದ ಗ್ರಾಮೀಣ ಪ್ರದೇಶದಲ್ಲಿ ಜಮೀನ್ದಾರಿ ಯಜಮಾನ ಜಾತಿಗಳು ಪ್ರಾಬಲ್ಯ ಮುಂದುವರಿದಿರುವುದೇ ಕರ್ನಾಟಕದ ಮದ್ಯಮಗತಿ ಬೆಳೆವಣಿಗೆ ಕಾರಣ. ಪ್ರಾಬಲ್ಯ ಕಾಯ್ದುಕೊಂಡು ಬಂದಿರುವ ಜಾತಿ ಸಮುದಾಯಗಳೆಂದರೆ ಒಕ್ಕಲಿಗ ಮತ್ತು ಲಿಂಗಾಯಿತ ಸಮುದಾಯಗಳು. ಇಲ್ಲಿ ಪ್ರಾಬಲ್ಯ ಎಂದರೆ ಸಂಪನ್ಮೂಲ ಮತ್ತು ಅಧಿಕಾರಿದ ಮೇಲಿನ ಜಾತಿಗಳ ಯಜಮಾನಿಕೆ. ಕೃಷಿಯನ್ನು ಒಳಗೊಂಡಂತೆ ಪ್ರಾಥಮಿಕ ವಲಯವನ್ನು ದುಡಿಮೆಗಾರ ವರ್ಗ ಅಧಿಕವಾಗಿ ಯಾವ ಆರ್ಥಿಕತೆಯಲ್ಲಿ ಅವಲಂಬಿಸಿ ಕೊಂಡಿರುವುದೋ ಅಲ್ಲಿ ಆರ್ಥಿಕ ದುಸ್ಥಿತಿ ತ್ರೀವ್ರವಾಗಿರುತ್ತದೆ ಎನ್ನಲಾಗಿದೆ. ಕರ್ನಾಟಕದ ಅರ್ಥಿಕತೆಯಲ್ಲಿ ಪ್ರಾಥಮಿಕ ವಲಯವನ್ನು ಅವಲಂಬಿಸಿಕೊಂಡಿರುವ ದುಡಿಮೆಗಾರ ವರ್ಗದ ಪ್ರಮಾಣ ಶೇ ೬೭.೩೭ರಷ್ಟಿದೆ. ಆದರೆ ಪರಿಶಿಷ್ಟರಲ್ಲಿ ಇದರ ಪ್ರಮಾಣ ಶೇ ೮೦.೨೨ರಷ್ಟಿದ್ದರೆ ಪರಿಶಿಷ್ಟತರರದಲ್ಲಿ ಇದು ಶೇ ೬೩.೬೪ರಷ್ಟಿದೆ. ಪ್ರಾಥಮಿಕೇತರ ವಲಯಗಳ ಚಟುವಟಿಕೆಗಳಾದ ಉದ್ದಿಮೆ, ಬ್ಯಾಂಕಿಂಗ್, ಸಾರಿಗೆ ಸಂಪರ್ಕ, ವ್ಯಾಪಾರ ವಾಣಿಜ್ಯ, ಪ್ರವಾಸೋದ್ಯಮ ಮುಂತಾದವುಗಳ ಅವಲಂಬನೆ ಪರಿಶಿಷ್ಟರಲ್ಲಿ ಶೇ ೧೯.೭೮ರಷ್ಟಿದ್ದರೆ ಪರಿಶಿಷ್ಯೇತರಲ್ಲಿ ಅದು ಶೇ ೩೬.೩೮ರಷ್ಟಿದೆ. ಕರ್ನಾಟಕದ ಒಟ್ಟು ಉಡಿಮೆಗಾರ ವರ್ಗವು ಕೃಷಿಯನ್ನು ಎರಡು ನೆಲೆಗಳಲ್ಲಿ ಅವಲಂಬಿಸಿ ಕೊಂಡಿದ್ದಾರೆ. ಕೃಷಿಯನ್ನು ಅವಲಂಬಿಸಿಕೊಂಡಿರುವ ದುಡಿಮೆಗರರನ್ನು ಸಾಗುವಳಿದಾರರು ಮತ್ತು ಭೂರಹಿತ ಕೃಷಿಕೂಲಿಕಾರರು ಎಂದು ವಿಂಗಡಿಸಬಹುದು. ೨೦೦೧ರ ಜನಗಣತಿ ಪ್ರಕಾರ ಕರ್ನಾಟಕದಲ್ಲಿ ದುಡಿಮೆಗಾರ ಸಂಖ್ಯೆ ೨೩೫.೨೧ ಲಕ್ಷ. ರಾಜ್ಯದ ಒಟ್ಟು ಭೂರಹಿತ ದುಡಿಮೆಗಾರರಲೀ ಬೆಂಗಳೂರು ಮತ್ತು ಮೈಸೂರು ವಿಭಾಗಗಳ ಪಾಲು ಶೇ ೨೭.೨೬ ಮತ್ತು ಶೇ. ೧೬.೫೦ರಷ್ಟಿದ್ದರೆ ಬೆಳಗಾವಿ ಮತ್ತು ಗುಲಬರ್ಗಾ ಪಾಲು ಕ್ರಮವಾಗಿ ಶೇ ೩೦.೩೫ ಮತ್ತು ೨೬.೮೯ರಷ್ಟು, ಕರ್ನಾಟಕದಲ್ಲಿ ಒಟ್ಟು ಮಹಿಳಾ ಕೃಷಿ ಕೂಲಿಕಾರರ ಸಂಖ್ಯೆ ೩೬.೧೩ ಲಕ್ಷ (೨೦೦೧ರ ಜನಗಣತಿ ಪ್ರಕಾರ) ಇದರಲ್ಲಿ ದಕ್ಷಿಣ ಕರ್ನಾಟಕದ ಪಾಲು ಶೇ ೪೦.೯೬ರಷ್ಟು ಉತ್ತರ ಕರ್ನಾಟಕದ ಪಾಲು ಶೇ ೫೯.೦೪ರಷ್ಟು, ಸರ್ಕಾರದ ಮಲತಾಯಿ ಧೋರಣೆ, ಚಾರಿತ್ರಿಕ ಸಂಗತಿಗಳು, ಭ್ರಷ್ಟಾಚಾರ, ಭೌಗೋಳಿಕ ಲಕ್ಷಣಗಳ ವಿವರಣೆಗಿಂತ ಈ ಹಿಂದುಳಿದ ಜಿಲ್ಲೆಗಳ ಹಿಂದುಳಿದಿರುವಿಕೆಯ ಹಿಂದೆ ಅನೇಕ ಸಂಗತಿಗಳು ಇರುವುದನ್ನು ಗುರುತಿಸಬೇಕಾಗಿದೆ. ಅಭಿವೃದ್ಧಿ ಪ್ರಕ್ತಿಯೆಯನ್ನು ಸಾಮಾಜಿಕ ನೆಲೆಯಿಂದ ಪ್ರತ್ಯೇಕಿಸಿ ಪರಿಶೀಲಿಸುವ ಪದ್ಧತಿಯಿಂದ ಅಭಿವೃದ್ಧಿಯ ಸೂಕ್ಷ್ಮ ನೆಲೆಗಳ ದರ್ಶನ ಸಾಧ್ಯವಿಲ್ಲ ಎಂದು ವಿಶ್ಲೇಷಿಸಿದ್ದಾರೆ.[೯]

**ಪ್ಲಾನಿಂಗ್ ಇನ್ ಪರ್ಸ್‌ಪೆಕ್ಟೀವ್:** ೧೯೭೩-೭೪ ರಿಂದ ೧೯೮೮-೮೯ರ ವರೆಗಿನ ಕರ್ನಾಟಕದ ಯೋಜನೆಯಲ್ಲಿ ನೀತಿಯ ಆಯ್ಕೆಗಳು ಎಂಬ ಶೀರ್ಷಿಕೆಯಡಿ ಲೇಖಕರು ಕರ್ನಾಟಕದ ಆರ್ಥಿಕ ಸಾಮಾಜಿಕ ಪರಿವರ್ತನೆಯಲ್ಲಿ ವಾಣಿಜ್ಯದ ಬ್ಯಾಂಕುಗಳ ಪಾತ್ರವನ್ನು, ಸಾರ್ವಜನಿಕ ಬ್ಯಾಂಕುಗಳ

ಶಾಖೆಗಳ ವಿಸ್ತರಣೆಯನ್ನು ಹಾಗು ಇದರಲ್ಲಿನ ಪ್ರಾದೇಶಿಕ ಅಸಮಾನತೆಯನ್ನು ವಿಶ್ಲೇಷಿಸಿದ್ದಾರೆ. ಇತ್ತೀಚಿನ ದಿನಗಳಲ್ಲಿ ವಾಣಿಜ್ಯ ಬ್ಯಾಂಕುಗಳ ಬೆಳವಣಿಗೆ ಆರ್ಥಿಕ ನೀತಿ ರೂಪಿಸುವವರಿಗೆ ಇವುಗಳನ್ನು ಅಭಿವೃದ್ಧಿಯ ಏಜೆಂಟ್‌ಗಳೆಂದು ಪರಿಗಣಿಸುವಂತೆ ಮಾಡಿದೆ. ರಾಷ್ಟ್ರೀಕರಣದ ನಂತರ ವಾಣಿಜ್ಯ ಬ್ಯಾಂಕುಗಳಿಗೆ ಸಾಂಪ್ರದಾಯಿಕ ಭದ್ರತೆ ಆಧಾರಿತ ಸಾಲ ನೀಡುವುದಕ್ಕಿಂತ ಉತ್ಪಾದನೆ ಆಧಾರಿತ ಸಾಲ ನೀಡುವಂತೆ ಹೇಳಲಾಗಿತ್ತು. ಇದರಿಂದ ರಾಷ್ಟ್ರೀಕರಣದ ನಂತರ ಬ್ಯಾಂಕುಗಳ ಸಾಲಕ್ಕೆ ಬೇಡಿಕೆ ಹೆಚ್ಚಿತು. ಈ ದೃಷ್ಟಿಯಿಂದ ಕರ್ನಾಟಕದ ಆರ್ಥಿಕ ಸಾಮಾಜಿಕ ಪರಿವರ್ತನೆಯಲ್ಲಿ ವಾಣಿಜ್ಯದ ಬ್ಯಾಂಕುಗಳ ಪಾತ್ರವನ್ನು ಪರೀಕ್ಷಿಸಲಾಗಿದೆ (ಮುಖ್ಯವಾಗಿ ಯೋಜನಾ ಅವಧಿಯ ದೃಷ್ಟಿಕೋನ). ಈ ಪರೀಕ್ಷೆಯಲ್ಲಿ ಎರಡು ಮಾನದಂಡಗಳನ್ನು ಬಳಸಲಾಗಿದೆ. (೧) ವಾಣಿಜ್ಯ ಬ್ಯಾಂಕುಗಳ ಶಾಖೆಗಳ ಹಂಚಿಕೆ (೨) ಠೇವಣಿ ಬೆಳವಣಿಗೆರೂಪದಲ್ಲಿ ಈ ಬ್ಯಾಂಕುಗಳ ಸಂಪನ್ಮೂಲ ಸಂಗ್ರಹ ಸಾಮರ್ಥ್ಯ.

ಬ್ಯಾಂಕಿಂಗ್ ಸೌಲಭ್ಯಗಳ ದೃಷ್ಟಿಯಲ್ಲಿ ಕರ್ನಾಟಕ ಉತ್ತಮ ಬೆಳವಣಿಗೆ ಕಂಡಿದೆ. ರಾಷ್ಟ್ರೀಕರಣದ ಸಂದರ್ಭದಲ್ಲಿ ೭೬೧ ವಾಣಿಜ್ಯ ಬ್ಯಾಂಕುಗಳ ಶಾಖೆಗಳೊಂದಿಗೆ ಕರ್ನಾಟಕ ೩ನೇ ಸ್ಥಾನದಲ್ಲಿತ್ತು. ಮಹಾರಾಷ್ಟ್ರ (೧೧೨೫) ೨ನೇ ಸ್ಥಾನ, ತಮಿಳುನಾಡು (೧೦೬೬) ೩ನೇ ಸ್ಥಾನದಲ್ಲಿತ್ತು. ಆದರೆ ಬೆಳಗಾಂ, ದಾರವಾಡ, ದಕ್ಷಿಣ ಕರ್ನಾಟಕ ಮತ್ತು ಬೆಂಗಳೂರು ಜಿಲ್ಲೆಗಳಲ್ಲಿ ಮಾತ್ರ ಬ್ಯಾಂಕ್ ಶಾಖೆಗಳು ವಿಸ್ತರಣೆಗೊಂಡವು. ಶೇಕಡಾ ೫೦ರಷ್ಟು ಶಾಖೆಗಳು ಅಂದರೆ ೧೯೭೫ರ ಹೊತ್ತಿಗೆ ೧೧೦೧ ಶಾಖೆಗಳಲ್ಲಿ ೫೪೩ ಶಾಖೆಗಳು ಈ ನಾಲ್ಕು ಜಿಲ್ಲೆಗಳಲ್ಲಿ ವಿಸ್ತರಣೆಗೊಂಡವು. ಬೀದರ್ ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲಿ ಬ್ಯಾಂಕಿಂಗ್ ಸೌಲಭ್ಯಗಳ ಕೊರತೆಯಿತ್ತು. ಕೋಲಾರ, ತುಮಕೂರು ಮತ್ತು ರಾಯಚೂರು ಜಿಲ್ಲೆಗಳಲ್ಲಿ ಒಂದೊಂದು ಶಾಖೆಗಳಿದ್ದು, ಬ್ಯಾಂಕ್ ಸೌಕರ್ಯಗಳ ದೃಷ್ಟಿಯಿಂದ ಹಿಂದುಳಿದಿದ್ದವು. ೧೯೬೯ರಲ್ಲಿ ಕರ್ನಾಟಕದಲ್ಲಿ ವಾಣಿಜ್ಯ ಬ್ಯಾಂಕುಗಳು ಸಂಗ್ರಹಿಸಿದ ಒಟ್ಟು ಠೇವಣಿ ೨೩೫.೮೫ ಕೋಟಿಯಷ್ಟಿತ್ತು. ೧೯೭೫ ಜೂನ್‌ನಲ್ಲಿ ಇದು ೬೧೭.೪೫ ಕೋಟಿಗೆ ಹೆಚ್ಚಿತು. ಶೇಕಡಾ ೧೫೮ರಷ್ಟು ಹೆಚ್ಚಳವಾಯಿತು. ಇದರಲ್ಲಿ ಬೆಂಗಳೂರು ಜಿಲ್ಲೆಯಲ್ಲಿ ಅತೀ ಹೆಚ್ಚು ೧೫೮.೬೮ ಕೋಟಿ ಸಂಗ್ರಹವಾಗಿತ್ತು. ಬೀದರ್‌ನಲ್ಲಿ ಅತೀ ಕಡಿಮೆ ಸಂಗ್ರಹವಾಗಿತ್ತು. ೧೯ ಜಿಲ್ಲೆಗಳಲ್ಲಿ ೧೦ಕ್ಕಿಂತ ಹೆಚ್ಚು ಜಿಲ್ಲೆಗಳಲ್ಲಿ ಕಡಿಮೆ ಠೇವಣಿ ಸಂಗ್ರಹವಾಗಿತ್ತು. ಕರ್ನಾಟಕ ರಾಜ್ಯದ ೧೪ ಜಿಲ್ಲೆಗಳಲ್ಲಿ ಶೇಕಡಾ ೨೫ರಷ್ಟು ಮಾತ್ರ ಠೇವಣಿ ಸಂಗ್ರಹವಾಗಿತ್ತು. ಅದೇ ರೀತಿ ಸಾಲ ನೀಡಿಕೆಯು ೧೯೬೯ರಲ್ಲಿ ೧೭೪.೬೨ ಕೋಟಿ ಇದ್ದು ೧೯೭೫ರ ಹೊತ್ತಿಗೆ ಇದು ೫೯೦.೮೫ ಕೋಟಿಗೆ ಹೆಚ್ಚಿತು. ಬೆಂಗಳೂರು ಜಿಲ್ಲೆ ಅತೀ ಹೆಚ್ಚು ಸಾಲ ಪಡೆದರೆ ಬೀದರ್ ಅತೀ ಕಡಿಮೆ ಸಾಲವನ್ನು ಪಡೆದಿತ್ತು. ಕರ್ನಾಟಕದ ೧೪ ಜಿಲ್ಲೆಗಳು ಶೇಕಡಾ ೨೫ಕ್ಕಿಂತ ಕಡಿಮೆ ಮುಂಗಡವನ್ನು ಪಡೆದಿದ್ದವು.

ಸಹಕಾರಿ ಬ್ಯಾಂಕುಗಳು; ರಾಜ್ಯ ಹಾಗೂ ಕೇಂದ್ರ ಸಹಕಾರಿ ಬ್ಯಾಂಕುಗಳು, ಕೃಷಿ ಮತ್ತು ಕೃಷಿಯೇತರ ಸಹಕಾರಿ ಬ್ಯಾಂಕುಗಳನ್ನು ಒಳಗೊಂಡಂತೆ ರಾಜ್ಯದಲ್ಲಿ ಸಹಕಾರಿ ಸಂಸ್ಥೆಗಳ ಸಂಖ್ಯೆ

ಉತ್ತಮವಾಗಿದೆ. ೮೩೧೯ ಕೃಷಿ ಸಾಲ ಸಂಸ್ಥೆಗಳು ೧೯೭೪ರ ಹೊತ್ತಿಗೆ ಶೇಕಡಾ ೫೩ರಷ್ಟು ಕೃಷಿ ಕುಟುಂಬಗಳನ್ನು ಒಳಗೊಂಡಿದ್ದವು. ಸಾಲ ನೀಡಿಕೆಯು ಸಹಾ ೧೯೫೬-೫೭ರಲ್ಲಿ ೬.೪೩ ಕೋಟಿ ಇದ್ದದ್ದು ೬ನೇ ಪಂಚವಾರ್ಷಿಕ ಯೋಜನೆಯ ಕೊನೆಗೆ ೭೦.೭೪ ಕೋಟಿಗೆ ಹೆಚ್ಚಿತು. ಠೇವಣಿ ಸಂಗ್ರಹ ಸಹಾ ೧೯೫೬-೫೭ರಲ್ಲಿ ೦.೭೨ ಇದ್ದದ್ದು ೧೯೭೩-೭೪ರ ಹೊತ್ತಿಗೆ ೪.೫೩ ಕೋಟಿಗೆ ಹೆಚ್ಚಿತು. ಆದರೆ ಈ ಸಹಕಾರಿ ಸಾಲ ಸಂಸ್ಥೆಗಳಿಂದ ಸಾಲದ ಪ್ರಯೋಜನ ಪಡೆದವರು ಯಾರು? ಸಾಲ ಸೌಲಭ್ಯದಿಂದ ಹೊರಗುಳಿದವರು ಯಾರು? ಸಾಲ ಸೌಲಭ್ಯ ಪಡೆದವರು ಸಾಲಗಳನ್ನು ಯಾವ ಉದ್ದೇಶಗಳಿಗೆ ಉಪಯೋಗಿಸಿಕೊಂಡಿದ್ದಾರೆ ಎಂಬ ವಿಶ್ಲೇಷಣೆ ಇಲ್ಲಿ ಕಂಡುಬಂದಿರುವುದಿಲ್ಲ.[೮೦]

ಕರ್ನಾಟಕದ ಅಭಿವೃದ್ಧಿ: ಒಂದು ಪ್ರಸ್ತಾವ ಈ ಶೀರ್ಷಿಕೆಯಡಿ ಇವರು ಕರ್ನಾಟಕ ಅಭಿವೃದ್ಧಿಯ ಚಟುವಟಿಕೆಗಳನ್ನು ವಿಶ್ಲೇಷಿಸಿದ್ದಾರೆ. ಕರ್ನಾಟಕ ಮುಖ್ಯ ಸಮಸ್ಯೆಗಳಂದರೆ ಬಡತನ ಮತ್ತು ನಿರುದ್ಯೋಗ. ಗ್ರಾಮೀಣ ಮತ್ತು ನಗರ ಪ್ರದೇಶಗಳ ಎರಡರಲ್ಲೂ ಬಡತನ ಪ್ರಮಾಣ ಹೆಚ್ಚಾಗಿದೆ. ಗ್ರಾಮೀಣ ಕರ್ನಾಟಕ ರಾಜ್ಯದಲ್ಲಿ ನೀರಾವರಿಗೆ ಆದ್ಯತೆ ನೀಡಲಾಗಿದೆ. ಹೀಗೆ ಪಂಚವಾರ್ಷಿಕ ಯೋಜನೆಗಳ ಅವಧಿಯಲ್ಲಿ ಕರ್ನಾಟಕದಲ್ಲಿ ಸಾಕಷ್ಟು ವೆಚ್ಚ ಮಾಡಿದರು ದಕ್ಷಿಣ ರಾಜ್ಯಗಳಿಗೆ ಹೋಲಿಸಿದರೆ ನೀರಾವರಿ ಪ್ರಮಾಣ ಕಡಿಮೆ ಇದು ಭಾರತದ ಮಟ್ಟದಲ್ಲೂ ಕಡಿಮೆ. ಪಂಚವಾರ್ಷಿಕ ಯೋಜನೆಗಳ ಅವಧಿಯಲ್ಲಿ ಕೈಗೊಂಡ ನೀರಾವರಿ ಯೋಜನೆಗಳು ನಿರ್ವಹಣೆ ಸಹ ದುರ್ಬಲವಾಗಿತ್ತು. ಪ್ರೊ. ತಿಮ್ಮಯ್ಯರವರು ವೃತ್ತಿ ಆಧಾರದ ಮೇಲೆ ನೆಡಿಸಿದ ವಿಶ್ಲೇಷಣೆ ಪ್ರಕಾರ ಕರ್ನಾಟಕದಲ್ಲಿ ಗ್ರಾಮೀಣ ಬಡತನ ಹೆಚ್ಚಾಗಿರುವುದು ಕೃಷಿ ಕಾರ್ಮಿಕರು, ಸಣ್ಣ ಮತ್ತು ಅತೀ ಸಣ್ಣ ರೈತರಲ್ಲಿ ಹಾಗೂ ನಗರಗಳಲ್ಲಿ ಬಡತನ ಪ್ರಮಾಣ ಹೆಚ್ಚಾಗಿರುವುದು ಅಸಂಘಟಿತ ವಲಯದಲ್ಲಿ.[೮೧]

ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಸ್ಥಿತಿ ಗತಿ ಎಂಬ ಪುಸ್ತಕದಲ್ಲಿ ಸಾಕ್ಷರತೆಯ ಮಹತ್ವವನ್ನು ಹೀಗೆ ಗುರುತಿಸಿದ್ದಾರೆ. ಇಲ್ಲಿ ಜೀನ್‌ಡ್ರೆಜ್ ಮತ್ತು ಅಮರ್ತ್ಯಸೇನ್ ೨೦೦೨ರ ಉಲ್ಲೇಖವನ್ನು ನೀಡಿರುತ್ತಾರೆ. ಅದರಂತೆ ಸಾಮಾಜಿಕ ಸಂಪರ್ಕ ಮತ್ತು ಸಂಬಂಧಗಳು ಲಿಖಿತ ಮಾಧ್ಯಮಕ್ಕೆ ಸಂಬಂಧಿಸುವುದರಿಂದ ಸಮಾಜದಲ್ಲಿ ಸಾಕ್ಷರತೆಯು ಆತ್ಮರಕ್ಷಣೆಯ ಸಾಧನವೆನ್ನುತ್ತಾರೆ. ಅಕ್ಷರ ಜ್ಞಾನವಿಲ್ಲದವರು ತಮ್ಮನ್ನು ತಾವು ನ್ಯಾಯಾಲಯದ ಕಟಕಟೆಯಲ್ಲಿ ರಕ್ಷಿಸಿಕೊಳ್ಳಲಾರರು. ಬ್ಯಾಂಕಿನಿಂದ ಸಾಲ ಎತ್ತಲಾರರು. ತಮ್ಮ ವಾರಸುಗಾರಿಕೆ ಹಕ್ಕನ್ನು ಚಲಾಯಿಸಲಾರರು. ಆಧುನಿಕ ತಂತ್ರಜ್ಞಾನದ ಲಾಭ ಪಡೆದುಕೊಳ್ಳಲಾರರು. ಉದ್ಯೋಗ ಮಾರುಕಟ್ಟೆಯಲ್ಲಿ ಪೈಪೋಟಿ ಮಾಡಲಾರರು, ಸರಿಯಾದ ಬಸ್ಸು ಏರಲಾರರು. ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಲಾರರು, ಒಟ್ಟಾರೆ ಆಧುನಿಕ ಸಮಾಜದ ಯಶಸ್ವಿ ಪಾಲುದಾರರಾಗಲಾರರು. ಕರ್ನಾಟಕದ ವಿಶೇಷವಾಗಿ ಉತ್ತರ ಕರ್ನಾಟಕದ ಜಿಲ್ಲೆಗಳ ಸಾಕ್ಷರತೆಯ ಸ್ಥಿತಿಗತಿಗಳನ್ನು ವಿವರಿಸುತ್ತಾ ರಾಯಚೂರು, ಗುಲ್ಬರ್ಗಾ, ಬಳ್ಳಾರಿ, ಯಾದಗಿರಿ ಭಾಗಗಳ ಶೈಕ್ಷಣಿಕ ದುಸ್ಥಿತಿಯನ್ನು ತಿಳಿಸುತ್ತಾರೆ. ಹಾಗೆ ಅಭಿವೃದ್ಧಿಗೆ ಸಂಬಂಧಿಸಿದ

ನಂಜುಂಡಪ್ಪನವರ ಪ್ರಾದೇಶಿಕ ಅಸಮಾನತೆ ಕುರಿತ ವರದಿಯ ಉಲ್ಲೇಖವನ್ನು ಮಾಡಿರುತ್ತಾರೆ. ಈ ವರಧಿಯಲ್ಲಿ ೩೫ ಸೂಚಿಗಳಿಂದ ಕೂಡಿದ ಸಮಗ್ರ ಸಂಯುಕ್ತ ಅಭಿವೃದ್ಧಿ ಸೂಚ್ಯಾಂಕ ಈ ಸೂಚಿ ಆಧಾರದ ಮೇಲೆ ರಾಜ್ಯದ ೧೭೫ ತಾಲ್ಲೂಕುಗಳನ್ನು ಶ್ರೇಣೀಕರಿಸಲಾಗಿದ್ದು, ಈ ಸೂಚ್ಯಾಂಕದಲ್ಲಿ ರಾಯಚೂರಿನ ದೇವದುರ್ಗ ತಾಲ್ಲೂಕು ಕನಿಷ್ಠ ಸ್ಥಾನದಲ್ಲಿದ್ದು, ಮಡಕೇರಿ ಗರಿಷ್ಠ ಸ್ಥಾನದಲ್ಲಿರುತ್ತದೆ. ಅಂದರೆ ದೇವದುರ್ಗ ಸಮಗ್ರ ಅಭಿವೃದ್ಧಿ ಮಟ್ಟದಲ್ಲಿ ೧೪ನೇ ಸ್ಥಾನವನ್ನು ಹೊಂದಿದೆ. ಉತ್ತರ ಕರ್ನಾಟಕದ ಜಿಲ್ಲೆಗಳ ಹಿಂದುಳಿದ ೧೬ ತಾಲ್ಲೂಕುಗಳಿಗೆ ಹೋಲಿಸಿದರೆ ರಾಯಚೂರಿನ ಅಭಿವೃದ್ಧಿ ಮಟ್ಟ ಅತ್ಯಂತ ಕಡಿಮೆ. ಅದೇ ರೀತಿ ದೇವದುರ್ಗ ತಾಲ್ಲೂಕು ಸಾಕ್ಷರತೆಯ ದುಸ್ಥಿತಿ ಮಟ್ಟದಲ್ಲೂ ೧೨ನೇ ಸ್ಥಾನದಲ್ಲಿದೆ.೨

ಸಾಲ ಸೌಲಭ್ಯಗಳು ವಿಸ್ತರಣೆಯಾದರು ಸಾಂಸ್ಥಿಕ ಸಾಲ ವ್ಯವಸ್ಥೆ ಅನೇಕ ಕೊರತೆಗಳನ್ನು ಒಳಗೊಂಡಿದೆ. ಈ ನಿಟ್ಟಿನಲ್ಲಿ ಗ್ರಾಮೀಣ ಸಾಲ ನೀತಿಗಳು ಮತ್ತು ಕಾರ್ಯಕ್ರಮಗಳಲ್ಲಿನ ಬದಲಾವಣೆಗಳನ್ನು ವಿಶ್ಲೇಷಿಸಬೇಕಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಸಾಲ ಸಂಸ್ಥೆಗಳು ಸರಿಯಾಗಿ ಸ್ಥಾಪನೆಯಾಗಿರಲಿಲ್ಲ. ಸಾಲ ಪಡೆಯುವವರು ಸಾಂಸ್ಥಿಕೇತರ ಮೂಲಗಳ ಮೇಲೆ ಅವಲಂಬಿತ ರಾಗಿದ್ದರು. ಈ ಮೂಲವು ಗ್ರಾಮೀಣ ಸಮುದಾಯವನ್ನು ಶೋಷಣೆ ಮಾಡುತ್ತಿತ್ತು. ಸರ್ಕಾರ ರೈತರನ್ನು ಸ್ಥಳೀಯ ಬ್ಯಾಂಕರ್‌ಗಳಿಂದ ರಕ್ಷಿಸಲು ಅನೇಕ ಕಾನೂನುಗಳನ್ನು ಜಾರಿಗೆ ತಂದಿತು.

೧೯೭೧-೮೧ರ ಅಖಿಲ ಭಾರತ ಗ್ರಾಮೀಣ ಸಾಲ ಮತ್ತು ಹೂಡಿಕೆ ಸಮೀಕ್ಷೆ (ಎಐಡಿಐಎಸ್) ಪ್ರಕಾರ ಸಾಂಸ್ಥಿಕ ಹಣಕಾಸು ವ್ಯವಸ್ಥೆ ಬೆಳವಣಿಗೆಯಿಂದ ಸಾಗುವಳಿ ಕುಟುಂಬಗಳ ಸಾಲ ಋಣಭಾರದ ಪ್ರಮಾಣವು ಕಡಿಮೆಯಾಯಿತು. ಅದೇ ರೀತಿ ಕರ್ನಾಟಕದಲ್ಲೂ ಸಾಂಸ್ಥಿಕ ಸಾಲ ಸಂಸ್ಥೆಗಳು ಬೆಳವಣಿಗೆ ಹೊಂದಿದವು. ಇವುಗಳ ಪಾಲೂ ಸಹ ಹೆಚ್ಚಾಯಿತು. ೧೯೭೧ರಲ್ಲಿ ಸಾಂಸ್ಥಿಕ ಸಾಲ ಮೂಲದ ಪಾಲು ಶೇಕಡಾ ೩೦.೯ರಷ್ಟಿದ್ದದ್ದು ೧೯೮೧ರ ಹೊತ್ತಿಗೆ ಶೇಕಡಾ ೭೮.೬ಕ್ಕೆ ಹೆಚ್ಚಾಯಿತು. ಈ ಪಾಲು ರಾಷ್ಟ್ರದ ಸರಾಸರಿ ಪಾಲು ಶೇಕಡಾ ೬೩.೨ಕ್ಕಿಂತ ಹೆಚ್ಚಿನದು. ಸಾಂಸ್ಥಿಕ ವ್ಯವಸ್ಥೆ ಇಷ್ಟೆಲ್ಲಾ ಬೆಳವಣಿಗೆಯಾದರೂ ಕರ್ನಾಟಕದ ಹಾಸನ ಜಿಲ್ಲೆಯಲ್ಲಿ ನಡೆಸಿದ ಕ್ಷೇತ್ರ/ಪ್ರಾಯೋಗಿಕ ಸಮೀಕ್ಷೆ ಪ್ರಕಾರ ಸಹಕಾರಿ ಸಂಸ್ಥೆಗಳಿಂದ ಸಾಲ ಪಡೆದ ೧೮ ಜನ ರೈತರೊಂದಿಗೆ ನಡೆಸಿದ ಸಂದರ್ಶನದಲ್ಲಿ ೧೪ ಜನ ರೈತರು ವಾಣಿಜ್ಯ ಬ್ಯಾಂಕುಗಳನ್ನು ಎಂದಿಗೂ ಸಂಪರ್ಕಿಸಿಲ್ಲ. ಕಾರಣ ವಾಣಿಜ್ಯ ಬ್ಯಾಂಕುಗಳ ನಿಯಮಗಳು ಸಂಕೀರ್ಣವಾಗಿವೆ ಹಾಗೂ ವಾಣಿಜ್ಯ ಬ್ಯಾಂಕುಗಳು ಅಧಿಕಾರಿ ವರ್ಗದ ವರ್ತನೆ ಭಿನ್ನವಾದುದು ಎನ್ನಲಾಗಿದೆ. ಹಾಗೆಯೇ ಸಣ್ಣ ಅತೀ ಸಣ್ಣ, ಮಧ್ಯಮ ಮತ್ತು ದೊಡ್ಡ ರೈತರು ಅಗತ್ಯವಿರುವ ಪ್ರಮಾಣದಲ್ಲಿ ಸಾಲ ಪಡೆಯಲು ಸಾಧ್ಯವಾಗದಿರುವುದನ್ನು ವಿಶ್ಲೇಷಿಸಲಾಗಿದೆ. ಸಾಂಸ್ಥಿಕ ಹಣಕಾಸು ನೀತಿ ಮತ್ತು ಕಾರ್ಯಕ್ರಮಗಳ ಈ ವಿಶ್ಲೇಷಣೆಯಲ್ಲಿ ಗ್ರಾಮೀಣ ರೈತರ ಹಣಕಾಸು ಬೇಡಿಕೆ ಪೂರೈಕೆಗಳಿಗೆ ಸಂಬಂಧಿಸಿದಂತೆ ನೀತಿಗಳ (ಪಾಲಿಸಿ) ಮಟ್ಟದಲ್ಲಿ ಆದ ಬದಲಾವಣೆಗಳನ್ನು ವಿಶ್ಲೇಷಿಸಲಾಗಿದೆ. ಗ್ರಾಮೀಣ ಅಭಿವೃದ್ಧಿ ಎಂದರೆ ಕೃಷಿ ಕ್ಷೇತ್ರ

ಅಭಿವೃದ್ಧಿ ಎಂದು ಪರಿಭಾವಿಸಿಕೊಂಡಂತಿದೆ. ಕೃಷಿಕರು ಅಂದರೆ ಭೂಮಿಯಂತ ಸ್ಥಿರಾಸ್ಥಿ ಉಳ್ಳವರ ಹಣಕಾಸು ಅಗತ್ಯಗಳ ಪೂರೈಕೆಗೆ ನೀತಿಗಳ ಮಟ್ಟದಲ್ಲಿ ಮಹತ್ವ ನೀಡಿರುವುದು ಕಂಡುಬರುತ್ತದೆ. ಅದೇ ರೀತಿ ಸಣ್ಣ ಮತ್ತು ಅತೀಸಣ್ಣ ಮದ್ಯಮ ಹಿಡುವಳಿಗಾರರ ಹಣಕಾಸು ಅಗತ್ಯಗಳ ಪೂರೈಕೆಗೂ ಪ್ರಯತ್ನಗಳು ಕಂಡು ಬಂದಿವೆ ಆದರೆ ಭೂಮಿಯಂತ ಆಸ್ತಿ/ಬಂಡವಾಳ ಇಲ್ಲದೇ ಇರುವ ಭೂರಹಿತ ಕೃಷಿ ಕಾರ್ಮಿಕ ಕುಟುಂಬಗಳ ಅಗತ್ಯಗಳೇನು? ಇವರು ಯಾವ ಮೂಲದಿಂದ ತಮ್ಮ ಹಣಕಾಸಿನ ಅಗತ್ಯಗಳನ್ನು ಪೂರೈಸಿಕೊಳ್ಳುತ್ತಾರೆ? ಈ ಕಾರ್ಮಿಕರು ಸಾಂಸ್ಥಿಕ ಹಣಕಾಸು ಸೌಲಭ್ಯಗಳಿಂದ ವಂಚಿತರಾಗಲು ಕಾರಣವಾದ ಅಂಶಗಳು ಮತ್ತು ನೀತಿ ಮಟ್ಟದ ನಿರ್ಲಕ್ಷದಿಂದ ಆಗುವ ಪರಿಣಾಮಗಳೇನು? ಎಂಬ ಅಂಶಗಳು ಈ ಅಧ್ಯಯನದಲ್ಲಿ ಕಂಡು ಬಂದಿರುವುದಿಲ್ಲ.[೬]

ರೈತರ ಆತ್ಮಹತ್ಯೆ ಕೃಷಿ ಕ್ಷೇತ್ರದಲ್ಲಿ ನಿರತರಾಗಿರುವ ಜನರ ದುಸ್ಥಿತಿಯನ್ನು ತೋರಿಸುತ್ತದೆ. ಆತ್ಮಹತ್ಯೆ ನಡೆದ ಕುಟುಂಬಗಳು ಮತ್ತು ಈ ಕುಟುಂಬಗಳ ಮಹಿಳೆಯರ ಪರಿಸ್ಥಿತಿ ಶೋಚನೀಯ ವಾಗಿದೆ. ಆತ್ಮಹತ್ಯೆಯು ಆ ಕುಟುಂಬಗಳ ಮಹಿಳೆ ಮತ್ತು ಮಕ್ಕಳ ಭವಿಷ್ಯದ ಮೇಲೆ ಗಂಬೀರ ಪರಿಣಾಮ ಬೀರಿದೆ. ಪಂಜಾಬಿನ ವಿವಿಧ ಜಿಲ್ಲೆಗಳಲ್ಲಿ ಆತ್ಮಹತ್ಯೆ ನಡೆದ ಕುಟುಂಬಗಳ ೩೨ ಮಹಿಳಾ ಸದಸ್ಯರೊಂದಿಗೆ ನಡೆಸಿದ ಸಂದರ್ಶನದ ಪ್ರಕಾರ ಆತ್ಮಹತ್ಯೆಗೆ ಮುಖ್ಯ ಕಾರಣಗಳು, ಸಾಲ ಋಣಬಾರದ ಹೆಚ್ಚಳ ಕೌಟುಂಬಿಕ ಸಂಘರ್ಷ, ಕೃಷಿ ಭೂಮಿ ಮಾರಾಟ, ವಿವಾಹಗಳ ಖರ್ಚು, ಖಾಸಗಿ ಲೇವಾದೇವಿಗಾರರ (ಅರ್ತಿಯಾ) ಹಿಂಸೆ ಮತ್ತು ಶೋಷಣೆ ಪ್ರಮುಖವಾದವುಗಳು. ಮಿತುಸಿಂಗ್ ಜನವರಿ ೨ ೨೦೦೪ರಂದು ಅರ್ತಿಯಾನ್‌ನೊಂದಿಗೆ ಚರ್ಚೆ ಮಾಡಿಕೊಂಡು ಬಂದು ಆತ್ಮಹತ್ಯೆಗೆ ಶರಣಾದ. ಬಡತನ ಮತ್ತು ಮಾನಸಿಕ ಯಾತನೆ ಸಹಿಸಲಾಗದೇ ಸಾವಿಗೆ ಶರಣಾದ. ಮಿತುಸಿಂಗ್ ಲೇವಾದೇವಿಗಾರನಿಗೆ ತನ್ನ ಸಾಲದ ಮರುಪಾವತಿ ಯಾಗಿ ಜಮೀನನ್ನು ಮಾರಿದ್ದು ಮುಖ್ಯ ಕಾರಣವಾಗಿತ್ತು. ೧೯೯೩-೨೦೦೬ ಅವಧಿಯಲ್ಲಿ ಮಹಾರಾಷ್ಟ್ರದಲ್ಲಿ ನಡೆದ ಆತ್ಮಹತ್ಯೆಗಳ ಸಂಖ್ಯೆ ೧೩೧೦೪೦. ಇತರೆ ರಾಜ್ಯಗಳಾದ ಕೇರಳ, ಪಂಜಾಬ್, ತಮಿಳುನಾಡು, ಕರ್ನಾಟಕ, ಆಂದ್ರ ಪ್ರದೇಶ ಮತ್ತು ಚತ್ತೀಸ್‌ಘರ್ ರಾಜ್ಯಗಳಲ್ಲಿ ಆತ್ಮಹತ್ಯೆ ಪ್ರಮಾಣ ಹೆಚ್ಚಾಗಿಯೇ ಇತ್ತು. ಪಂಜಾಬಿನಲ್ಲಿ ಕೃಷಿ ದುಸ್ಥಿತಿಯನ್ನು ತಲುಪಿದೆ. ಇಲ್ಲಿ ಹಸಿರು ಕ್ರಾಂತಿಯಿಂದ ಕೃಷಿ ಮಣ್ಣಿನ ಪರಿಸ್ಥಿತಿ ಹದಗೆಟ್ಟಿದೆ. ದುಬಾರಿ ಬೆಲೆಯ ಕೀಟನಾಶಕಗಳು ಮತ್ತು ರಾಸಾಯನಿಕ ಗೊಬ್ಬರಗಳ ಬೇಡಿಕೆ ಹೆಚ್ಚಾಗಿದೆ. ಪಂಜಾಬ್‌ನ ರಾಜ್ಯ ರೈತ ಆಯೋಗದ ಪ್ರಕಾರ ೧೯೯೦ ರಿಂದ ಕೃಷಿ ಉತ್ಪಾದನೆ ಕುಸಿದಿದೆ. ಉತ್ಪಾದನಾ ವೆಚ್ಚ ಹೆಚ್ಚಿ ಲಾಭ ಕಡಿಮೆಯಾಗಿದೆ. ಕೃಷಿಯ ಈ ದುಸ್ಥಿತಿಯಿಂದ ೧೯೯೧ರ ಅವಧಿಯಲ್ಲಿ ೫ ಲಕ್ಷದಷ್ಟಿದ್ದ ಸೀಮಾಂತ ಮತ್ತು ಸಣ್ಣ ರೈತರ ಸಂಖ್ಯೆ ೨೦೦೧ದಕ್ಕೆ ೩ ಲಕ್ಷದಷ್ಟಾಗಿತ್ತು. ಈ ರೈತರು ತಮ್ಮ ಅತಿ ಸಣ್ಣ ಸಾಗುವಳಿ ಭೂಮಿಯನ್ನು (ಟಿನಿ ಲ್ಯಾಂಡ್ ಹೋಲ್ಡಿಂಗ್) ದೊಡ್ಡ ರೈತರಿಗೆ ಗೇಣಿಗೆ ಕೊಟ್ಟು ತಾವು ಕೃಷಿಯೇತರ ವಲಯದ ಕಡೆಗೆ ಹೋದರು. ಗ್ರಾಮೀಣ ಆರ್ಥಿಕತೆಯಲ್ಲಿ ನಿರುದ್ಯೋಗಗಳು ಹೆಚ್ಚಾಗಿವೆ. ಭೂರಹಿತ ಕೃಷಿ ಕಾರ್ಮಿಕರು

ಕೃಷಿ ಕೆಲಸವನ್ನು ಅವಲಂಭಿಸಿದ್ದರು. ಕೃಷಿ ಕ್ಷೇತ್ರದ ದುಸ್ಥಿತಿಯಿಂದ ಇವರ ಆದಾಯ ಕಡಿಮೆಯಾಗಿ ಬದುಕು ನಡೆಸುವುದು ಕಷ್ಟವಾಗಿದೆ ಆದರೆ ಭೂರಹಿತ ಕೃಷಿ ಕಾರ್ಮಿಕ ಕುಟುಂಬಗಳ ಆತ್ಮಹತ್ಯೆಯ ಸಂಖ್ಯೆ ಅತಿಸಣ್ಣ ರೈತರ ಕುಟುಂಬಗಳ ಆತ್ಮಹತ್ಯೆ ಸಂಖ್ಯೆಗಿಂತ ಕಡಿಮೆ ಎಂದು ಸಂಶೋಧನೆಯಿಂದ ತಿಳಿದು ಬಂದಿದೆ.[೪೪]

ಇಂಪ್ಯಾಕ್ಟ್ ಆಫ್ ಇನ್ಸ್‌ಟೂಷನಲ್ ಕ್ರಡಿಟ್ ಆನ್ ರೂರಲ್ ಪೂರ್ ವಿತ್ ಸ್ಪೆಷಲ್ ರೆಫ್‌ರೆನ್ಸ್ ಟೂ ದಿ ಫರ್‌ಪಾರ್‌ಮೆನ್ಸ್ ಆಫ್ ಎ ರೀಜಿನಲ್ ರೂರಲ್ ಬ್ಯಾಂಕ್ ಇನ್ ಕರ್ನಾಟಕ: ತುಂಗಭದ್ರ ಗ್ರಾಮೀಣ ಬ್ಯಾಂಕನ್ನು ಅಧ್ಯಯನವಾಗಿಟ್ಟುಕೊಂಡು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಉದ್ದೇಶ ಸ್ಥಾಪನೆಯಾದ ಹಿನ್ನೆಲೆ ಮತ್ತು ಸಾಧನೆಯನ್ನು ವಿವರಿಸುವಾಗ ಪರಿಮಾಣಾತ್ಮಕ ವಿಚಾರಗಳಿಗೆ ಅಂದರೆ ವಿತರಿಸಿದ ಸಾಲದ ಪ್ರಮಾಣವೆಷ್ಟು? ಹಾಗೂ ಗ್ರಾಮೀಣಾಭಿವೃದ್ಧಿಯಲ್ಲಿ ಈ ಬ್ಯಾಂಕುಗಳ ಪಾತ್ರವೇನು? ಎಂದು ವಿವರಿಸುತ್ತಾ ೧೯೭೫ ಅಕ್ಟೋಬರ್‌ನಲ್ಲಿ ೫ ಬ್ಯಾಂಕುಗಳೊಂದಿಗೆ ಸ್ಥಾಪನೆಯಾದ ಗ್ರಾಮೀಣ ಬ್ಯಾಂಕುಗಳು ಇಂದು ೧೯೬ರಕ್ಕೆ ಹೆಚ್ಚಿದೆ ಎಂದು ವಿವರಿಸಲಾಗಿದೆ. ಆದರೆ ಗ್ರಾಮೀಣ ಬ್ಯಾಂಕುಗಳ ಸ್ಥಾಪನೆ ಹಾಗೂ ವಿತರಿಸಿದ ಸಾಲಗಳು ಗ್ರಾಮೀಣ ಪ್ರದೇಶದಲ್ಲಿ ಸಾಮಾಜಿಕ ಆರ್ಥಿಕ ಪರಿಸ್ಥಿತಿಯ ಮೇಲೆ ಯಾವ ರೀತಿಯ ಪರಿಣಾಮವನ್ನು ಬೀರಿದೆ. ಪ್ರಾದೇಶಿಕ ಅಸಮಾನತೆಯಲ್ಲಿ ಅಂದರೆ ಬಡತನ ಮತ್ತು ಆದಾಯ ಅಸಮಾನತೆ ನಿವಾರಣೆಯ ದೃಷ್ಟಿಯಿಂದ ಈ ಬ್ಯಾಂಕುಗಳ ಮಹತ್ವವೇನು? ಎಂಬ ವಿಶ್ಲೇಷಣಾತ್ಮಕ ಅಂಶಗಳು ಕಂಡು ಬಂದಿರುವುದಿಲ್ಲ.[೪೫]

ವಾಣಿಜ್ಯ ಬ್ಯಾಂಕುಗಳು, ಸಹಕಾರಿ ಸಂಘಗಳು, ಗ್ರಾಮೀಣ ಬ್ಯಾಂಕುಗಳು ಸಾಲ ಸೌಲಭ್ಯವನ್ನು ವಿತರಿಸುವಲ್ಲಿ ವಿಫಲವಾಗಿವೆ. ಗ್ರಾಮೀಣ ಪ್ರದೇಶದ ಬಡ ಮಹಿಳೆಯರ ಸಾಲ ಸೌಲಭ್ಯದ ಅಗತ್ಯಗಳನ್ನು ಪೂರೈಸಲು ೧೯೯೨ರಲ್ಲಿ ನಬಾರ್ಡ್ ಹಣಕಾಸು ಸಂಸ್ಥೆಯು ಪ್ರಾಯೋಗಿಕವಾದ ಮಹಿಳಾ ಸ್ವಸಹಾಯ ಸಂಘ ಮತ್ತು ಬ್ಯಾಂಕ್ ಜೋಡಣೆ ಕಾರ್ಯಕ್ರಮವನ್ನು ಜಾರಿಗೆ ತಂದಿತು. ಈ ಯೋಜನೆಯ ಉದ್ದೇಶ ಗ್ರಾಮೀಣ ಪ್ರದೇಶದಲ್ಲಿ ಉಳಿತಾಯ ಸಂಗ್ರಹ ಮತ್ತು ಆಂತರಿಕ ಸಾಲ ನೀಡಿಕೆ ಚಟುವಟಿಕೆಯಲ್ಲಿ ತೊಡಗಿರುವ ಪ್ರಬುದ್ಧ ಮಹಿಳಾ ಸ್ವಸಹಾಯ ಗುಂಪುಗಳನ್ನು ಬ್ಯಾಂಕಿಂಗ್ ವ್ಯವಸ್ಥೆಯೊಂದಿಗೆ ಸಂಪರ್ಕ ಕಲ್ಪಿಸಿ, ಸಾಲ ಸೌಲಭ್ಯ ಪ್ರಮಾಣವನ್ನು ಹೆಚ್ಚಿಸುವುದು. ೨೦೦೬–೦೭ರ ವರೆವಿಗೂ ಸುಮಾರು ૩ ದಶಲಕ್ಷ ಮಹಿಳಾ ಸ್ವಸಹಾಯ ಸಂಘಗಳಿಗೆ ದೇಶದಾದ್ಯಂತ ಈ ಯೋಜನೆಯಡಿ ೧.೮೦,೪೦೭ ದಶಲಕ್ಷ ಸಾಲ ಸೌಲಭ್ಯ ಒದಗಿಸಲಾಗಿದೆ. ಕರ್ನಾಟಕದಲ್ಲಿ ೨೦೦೫–೦೬ರಕ್ಕೆ ೧೬೩೯೮ ಗುಂಪುಗಳಿಗೆ ೫೫೧.೧೪ ಕೋಟಿ ಸಾಲ ಸೌಲಭ್ಯವನ್ನು ಕಲ್ಪಿಸಲಾಗಿದೆ. ಈ ಮಹಿಳಾ ಗುಂಪುಗಳನ್ನು ಸ್ವಯಂಸೇವಾ ಸಂಸ್ಥೆಗಳು ಮತ್ತು ಸಾರ್ವಜನಿಕ ಬ್ಯಾಂಕುಗಳು ರಚಿಸಿರುತ್ತವೆ. ಇದು ಒಂದು ಆಶಾದಾಯಕ ಬರವಸೆಯ ಪ್ರಯತ್ನವಾದರೂ ಪ್ರಾದೇಶಿಕ ಅಸಮತೋಲನ ಸೃಷ್ಟಿಸುವ ಸಾಧ್ಯತೆಗಳಿವೆ. ಉದಾ: ಕರ್ನಾಟಕ ರಾಜ್ಯದಲ್ಲಿ ದಕ್ಷಿಣ ಕರ್ನಾಟಕದ ಮೈಸೂರು, ತುಮಕೂರು, ಬೆಂಗಳೂರು, ಕೋಲಾರ ಜಿಲ್ಲೆಗಳಲ್ಲಿ ಎಸ್‌ಹೆಚ್‌ಜಿ ಮತ್ತು ಬ್ಯಾಂಕ್

ಜೋಡಣೆ ಕಾರ್ಯಕ್ರಮ ಚಟುವಟಿಕೆ ಶೇಕಡಾ ೫೮ರಷ್ಟಿದ್ದರೆ ಕೊಪ್ಪಳ, ರಾಯಚೂರು, ಬಳ್ಳಾರಿ, ಬಿಜಾಪುರ ಜಿಲ್ಲೆಗಳಲ್ಲಿ ಈ ಪ್ರಮಾಣ ಶೇಕಡಾ ೪೬ಕ್ಕಿಂತಲೂ ಕಡಿಮೆ ಇದೆ. ಇದಕ್ಕೆ ಕಾರಣ ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ಮಹಿಳಾ ಸ್ವಸಹಾಯ ಸಂಘಗಳನ್ನು ಸಂಘಟಿಸುವ ಸ್ವಯಂ ಸೇವಾ ಸಂಸ್ಥೆಗಳು ಮತ್ತು ಬ್ಯಾಂಕುಗಳ ಶಾಖೆಗಳು ಇಲ್ಲದಿರುವುದು ಎನ್ನಲಾಗಿದೆ.[೬]

ಇಲ್ಲಿ ಹೈದರಾಬಾದ್ ಕರ್ನಾಟಕದ ಕೃಷಿ ಕಾರ್ಮಿಕರ ಆರ್ಥಿಕ ಪರಿಸ್ಥಿತಿಯನ್ನು ವಿಶ್ಲೇಷಿಸಲಾಗಿದೆ. ಪ್ರಾಥಮಿಕ ಮತ್ತು ಅನುಷಂಗಿಕ ಮೂಲಗಳನ್ನು ಆಧರಿಸಿದೆ. ಪ್ರಾಥಮಿಕ ಮಾಹಿತಿಯ ಸಂಗ್ರಹಕ್ಕೆ ಸಂದರ್ಶನ ಷೆಡ್ಯೂಲ್‌ಗಳನ್ನು ಬಳಸಲಾಗಿದೆ. ಅಧ್ಯಯನಕ್ಕೆ ಬಹು ಹಂತದ ವೈದಾನಿಕತೆಯನ್ನು ಬಳಸಿಕೊಳ್ಳಲಾಗಿದೆ. ಸ್ಟ್ರಾಟಿಫೈಡ್, ಸಿಂಪಲ್ ಸ್ಯಾಪ್ಲಿಂಗ್ ಮತ್ತು ರ್‍ಯಾಂಡಮ್ ಸ್ಯಾಂಪ್ಲಿಂಗ್ ವಿಧಾನಗಳನ್ನು ಬಳಸಲಾಗಿದೆ. ೫ ಗ್ರಾಮಗಳಲ್ಲಿ ೫೦ ರೆಸ್ಪಾಂಡೆಂಟ್ಸ್‌ಗಳನ್ನು ಸಂದರ್ಶಿಸಲಾಗಿದೆ. ಆದಾಯ, ವಸತಿ, ಕೂಲಿ, ಉದ್ಯೋಗ, ಉದ್ಯೋಗಿ ಮತ್ತು ಉದ್ಯೋಗ ನೀಡುವವರ ಸಂಬಂಧ, ಖರ್ಚಿನ ವಿಧಾನ, ಉಳಿತಾಯ ಮತ್ತು ಋಣಭಾರ ಇತ್ಯಾದಿ ಅಂಶಗಳನ್ನು ಪರಿಗಣಿಸಿ, ಹೈದರಾಬಾದ್ ಕರ್ನಾಟಕದ ಕೃಷಿ ಕಾರ್ಮಿಕರ ಆರ್ಥಿಕ ಸ್ಥಿತಿಯನ್ನು ವಿಶ್ಲೇಷಿಸಲಾಗಿದೆ. ದೇಶದ ಒಟ್ಟು ಕಾರ್ಮಿಕ ಶಕ್ತಿಯಲ್ಲಿ ೨/೩ ನಷ್ಟು ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ. ಆರ್ಥಿಕತೆಯಲ್ಲಿ ಕೈಗಾರಿಕಾ ಕಾರ್ಮಿಕರಿಗೆ ಕೃಷಿ ಕಾರ್ಮಿಕರನ್ನು ಹೋಲಿಸಿದಾಗ ಇವರು ಯಾವುದೇ ಹಕ್ಕು ಮತ್ತು ಅವಕಾಶಗಳನ್ನು ಹೊಂದಿಲ್ಲ. ಕನಿಷ್ಠ ಕೂಲಿಗಳಲ್ಲಿ. ಉದ್ಯೋಗ ಭದ್ರತೆ ಇಲ್ಲ. ಕೆಲಸದ ಅವಧಿಗೆ ನಿಯಮಗಳಿಲ್ಲ. ಹೆಚ್ಚು ಹೊತ್ತು ದುಡಿಯಲಾಗುತ್ತದೆ. ಆದರೆ ಕಡಿಮೆ ಕೂಲಿ ಪಡೆಯಲಾಗುತ್ತಿದೆ. ಭಾರತದ ಆರ್ಥಿಕತೆಯಲ್ಲಿ ಕೃಷಿ ಕಾರ್ಮಿಕ ಶಕ್ತಿ ಹೆಚ್ಚಾಗಿರುವುದನ್ನು ಇಲ್ಲಿ ಉಲ್ಲೇಖಿಸಲಾಗಿದೆ. ೧೯೫೧ರಲ್ಲಿ ಒಟ್ಟು ಶ್ರಮ ಶಕ್ತಿಯಲ್ಲಿ ಶೇಕಡಾ ೧೯.೭ರಷ್ಟು ಕೃಷಿ ಕಾರ್ಮಿಕರಿದ್ದರು. ಇದು ೨೦೦೧ಕ್ಕೆ ಶೇಕಡಾ ೨೬.೬ಕ್ಕೆ ಹೆಚ್ಚಾಯಿತು. ಕರ್ನಾಟಕದಲ್ಲಿ ಶೇಕಡಾ ೭೧ರಷ್ಟು ಗ್ರಾಮೀಣ ಜನಸಂಖ್ಯೆ ಕೃಷಿಯನ್ನು ಅವಲಂಭಿಸಿದೆ. ಒಟ್ಟು ಮುಖ್ಯ ಕೆಲಸಗಾರರಲ್ಲಿ ಕೃಷಿ ಕಾರ್ಮಿಕರು ೧೯೬೧ರಲ್ಲಿ ಶೇಕಡಾ ೧೨.೬ರಷ್ಟಿದ್ದರು. ೧೯೭೧ರಲ್ಲಿ ೨೬.೭ಕ್ಕೆ ಹೆಚ್ಚಾಯಿತು. ಇದು ೧೯೯೧ಕ್ಕೆ ೨೮.೭೧ಕ್ಕೆ ಹೆಚ್ಚಿತು. ಇದರಲ್ಲಿ ಬೆಂಗಳೂರು ನಗರ, ಗ್ರಾಮಾಂತರ, ದಕ್ಷಿಣ ಕನ್ನಡ, ಕೊಡಗು ಜಿಲ್ಲೆಗಳಲ್ಲಿ ಇವರ ಪ್ರಮಾಣ ಕಡಿಮೆ ಇದೆ. ಬೀದರ್ ಜಿಲ್ಲೆಯಲ್ಲಿ ಅಧಿಕ ಅಂದರೆ ಶೇಕಡಾ ೪೫.೪೩ರಷ್ಟು ಇದೆ. ಗುಲ್ಬರ್ಗಾದಲ್ಲಿ ೪೪.೦೧ರಷ್ಟಿದೆ. ರಾಯಚೂರಿನಲ್ಲಿ ೪೩.೧೩ರಷ್ಟಿದೆ. ಶೇಕಡಾ ೭೨ರಷ್ಟು ಕುಟುಂಬಗಳ ಆದಾಯರೂ. ೨೦೦೦ ಕ್ಕಿಂತ ಕಡಿಮೆ ಇದೆ. ಇದು ಮಾಸಿಕ ಅಥವಾ ವಾರ್ಷಿಕವಾಗಿ ಎಂಬ ವಿವರಣೆ ಕಂಡು ಬಂದಿಲ್ಲ. ಶೇಕಡಾ ೫.೩೬ರಷ್ಟು ಕೃಷಿ ಕಾರ್ಮಿಕ ಕುಟುಂಬಗಳಿಗೆ ವಸತಿ ಇಲ್ಲ. ಶೇಕಡಾ ೩೬ರಷ್ಟು ಕುಟುಂಗಳ ವಸತಿ ಕೇವಲ ಕಚ್ಚಾ ಮನೆ. ಪುರಷರಲ್ಲಿ ಶೇಕಡಾ ೫೮ರಷ್ಟು ಜನರ ಕೂಲಿರೂ. ೩೦-೪೦ರಷ್ಟು ಇದ್ದರೆ, ಶೇಕಡಾ ೫೪ರಷ್ಟು ಮಹಿಳೆಯರ ಕೂಲಿರೂ. ೨೦-೩೦ರಷ್ಟು, ಶೇಕಡಾ ೫೮ರಷ್ಟು ಜನ ಉದ್ಯೋಗಿ ಮತ್ತು ಉದ್ಯೋಗ ನೀಡುವವರ ಸಂಬಂಧ

ಉತ್ತಮವಾಗಿಲ್ಲ ಎಂದಿದ್ದಾರೆ. ಶೇಕಡಾ ೬೮ರಷ್ಟು ಕುಟುಂಬಗಳ ಉಳಿತಾಯ ಶೂನ್ಯ. ಶೇಕಡಾ ೫೬ರಷ್ಟು ಕೂಲಿ ಕಾರ್ಮಿಕರ ಕುಟುಂಬಗಳು ಸಾಲ ಅಥವಾ ಋಣಬಾರವನ್ನು ಹೊಂದಿದ್ದಾರೆ. ಗ್ರಾಮೀಣ ಆರ್ಥಿಕತೆಯ ಉದ್ಯೋಗಗಳಲ್ಲಿ ಕೃಷಿ ಕಾರ್ಮಿಕರ ಸ್ಥಾನ ಅತ್ಯಂತ ಕಡಿಮೆ ಇದ್ದು, ಇದರಲ್ಲಿ ಶೇಕಡಾ ೬೮.೫ರಷ್ಟು ಜನ ಪರಿಶಿಷ್ಟ ಜಾತಿ, ಪಂಗಡಕ್ಕೆ ಸೇರಿದ್ದಾರೆ. ಕೃಷಿ ಕಾರ್ಮಿಕರ ಆರ್ಥಿಕ ಸ್ಥಿತಿ ದುಖಃಕರವಾದದ್ದು ಅಥವಾ ಶೋಚನೀಯವಾಗಿದೆ. ಈ ಹಿನ್ನೆಲೆಯಲ್ಲಿ ಇವರ ಸಮಗ್ರ ಸುಧಾರಣೆಗೆ ಕಾರ್ಯಕ್ರಮಗಳನ್ನುರೂಪಿಸುವ ಅಗತ್ಯವಿದೆ.[೨೭]

ಈ ವರದಿ ಪ್ರಕಾರ ಒಂದು ಪ್ರದೇಶದಲ್ಲಿ ಕೃಷಿ ಕೂಲಿ ಕಾರ್ಮಿಕರು ಹೆಚ್ಚಾಗಿರುವುದು ಸಾಮಾನ್ಯವಾಗಿ ಕೂಲಿಕಾರರಲ್ಲಿರುವ ಕಡಿಮೆ ಮಟ್ಟದ ಸಾಕ್ಷರತೆ, ಕಡಿಮೆ ಆದಾಯ, ಅಪೌಷ್ಟಿಕತೆ ಮತ್ತು ಬಡತನವನ್ನು ಸೂಚಿಸುತ್ತದೆ. ಈ ವರದಿ ಪ್ರಕಾರ ಕೃಷಿ ಕೂಲಿ ಕಾರ್ಮಿಕರ ಸಂಖ್ಯೆಯು ೧೯೮೧ರಲ್ಲಿ ೪.೯೬ ದಶಲಕ್ಷ ಇತ್ತು. ಇದು ೧೯೯೧ರಲ್ಲಿ ೫.೬೫ ಮಿಲಿಯನ್‌ಗೆ ಹೆಚ್ಚಾಯಿತು. ೨೦೦೧ರಲ್ಲಿ ೬.೨೧ ಮಿಲಿಯನ್‌ಗೆ ಹೆಚ್ಚಾಯಿತು. ಒಟ್ಟು ಕೆಲಸಗಾರರಲ್ಲಿ ಕೃಷಿ ಕೂಲಿ ಕಾರ್ಮಿಕರ ಪ್ರಮಾಣ ೧೯೮೧ರಲ್ಲಿ ಶೇಕಡಾ ೨೬.೪ರಷ್ಟಿದ್ದದ್ದು ೧೯೯೧ರಲ್ಲಿ ೨೯.೯ಕ್ಕೆ ಹೆಚ್ಚಿದೆ ಎನ್ನಲಾಗಿದೆ. ೨೦೦೧ರ ಜನಗಣತಿ ಪ್ರಕಾರ ಉತ್ತರ ಕರ್ನಾಟಕದಲ್ಲಿ ಕೃಷಿ ಕಾರ್ಮಿಕರ ಪ್ರಮಾಣ ಶೇಕಡಾ ೪೦.೬ರಷ್ಟಿದ್ದು, ದಕ್ಷಿಣ ಕರ್ನಾಟಕದಲ್ಲಿ ಇದರ ಪ್ರಮಾಣ ೧೯.೪ರಷ್ಟಿತ್ತು. ಇದರ ಪ್ರಮಾಣ ಉತ್ತರ ಕರ್ನಾಟಕದ ಗುಲ್ಬರ್ಗಾ ವಿಭಾಗದಲ್ಲಿ ಶೇಕಡಾ ೪೦.೬ರಷ್ಟಿತ್ತು. ರಾಯಚೂರು ಜಿಲ್ಲೆಯಲ್ಲಿ ೪೫.೬ರಷ್ಟಿತ್ತು. ಕರ್ನಾಟಕದ ದಕ್ಷಿಣ ಭಾಗವಾದ ಬೆಂಗಳೂರಿನಲ್ಲಿ ಶೇಕಡಾ ೨.೫ರಷ್ಟು ಇತ್ತು. ರಾಜ್ಯದ ಕೃಷಿ ಕೂಲಿ ಕಾರ್ಮಿಕರ ಪ್ರಮಾಣದಲ್ಲಿ ಮಹಿಳೆಯರ ಪ್ರಮಾಣ ಶೇಕಡಾ ೪೩.೮ರಷ್ಟಿದ್ದರೆ ಪುರುಷರಲ್ಲಿ ಶೇಕಡಾ ೧೭.೦ರಷ್ಟಿದೆ. ಕೃಷಿ ಕೂಲಿ ಕಾರ್ಮಿಕರು ಉತ್ತರ ಕರ್ನಾಟದಲ್ಲಿ ವಿಶೇಷವಾಗಿ ರಾಯಚೂರು, ಗುಲ್ಬರ್ಗಾ ವಿಭಾಗಗಳಲ್ಲಿ ಹೆಚ್ಚಾಗಿರಲು ಕಾರಣ ಬಡತನ ಎನ್ನಲಾಗಿದೆ. ರಾಜ್ಯದ ಒಟ್ಟು ಮಹಿಳಾ ಕೃಷಿ ಕಾರ್ಮಿಕರಲ್ಲಿ ಶೇಕಡಾ ೩೩ರಷ್ಟು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟಿನ ಮಹಿಳೆಯಾಗಿದ್ದಾರೆ.[೨೮]

ಇಲ್ಲಿ ಕರ್ನಾಟಕದ ಜಿಲ್ಲಾವಾರು ಮಾನವ ಅಭಿವೃದ್ಧಿ ಸೂಚಿಯನ್ನು ನೀಡಲಾಗಿದೆ. ಕರ್ನಾಟಕ ಗ್ರಾಮೀಣ ಜನಸಂಖ್ಯೆಯಲ್ಲಿ ಕೃಷಿ ಕಾರ್ಮಿಕರ ಪಾಲು ಎಷ್ಟು ಎಂಬುದನ್ನು ಹೇಳಲಾಗಿದೆ. ಕರ್ನಾಟಕದ ಬಡತನ ಪ್ರಮಾಣ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಜನಸಂಖ್ಯೆ ವಿವರಗಳನ್ನು ನೀಡಲಾಗಿದೆ. ಈ ಹಿನ್ನೆಲೆಯಲ್ಲಿ ಜಿಲ್ಲಾವಾರು ಮಾನವ ಅಭಿವೃದ್ಧಿ ಅನುಸೂಚಿಯ ಪ್ರಕಾರ ರಾಯಚೂರು ಆರೋಗ್ಯ ಸೂಚ್ಯಾಂಕದಲ್ಲಿ ೧೬ನೇ ಸ್ಥಾನ, ಶಿಕ್ಷಣದಲ್ಲಿ ೨೭ನೇ ಸ್ಥಾನ, ಆದಾಯದಲ್ಲಿ ೨೭ನೇ ಸ್ಥಾನ ಒಟ್ಟಾರೆ ಮಾನವ ಅಭಿವೃದ್ಧಿ ಅನುಸೂಚಿಯ ಪ್ರಕಾರ ೧೮ನೇ ಸ್ಥಾನದಲ್ಲಿದೆ ಎಂದು ತಿಳಿಸಲಾಗಿದೆ. ಕರ್ನಾಟಕದ ಒಟ್ಟು ಗ್ರಾಮೀಣ ಜನಸಂಖ್ಯೆಯಲ್ಲಿ ಕೃಷಿ ಕಾರ್ಮಿಕರ ಪಾಲು ಶೇಕಡಾ ೪೦.೦೮ ಎನ್ನಲಾಗಿದೆ. ೧೯೯೯–೨೦೦೦ರಲ್ಲಿ ಎನ್.ಎಸ್.ಎಸ್.ಓ.

ಪ್ರಕಾರ ಕರ್ನಾಟಕದಲ್ಲಿ ಬಡತನದ ಪ್ರಮಾಣ ಶೇಕಡಾ ೨೦.೦೪ ಎನ್ನಲಾಗಿದೆ. ಕರ್ನಾಟಕ ಒಟ್ಟು ಕೆಲಸಗಾರರಲ್ಲಿ ಪರಿಶಿಷ್ಟ ಜಾತಿಯ ಪಾಲು ಶೇಕಡಾ ೨೭.೯ ಹಾಗೂ ಪರಿಶಿಷ್ಟ ಪಂಗಡದ ಪಾಲು ಶೇಕಡಾ ೧೧.೮೬ರಷ್ಟು ಎನ್ನಲಾಗಿದೆ.[೯]

ಕರ್ನಾಟಕ ರಾಜ್ಯದಲ್ಲಿ ಹಾಗು ರಾಯಚೂರು ಜಿಲ್ಲೆಯಲ್ಲಿ ೨೦೧೧ರ ಜನಗಣತಿ ಪ್ರಕಾರ ಕೃಷಿ ಕೂಲಿ ಕಾರ್ಮಿಕರ ಸಂಖ್ಯೆ ಹೆಚ್ಚಾಗಿದೆ. ೨೦೦೧ರಲ್ಲಿ ಈ ಜಿಲ್ಲೆಯ ಒಟ್ಟು ಕೆಲಸಗಾರರಲ್ಲಿ ಸಾಗುವಳಿದಾರರ ಪ್ರಮಾಣ ಶೇಕಡಾ ೩೭.೧೪ರಷ್ಟಿದ್ದದ್ದು ೨೦೧೧ಕ್ಕೆ ೩೩.೫೦ಕ್ಕೆ ಕುಸಿದಿದೆ. ೨೦೦೧ರಲ್ಲಿ ಈ ಜಿಲ್ಲೆಯ ಒಟ್ಟು ಕೆಲಸಗಾರರಲ್ಲಿ ಕೃಷಿ ಕೂಲಿ ಕಾರ್ಮಿಕರ ಸಂಖ್ಯೆ ಶೇಕಡಾ ೨೮.೧೫ರಷ್ಟಿದ್ದದ್ದು ೨೦೧೧ಕ್ಕೆ ೨೯.೫೭ಕ್ಕೆ ಹೆಚ್ಚಾಗಿದೆ.[೧೦]

ಇವರು ಪ್ರಸ್ತುತ ಕರ್ನಾಟಕದ ಕೃಷಿ ವಲಯದ ಸ್ಥಿತ್ಯಂತರಗಳನ್ನು ವಿವರಿಸಿದ್ದಾರೆ. ಮಳೆಯ ಪ್ರಮಾಣ ಕಡಿಮೆ ಇದ್ದು, ಕರ್ನಾಟಕ ಬರಗಾಲ ಪ್ರದೇಶವಾಗಿದೆ. ನೀರಾವರಿ ವ್ಯಾಪ್ತಿಯಲ್ಲಿ ಬರುವ ಪ್ರದೇಶ ಕಡಿಮೆ ಇದೆ. ಬೆಳೆ ಪದ್ಧತಿಯಲ್ಲಿ ಕಡಮೆ ಮೌಲ್ಯದ ಮತ್ತು ಕಡಿಮೆ ಸಾಂದ್ರತೆಯ ಬೆಳೆಗಳು ಹೆಚ್ಚಾಗಿವೆ. ಕೃಷಿ ಹೂಡುವಳಿಗಳ ಬೆಲೆ ಹೆಚ್ಚಳ ಮತ್ತು ಉತ್ಪಾದಕತೆಯಲ್ಲಿನ ಅಧಿಕ ಅಸ್ಥಿರತೆಯಿಂದ ರೈತ ವರ್ಗದ ನೈಜ ಉಳಿತಾಯ ಕುಸಿದಿದೆ. ಹೀಗಾಗಿ ರೈತರು ಉಳಿತಾಯದ ಮೂಲಕ ಉತ್ಪಾದನೆಯ ಅಗತ್ಯಗಳನ್ನು ನಿರ್ವಹಿಸಲು ಸಾದ್ಯವಾಗುತ್ತಿಲ್ಲ. ಸಣ್ಣ ಮತ್ತು ಅತೀ ಸಣ್ಣ ರೈತರ ವಿಚಾರದಲ್ಲಿ ಈ ರೀತಿಯ ದುಸ್ಥಿತಿ ಹೆಚ್ಚಾಗಿದೆ. ಹೀಗಾಗಿ ಸಾಲ ಎಂಬುದು ಅತ್ಯಂತ ಅಗತ್ಯ ಎಂದು ವಿಶ್ಲೇಷಿಸಲಾಗಿದೆ. ಗ್ರಾಮೀಣ ರೈತ ಕುಟುಂಬಗಳಿಗೆ ಸಾಲ ಸೌಲಭ್ಯವು ಆದಾಯ ಮತ್ತು ಆದಾಯೇತರ ಚಟುವಟಿಕೆಗಳಿಗೆ ಸಾಲದ ಅಗತ್ಯವಿದೆ. ಅಲ್ಪಾವಧಿ ಮತ್ತು ಧೀರ್ಘಾವಧಿ ಅಗತ್ಯಗಳು ಇವೆ. ಉಳಿತಾಯ ಪ್ರಮಾಣ ಕಡಿಮೆ ಇರುವುದರಿಂದ ರೈತ ಕುಟುಂಬಗಳು ಆರೋಗ್ಯ ಮತ್ತು ಸಾಮಾಜಿಕ ಜವಾಬ್ದಾರಿಗಳನ್ನು ಸಾಲದ ಮೂಲಕವೇ ನಿರ್ವಹಿಸಬೇಕಾಗಿದೆ. ಸಾಂಸ್ಥಿಕ ಹಣಕಾಸು ಸಂಸ್ಥೆಗಳು ಅನುತ್ಪಾದಕ ಉದ್ದೇಶಗಳಿಗೆ ಸಾಲ ನೀಡುವುದಿಲ್ಲ. ಹಾಗೆಯೇ ಉತ್ಪಾದಕ ಉದ್ದೇಶಗಳಿಗೂ ಸಾಲ ಪಡೆಯುವುದು ಈ ಮೂಲದಿಂದ ಕಷ್ಟ. ಇಂತಹ ಸಂದರ್ಭಗಳಲ್ಲಿ ರೈತವರ್ಗ ಸಾಂಸ್ಥಿಕೇತರ ಮೂಲಗಳಿಂದ ಹೆಚ್ಚು ಸಾಲ ಪಡೆಯಲಾಗುತ್ತಿದೆ. ಹೀಗೆ ಬೇರೆ ಬೇರೆ ಅಂಶಗಳು ಮತ್ತು ಕಾರಣಗಳಿಂದ ರೈತ ವರ್ಗದ ಋಣಭಾರ ಹೆಚ್ಚಿ ಆತ್ಮಹತ್ಯೆಯಲ್ಲಿ ಪರ್ಯಾಸನಗೊಳ್ಳುತ್ತಿವೆ.

೫೯ನೇ ಎನ್.ಎಸ್.ಎಸ್.ಓ ಸಂಸ್ಥೆಯ ಸಮೀಕ್ಷೆಯ ವಿವರಗಳನ್ನು ಈ ಅಧ್ಯಯನದಲ್ಲಿ ಉಲ್ಲೇಖಿಸಲಾಗಿದೆ. ಅದರಂತೆ ಭಾರತದ ಮಟ್ಟದಲ್ಲಿ ೧೧೪೭ ಮಿಲಿಯನ್ ಕುಟುಂಬಗಳಲ್ಲಿ ಶೇಕಡಾ ೬೦.೪ರಷ್ಟು ರೈತ ಕುಟುಂಬಗಳು. ಈ ಕುಟುಂಬಗಳಲ್ಲಿ ಶೇಕಡಾ ೪೮.೬ರಷ್ಟು ಕುಟುಂಬಗಳು ಸಾಲಭಾದೆ ಹೊಂದಿವೆ. ಎನ್.ಎಸ್.ಎಸ್.ಓ ಪ್ರಕಾರ ಕರ್ನಾಟಕದ ಅಂದಾಜು ೪೦೧೪೩೦೦ ರೈತ ಕುಟುಂಬಗಳಲ್ಲಿ ಶೇಕಡಾ ೬೧ರಷ್ಟು ಕುಟುಂಬಗಳು ಸಾಲಭಾದೆ ಅನುಭವಿಸುತ್ತವೆ. ಇದು

ಭಾರತದ ಮಟ್ಟಕ್ಕಿಂತ ಹೆಚ್ಚಾಗಿದೆ. ಶೇಕಡಾ ೬೧ರಷ್ಟು ಕುಟುಂಬಗಳಲ್ಲಿ ಶೇಕಡಾ ೬೦ರಷ್ಟು ಸಾಗುವಳಿದಾರರಾಗಿದ್ದು ಶೇಕಡಾ ೨೫ರಷ್ಟು ಇತರೆ ಚಟುವಟಿಕೆಗಳಲ್ಲಿ ತೊಡಗಿದ್ದಾರೆ. (ಯಾವ ಚಟುವಟಿಕೆಗಳು ಎಂಬುದು ನಿರ್ಧಿಷ್ಟವಾಗಿಲ್ಲ). ಎನ್.ಎಸ್.ಎಸ್.ಓ ಸಮೀಕ್ಷೆ ಗಮನಿಸಿರುವಂತೆ ಆರ್ಥಿಕವಾಗಿ ಉತ್ತಮವಾಗಿರುವ ಕುಟುಂಬಗಳು (ಆರ್ಥಿಕ ಎಂದರೆ ಹೆಚ್ಚು ಭೂ ಹಿಡುವಳಿ) ಬಡ ಕುಟುಂಬಗಳಿಗಿಂತ ಹೆಚ್ಚಿನ ಸಾಲ ಭಾದೆ ಹೊಂದಿವೆ. ಇದಕ್ಕೆ ಕಾರಣ ಉತ್ತಮ ಕುಟುಂಬಗಳು ಹೆಚ್ಚು ಸಾಳ ಸೌಲಭ್ಯವನ್ನು ಹೊಂದಿದ್ದು ಅನಾನುಕೂಲ ಸಾಲ ನಿಯಮಗಳು ಮತ್ತು ಸಂದರ್ಭಗಳ ಅಡಿಯಲ್ಲಿ ಹಾಗು ಅನುತ್ಪಾದಕ ಉದ್ದೇಶಗಳಿಗೆ ಸಾಲ ಪಡೆದು ಮರುಪಾವತಿ ಮಾಡಲಾಗದೇ ಋಣಭಾರಕ್ಕೆ ಕಾರಣ ಎನ್ನಲಾಗಿದೆ. ಈ ಅಧ್ಯಯನದಲ್ಲಿ ಕರ್ನಾಟಕದ ಮಂಡ್ಯ, ಚಾಮರಾಜನಗರ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಕೈಗೊಳ್ಳಲಾಗಿದೆ. ಈ ಅಧ್ಯಯನದ ಫಲಿತಾಂಶದ ಪ್ರಕಾರ ೦.೦೧ ಹೆಕ್ಟರ್ ಭೂ ಹಿಡುವಳಿ ಹೊಂದಿದ ಶೇಕಡಾ ೮೧ರಷ್ಟು ರೈತರು ಅಸಂಘಟಿತ ಮೂಲದಿಂದ ಸಾಲ ಸೌಲಭ್ಯ ಪಡೆಯುತ್ತಾರೆ. ೨ ಹೆಕ್ಟರ್ ಭೂಮಿ ಹೊಂದಿರುವವರಲ್ಲಿ ಈ ಪ್ರಮಾಣ ಸೇಕಡಾ ೪೨ರಷ್ಟಿದೆ. ಸಣ್ಣ ಮತ್ತು ಅತೀ ಸಣ್ಣ ರೈತರು ಸಂಘಟಿತ ಮೂಲದಿಂದ ಪಡೆಯುವ ಸಾಲ ತುಂಬಾ ಕಡಿಮೆ. ಅದರಲ್ಲಿ ಶೇಕಡಾ ೭೦ರಷ್ಟು ಪರಿಶಿಷ್ಟ ಜಾತಿ ಮತ್ತು ೬೬ರಷ್ಟು ಪರಿಶಿಷ್ಟ ಪಂಗಡದವರಿದ್ದಾರೆ. ಶೇಕಡಾ ೩೭ರಷ್ಟು ಮಹಿಳಾ ಮುಖ್ಯಸ್ಥರಾದ ಕುಟುಂಬದವರು ಇನ್ನಲಾಗಿದೆ. ಈ ಅಧ್ಯಯನದಲ್ಲಿ ಪ್ರಾಥಮಿಕ ಮತ್ತು ಅನುಶಂಗಿಕ ವಿಧಾನಗಳನ್ನು ಅನುಸರಿಸಲಾಗಿದೆ. ಗ್ರಾಮೀಣ ರೈತ ಕುಟುಂಬಗಳ ಮುಖ್ಯವಾಗಿ ಸಣ್ಣ ಮತ್ತು ಅತೀ ಸಣ್ಣ ರೈತರ ಕೌಟುಂಬಿಕ ಮತ್ತು ಸಾಮಾಜಿಕ ಜವಾಬ್ದಾರಿ ನಿರ್ವಹಣೆಯಲ್ಲಿ ಸಾಲದ ಅಗತ್ಯಗಳನ್ನು ವಿಶ್ಲೇಷಿಸಲಾಗಿದೆ. ರೈತ ವರ್ಗದ ಋಣಭಾರಕ್ಕೆ ಕಾರಣವಾದ ಅಂಶಗಳನ್ನು ಹಾಗೂ ಅಂತಿಮವಾಗಿ ಈ ಕಾರಣಗಳು ರೈತರ ಆತ್ಮಹತ್ಯೆಗೆ ಪ್ರೇರಣೆಯಾಗುವ ರೀತಿಯನ್ನು ಇಲ್ಲಿ ವಿಶ್ಲೇಷಿಸಲಾಗಿದೆ.[೮೧]

ಇವತ್ತಿನ ಜಾಗತೀಕರಣದ ಸಂದರ್ಭದಲ್ಲಿ ನಡೆಯುತ್ತಿರುವ ರೈತರ ಆತ್ಮಹತ್ಯೆಯನ್ನು ಪ್ರತಿಭಟನೆಯ ಒಂದು ರೂಪವೆನ್ನಬಹುದು. ರೈತರ ಆತ್ಮಹತ್ಯೆಗೆ ಕೇವಲ ಬೆಳೆ ಸಾಲ ಅಥವಾ ಬೆಳೆ ನಾಶವೇ ಕಾರಣವೆಂದು ವಾದಿಸಲು ಸಾಧ್ಯವಿಲ್ಲ. ಜಾಗತೀಕರಣದ ಸಂದರ್ಭದಲ್ಲಿ ರೈತರು ತಮ್ಮ ಅಸ್ತಿತ್ವದ ಕುರುಹಾದ ಭೂಮಿಯನ್ನು ಕಳೆದು ಕೊಳ್ಳುವ ಬಯವೇ ಅವರನ್ನು ಆತ್ಮಹತ್ಯೆಗೆ ಪ್ರೇರೇಪಿಸುತ್ತಿದೆ ಎಂಬುದು ನನ್ನ ಭಾವನೆ.[೮೨]

ಬೀದರ್ ಡಿಸ್ಟ್ರೆಸ್ ಎಂಬ ಅಧ್ಯಯನದಲ್ಲಿ ಬೀದರ್ ಜಿಲ್ಲೆಯಲ್ಲಿ ನಡೆದ ರೈತರ ಆತ್ಮಹತ್ಯೆಗೆ ಕಾರಣವಾದ ಅಂಶಗಳನ್ನು ಇಲ್ಲಿ ವಿಶ್ಲೇಷಿಸಿದ್ದಾರೆ. ೧೯೯೮ರಲ್ಲಿ ಬೀದರ್ ಜಿಲ್ಲೆಯಲ್ಲಿ ಸುಮಾರು ೧೫ ರೈತರು ಆತ್ಮಹತ್ಯೆಗೆ ಈಡಾದರು. ಇದಕ್ಕೆ ಕಾರಣವಾದ ಅಂಶಗಳಲ್ಲಿ ಮುಖ್ಯವಾಗಿ ಕೃಷಿಯಲ್ಲಿ ಉತ್ಪಾದತೆಯ ಕುಸಿತ, ಪರಿಸರದ ಅಸಮತೋಲನ ಹಾಗು ಆರ್ಥಿಕವಾಗಿ ತಮ್ಮ ಕೃಷಿ ಹಣಕಾಸಿನ ಅಗತ್ಯಗಳನ್ನು ರೈತರು ದುಬಾರಿ ಬಡ್ಡಿಯ ಅಸಂಘಟಿತ ಮೂಲದಿಂದ ಪಡೆದಿದ್ದರು. ಈ ರೀತಿಯ ಕೃಷಿ ಬಿಕ್ಕಟ್ಟುಗಳು ಮತ್ತು ಸಾಲದ ಒತ್ತಡಗಳು ರೈತರ ಆತ್ಮಹತ್ಯೆಗೆ ಪ್ರೇರಣೆ ನೀಡಿದವು ಎನ್ನಲಾಗಿದೆ.[೮೩]

ಇವರ ಲೇಖನ ಸಾಲ ಮತ್ತು ಹೂಡಿಕೆಗೆ ಸಂಬಂಧಿಸಿದ ಎನ್.ಎಸ್.ಎಸ್.ಓ ನ ೫೯ನೇ ಸುತ್ತಿನ ಮಾಹಿತಿಯನ್ನು ವಿಶ್ಲೇಷಿಸುತ್ತಾ ಸಮಾಜದ ಕೆಲವು ನಿರ್ಧಿಷ್ಟ ವರ್ಗಗಳು ಅನುಭವಿಸುವ ಸಾಲ ಸೌಲಭ್ಯದಲ್ಲಿನ ಅಸಮಾನತೆಯನ್ನು ಮುಖ್ಯ ಅಂಶಗಳಾಗಿ ಪರಿಗಣಿಸಲಾಗಿದೆ. ಮಹಿಳಾ ಮುಖ್ಯಸ್ಥ ಕುಟುಂಬಗಳಂತಹ ದುರ್ಬಲ ವರ್ಗಗಳು ಪುರುಷರಿಗೆ ಹೋಲಿಸಿದರೆ ಕಡಿಮೆ ಸಾಲ ಸೌಲಭ್ಯವನ್ನು ಹೊಂದಿವೆ. ಇವರು ಪರುಷರಂತೆ ಸಮಾನ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿದ್ದರೂ ಸಮಾನ ಸಾಲ ಸೌಲಭ್ಯ ಲಭಿಸುವುದಿಲ್ಲ. ಸ್ವ ಉದ್ಯೋಗ ಕುಟುಂಬಗಳ ವಿಚಾರದಲ್ಲಿ ಸಂಘಟಿತ ಹಣಕಾಸು ಮೂಲದ ಮಹತ್ವ ಪರಿಗಣಿಸಿದ್ದರೂ ಹಾಗೂ ಇಲ್ಲಾ ರಾಜ್ಯಗಳಲ್ಲಿ ಹಣಕಾಸು ಒಳಗೊಳ್ಳುವಿಕೆ(ಫೈನಾನ್ಸಿಯಲ್ ಇನ್‌ಕ್ಲೂಷನ್) ಪ್ರಕ್ರಿಯೆ ಪ್ರಗತಿಯಲ್ಲಿದ್ದರೂ ಬಹುತೇಕ ಕುಟುಂಬಗಳು ಅಥವಾ ಹೆಚ್ಚಿನ ಸಂಖ್ಯೆಯ ಕುಟುಂಬಗಳು ಅಸಂಘಟಿತ ಮೂಲಗಳನ್ನು ಅವಲಂಬಿಸಿವೆ. ಸಣ್ಣ ಅತೀ ಸಣ್ಣ ಹಿಡುವಳಿದಾರರು ಮತ್ತು ಸಣ್ಣ ಪ್ರಮಾಣದ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿರುವವರು ಮತ್ತು ಬ್ಯಾಂಕುಗಳು ಇವರೊಂದಿಗೆ ಹೊಂದಿರುವ ಸಂಬಂಧವನ್ನು ಗಮನಿಸಿದರೆ ಹಣಕಾಸು ಒಳಗೊಳ್ಳುವಿಕೆ ಪ್ರಕ್ರಿಯೆಯ ಸುಸ್ಥಿರತೆಯ ಬಗ್ಗೆ ಅನುಮಾನಗಳು ಮೂಡುತ್ತವೆ ಎನ್ನಲಾಗಿದೆ.[೮೪]

ಇವರು ವಿವಿಧ ಹಣಕಾಸು ಸಂಸ್ಥೆಗಳನ್ನು ಒಳಗೊಂಡ ಕರ್ನಾಟಕದ ಗ್ರಾಮೀಣ ಸಾಲ ವ್ಯವಸ್ಥೆಯ ಪ್ರಗತಿ, ಸಮಸ್ಯೆಗಳು ಹಾಗು ಸುಧಾರಣೆಯ ಸಾದ್ಯತೆಗಳನ್ನು ಕರ್ನಾಟಕದ ಕೃಷಿ ಜೀವನಾಧಾರ ಮಟ್ಟದಿಂದ ವಾಣಿಜ್ಯೀಕರಣ ಮತ್ತು ವೈವಿಧ್ಯಮಯ ಮಟ್ಟದವರೆಗೆ ಬದಲಾವಣೆ ಗೊಂಡಿತು. ೧೯೮೦-೮೧ ರಾಜ್ಯದ ನಿವ್ವಳ ಆಂತರಿಕ ಉತ್ಪನ್ನದಲ್ಲಿ ಕೃಷಿಯ ಪಾಲು ಶೇಕಡಾ ೪೩ರಷ್ಟಿದ್ದು ೧೯೯೭-೯೮ರ ಹೊತ್ತಿಗೆ ಶೇಕಡಾ ೩೦ಕ್ಕೆ ಕಡಿಮೆಯಾಯಿತು. ೨೦೦೦ರ ನಂತರ ಇದು ಶೇಕಡಾ ೧೮ಕ್ಕಿಂತ ಕಡಿಮೆಯಾಗಿದೆ. ಆದರೆ ಇಂದಿಗೂ ೨/೩ರಷ್ಟು ಜನರು ಕೃಷಿಯನ್ನೇ ಅವಲಂಭಿಸಿದ್ದಾರೆ. ಈ ದೃಷ್ಟಿಯಿಂದ ಕೃಷಿಯ ಮೇಲಿನ ಬಂಡವಾಳ ಹೂಡಿಕೆಯ ಅಗತ್ಯವನ್ನು ತಿಳಿಯಬಹುದು. ಗ್ರಾಮೀಣ ವಲಯಗಳ ಅಭಿವೃದ್ಧಿಯಲ್ಲಿ ಗ್ರಾಮೀಣ ಸಾಲ ವಿತರಣಾ ವ್ಯವಸ್ಥೆಯು ಬಹುಮುಖಿ ಪಾತ್ರ ವಹಿಸುತ್ತದೆ. ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳಿಗೆ ಬೇಕಾದ ಹಣಕಾಸುನ್ನು ಪೂರೈಸುವ ಮೂಲಕ ಗ್ರಾಮೀಣ ಅಭಿವೃದ್ಧಿಯಲ್ಲಿ ಗ್ರಾಮೀಣ ಸಾಲ ವಿಸ್ತುತ ಪಾತ್ರ ವಹಿಸುತ್ತದೆ. ೧೯೯೨ರ ಹಣಕಾಸು ಮತ್ತು ಆರ್ಥಿಕ ಸುಧಾರಣೆ ಪ್ರಕ್ರಿಯೆ ಗ್ರಾಮೀಣ ಸಾಲ ವಿತರಣಾ ವ್ಯವಸ್ಥೆಗೆ ಹೊಸ ಆಯಾಮವನ್ನು ನೀಡಿತು. ಭಾರತದ ಕೃಷಿ ಜಾಗತೀಕರಣಗೊಳ್ಳುತ್ತಾ ಹೊಸ ಅವಕಾಶಗಳು ಸೃಷ್ಟಿಯಾಗತೊಡಗಿದವು. ಕೃಷಿ ಕ್ಷೇತ್ರದಲ್ಲಿನ ತಂತ್ರಜ್ಞಾನ ಸುಧಾರಣೆ,ರಫ್ತು ಆಧ್ಯತೆ, ವೈವಿಧ್ಯತೆ, ವಾಣಿಜ್ಯೀಕರಣದ ಬೆಳವಣಿಗೆಗಳು ಮತ್ತು ಚಟುವಟಿಕೆಗಳಿಗೆ ಹಣಕಾಸು ಪೂರೈಸುವಂತಹ ಸವಾಲು ಗ್ರಾಮೀಣ ಸಾಲ ವ್ಯವಸ್ಥೆಗೆ ಎದುರಾಯಿತು. ಇದೇ ವೇಳೆಗೆ ಬಡತನ ರೇಖೆ ಕೆಳಗೆ ಬುದುಕುವ ೧/೩ ಜನಸಂಖ್ಯೆ ಗ್ರಾಮೀಣ ಸಾಲ ವ್ಯವಸ್ಥೆಯಿಂದ ಹೊರಗುಳಿದು ಹಣದ ಲೇವಾದೇವಿಗಾರರ ಹಿಡಿತದಲ್ಲಿ ಸಿಗಬೇಕಾಯಿತು. ಈ ಸಮಸ್ಯೆ ಗ್ರಾಮೀಣ ಬ್ಯಾಂಕ್

ವ್ಯವಸ್ಥೆಯಲ್ಲಿ ಹೊಸ ಬದಲಾವಣೆಗಳನ್ನು ತರಬೇಕಾದ ಅಗತ್ಯವನ್ನು ತಿಳಿಸುತ್ತದೆ. ಈ ಮೇಲಿನ ಅಂಶಗಳ ದೃಷ್ಟಿಯಿಂದ ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳಿಗೆ ಹಣಕಾಸು ಪೂರೈಸುವ ವಿವಿಧ ಹಣಕಾಸು ಸಂಸ್ಥೆಗಳನ್ನು ಒಳಗೊಂಡ ಕರ್ನಾಟಕದ ಗ್ರಾಮೀಣ ಸಾಲ ಮೂಲಗಳ ಪ್ರಗತಿ ಮತ್ತು ಸಮಸ್ಯೆಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.[೮೫]

ಕರ್ನಾಟಕದಲ್ಲಿ ಭೂ ಮಿತಿ ಕಾಯ್ದೆ ಜಾರಿಯಿಂದ ಆದ ಪರಿಣಾಮಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಅದೇ ರೀತಿ ಕೃಷಿ ಉತ್ಪದನಾ ವೆಚ್ಚದ ಹೆಚ್ಚಳ, ಸಣ್ಣ ಹಿಡುವಳಿ ಮತ್ತು ಸಣ್ಣ ಹಿಡುವಳಿದಾರರ ಸಾಲದ ಸಮಸ್ಯೆಗನ್ನು ಇಲ್ಲಿ ಚರ್ಚಿಸಲಾಗಿದೆ. ಕರ್ನಾಟಕದಲ್ಲಿ ಭೂಸುಧಾರಣೆ ಜಾರಿಯಿಂದ ಕೆಲವು ಗುತ್ತಿಗೆದಾರರು ಭೂ ಮಾಲಿಕರಾದ್ದದ್ದು ಸತ್ಯ. ಬಹುತೇಕ ಗುತ್ತಿಗೆದಾರರು ಕೆಳಜಾತಿಗೆ ಸೇರಿದ್ದರಿಂದ ಭೂ ಮಾಲೀಕತ್ವದ ಅಸಮತೋಲನದಿಂದ ಸೃಷ್ಟಿಯಾಗಿದ್ದ ಸಾಮಾಜಿಕ ಅಸಮಾನತೆ ಸರಿಹೋಗುತ್ತದೆ ಎಂದು ಭಾವಿಸಲಾಗಿತ್ತು. ಆದರೆ ಇದು ವಾಸ್ತವವಾಗಿ ದೊಡ್ಡ ಪ್ರಮಾಣದಲ್ಲಿ ನಡೆಯಲಿಲ್ಲ. ಎಸ್.ಸಿ ಫಲಾನುಭವಿಗಳು ಭೂ ಹಂಚಿಕೆ ಯೋಜನೆಯಡಿ ಪಡೆದಿದ್ದ ಭೂಮಿಯನ್ನು ದೊಡ್ಡ ಭೂ ಮಾಲೀಕರಿಗೆ ಮಾರಾಟ ಮಾಡಿದ ಸಾಕಷ್ಟು ಉದಾಹರಣೆಗಳಿವೆ. ಕೃಷಿ ಉತ್ಪಾದನಾ ವೆಚ್ಚ ದುಬಾರಿಯಾಗಿದ್ದು ಸಾಂಪ್ರದಾಯಿಕ ಕಡಿಮೆ ಕೂಲಿ ಕೆಲಸಗಾರರು ದೊರೆಯುವುದಿಲ್ಲ. ಎತ್ತುಗಳು, ನೀರಾವರಿ ಸೌಲಭ್ಯಗಳು ಮತ್ತು ಕೃಷಿ ಸಲಕರಣೆಗಳ ಮೇಲಿನ ಹೂಡಿಕೆ ದುಬಾರಿಯಾಗಿದೆ. ಈ ದೃಷ್ಟಿಯಿಂದ ಸಣ್ಣ ಮತ್ತು ಅತೀಸಣ್ಣ ಭೂ ಹಿಡುವಳಿದಾರರು ಸಂಕಷ್ಟಕ್ಕೀಡಾಗಿದ್ದಾರೆ. ಸಣ್ಣ ಹಿಡುವಳಿಗಳು ಆರ್ಥಿಕವಾಗಿ ಲಾಭದಾಯಕವಾಗಿಲ್ಲದೆ ಇರುವುದರಿಂದ ಸಣ್ಣ ಭೂ ಹಿಡುವಳಿದಾರರು ಸಂಘಟಿತ ಹಣಕಾಸು ಸಂಸ್ಥೆಗಳಿಂದ ತಮ್ಮ ಭೂಮಿಯನ್ನು ಭದ್ರತೆಯಾಗಿ ನೀಡಲು ಸಾದ್ಯವಾಗದೆ ಸಾಲ ಸೌಲಭ್ಯಗಳನ್ನು ಅಥವಾ ಇನ್ನಾವುದೇ ಬಂಡವಾಳ ಪಡೆಯಲು ಸಾದ್ಯವಾಗುತ್ತಿಲ್ಲ. ಹೀಗಿದ್ದರೂ ಆರ್ಥಿಕ ತಾತ್ವಿಕತೆ ಮತ್ತು ಬದಲಾದ ಸಂದರ್ಭಗಳನ್ನು ಅರ್ಥಮಾಡಿಕೊಳ್ಳದೆ ಭೂ ಸುಧಾರಣೆ ಬಗ್ಗೆ ಹೇಳಿದ್ದನ್ನೇ ಹೇಳಲಾಗುತ್ತಿದೆ ಎನ್ನಲಾಗಿದೆ.[೮೬]

ಭೂ ಸುಧಾರಣೆಯ ಪೂರ್ವ ಮತ್ತು ನಂತರದ ಅವಧಿಯಲ್ಲಿ ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯ ಕೃಷಿ ಸಾಮಾಜಿಕ ವ್ಯವಸ್ಥೆಯಲ್ಲಿನ ಮುಂದುವರೆದ ಅಸಮಾನತೆಯನ್ನು ವಿಶ್ಲೇಷಿಸಲಾಗಿದೆ. ಅಸಮಾನತೆಯ ಸ್ವರೂಪವನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಗ್ರಾಮ ಮಟ್ಟದ ಕಛೇರಿಗಳು ಮತ್ತು ಕ್ಷೇತ್ರಾಧ್ಯಯನದ ಮೂಲಕ ಸಂಗ್ರಹಿಸಿದ ಮಾಹಿತಿ ಹಾಗೂ ಸಾಹಿತ್ಯ ಸಮೀಕ್ಷೆಯ ಆಧಾರದ ಮೇಲೆ ಈ ವಿಶ್ಲೇಷಣೆಯನ್ನು ಮಾಡಲಾಗಿದೆ. ಮೂರು ಭಾಗಗಳು ೧) ಭೂ ಮಾಲೀಕತ್ವದ ಕೇಂದ್ರೀಕರಣದಿಂದ ಸೃಷ್ಟಿಯಾದ ಹೊಸ ಕೃಷಿ ವರ್ಗ ೨) ಸಾಂಸ್ಥಿಕ ಸಾಲದ ಬಳಕೆ ೩) ಕೃಷಿ ಅಭಿವೃದ್ಧಿಯ ಅಗತ್ಯ ಅಂಶವಾದ ಕೃಷಿ ಆಧುನಿಕೀಕರಣ. ಹೊಸ ಕೃಷಿ ವ್ಯವಸ್ಥೆಯು ಪ್ರಬಲ ಅದೀನ ಎಂಬ ಸಂಬಂಧಗಳನ್ನು ಹುಟ್ಟುಹಾಕಿದ್ದು ಆ ಪ್ರಕಾರ ಭೂಮಾಲೀಕರು ಗುತ್ತಿಗೆದಾರರನ್ನು ಶೋಷಿಸಿದ್ದನ್ನು, ದೊಡ್ಡ ಹಿಡುವಳಿಗಳನ್ನು ಮೇಲ್ಜಾತಿಯವರೇ ಹೊಂದಿದ್ದನ್ನು

ಇಲ್ಲಿ ವಿಶ್ಲೇಷಿಸಲಾಗಿದೆ. ಅದೇ ರೀತಿ ಸಂಘಟಿತ ಹಣಕಾಸು ವ್ಯವಸ್ಥೆಯ ಬ್ಯಾಂಕುಗಳಿಂದ ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ಸ್ ಜಾತಿಗೆ ಸೇರಿದ ದೊಡ್ಡ ಭೂ ಮಾಲೀಕರು ಭೂಮಿಯನ್ನು ಭದ್ರತೆಯಾಗಿ ನೀಡಿ ಬೇರೆ ಬೇರೆ ಉದ್ದೇಶಗಳಿಗೆ ಅಪಾರ ಪ್ರಮಾಣದಲ್ಲಿ ಸಾಲ ಸೌಲಭ್ಯವನ್ನು ಪಡೆದಿರುವುದನ್ನು ವಿಶ್ಲೇಷಿಸಲಾಗಿದೆ.[೪]

**ಕೊನೆ ಟಿಪ್ಪಣಿಗಳು**

೧. ಜನ್ ನೆಡರ್‌ವೀನ್ ಪೀಟರ್ಸ್ (೨೦೦೧). ಡವೆಲಪ್‌ಮೆಂಟ್ ಥಿಯರಿ: ಡಿಕನ್ಸ್ಟ್ರಕ್ಷನ್/ ರಿಕನ್ಸ್ಟ್ರಕ್ಷನ್, ನ್ಯೂಡೆಲ್ಲಿ, ೫-೩೦

೨. ವಾನ್ ಪಿಷ್ಕೇ ಜೆ.ಡಿ., ಡಬ್ಲೂ ಆಡಮ್ ಅಂಡ್ ಗೋರ್ಡನ್ ಡೋನಲ್ಡ್ (೧೯೮೨):ರೂರಲ್ ಫೈನಾನ್ಸಿಯಲ್ ಮಾರ್ಕೆಟ್ಸ್ ಇನ್ ಡವಲಪಿಂಗ್ ಕಂಟ್ರೀಸ್; ದಿ ಯೂಸ್ ಅಂಡ್ ಅಬ್ಯೂಸ್, ದಿ ಎಕನಾಮಿಕ್ ಡವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಆಫ್ ದಿ ವರ್ಲ್ಡ್ ಬ್ಯಾಂಕ್, ದಿ ಜಾನ್ ಹಾಕಿನ್ಸ್ ಯೂನಿವರ್‌ಸಿಟಿ ಪ್ರೆಸ್ಸ್, ಪು.೮೫-೧೧೧

೩. ವಾರನ್ ಎಫ್ ಲೀ (೧೯೮೨). ದಿ ರೋಲ್ ಆಫ್ ಫೈನಾನ್ಸಿಯಲ್ ಇಂಟರ್‌ಮೀಡಿಯೇಶನ್ ಇನ್ ದಿ ಆಕ್ಟಿವಿಟೀಸ್ ಆಫ್ ರೂರಲ್ ಫರ್ಮ್ಸ್ ಅಂಡ್ ಹೌಸ್‌ಹೋಲ್ಡ್ಸ್ ಇನ್ ವಾನ್ ಪಿಷ್ಕೇ ಜೆ.ಡಿ ಅಂಡ್ ಡಬ್ಲೂ ಆಡಮ್ (ಸಂ)ರೂರಲ್ ಫೈನಾನ್ಸಿಯಲ್ ಮಾರ್ಕೆಟ್ಸ್ ಇನ್ ಡವಲಪಿಂಗ್ ಕಂಟ್ರೀಸ್; ದಿ ಯೂಸ್ ಅಂಡ್ ಅಬ್ಯೂಸ್, ದಿ ಎಕನಾಮಿಕ್ ಡವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಆಫ್ ದಿ ವರ್ಲ್ಡ್ ಬ್ಯಾಂಕ್, ದಿ ಜಾನ್ ಹಾಕಿನ್ಸ್ ಯೂನಿವರ್‌ಸಿಟಿ ಪ್ರೆಸ್ಸ್, ಪು.೧೦೮-೧೧೯

೪. ಚೆಸ್ಟರ್ ಬಿ. ಬೇಕರ್ ಮತ್ತು ವಿನಯ್. ಕೆ ಭಾರ್ಗವ (೧೯೭೨). ಫೈನಾನ್ಸ್ ಫಾರ್ ಡವಲಪ್‌ಮೆಂಟ್ ಆಫ್ ಸ್ಮಾಲ್ ಹೋಲ್ಡಿಂಗ್ ಇನ್ ಇಂಡಿಯಾ, ದಿ ಎಕನಾಮಿಕ್ ಡವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಆಫ್ ದಿ ವರ್ಲ್ಡ್ ಬ್ಯಾಂಕ್, ದಿ ಜಾನ್ ಹಾಕಿನ್ಸ್ ಯೂನಿವರ್‌ಸಿಟಿ ಪ್ರೆಸ್ಸ್, ಪು. ೧೧೭

೫. ಬ್ರಮನ್, ಜನ್ (೧೯೯೭). ದಿ ವಿಲೇಜ್ ಇನ್ ಫೋಕಸ್ ಇನ್ ಜನ್ ಬ್ರಮನ್, ಪೀಟರ್ ಕ್ಲೂಸ್ ಅಂಡ್ ಅಶ್ವಿನಿ ಸೇಥ್ (ಸಂ) ದಿ ವಿಲೇಜ್ ಇನ್ ಏಷಿಯಾ ರಿ ವಿಸಿಟೆಡ್, ಆಕ್ಸ್‌ಫರ್ಡ್ ಯೂನಿವರ್‌ಸಿಟಿ ಪ್ರೆಸ್ಸ್, ನ್ಯೂಡೆಲ್ಲಿ, ಪು.೧೫-೬೬

೬. ಜೀನ್ ಡ್ರೆಜ್ (೧೯೯೭). ಆಕ್ಯುಪೇಶನಲ್ ಚೇಂಜ್, ಲ್ಯಾಂಡ್ ಓನರ್‌ಶಿಪ್ ಅಂಡ್ ಸೋಶಿಯಲ್ ಇನ್‌ಈಕ್ವಾಲಿಟಿ ಇನ್ ಜನ್ ಬ್ರಮನ್, ಪೀಟರ್ ಕ್ಲೂಸ್ ಅಂಡ್ ಅಶ್ವಿನಿ ಸೇಥ್ (ಸಂ) ದಿ ವಿಲೇಜ್ ಇನ್ ಏಷಿಯಾ ರಿ ವಿಸಿಟೆಡ್, ಆಕ್ಸ್‌ಫರ್ಡ್ ಯೂನಿವರ್‌ಸಿಟಿ ಪ್ರೆಸ್ಸ್, ನ್ಯೂಡೆಲ್ಲಿ, ಪು.೧೨೭-೧೬೦

೭. ಬರ್ಬರಾ ಹ್ಯಾರಿಸ್ ವೈಟ್ (೨೦೦೪). ಇಂಡಿಯಾ ವರ್ಕಿಂಗ್; ಎಸ್ಸೆ ಆನ್ ಸೊಸೈಟಿ ಅಂಡ್ ಎಕನಾಮಿ, ಕೇಂಬ್ರಿಡ್ಜ್ ಯೂನಿವರ್‌ಸಿಟಿ ಪ್ರೆಸ್ಸ್, ನ್ಯಾಡೆಲ್ಲಿ, ಫೌಂಡೇಶನ್ ಬುಕ್ಸ್, ಪು.೨೨–೨೩

೮. ಜೀನ್ ಡ್ರೆಜ್ ಆಂಡ್ ಅಮರ್ತ್ಯಸೆನ್ (೧೯೯೯). ಇಂಡಿಯಾ: ಎಕನಾಮಿಕ್ ಡವಲಪ್‌ಮೆಂಟ್ ಅಂಡ್ ಸೋಶಿಯಲ್ ಆಪರ್ಚುನಿಟಿ, ಆಕ್ಸ್‌ಫರ್ಡ್ ಯೂನಿವರ್‌ಸಿಟಿ ಪ್ರೆಸ್ಸ್, ನ್ಯೂಡೆಲ್ಲಿ, ಪು.೬–೧೦

೯. ಕೃಷ್ಣ ಭಾರದ್ವಾಜ್ (೧೯೯೪). ಅಕ್ಯುಮುಲೇಶನ್, ಎಕ್ಸ್‌ಚೇಂಜ್ ಅಂಡ್ ಡವಲಪ್‌ಮೆಂಟ್– ಎಸ್ಸೆ ಆನ್ ದಿ ಇಂಡಿಯನ್ ಇಕನಾಮಿ, ಸೇಜ್ ಪಬ್ಲಿಕೇಶನ್, ನ್ಯೂಡೆಲ್ಲಿ, ಪು.೩೨೭–೩೨೮

೧೦. ಅಮಿಯ ಕುಮಾರ್ ಬಾಗ್ಚಿ (೧೯೮೯). ದಿ ಪ್ರೆಸಿಡೆನ್ಸಿ ಬ್ಯಾಂಕ್ಸ್ ಅಂಡ್ ದಿ ಇಂಡಿಯನ್ ಎಕನಾಮಿ ೧೮೭೬–೧೯೧೪, ಆಕ್ಸ್‌ಫರ್ಡ್ ಯೂನಿವರ್‌ಸಿಟಿ ಪ್ರೆಸ್ಸ್, ಕೋಲ್ಕತ್ತಾ, ಪು.೩೨–೩೮

೧೧. ಕುರಿಯನ್ ಸಿ.ಟಿ (೧೯೯೨). ದಿ ಎಕನಾಮಿ–ಅನ್ ಇನ್‌ಟರ್‌ಪ್ರಿಟೇಟಿವ್ ಇಂಟ್ರೊಡಕ್ಷನ್, ಸೇಜ್ ಪಬ್ಲಿಕೇಶನ್, ನ್ಯೂಡೆಲ್ಲಿ, ಪು.೩೦೯–೩೧೩

೧೨. ಚಂದ್ರ ಶೇಖರ್ ಸಿ.ಪಿ ಅಂಡ್ ಜಯತಿ ಘೋಶ್ (೨೦೦೨). ದಿ ಮಾರ್ಕೆಟ್ ದಟ್ ಫೈಲ್ಡ್–ನಿಯೋಲಿಬರಲ್ ಎಕನಾಮಿಕ್ ರಿಫಾರಮ್ಸ್ ಇನ್ ಇಂಡಿಯಾ; ಲೆಫ್ಟ್ ವರ್ಡ್ ಬುಕ್ಸ್, ನ್ಯೂಡೆಲ್ಲಿ, ಪು.೧೩೯–೧೫೪

೧೩. ಪ್ರಣಬ್ ಬರ್ಧಾನ್ (೧೯೯೮). ದಿ ಪೊಲಿಟಿಕಲ್ ಎಕನಾಮಿ ಆಫ್ ಡವಲಪ್‌ಮೆಂಟ್ ಇನ್ ಇಂಡಿಯಾ, ಆಕ್ಸ್‌ಫರ್ಡ್ ಯೂನಿವರ್‌ಸಿಟಿ ಪ್ರೆಸ್ಸ್, ನ್ಯೂಡೆಲ್ಲಿ, ಪು.೨–೧೫

೧೪. ವಿ.ಎಮ್. ದಾಂಡೇಕರ್ (೧೯೯೪). ದಿ ಇಂಡಿಯನ್ ಎಕನಾಮಿ ೧೯೪೭–೯೨, ವಾಲ್ಯೂಮ್ ೧, ಅಗ್ರಿಕಲ್ಚರ್, ಸೇಜ್ ಪಬ್ಲಿಕೇಶನ್, ನ್ಯೂಡೆಲ್ಲಿ, ಪು. ೩೪೧–೩೫೫

೧೫. ವಿ.ಎಮ್. ದಾಂಡೇಕರ್ (೧೯೯೪). ದಿ ಇಂಡಿಯನ್ ಎಕನಾಮಿ ೧೯೪೭–೯೨, ವಾಲ್ಯೂಮ್ ೨, ಪಾಪುಲೇಶನ್, ಪಾವರ್ಟಿ ಅಂಡ್ ಇಮ್‌ಪ್ಲಾಯ್‌ಮೆಂಟ್, ಸೇಜ್ ಪಬ್ಲಿಕೇಶನ್, ನ್ಯೂಡೆಲ್ಲಿ, ಪು. ೧೨೭–೧೪೫

೧೬. ಸಂಜಯ್ ಸಿಂಗ್ ರಾಥೋರ್ (೨೦೦೪).ರೂರಲ್ ಬ್ಯಾಂಕಿಂಗ್ ಇನ್ ಇಂಡಿಯಾ, ನ್ಯೂ ರಾಯಲ್ ಬುಕ್ ಕಂಪನಿ, ಲಕ್ನೊ, ಪು. ೯–೨೧

೧೭. ಗುರುದೇವಸಿಂಗ್ ಮತ್ತು ಎಸ್.ಆರ್. ಅಶೋಕನ್ (೧೯೮೮) ಇನ್ಸಿಟ್ಯೂಷನಲ್ ಪೈನಾನ್ಸ್ ಇನ್‌ರೂರಲ್ ಇಂಡಿಯಾ: ರಾವತ್ ಪಬ್ಲಿಕೇಷನ್, ಜೈಪುರ, ಪು.೩೭–೬೪

೧೮. ಜಯಸೀಲನ್ ನಟರಾಜನ್ (೨೦೧೦). ಮೈಕ್ರೋ ಕ್ರೆಡಿಟ್ ಟೂ ಮೈಕ್ರೋ ಎಂಟರ್ ಪ್ರೈಸಸ್, ಡಾಮಿನೆಂಟ್ ಪಬ್ಲಿಷರ್ಸ್, ನ್ಯೂಡೆಲ್ಲಿ, ಪು.೭೬-೭೮

೧೯. ಡಾ.ತನುಜ್ ಕುಮಾರ್ ಬಿಸಾಯ್ (೨೦೧೦).ರೂರಲ್ ಕ್ರೆಡಿಟ್; ರೀಜಿನಲ್‌ರೂರಲ್ ಬ್ಯಾಂಕ್ ಅಂಡ್ ಮೈಕ್ರೋಫೈನಾನ್ಸ್, ಅಭಿಜಿತ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೩-೧೬೮

೨೦. ರೋಹಿನಿ ಪಾಂಡೆ (೧೯೯೮).ರೂರಲ್ ಕ್ರೆಡಿಟ್, ನ್ಯಾಷನಲ್ ಸ್ಯಾಂಪಲ್ ಸರ್ವೆ, ಪು.೧-೧೩

೨೧. ಸಿ.ರಂಗರಾಜನ್ (೧೯೯೮). ಅಗ್ರೀಕಲ್ಚರ್ ಇನ್ ಚೇಂಜಿಂಗ್ ಎನ್‌ವಿರಾನ್‌ಮೆಂಟ್: ಎಕನಾಮಿಕ್ ಡವಲಪ್‌ಮೆಂಟ್ ಇನ ಇಪಿಐ, ಮಂತ್ಲಿ ಅಪ್‌ಡೇಟ್, ಪುಟ: ೧೪-೧೫

೨೨. ಎಸ್.ಎಸ್.ಎಂ. ದೇಸಾಯಿ (೧೯೭೯).ರೂರಲ್ ಬ್ಯಾಂಕಿಂಗ್ ಇನ್ ಇಂಡಿಯಾ, ಹಿಮಾಲಯ ಪಬ್ಲಿಕೇಷನ್, ಬಾಂಬೆ, ಪು.೧೬೪

೨೩. ಗೌರ್ನಮೆಂಟ್ ಆಫ್ ಇಂಡಿಯಾ (೨೦೦೦-೦೧). ಎಕನಾಮಿಕ್ ಸರ್ವೆ ೨೦೦೦-೦೧, ಪು.೧೬೩-೧೬೪

೨೪. ರಿಸರ್ವ್‌ಬ್ಯಾಂಕ್ ಆಫ್ ಇಂಡಿಯಾ (೨೦೦೯-೧೦). ಆನ್ಯುಯಲ್ ರಿಪೋರ್ಟ್, ಮುಂಬೈ, ಪು.೧೦೭-೧೦೯

೨೫. ಗೌರ್ನಮೆಂಟ್ ಆಫ್ ಇಂಡಿಯಾ (೨೦೦೮-೦೯). ಎಕನಾಮಿಕ್ ಸರ್ವೆ ೨೦೦೮-೦೯, ಪು.೧೯೯

೨೬. ಪ್ರಿಯಾಬಸು (೨೦೦೫). ಡೈರೆಕ್ಷನ್ ಇನ್ ಡೆವಲಪ್‌ಮೆಂಟ್: ಇಂಪ್ರೂವಿಂಗ್ ಆಕ್ಸಸ್ ಟೂ ಫೈನಾನ್ಸ್ ಫಾರ್ ಇಂಡಿಯಾಸ್‌ರೂರಲ್ ಪೂರ್, ವರ್ಲ್ಡ್ ಬ್ಯಾಂಕ್, ಪು.೧೨೫

೨೭. ನ್ಯಾಷನಲ್ ಕೌನ್ಸಿಲ್ ಅಂಡ್ ಅಪ್ಲೈಡ್ ಎಕನಾಮಿಕ್ ರೀಸರ್ಚ್ ಅಂಡ್ ವರ್ಲ್ಡ್ ಬ್ಯಾಂಕ್ (೨೦೦೩).ರೂರಲ್ ಫೈನಾನ್ಸಿಯಲ್ ಸರ್ವೆ, ಎನ್‌ಸಿಎಇಆರ್, ಪು.೩-೪

೨೮. ದೀಪ್ತಿಮಾ ಮೆಸ್ಸೀ, ಅಬ್ದುಲ್‌ರಫೀಕ್ ಅಂಡ್ ಜಾನೆಟ್ ಶೀಲಿ (೨೦೧೦). ಬೆಗ್ಗಿಂಗ್ ಇನ್‌ರೂರುಲ್ ಇಂಡಿಯಾ ಅಂಡ್ ಬಾಂಗ್ಲಾದೇಶ್, ಇಪಿಡಬ್ಲೂ, ಏಪ್ರಿಲ್ ೨೦೧೦, ವಾಲ್ಯೂಮ್ ಎಕ್ಸ್‌ಎಲ್‌ವಿ, ನಂ.೧೪, ಪು.೬೪-೬೫

೨೯. ತಾರಾ ಎಸ್ ನಾಯರ್ (೨೦೧೦). ಕಮರ್ಶಿಯಲ್ ಮೈಕ್ರೋ ಫೈನಾನ್ಸ್ ಅಂಡ್ ಸೋಶಿಯಲ್ ರೆಸ್ಪಾನ್ಸಿಬಿಲಿಟಿ, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ವಾಲ್ಯೂಮ್, ಎಕ್ಸ್‌ಎಲ್‌ವಿ, ನಂ.೩೧, ಪು.೩೨-೩೩

೩೦. ಎಂ.ಎಸ್ ಶ್ರೀರಾಮ್ (೨೦೧೦). ಮೈಕ್ರೋ ಫೈನಾನ್ಸ್; ಎ ಫೇರ್‌ಲೀ ಟೇಲ್ ಟರ್ನ್ಸ್ ಇನ್‌ಟೂ ಎ ನೈಟ್‌ಮೇರ್, ಇಪಿಡಬ್ಲೂ ಅಕ್ಟೋಬರ್ ೨೩ ೨೦೧೦, ವಾಲ್ಯೂಮ್ ೪೩, ಪು.೧೦

೩೧. ಬೀನಾ ಅಗರ್‌ವಾಲ್ (೨೦೦೧). ರೀ ತಿಂಕಿಂಗ್ ಅಗ್ರಿಕಲ್ಚರಲ್ ಪ್ರೋಡಕ್ಷನ್ ಕಲೆಕ್ಟಿವಿಟೀಸ್, ಇಪಿಡಬ್ಲೂ, ಫೆಬ್ರವರಿ ೨೭ ೨೦೦೧, ವಾಲ್ಯೂಮ್ ೯, ಪು.೬೪

೩೨. ಪ್ರೊ. ಮೈತ್ರೇಯಿ ಕೃಷ್ಣರಾಜನ್, ಶ್ರೀ ಎಕೆ. ಅಗವಾಲ್ ಅಂಡ್ ಡಾ. ಕೆ.ಎಸ್.ಪಿ ರಾವ್ (೨೦೦೭). ರಿಪೋರ್ಟ್ ಆಫ್ ಸಬ್ ಗ್ರೂಪ್ ಆನ್ ಜಂಡರ್ ಅಂಡ್ ಅಗ್ರಿಕಲ್ಚರ್, ಪ್ಲಾನಿಂಗ್ ಕಮಿಷನ್, ಗೌರ್‍ನಮೆಂಟ್ ಆಫ್ ಇಂಡಿಯಾ, ಪು.೦೪-೦೫.

೩೩. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ (೧೯೯೯-೨೦೦೦). ಆನ್ಯುಯಲ್ ರಿಪೋರ್ಟ್, ಮುಂಬೈ, ಪು.೨೭-೨೮

೩೪. ಗೌತಮ್ ಪುರಕಾಯಸ್ತ (೨೦೦೮).ರೂರಲ್ ಕ್ರಡಿಟ್ ಇನ್ ಡಿಸಾರೆ, ಐಸೆಕ್, ಬೆಂಗಳೂರು, ಪು.೨೪೯-೨೫೩

೩೫. ಎನ್.ಡಿ. ಜಾರ್ಜ್ ಕನ್ನಡಕ್ಕೆ ಜಿ.ಡಿ. ಪಾಟೀಲ್ (೨೦೦೮). ಭಾರತದಲ್ಲಿ ಕಿರು ಸಾಲ ನೀಡಿಕೆ, ಯೋಜನಾ, ಪು.೯-೧೧

೩೬. ಕರ್ಮಾಕರ್ ಕೆ.ಜಿ (೧೯೯೯).ರೂರಲ್ ಕ್ರೆಡಿಟ್ ಅಂಡ್ ಸೆಲ್ಫ್ ಹೆಲ್ಪ್ ಗ್ರೂಪ್ಸ್, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೧೬೦-೧೬೯

೩೭. ಅವನೀಂದ್ರನಾಥ್ ಠಾಗೂರ್ (೨೦೧೦). ಬ್ಯಾಂಕಿಂಗ್ ಸಾಗಿ ಬಂದ ದಾರಿ, ಯೋಜನಾ, ಪು.೨-೫

೩೮. ಎಂ. ನರಸಿಂಹನ್ (೧೯೯೧). ರಿಪೋರ್ಟ್ ಆನ್ ದಿ ಫೈನಾನ್ಸಿಯಲ್ ಸಿಸ್ಟಮ್ ೧೯೯೧, ಸ್ಟ್ಯಾಂಡರ್ಡ್ ಬುಕ್ ಕಂಪನಿ, ನ್ಯೂಡೆಲ್ಲಿ, ಪು. ೪೨-೪೬

೩೯. ಮೋತಿಲಾಲ್ ಮಹಾಮಲಿಕ್ ಅಂಡ್ ಗಗನ್ ಬಿಹಾರಿ ಸಾಹು (೨೦೧೧). ಇಡೆಂಟಿಫಿಕೇಷನ್ ಆಫ್ ದಿ ಪೂರ್; ಎರರ್ಸ್ ಆಫ್ ಎಕ್ಸ್‌ಕ್ಲೂಷನ್ ಅಂಡ್ ಇನ್‌ಕ್ಲೂಷನ್, ಎಕಾನಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಮಾರ್ಚ್ ೪, ಎಕ್ಸ್‌ಎಲ್‌ವಿಐ ನಂ.೯, ಪು.೭೧-೭೭

೪೦. ಡಾ.ಚಂದ್ರಶೇಖರ್ ಟಿ.ಆರ್ (೨೦೦೪). ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರಿಕರಣ; ರಾಜಕೀಯ ವೈಪಲ್ಯದ ಒಂದು ಸಂಕತನ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೪೫-೬೮

೪೧. ನಾಯ್ಡು ಎಲ್.ಕೆ (೧೯೯೫). ಕಮರ್ಶಿಯಲ್ ಬ್ಯಾಂಕಿಂಗ್ ಆಫ್ಟರ್ ನ್ಯಾಷನಲೈಜೇಷನ್ ಕಾಟ್ ಇನ್ ದಿ ಕಾಂಟ್ರಡಿಕ್ಷನ್ ಆಫ್ ಸೋಶಿಯಲ್ ಬ್ಯಾಂಕಿಂಗ್ ಇನ್ ಬಿ.ಎಲ್ ಮಾಥುರ್ ಅಂಡ್ ಭಾಗೀರಥ್ ಸಿಂಗ್ (ಸಂ) ಎಕ್ಸ್‌ಪೀರಿಉನ್ಸ್ ಆಫ್ ಬ್ಯಾಂಕಿಂಗ್ ಇನ್‌ರೂರಲ್ ಡವಲಪ್‌ಮೆಂಟ್, ಆರ್.ಬಿ.ಎಸ್.ಏ ಪಬ್ಲಿಷರ್ಸ್, ಜೈಪುರ, ಪು.೧–೧೭

೪೨. ಸ್ವಾಮಿ ವಿಘ್ನೇಶ್ವರ್ ಡಿ.ಮ್ (೨೦೦೫).ರೂರಲ್ ಬ್ಯಾಂಕಿಂಗ್ ಚಾಲೆಂಜಸ್ ಅಂಡ್ ಅಪ್ರೋಚಸ್, ಸೆಂಟರ್ ಫಾರ್ ಹ್ಯೂಮನ್ ಡವಲಪ್‌ಮೆಂಟ್, ಸ್ಟಡೀಸ್, ಮೈಸೂರ್, ಪು.೧೩೬–೧೬೦

೪೩. ದೀರಜ್ ತಿವಾರಿ (೨೦೧೧). ಔಟ್‌ಲೇ ಫಾರ್ ಫಾರ್ಮರ್ಸ್ ರಿಲೀಫ್ ಸ್ಕೀಮ್ ಅಪ್ ಬೈ ೭೦%, ದಿ ಎಕನಾಮಿಕ್ ಟೈಮ್ಸ್, ೫ ಮಾರ್ಚ್ ೨೦೧೧, ಪು.೯

೪೪. ಕರುನಯ್ಯತಲ್ ಎ. (೨೦೦೯). ಲಿಂಕೇಜ್ ಬಿಟ್‌ವೀನ್ ಸೆಲ್ಫ್ ಹೆಲ್ಪ ಗ್ರೂಪ್ಸ್ ಇನ ಇಂಡಿಯಾ, ನ್ಯೂ ಸೆಂಚುರಿ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೧೫೦–೧೭೩

೪೫. ಜೀನ್ ಡ್ರೆಜ್ (೧೯೯೭). ಕ್ರೆಡಿಟ್ ಇನ್‌ರೂರಲ್ ಇನ್ ಇಂಡಿಯಾ; ಎ ಕೇಸ್ ಸ್ಟಡಿ, ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ಅಂಡ್ ಪೊಲಿಟಿಕಲ್ ಸೈನ್ಸ್, ಹಾಗ್ಟನ್ ಸ್ಟ್ರೀಟ್, ಪು.೧–೧೭

೪೬. ದಾಂಡೇಕರ್ ವಿ,ಎಂ (೧೯೯೩). ಲಿಮಿಟ್ಸ್ ಆಫ್ ಕ್ರೆಡಿಟ್, ನಾಟ್ ಕ್ರೆಡಿಟ್ ಲಿಮಿಟ್ಸ್, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ವಾಲ್ಯೂಮ್ ೨೮, ನಂ.೩೯, ಸೆಪ್ಟಂಬರ್ ೨೫, ಪು. ಎಲ೬–ಎ೯೫

೪೭. ಥಾಮಸ್ ಟಿಮ್‌ಬರ್ಗ್ ಅಂಡ್ ಚಂದ್ರಶೇಕರ್ ವಿ. ಅಯ್ಯರ್ (೧೯೮೦). ಇನ್‌ಫಾರ್ಮಲ್ ಕ್ರೆಡಿಟ್ ಮಾರ್ಕೆಟ್ಸ್ ಇನ್ ಇಂಡಿಯಾ, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ವಾಲ್ಯೂಮ್ ೧೫, ನಂ.೫/೭, ಫೆಬ್ರವರಿ ೧೯೮೦, ಪು. ೨೭೯–೨೮೦

೪೮. ಮಂಡಲ್ ಜಿ.ಸಿ (೨೦೦೯). ಸೋಶಿಯಲ್ ಇಂಪ್ಯಾಕ್ಟ್ ಆಫ್ ಬ್ಯಾಂಕಿಂಗ್, ಟೆಕ್ನಾಲಜಿ ಅಂಡ್ ಡವಲಪ್‌ಮೆಂಡ್ ಆನ್ ವಿಲೇಜ್ ಇಂಡಿಯಾ,ರಜತ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೪೨೭–೪೩೩

೪೯. ಇಪಿಡ್ಲ್ಯೂ ರೀಸರ್ಚ್ ಫೌಂಡೇಶನ್ (೧೯೭೮). ಅಗ್ರಿಕಲ್ಚರಲ್ ಲೇಬರ್, ಗೆಟಿಂಗ್ ಪೂರ್, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಅಕ್ಟೋಬರ್ ೧೯೭೮, ಪು. ೧೭೨೬–೧೭೨೭

೫೦. ಅಂಜಲಿ ಕುಮಾರ್, ದೀರಜ್ ಕೆ ಸಿಂಗ್ ಪ್ರಭಾತ್ ಕುಮಾರ್ (೨೦೦೭). ಟ್ರೆಂಡ್ಸ್ ಇನ್‌ರೂರಲ್ ಫೈನಾನ್ಸ್; ಪರ್‌ಫಾರ್ಮೆನ್ಸ್ ಆಫ್‌ರೂರುಲ್ ಕ್ರೆಡಿಟ್ ಅಂಡ್ ಫ್ಯಾಕ್ಟರ್ಸ್ ಅಫೆಕ್ಟಿಂಗ್ ದಿ ಚಾಯ್ಸ್ ಆಫ್ ಕ್ರೆಡಿಟ್ ಸೋರ್ಸ್, ಇಂಡಿಯನ್ ಜರ್ನಲ್ ಆಫ್ ಅಗ್ರಿಕಲ್ಚರಲ್ ಎಕನಾಮಿಕ್ಸ್, ವ್ಯಾಲ್ಯೂಮ್.೬೨.ನಂ.೩, ಜುಲೈ–ಸೆಪ್ಟಂಬರ್ ೨೦೦೭, ಪು. ೨೯೭–೩೧೨

೫೧. ರಾಜಶೇಖರ್ ಡಿ. (೧೯೯೮). ಪ್ರೊ. ಪಾರ್ಥಸಾರಥಿಸ್ ರೈಟಿಂಗ್ಸ್ ಆನ್ ಇಂಡಿಯನ್‌ರೂರಲ್ ಎಕನಾಮಿ ಇನ್ ಟ್ರಾನ್ಸಿಷನ್ ಪ್ರಿಂಟ್ ವೆಲ್ ಪಬ್ಲಿಷರ್ಸ್, ಜೈಪುರ್, ಪು.೨–೧೦೭

೫೨. ನಾಯಕ್ ಪಿ.ಕೆ., ಸುಧಾನ್ ಕುಮಾರ್ ಚಟ್ಟೋಪಾದ್ಯಯ ಮತ್ತು ಅರುನ್ ವಿಷ್ನು ಕುಮಾರ್ (೨೦೧೦). ಇನ್‌ಕ್ಲೂಸಿವ್ ಗ್ರೋತ್ ಅಂಡ್ ಇಟ್ಸ್ ರೀಜಿನಲ್ ಡೈಮೆನ್‌ಷನ್, ಆರ್‌ಬಿಐ ಅಕೇಷನಲ್ ಪೇಪರ್, ವಾಲೂಮ್. ೩೧, ನಂ.೩, ಮುಂಬೈ, ಪು.೯೧–೯೫

೫೩. ಗೋಪಾಲ್ ಅಯ್ಯರ್ ಅಂಡ್ ಸರೋಜ ಅರೋರ (೨೦೧೦). ಇನ್‌ಡೆಟ್‌ನೆಸ್ ಅಂಡ್ ಫಾರ್ಮರ್ಸ್ ಸೂಸೈಡ್ಸ್ ಇನ್ ಆರ್.ಎಸ್ ದೇಶಪಾಂಡೆ ಅಂಡ್ ಸರೋಜ ಅರೋರ (ಸಂ) ಅಗ್ರೇರಿಯನ್ ಕ್ರೈಸಿಸ್ ಅಂಡ್ ಫಾರ್ಮರ್ಸ್ ಸೂಸೈಡ್ಸ್–ಲ್ಯಾಂಡ್ ರಿಫಾರ್ಮ್ಸ್–ವ್ಯಾಲ್ಯೂಮ್ ೧೨, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೧–೧೩

೫೪. ಬಿ.ಎಸ್ ಹನ್ಸ್‌ರಾ ಮತ್ತು ಎ.ಎನ್ ಶುಕ್ಲಾ (೧೯೯೧). ಸೋಶಿಯಲ್, ಇಕನಾಮಿಕ್ ಅಂಡ್ ಪೊಲಿಟಿಕಲ್ ಇಂಪ್ಲಿಕೇಷನ್ ಆಫ್ ಗ್ರೀನ್ ರೆವಲ್ಯೂಶನ್ ಇನ ಇಂಡಿಯಾ, ಕ್ಲಾಸಿಕ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೧–೧೨

೫೫. ದಂತವಾಲ ಎಂ.ಎಲ್ (೧೯೯೬). ಡೈಲಮಾಸ್ ಆಫ್ ಗ್ರೋತ್– ದಿ ಇಂಡಿಯನ್ ಎಕ್ಸ್‌ಪೀರಿಯನ್ಸ್, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ/ಲಂಡನ್, ಪು.೨೯೫–೩೧೧

೫೬. ಇಪಿಡ್ಬ್ಲ್ಯು ರೀಸರ್ಚ್ ಫೌಂಡೇಶನ್ (೨೦೦೭).ರೂರಲ್ ಕ್ರೆಡಿಟ್ ಸ್ಟ್ರಕ್ಚರ್ ನೀಡ್ಸ್ ಜೆನೈನ್ ರಿವಿಟಲೈಶೇನ್, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ೧೯ ಮೇ ೨೦೦೯, ಪು. ೫೩–೫೫

೫೭. ದಿಲಿಪ್ ಎಸ್ ಠಾಕೂರ್ ಅಂಡ್ ನೀರಜ್ ಶರ್ಮ (೨೦೦೮). ಡಿಸ್ಟ್ರಿಬ್ಯೂಷನ್ ಆಫ್ ಹೌಸ್‌ಹೋಲ್ಡ್ಸ್ ಅಂಡ್ ದಿ ರಿಸಲ್ಟಾಂಟ್ ಪ್ಯಾಟರ್ನ್ಸ್ ಆಫ್ ಇನ್ಕಮ್ ಅಂಡ್ ಎಮ್‌ಪ್ಲಾಯ್‌ಮೆಂಟ್ ಅಮಾಂಗ್ ದಿ ವೀಕರ್ಸ್ ಸೆಕ್ಷನ್ ಇನ ದಿರೂರಲ್ ಏರಿಯಾ ಆಫ್ ಹರ್ಯಾಣ, ಸೋಶಿಯಲ್ ಛೇಂಜ್, ಸೆಪ್ಟಂಬರ್ ೨೦೦೮, ವಾಲ್ಯೂಮ್ ೩೮, ನಂ.೩ ಪು.೨೨೦–೨೨೩

೫೮. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ (೧೯೯೭). ಎ ರಿವ್ಯೂವ್ ಆಫ್ ಅಗ್ರಿಕಲ್ಚರಲ್ ಕ್ರೆಡಿಟ್ ಸಿಸ್ಟಮ್ ಇನ್ ಇಂಡಿಯಾ; ರಿಪೋರ್ಟ್ ಆಫ್ ಅಗ್ರಿಕಲ್ಚರಲ್ ಕ್ರೆಡಿಟ್ ಕಮಿಟಿ ಹೆಡೆಡ್ ಬೈ ಪ್ರೊ. ಎ.ಮ್.ಕುಸ್ರೋ, ಆರ್‌ಬಿಐ, ಬಾಂಬೆ, ಪು.೯–೩೬

೫೯. ಎಸ್.ಎನ್ ತ್ರಿಪತಿ (೨೦೦೮). ಅಗ್ರಿಕಲ್ಚರಲ್ ಲೇಬರ್, ಪಾಲಿಸಿ ಆಫ್ ಡಬ್ಲ್ಯುಟಿಓ ಅಂಡ್ ಫಾರ್ಮರ್ಸ್ ಸೂಸೈಡ್ ಇನ್ ಇಂಡಿಯನ್ ಸ್ಟೇಟ್ಸ್ ಇನ್ ಕೆ.ಕೆ ಬಾಗ್ಚಿ (ಸಂ) ಅಗ್ರೇರಿಯನ್ ಕ್ರೈಸಿಸ್ ಅಂಡ್ ಫಾರ್ಮರ್ಸ್ ಸೂಸೈಡ್ಸ್ ಅಂಡ್ ಲೈವ್‌ಲಿಹುಡ್ ಸೆಕ್ಯುರಿಟಿ ಆಫ್‌ರೂರಲ್

ಲೇಬರ್ ಇನ್ ಇಂಡಿಯಾ, ವ್ಯಾಲೂಮ್-೧, ಅಭಿಜಿತ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೩-೧೯

೬೦. ಎಸ್. ಗುಣಶೇಖರನ್ (೧೯೮೫). ಸ್ಮಾಲ್ ಫಾರ್ಮರ್ಸ್ ಅಂಡ್ ಇನ್‌ಸ್ಟಿಟ್ಯೂಶನಲ್ ಕ್ರೆಡಿಟ್, ಆಶಿಶ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೬೯-೮೫

೬೧. ಶಾಕುಂತಲಾ ದೇವಿ (೧೯೯೬).ರೂರಲ್ ಕ್ರೆಡಟ್ ಅಂಡ್ ಅಗ್ರಿಕಲ್ಚರಲ್ ಡವಲಪ್‌ಮೆಂಟ್, ಸರೂಪ್ ಅಂಡ್ ಸನ್ಸ್ ಪಬ್ಲಿಷರ್ಸ್, ನ್ಯೂಡೆಲ್ಲಿ, ಪು.೧-೧೧

೬೨. ಆರ್.ಬಿ.ಐ (೨೦೧೨). ಪಾಲಿಸಿ; ಪ್ರಿಯಾರಿಟಿ ಸೆಕ್ಟರ್ ಗೈಡ್‌ಲೈನ್ಸ್ ಅಮೆಂಡಡ್, ಮಾನಿಟರಿ ಅಂಡ್ ಕ್ರೆಡಿಟ್ ಇನಫರ್‌ಮೇಶನ್ ರಿವ್ಯೂವ್, ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ, ಅಕ್ಟೋಬರ್ ೨೦೧೨, ವ್ಯಾಲೂಮ್ ಐಎಕ್ಸ್, ಇಶ್ಯೂ ೪, ಪು.೧-೫

೬೩. ಮ್ಯಾನ್‌ಫ್ರೆಡ್ ಜೆಲ್ಲರ್, ಗೆರ್ಟ್ರಡ್ ಸ್ನೈಡರ್, ಯಾಕಿಮ್ ವೋನ್ ಬ್ರೌನ್ ಅಂಡ್ ಫ್ರಾಜ್ ಹೈಥಸ್ (೧೯೯೭). ಫುಡ್ ಪಾಲಿಸಿ ರಿವ್ಯೂವ್-ರೂರಲ್ ಫೈನಾನ್ಸ್ ಫಾರ್ ಫುಡ್ ಸೆಕ್ಯುರಿಟಿ ಫಾರ್ ದಿ ಪೂರ್- ಇಮ್‌ಪ್ಲಿಕೇಶನ್ ಫಾರ್ ರೀಸರ್ಚ್ ಅಂಡ್ ಪಾಲಿಸಿ, ಇಂಡಿಯನ್ ಇನ್ಸ್ಟಿಟ್ಯೂಟ್ ಫಾರ್ ಸೋಶಿಯೋ ಎಕನಾಮಿಕ್ ಚೇಂಜ್ (ಐಸೆಕ್), ಬೆಂಗಳೂರು, ಪು.೬-೧೧

೬೪. ಜೇಮ್ಸ್ ಮೇನರ್ (೨೦೦೭). ಚೇಂಜ್ ಇನ್ ಕರ್ನಾಟಕ ಓವರ್ ದಿ ಲಾಸ್ಟ್ ಜನರೇಷನ್- ವಿಲೇಜಸ್ ಅಂಡ್ ದಿ ವೈಡರ್ ಕಂಟೆಕ್ಸ್ಟ್, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಫೆಬ್ರವರಿ ೨೪, ೨೦೦೭, ಪು.೬೫೩-೬೬೦

೬೫. ಡಾ. ಎಂ. ಚಂದ್ರಪೂಜಾರಿ (೨೦೦೮). ರಾಜಕೀಯ ಬಡತನ, ಹೊಸಪೇಟೆ, ಸಿದ್ಧಾರ್ಥ ಪ್ರಕಾಶನ, ಪು.೧೩೫-೧೩೮

೬೬. ಡಾ. ಎಂ. ಚಂದ್ರ ಪೂಜಾರಿ (೨೦೧೦). ಕರ್ನಾಟಕ ಪಂಚವಾರ್ಷಿಕ ಯೋಜನೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ಪು.೧-೧೯

೬೭. ಡಾ. ಎಂ. ಚಂದ್ರ ಪೂಜಾರಿ (೨೦೧೦). ಯಾಕೀಗ ಭೂಮಿ ಪ್ರಶ್ನೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ಪು.೩-೧೧೬

೬೮. ಡಾ. ಚಂದ್ರಶೇಖರ್ ಟಿ.ಆರ್. (೨೦೦೪). ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ: ರಾಜಕೀಯ ವೈಫಲ್ಯದ ಒಂದು ಸಂಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ. ಪು.೪೫-೬೮

೬೯. ಡಾ. ಚಂದ್ರಶೇಖರ್ ಟಿ.ಆರ್ (೨೦೦೩). ಕರ್ನಾಟಕ: ಅಭಿವೃದ್ಧಿಯ ಸಾಮಾಜಿಕ ನೆಲೆಗಳು, ಬೆಂಗಳೂರು, ಸಿವಿಜಿ ಪಬ್ಲಿಕೇಶನ್, ಪು. ೬೬-೭೧

೭೦. ಎಡಿಟೆಡ್ ಬೈ ರಾವ್ ವಿ.ಕೆ.ಆರ್.ವಿ (೧೯೭೭). ಪ್ಲಾನಿಂಗ್ ಇನ್ ಪರ್ಸ್‌ಪೆಕ್ಟೀವ್, ಪಾಲಿಸಿ ಚಾಯ್ಸ್‌ಸ್ ಇನ್ ಪ್ಲಾನಿಂಗ್ ಫಾರ್ ಕರ್ನಾಟಕ ೧೯೭೩-೭೪ ಟು ೧೯೮೮-೯೦, ಇಂಡಿಯನ್ ಇಸ್ಟಿಟ್ಯೂಟ್ ಫಾರ್ ಸೋಶಿಯೋ ಎಕನಾಮಿಕ್ ಛೇಂಜ್ (ಐಸೆಕ್), ಬೆಂಗಳೂರು, ಪು.೩೩೧-೩೩೯

೭೧. ಎನ್‌ಎಸ್‌ಎಸ್ ನಾರಾಯಣ ಮತ್ತು ಉಷಾ ವಡ್ರೆವು (೧೯೮೩).ಇಂಡಿಯನ್ ಸ್ಟಾಟಿಸ್ಟಿಕಲ್ ಇನ್‌ಸ್ಟಿಟ್ಯೂಟ್, ಬೆಂಗಳೂರು, ಪು.೧-೮

೭೨. ಡಾ. ಚಂದ್ರಶೇಖರ್ ಟಿ.ಆರ್. (೨೦೦೮). ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಸ್ಥಿತಿಗತಿ, ಹಂಪಿ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಪು.೨೫-೨೬

೭೩. ವೀರಶೇಖರಪ್ಪ (೧೯೯೭). ಇನ್‌ಸ್ಟಿಟ್ಯೂಷನಲ್ ಫೈನಾನ್ಸ್ ಫಾರ್‌ರೂರಲ್ ಡವಲಪ್‌ಮೆಂಟ್, ರಾವತ್ ಪಬ್ಲಿಕೇಷನ್, ಜೈಪುರ್ ಅಂಡ್ ನ್ಯೂಡೆಲ್ಲಿ, ಪು.೮೩-೧೩೯

೭೪. ರಾಜನ್ ಪಾಂಡೆ (೨೦೦೯). ಆನ್ ಉಮನ್ ಸರ್‌ವೈವಿಂಗ್ ಫಾರ್ಮರ್ಸ್ ಸೂಸೈಡ್ಸ್ ಇನ್ ಪಂಜಾಬ್, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ೯ ಮೇ, ೨೦೦೯, ವ್ಯಾಲೂಮ್, ಎಕ್ಸ್‌ಎಲ್‌ಐವಿ, ನಂ.೧೯, ಪು.೫೩-೫೫

೭೫. ಹೆಚ್.ಎಸ್. ಶೈಲೇಂದ್ರ (೧೯೯೨). ಇಂಪ್ಯಾಕ್ಟ್ ಆಫ್ ಇನ್ಸ್‌ಟೂಷನಲ್ ಕ್ರೆಡಿಟ್ ಆನ್‌ರೂರಲ್ ಪೂರ್ ವಿತ್ ಸ್ಪೆಷಲ್ ರೆಪರೆನ್ಸ್ ಟೂ ದಿ ಪರ್‌ಫಾರ್‌ಮೆನ್ಸ್ ಆಫ್ ಎ ರೀಜಿನಲ್‌ರೂರಲ್ ಬ್ಯಾಂಕ್ ಇನ್ ಕರ್ನಾಟಕ, ಇಂಡಿಯನ್ ಇಸ್ಟಿಟ್ಯೂಟ್ ಫಾರ್ ಸೋಶಿಯೋ ಎಕನಾಮಿಕ್ ಛೇಂಜ್ (ಐಸೆಕ್), ಬೆಂಗಳೂರು, ಪು.೧೪೦-೧೪೪

೭೬. ಜಯದೇವಪ್ಪ ಮತ್ತು ಪ್ರೊ. ಎ.ಆರ್. ವಿಶ್ವನಾಥ್ (ಡಿಸೆಂಬರ್ ೨೦೦೮). ಯೋಜನಾ: ಸಣ್ಣ ಹಣಕಾಸು ಕ್ಷೇತ್ರದಲ್ಲಿನ ಪ್ರಾದೇಶಿಕ ಅಸಮತೋಲನ, ಪು.೫೦-೫೨

೭೭. ಕೆ.ಎರಸೂರ್, ಚನ್ನಬಸವನಗೌಡ ಮತ್ತು ಬೊಕ್ಕಲ್ ನಾಗೇಂದ್ರಪ್ಪ, ಆನ್ ಎಕಾನಮಿಕ್ ಅನಾಲಿಸಿಸ್ ಆಫ್ ಅಗ್ರಿಕಲ್ಚರಲ್ ಲೇಬರ್ ಇನ್ ಹೈದರಾಬಾದ್ ಕರ್ನಾಟಕ ಇಲ್ಲಿ ಕೆ.ಕೆ ಬಾಗ್ಚಿ (ಸಂ) ಅಗ್ರೇರಿಯನ್ ಕ್ರೈಸಿಸ್; ಫಾರ್ಮರ್ಸ್ ಸುಸೈಡ್ಸ್ ಅಂಡ್ ಲೈವ್‌ಲಿಹುಡ್ ಸೆಕ್ಯೂರಿಟಿ ಆಫ್‌ರೂರಲ್ ಲೇಬರ್ ಇನ್ ಇಂಡಿಯಾ, ಅಭಿಜಿತ್ ಪಬ್ಲಿಕೇಷನ್, ಡೆಲ್ಲಿ, ೨೦೧೧, ಪು.೨೨೩-೨೨೪, ನೋಡಿ.

೭೮. ಕರ್ನಾಟಕ ಸರ್ಕಾರ (೨೦೦೨). ಪ್ರಾದೇಶಿಕ ಅಸಮತೋಲನ ನಿವಾರಣಾ ಉನ್ನತಾಧಿಕಾರಿ ಸಮಿತಿ, ಅಂತಿಮ ವರದಿ ೨೦೦೨, ಕರ್ನಾಟಕ ಸರ್ಕಾರ, ಯೋಜನಾ ಆಯೋಗ ಇಲಾಖೆ, ಬೆಂಗಳೂರು, ಪು.೩೦೮

೭೯. ಕರ್ನಾಟಕ ಸರ್ಕಾರ (೨೦೦೬). ಕರ್ನಾಟಕ ಮಾನವ ಅಭಿವೃದ್ಧಿ ವರದಿ-೨೦೦೫, ಕರ್ನಾಟಕ ಸರ್ಕಾರ, ಯೋಜನಾ ಆಯೋಗ ಇಲಾಖೆ, ಬೆಂಗಳೂರು, ಪು.೧೮-೮೫,

೮೦. ಎನ್.ರಂಗಸ್ವಾಮಿ ಮತ್ತು ಪಿ.ಕೆ. ತ್ರಿಪಾಟಿ (೨೦೧೩). ಸ್ಟ್ರಕ್ಚರಲ್ ಛೇಂಜ್ ಇನ್ ಕರ್ನಾಟಕಾಸ್ ಎಕನಾಮಿ, ವರ್ಕಿಂಗ್ ಪೇಪರ್ ಸೀರಿಸ್ ನಂ ೨, ಯೂಜಿಸಿ ಸೆಂಟರ್ ಫಾರ್ ದಿ ಸ್ಟಡಿ ಆಫ್, ಸೋಸಿಯಲ್ ಎಕ್ಸ್‌ಕ್ಲೂಷನ್ ಅಂಡ್ ಇನ್‌ಕ್ಲೂಸಿವ್ ಪಾಲಿಸಿ, ಬೆಂಗಳೂರು ಯೂನಿವರ್‌ಸಿಟಿ, ಬೆಂಗಳೂರು, ಪು.೧೬-೨೪

೮೧. ಮೀನಾಕ್ಷಿ ರಾಜೀವ್ ಅಂಡ್ ಬಿ.ಬಿ ವಾಣಿ (೨೦೧೨). ಫಾರ್ಮ್ ಸೆಕ್ಟರ್ ಇನ್ ಕರ್ನಾಟಕ; ಫಾರ್ಮರ್ಸ್ ಇನ್‌ಡೆಟ್‌ನೆಸ್ ಅಂಡ್ ರಿಸ್ಕ್ ಮ್ಯಾನೇಜ್‌ಮೆಂಟ್; ಅನ್ ಅಸೆಸ್‌ಮೆಂಟ್ ಆಫ್ ದಿ ಚಾಲೆಂಜಸ್ ಟು ದಿ ಸ್ಟೇಟ್, ಸೆಪ್ಟಂಬರ್ ೨೦೧೨, ಇಂಡಿಯನ್ ಇಸ್ಟಿಟ್ಯೂಟ್ ಫಾರ್ ಸೋಶಿಯೋ ಎಕನಾಮಿಕ್ ಛೇಂಜ್ (ಐಸೆಕ್), ಬೆಂಗಳೂರು, ಪು.೧-೨೦

೮೨. ರೈತರ ಆತ್ಮಹತ್ಯೆಗೆ ಬೇರೆ ಬೇರೆ ಕಾರಣ ಮತ್ತು ಪರಿಣಾಮಗಳನ್ನು ಮುಜಾಫರ್ ಅಸಾಧಿ ವಿಶ್ಲೇಷಿಸಿದ್ದಾರೆ. ಭಾರತ ಮತ್ತು ಕರ್ನಾಟಕದ ರೈತರ ಆತ್ಮಹತ್ಯೆಯ ಘಟನೆಗಳನ್ನು ಉಲ್ಲೇಖಿಸಿದ್ದಾರೆ. ಕರ್ನಾಟಕದಲ್ಲಿ ಐಡೆಂಟಿಟಿ ರಾಜಕೀಯ, ರೈತ ಹೋರಾಟ ಹಾಗೂ ಸಾಮಾಜಿಕ ಚಳುವಳಿ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೦೯, ಪು.೧೨೨-೧೨೯, ನೋಡಬಹುದು.

೮೩. ಎ.ಆರ್. ವಾಸವಿ (೧೯೯೯). ಬೀದರ್ ಡಿಸ್ಟ್ರೆಸ್ ಅಂಡ್ ಫಾರ್ಮರ್ಸ್ ಸೂಸೈಡ್ಸ್; ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಅಕ್ಟೋಬರ್, ೧೯೯೯, ಪು.೧೦-೧೨

೮೪. ಮೀನಾಕ್ಷಿ ರಾಜೀವ್, ಬಿ.ಪಿ. ವಾಣಿ ಮತ್ತು ಭಟ್ಟಾಚಾರ್ಜಿ (೨೦೧೧). ಕ್ರೆಡಿಬಿಲಿಟಿ ಆಫ್ ಈಕ್ವಲ್ ಆಕ್ಸೆಸ್ ಟು ಕ್ರೆಡಿಟ್; ಡಸ್ಸ್ ಜೆಂಡರ್ ಮ್ಯಾಟರ್?, ವಾಲ್ಯೂಮ್, ಎಕ್ಸ್‌ಎಲ್‌ವಿಐ, ನಂ ೩೩, ಆಗಸ್ಟ್ ೧೩ ೨೦೧೧, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಪು. ೭೬-೭೯

೮೫. ರಾವ್ ವಿ. (೨೦೦೨). ಪ್ರಾಬ್ಲಮ್ಸ್ ಅಂಡ್ ಪ್ರಾಸ್‌ಪೆಕ್ಟ್ಸ್ ಆಫ್ ಇನ್‌ಸ್ಟಿಟ್ಯೂಷನಲ್ ಫೈನಾನ್ಸ್, ಇಂಡಿಯನ್ ಇಸ್ಟಿಟ್ಯೂಟ್ ಫಾರ್ ಸೋಶಿಯೋ ಎಕನಾಮಿಕ್ ಛೇಂಜ್ (ಐಸೆಕ್), ಬೆಂಗಳೂರು, ಪು. ೭೬-೧೦೦

೮೬. ಜಿ. ತಿಮ್ಮಯ್ಯ (೧೯೯೭). ನ್ಯೂ ಪರ್ಸ್‌ಪೆಕ್ಟಿವ್ ಆನ್ ಲ್ಯಾಂಡ್ ರಿಫಾರ್ಮ್ಸ್ ಇನ್ ಅಬ್ದುಲ್ ಅಜೀಜ್ ಅಂಡ್ ಸುಧೀರ್ ಕೃಷ್ಣ (ಸಂ) ಲ್ಯಾಂಡ್ ರಿಫಾರ್ಮ್ಸ್ ಇನ್ ಇಂಡಿಯಾ ವಾಲ್ಯೂಮ್-೪, ಕರ್ನಾಟಕ ಪ್ರಾಮಿಸಸ್ ಕೆಪ್ಟ್ ಅಂಡ್ ಮಿಸ್ಡ್, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೬೨-೭೯

೮೭. ಚಂದ್ರಶೇಖರ್ ಬಿ. ದಾಮ್ಲೆ (೧೯೯೭). ಅಗ್ರೇರಿಯನ್ ಇನ್‌ಈಕ್ವ್ಯಾಲಿಟಿ; ಪೋಸ್ಟ್ ಲ್ಯಾಂಡ್ ರಿಫಾರ್ಮ್ಸ್ ಎಕ್ಸ್‌ಪೀರಿಯನ್ಸ್ ಇನ್ ದಕ್ಷಿಣ ಕನ್ನಡ ಡಿಸ್ಟ್ರಿಕ್ಟ್ ಇನ್ ಅಬ್ದುಲ್ ಅಜೀಜ್ ಅಂಡ್ ಸುಧೀರ್ ಕೃಷ್ಣ (ಸಂ) ಲ್ಯಾಂಡ್ ರಿಫಾರ್ಮ್ಸ್ ಇನ್ ಇಂಡಿಯಾ ವಾಲ್ಯೂಮ್-೪, ಕರ್ನಾಟಕ ಪ್ರಾಮಿಸಸ್ ಕೆಪ್ಟ್ ಅಂಡ್ ಮಿಸ್ಡ್, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೧೬೧-೧೭೫

## ಅಧ್ಯಾಯ ಎರಡು

# ಅಧ್ಯಯನದ ಕ್ಷೇತ್ರ ಪರಿಚಯ






ರಾಯಚೂರು ಜಿಲ್ಲೆ ಕರ್ನಾಟಕದ ರಾಜ್ಯದ ಅತೀ ಹಿಂದುಳಿದ ಜಿಲ್ಲೆಗಳಲ್ಲಿ ಒಂದು. ಇದು ಕರ್ನಾಟಕದ ಉತ್ತರ ಭಾಗದಲ್ಲಿದೆ. ಇದೊಂದು ಬರಗಾಲ ಪೀಡಿತ ಪ್ರದೇಶ. ಮಾನವ ಅಭಿವೃದ್ಧಿಯಲ್ಲಿ ಕೆಳಸ್ಥಾನದಲ್ಲಿದೆ. ಕರ್ನಾಟಕ ರಾಜ್ಯದಲ್ಲಿ ರಾಯಚೂರು ೨೦೦೫ ಕರ್ನಾಟಕ ರಾಜ್ಯ ಮಾನವ ಅಭಿವೃದ್ಧಿ ವರದಿಯ ಅನುಸೂಚಿ ಪ್ರಕಾರ ಆರೋಗ್ಯ ಸೂಚ್ಯಾಂಕದಲ್ಲಿ ೧೬ನೇ ಸ್ಥಾನ, ಶಿಕ್ಷಣದಲ್ಲಿ ೨೭ನೇ ಸ್ಥಾನ, ಆದಾಯದಲ್ಲಿ ೨೭ನೇ ಸ್ಥಾನ ಒಟ್ಟಾರೆ ಮಾನವ ಅಭಿವೃದ್ಧಿ ಸೂಚ್ಯಾಂಕ ಪ್ರಕಾರ ೧೮ನೇ ಸ್ಥಾನದಲ್ಲಿದೆ.[1]

ಕರ್ನಾಟಕದಲ್ಲಿನ ಮಾನವ ಅಭಿವೃದ್ಧಿ ಅನುಸೂಚಿಯ ಅಸುಮತೋಲನವನ್ನು ಕೆಳಗಿನ ಕೋಷ್ಟಕದಲ್ಲಿ ನೀಡಲಾಗಿದೆ. ಈ ವಿಶ್ಲೇಷಣೆಯನ್ನು ೨೦೦೫ರ ಯುಎನ್‌ಡಿಪಿ ವರದಿ ಪ್ರಕಾರ ನೀಡಲಾಗಿದೆ.

| ಕರ್ನಾಟಕದ ಜಿಲ್ಲೆಗಳು, ಭಾರತದ ರಾಜ್ಯಗಳು | ಮಾನವ ಅಭಿವೃದ್ಧಿ ಸೂಚ್ಯಾಂಕ ೧೯೯೧ | ಶ್ರೇಣಿ | ಮಾನವ ಅಭಿವೃದ್ಧಿ ಸೂಚ್ಯಾಂಕ ೨೦೦೧ | ಶ್ರೇಣಿ |
|---|---|---|---|---|
| ಬೆಂಗಳೂರು ನಗರ | ೦.೬೨೩ | ೪ನೇ | ೦.೭೫೩ | ೧ನೇ |
| ರಾಯಚೂರು | ೦.೪೪೩ | ೨೭ನೇ | ೦.೫೪೭ | ೨೭ನೇ |
| ಕರ್ನಾಟಕ | ೦.೫೪೧ | – | ೦.೬೫೦ | – |
| ಕೇರಳ | – | – | ೦.೭೪೬ | – |
| ಉತ್ತರ ಪ್ರದೇಶ | – | – | ೦.೫೩೫ | – |

೨. ಮೂಲ: ಜೇನ್ಸ್ ಲರ್ಸಿ, ಇಸಾಬೆಲ್ ಗುರಿನ್ ಮತ್ತು ರವಿ ಶ್ರೀವಾಸ್ತವ್ (೨೦೧೨).

ರಾಯಚೂರು ಜಿಲ್ಲೆಯ ವಲಸೆ ಜನರ ಬದುಕು ದುಸ್ಥಿತಿಯಿಂದ ಕೂಡಿದೆ. ಈ ಜಿಲ್ಲೆಯು ೧೯೯೧ ಹಾಗೂ ೨೦೦೧ರ ಮಾನವ ಅಭಿವೃದ್ಧಿ ಸೂಚ್ಯಾಂಕದಲ್ಲಿ ಅತ್ಯಂತ ಕೆಳಸಾಲಿನಲ್ಲಿದೆ. ವಲಸೆ ಪ್ರಮಾಣ ಹೆಚ್ಚಾಗಿರುವುದು ಪರಿಶಿಷ್ಟ ಜಾತಿ ಜನಾಂಗದಲ್ಲಿ.[೨] ನಂಜುಂಡಪ್ಪರವರ ಪ್ರಾದೇಶಿಕ ಅಸಮಾನತೆ ವರದಿ ಪ್ರಕಾರ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕು ಕರ್ನಾಟಕ ರಾಜ್ಯದ ಅತ್ಯಂತ ಹಿಂದುಳಿದ ಜಿಲ್ಲೆಗಳಲ್ಲಿ ಕೊನೆಯ ಸ್ಥಾನ ಪಡೆದಿದೆ. ಈ ವರದಿಯ ಸಮಗ್ರ ಸಂಯುಕ್ತ ಅಭಿವೃದ್ಧಿ ಸೂಚ್ಯಾಂಕದ ಆಧಾರದ ಮೇಲೆ ಕರ್ನಾಟಕ ರಾಜ್ಯದ ೧೭೪ ತಾಲ್ಲೂಕುಗಳಿಗೆ ಶ್ರೇಣಿ ನೀಡಲಾಗಿದ್ದು, ಈ ಶ್ರೇಣಿಯಲ್ಲಿ ದೇವದುರ್ಗ ತಾಲ್ಲೂಕು ಕನಿಷ್ಠ ಸ್ಥಾನ ಪಡೆದರೆ ಮಡಿಕೇರಿ ಗರಿಷ್ಠ ಸ್ಥಾನ ಪಡೆದಿದೆ.[೩] ಹೈದರಾಬಾದ್ ಕರ್ನಾಟಕ ಪ್ರದೇಶದ ಗುಲ್ಬರ್ಗಾ ವಿಭಾಗ ಹಾಗೂ ಅದರ ಆರು ಜಿಲ್ಲೆಗಳಲ್ಲಿ ಅಪೌಷ್ಠಿಕತೆ ತೀವ್ರವಾಗಿದೆ. ಈ ಜಿಲ್ಲೆಗಳಲ್ಲಿ ಅತೀ ಹೆಚ್ಚು ಅಪೌಷ್ಟಿಕತೆ ಇರುವ ಜಿಲ್ಲೆ ರಾಯಚೂರು. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಬಿಡುಗಡೆ ಮಾಡಿರುವ ಅಂಕಿ ಅಂಶಗಳ ಪ್ರಕಾರ ರಾಯಚೂರು ಜಿಲ್ಲೆಯಲ್ಲಿ ಅಕ್ಟೋಬರ್ ೨೦೧೨ರಲ್ಲಿ ಅಪೌಷ್ಠಿಕತೆ ಗಂಭೀರವಾಗಿದ್ದ ೭೩೪೫ ಮಕ್ಕಳನ್ನು ಗುರುತಿಸಲಾಗಿದೆ ಹಾಗೂ ೭೫೪೯ ಮಕ್ಕಳಲ್ಲಿ ಅಪೌಷ್ಟಿಕತೆ ಮಧ್ಯಮ ಸ್ಥಿತಿಯಲ್ಲಿದೆ. ರಾಯಚೂರು ಜಿಲ್ಲೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಬಿಡುಗಡೆಗೊಳಿಸಿದ ಅಂಕಿ ಅಂಶಗಳ ಪ್ರಕಾರ ಜೂನ್–ಸೆಪ್ಟೆಂಬರ್ ೨೦೧೨ರ ಅವಧಿಯಲ್ಲಿ ೦–೧೫ ವಯಸ್ಸಿನ ೩೫೮ ಮಕ್ಕಳು ಅಪೌಷ್ಠಿಕತೆಯಿಂದ ಸಾವನಪ್ಪಿದ್ದಾರೆ. ಆಹಾರದಲ್ಲಿನ ಕಡಿಮೆ ಪ್ರೋಟಿನ್ ಮತ್ತು ಕ್ಯಾಲೊರಿಗಳೇ ಅಪೌಷ್ಠಿಕತೆಗೆ ಕಾರಣ ಎನ್ನಲಾಗಿದೆ. ಅಪೌಷ್ಟಿಕತೆ ಒಂದು ಪ್ರದೇಶದ ಬಡತನ ಮತ್ತು ಹಸಿವನ್ನು ಸೂಚಿಸುತ್ತದೆ. ಅದೇ ರೀತಿ ಜಿಲ್ಲೆಯ ಅಥವಾ ಒಂದು ಪ್ರದೇಶದ ಸಾಮಾಜಿಕ ಆರ್ಥಿಕ ಪರಿಸ್ಥಿತಿಯನ್ನು ಸೂಚಿಸುತ್ತದೆ. ರಾಯಚೂರು ಜಿಲ್ಲೆಯಲ್ಲಿ ಶಿಕ್ಷಣ, ಸಾಕ್ಷರತೆ ಕನಿಷ್ಟವಾಗಿರುವಂತೆ ಆರೋಗ್ಯ ಸೌಲಭ್ಯಗಳು ಕನಿಷ್ಠವಾಗಿವೆ.[೪] ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಕೃಷಿ ಕೂಲಿ ಕಾರ್ಮಿಕರು ಹೆಚ್ಚಾಗಿದ್ದಾರೆ. ಕೃಷಿ ಕೂಲಿ ಕಾರ್ಮಿಕರ ಬುದುಕು ದುಸ್ಥಿತಿಯಲ್ಲಿದೆ. ಕೃಷಿ ಕೂಲಿ ಕಾರ್ಮಿಕರಲ್ಲಿ ಸಾಕ್ಷರತೆ ಪ್ರಮಾಣ ಹಾಗೂ ಆದಾಯ ಕಡಿಮೆ ಇದ್ದು ಅಪೌಷ್ಠಿಕತೆ ಮತ್ತು ಬಡತನ ಹೆಚ್ಚಾಗಿದೆ. ಕರ್ನಾಟಕದಲ್ಲಿ ಕೃಷಿ ಕೂಲಿ ಕಾರ್ಮಿಕರ ಸಂಖ್ಯೆ ೧೯೮೧ರಲ್ಲಿ ೪.೯೬ ದಶಲಕ್ಷ ಇತ್ತು. ಇದು ೧೯೯೧ರಲ್ಲಿ ೫.೨೬ ಮಿಲಿಯನ್‌ಗೆ ಹೆಚ್ಚಿತು. ೨೦೦೧ರಲ್ಲಿ ಇದು ೬.೨೧ ದಶಲಕ್ಷದಷ್ಟಾಯಿತು. ಅಂದರೆ ಕೃಷಿಕೂಲಿ ಕಾರ್ಮಿಕರ ಸಂಖ್ಯೆ ದಶಕದಿಂದ ದಶಕಕ್ಕೆ ಹೆಚ್ಚಾಗಿರುವುದನ್ನು ಕಾಣಬಹುದು. ಅಭಿವೃದ್ಧಿಯು ಎಲ್ಲರನ್ನು ಒಳಗೊಂಡು ಅಭಿವೃದ್ಧಿಯ ಪಾಲು ಎಲ್ಲರಿಗೂ ದೊರೆಯುವಂತಾಗಿದ್ದರೆ ಕೃಷಿಕಾರ್ಮಿಕರ ಸಂಖ್ಯೆ ಪ್ರಮಾಣ ಹೆಚ್ಚಾಗುವ ಬದಲು ಕಡಿಮೆಯಾಗಬೇಕಿತ್ತು. ಅಭಿವೃದ್ಧಿಯು ಕೆಲವರು ಶ್ರೀಮಂತರಾಗಲು ಅನುಕೂಲಮಾಡಿಕೊಟ್ಟಿದೆ ಎನ್ನಬಹುದು. ೧೯೫೦ ರಿಂದ ೧೯೮೦ರ ನಡುವೆ ತಮಿಳುನಾಡಿನಲ್ಲಿ ಕೃಷಿ ಕಾರ್ಮಿಕರ ಸಂಖ್ಯೆ ಅಧಿಕವಾಗಿದೆ. ಈ ಹೆಚ್ಚಳ ೧೯೬೦ರನಂತರ ನಡೆದಿದೆ. ೧೯೬೧ರ ಜನಗಣತಿಯ ಪ್ರಕಾರ ಒಟ್ಟು ಗ್ರಾಮೀಣ ಶ್ರಮ ಶಕ್ತಿಯಲ್ಲಿ ಶೇಕಡಾ ೨೨ರಷ್ಟು ಕೃಷಿ ಕಾರ್ಮಿಕರಿದ್ದರು.

೧೯೭೧ರಲ್ಲಿ ಇದು ಶೇಕಡ ೩೮ಕ್ಕೆ ಹೆಚ್ಚಾಯಿತು. ೧೯೮೧ಕ್ಕೆ ಇದು ಶೇಕಡಾ ೪೦ರಷ್ಟನ್ನು ಮುಟ್ಟಿತು. ಹೀಗೆ ಕೃಷಿಕೂಲಿ ಕಾರ್ಮಿಕರ ಸಂಖ್ಯೆ ಕರ್ನಾಟಕ ರಾಜ್ಯ, ಭಾರತದಾದ್ಯಂತ ಹೆಚ್ಚಾಗಿರುವುದಷ್ಟನ್ನು ಕಾಣಬಹುದು. ಇವರನ್ನು ಅಭಿವೃದ್ಧಿ ವಂಚಿತ ವರ್ಗಗಳೆಂದು ಗುರ್ತಿಸಲಾಗಿದೆ. ಇವರು ಸರ್ಕಾರದ ಸಾಲ ಸೌಲಭ್ಯಗಳಿಂದಲೂ ಹೊರಗುಳಿದಿದ್ದಾರೆ. ಸಾರ್ವಜನಿಕ ಬ್ಯಾಂಕುಗಳ ಸಾಲ ನಿಯಮಗಳ ಪ್ರಕಾರ ಈ ವರ್ಗಗಳು ಸಂಘಟಿತ ಮೂಲದ ಸಾಲಗಳನ್ನು ಪಡೆಯುವ ಸಾಧ್ಯತೆಯಾಗಲಿ ಸಾಮರ್ಥ್ಯವಾಗಲಿ ಇಲ್ಲವೆನ್ನಬಹುದು.[೫] ೨೦೦೧ರ ಜನಗಣತಿ ಪ್ರಕಾರ ಉತ್ತರ ಕರ್ನಾಕದಲ್ಲಿ ಕೃಷಿ ಕಾರ್ಮಿಕರ ಪ್ರಮಾಣ ಶೇಕಡಾ ೪೦.೬ರಷ್ಟಿದ್ದು, ದಕ್ಷಿಣ ಕರ್ನಾಟಕದಲ್ಲಿ ಇದರ ಪ್ರಮಾಣ ೧೯.೪ರಷ್ಟಿದ್ದು ಉತ್ತರ ಕರ್ನಾಟಕದ ಗುಲ್ಬರ್ಗಾ ವಿಭಾಗದಲ್ಲಿ ಇದರ ಪ್ರಮಾಣ ಶೇಕಡಾ ೪೦.೬ರಷ್ಟಿತ್ತು. ರಾಯಚೂರು ಜಿಲ್ಲೆ ಗುಲ್ಬರ್ಗಾ ವಿಭಾಗದಲ್ಲಿ ಬರುವ ಅತ್ಯಂತ ಹಿಂದುಳಿದ ಜಿಲ್ಲೆಗಳಲ್ಲೊಂದು. ರಾಯಚೂರು ಜಿಲ್ಲೆ ಕೃಷಿ ಕಾರ್ಮಿಕರ ಪ್ರಮಾಣ ಶೇಕಡಾ ೪೫.೬ರಷ್ಟಿತ್ತು. ಕೃಷಿ ಕಾರ್ಮಿಕರು ಉತ್ತರ ಕರ್ನಾಟಕದಲ್ಲಿ ವಿಶೇಷವಾಗಿ ರಾಯಚೂರು ಮತ್ತು ಗುಲ್ಬರ್ಗಾ ವಿಭಾಗಗಳಲ್ಲಿ ಹೆಚ್ಚಾಗಿರಲು ಕಾರಣ ಬಡತನ. ರಾಜ್ಯದ ಕೃಷಿಕೂಲಿ ಕಾರ್ಮಿಕರ ಪ್ರಮಾಣದಲ್ಲಿ ಮಹಿಳೆಯರ ಪ್ರಮಾಣ ಶೇಕಡಾ ೪೩.೮ರಷ್ಟಿದ್ದರೆ. ರಾಜ್ಯದ ಒಟ್ಟು ಮಹಿಳಾ ಕೃಷಿ ಕಾರ್ಮಿಕರಲ್ಲಿ ಶೇಕಡಾ ೩೩ರಷ್ಟು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಬುಡಕಟ್ಟು ಮಹಿಳೆಯರಿದ್ದಾರೆ. ಕೃಷಿಕೂಲಿ ಕಾರ್ಮಿಕರ ಪ್ರಮಾಣದಲ್ಲಿ ಮಹಿಳೆಯರ ಸಂಖ್ಯೆ ಸಹ ಹೆಚ್ಚಾಗಿರುವುದನ್ನು ಕಾಣಬಹುದು.[೬] ಹೀಗೆ ರಾಯಚೂರು ಹೈದರಾಬಾದ್ ಕರ್ನಾಟಕದ ಅತೀ ಹಿಂದು ಜಿಲ್ಲೆಯಾಗಿ ಬಡತನ, ಹಸಿವು, ಅನಕ್ಷರತೆ, ಅಪೌಷ್ಠಿಕತೆ, ವಲಸೆ ಸಮಸ್ಯೆಗಳ ಪ್ರದೇಶವಾಗಿದೆ. ಮಾನವ ಅಭಿವೃದ್ಧಿ ಸೂಚ್ಯಾಂಕದಲ್ಲಿ ಕೊನೆಯ ಸ್ಥಾನದಲ್ಲಿದೆ. ಅತೀ ಹೆಚ್ಚು ಕೃಷಿ ಕಾರ್ಮಿಕರನ್ನು ಹೊಂದಿರುವ ಜಿಲ್ಲೆಯೂ ಆಗಿದೆ. ತೀವ್ರ ಬರಗಾಲ ಪೀಡಿತ ಪ್ರದೇಶವೂ ಹೌದು. ಈ ಸವಾಲುಗಳು ರಾಯಚೂರು ಜಿಲ್ಲೆಯ ಸಮಾಜಿಕ ಆರ್ಥಿಕ ಪರಿಸ್ಥಿತಿಯನ್ನು ಪ್ರತಿಬಿಂಬಿಸುತ್ತವೆ.

**ರಾಯಚೂರು ಜಿಲ್ಲೆಯ ವಿವರಣೆ**

ರಾಯಚೂರು ಜಿಲ್ಲೆ ಕರ್ನಾಟಕ ರಾಜ್ಯದ ಆಡಳಿತಾತ್ಮಕ ಜಿಲ್ಲೆ. ರಾಜ್ಯದ ಈಶಾನ್ಯ ಭಾಗದಲ್ಲಿದೆ. ಉತ್ತರಕ್ಕೆ ಯಾದಗಿರಿ ಜಿಲ್ಲೆ, ವಾಯುವ್ಯಕ್ಕೆ ಬಿಜಾಪುರ, ಬಾಗಲಕೋಟೆ ಜಿಲ್ಲೆಗಳು, ಪಶ್ಚಿಮಕ್ಕೆ ಕೊಪ್ಪಳ, ದಕ್ಷಿಣಕ್ಕೆ ಬಳ್ಳಾರಿ ಪೂರ್ವಕ್ಕೆ ಆಂಧ್ರ ಪ್ರದೇಶದ ಮೆಹಬೂಬ್ ನಗರ ಮತ್ತು ಕರ್ನೂಲ್ ಜಿಲ್ಲೆಗಳನ್ನು ಒಳಗೊಂಡಿದೆ. ಭಾರತ ಸರ್ಕಾರದ ಸೆಂಟ್ರಲ್ ಸ್ಟಾಟಿಸ್ಟಿಕಲ್ ಆರ್ಗನೈಷನ್ ಪ್ರಕಾರ ೧೪೦೧೩ ಚದರ ಕಿಲೋ ಮೀಟರ್‌ನಷ್ಟು ಭೌಗೋಳಿಕ ಪ್ರದೇಶ ಹೊಂದಿದೆ. ಇದು ೫೪೧೦ ಚದರ ಮೈಲಿಗಳಷ್ಟಾಗುತ್ತದೆ. ಭೌಗೋಳಿಕ ವಿಸ್ತೀರ್ಣ ಅಳತೆ ಮಾಡಲು ಬೇರೆ ಬೇರೆ ವಿಧಾನಗಳನ್ನು ಅನುಸರಿಸಿರುವುದರಿಂದ ರಾಯಚೂರು ಜಿಲ್ಲೆಯ ವಿಸ್ತೀರ್ಣದಲ್ಲಿ ವ್ಯತ್ಯಾಸಗಳಿವೆ. ೨೦೧೧ರ ಜನಗಣತಿಯ ಪ್ರಕಾರ ರಾಯಚೂರು ಜಿಲ್ಲೆಯ ರಾಯಚೂರು ಜಿಲ್ಲೆ ಭೂವಿಸ್ತೀರ್ಣ ೮೪೪೭

ಚದರ ಕಿ.ಮೀ. ವಿಸ್ತೀರ್ಣದಲ್ಲಿ ರಾಜ್ಯದ ಎರಡನೇ ದೊಡ್ಡ ಜಿಲ್ಲೆ. ಐದು ತಾಲ್ಲುಕುಗಳನ್ನು ಒಳಗೊಂಡಿದೆ. ದೇವದುರ್ಗ, ಮಾನ್ವಿ, ಸಿಂಧನೂರು, ಲಿಂಗಸಗೂರು ಹಾಗೂ ರಾಯಚೂರು ಕಸಬಾ ತಾಲ್ಲೂಕುಗಳು. ಐದು ತಾಲ್ಲೂಕುಗಳು ತುಂಗಭದ್ರ ಮತ್ತು ಕೃಷ್ಣ ನದಿಯಿಂದ ನೀರಾವರಿ ಸೌಲಭ್ಯಗಳನ್ನು ಹೊಂದಿವೆ. ತುಂಗಭದ್ರ ನದಿಯ ತುಂಗಭದ್ರ ಅಣೆಕಟ್ಟು ಹಾಗೂ ಕೃಷ್ಣಾ ನದಿಯ ನಾರಾಯಣಪುರ ಅಣೆಕಟ್ಟಿನಿಂದ ನೀರು ಪಡೆಯುತ್ತವೆ. ರಾಯಚೂರು ಜಿಲ್ಲೆಯ ಭತ್ತ ಶ್ರೇಷ್ಠ ಗುಣಮಟ್ಟದ್ದು. ಕರ್ನಾಟಕದ ಭತ್ರದ ಕಣಜ ರಾಯಚೂರು. ಈ ಜಿಲ್ಲೆಯ ಅಕ್ಕಿ ಶ್ರೇಷ್ಠ ದರ್ಜೆಯ ದಾಗಿದ್ದು ರಫ್ತು ಮಾಡಲಾಗುತ್ತದೆ. ಅನೇಕ ಭತ್ತದ ಮಿಲ್‌ಗಳಿದ್ದ ಅಕ್ಕಿಯನ್ನು ಬೇರೆ ರಾಷ್ಟ್ರಗಳಿಗೆ ರಫ್ತು ಮಾಡಲಾಗುತ್ತದೆ. ಸಮುದ್ರಮಟ್ಟದಿಂದ ೧೩೩೫ ಮೀಟರ್ ಎತ್ತರದಲ್ಲಿದ್ದು ಭಾರತದಲ್ಲೇ ಚಿನ್ನದ ಖನಿಜ ಸಂಪತ್ತನ್ನು ಹೊಂದಿರುವ ಕೆಲವೇ ಸ್ಥಳಗಳಲ್ಲಿ ರಾಯಚೂರು ಒಂದು. ರಾಯಚೂರಿನ ಲಿಂಗಸಗೂರು ತಾಲ್ಲೂಕಿನಲ್ಲಿ ಹಟ್ಟಿ ಚಿನ್ನದ ಗಣಿ ಇದ್ದು ಇದರಿಂದ ವಾರ್ಷಿಕ ಸರಾಸರಿ ೩ (ಮೂರು) ಟನ್ ಚಿನ್ನ ಉತ್ಪಾದಿಸಲಾಗುತ್ತದೆ. ಜಿಲ್ಲೆಯಲ್ಲಿ ೧೮.೧೬೭ ಹೆಕ್ಟರ್‌ನಷ್ಟು ಅರಣ್ಯ ಪ್ರದೇಶವಿದೆ.[೭]

## ೨.೧. ಹವಾಮಾನ

ವರ್ಷದ ಬಹುಭಾಗ ಒಣ ಹವೆಯಿಂದ ಕೂಡಿದ್ದು ಬೇಸಿಗೆಯಲ್ಲಿ ಉಷ್ಣಾಂಶ ಅಧಿಕವಾಗಿರುತ್ತದೆ. ಮಳೆ ಪ್ರಮಾಣ ತುಂಬಾ ಏರಿಳಿತದಿಂದ ಕೂಡಿದ್ದು ರಾಯಚೂರಿನ್ನು ಬರಪೀಡಿತ ಪ್ರದೇಶವನ್ನಾಗಿಸಿದೆ. ಬೇಸಿಗೆಕಾಲ ಫೆಬ್ರವರಿಯಲ್ಲಿ ಪ್ರಾರಂಭವಾಗಿ ಮೇ ತಿಂಗಳವರೆಗೂ ಇರುತ್ತದೆ. ನೈರುತ್ಯ ಮಳೆಗಾಲ ಜೂನ್ ತಿಂಗಳಿಂದ ಸೆಪ್ಟೆಂಬರ್‌ವರೆಗೂ ಇರುತ್ತದೆ. ಅಕ್ಟೋಬರ್ ಮತ್ತು ನವಂಬರ್ ಹಿಂಗಾರು ಅವಧಿಯಾಗಿದ್ದು, ಡಿಸೆಂಬರ್ ಮಧ್ಯಭಾಗದಿಂದ ಫೆಬ್ರವರಿವರೆಗೂ ವಾತಾವರಣ ತಂಪಾಗಿರುತ್ತದೆ. ಡಿಸೆಂಬರ್ ಅತೀ ತಣ್ಣಗಿನ ಕಾಲವಾಗಿದ್ದ ಉಷ್ಣಾಂಶ ೨೯.೩ ಡಿಗ್ರಿ ರಷ್ಟಿರುತ್ತದೆ. ದಿನದ ಉಷ್ಣಾಂಶ ೩೮ ರಿಂದ ೪೯ ಡಿಗ್ರಿಯಷ್ಟಿರುತ್ತದೆ. ರಾಯಚೂರು ಜಿಲ್ಲೆಯಲ್ಲಿ ೧೯೨೮ ಮೇ ೨೩ರಂದು ಅತಿ ಹೆಚ್ಚು ಅಂದರೆ ೪೫.೬ ಡಿಗ್ರಿ ಸೆಲ್ಸಿಯಶ್‌ನಷ್ಟು ಉಷ್ಣಾಂಶ ದಾಖಲಾಗಿದೆ. ಕನಿಷ್ಟ ಹವಮಾನ ಅಂದರೆ ೧೦.೦ ಡಿಗ್ರಿ ಸೆಲ್ಸಿಯಶ್‌ನಷ್ಟು ಉಷ್ಣಾಂಶ ೧೮೯೯ ಜನವರಿ ೧೪ ಹಾಗೂ ೧೯೪೫ ಡಿಸೆಂಬರ್ ೧೩ರಂದು ದಾಖಲಾಗಿದೆ.[೮]

## ೨.೨. ಕೃಷಿ

ಜಿಲ್ಲೆಯಲ್ಲಿ ಎರಡು ಪ್ರಮುಖ ನದಿಗಳು ಹರಿಯುತ್ತವೆ. ಕೃಷ್ಣಾ ಮತ್ತು ತುಂಗಭದ್ರಾ. ಕೃಷಿ, ತೋಟಗಾರಿಕೆ, ಹೈನುಗಾರಿಕೆ ಮತ್ತು ಆಹಾರ ಸಂಸ್ಕರಣೆ ಪ್ರಮುಖ ಚಟುವಟಿಕೆಗಳಾಗಿವೆ. ರಾಯಚೂರು ಜಿಲ್ಲೆಯ ಮಣ್ಣು ಕಪ್ಪು. ಅತೀ ಕಪ್ಪು ಕೆಂಪು ಮಿಶ್ರಿತ ಹಾಗೂ ಕೆಂಪು ಮರಳು ಮಣ್ಣಿನಿಂದ ಕೂಡಿದೆ. ಗರಿಷ್ಠ ೪೫ ಸೆಂಟಿಮೀಟರ್ ಕನಿಷ್ಟ ೧೮ ಸೆಂಟಿಮೀಟರ್‌ನಷ್ಟು ಮಳೆಯಾಗುತ್ತದೆ. ಜಿಲ್ಲೆಯಲ್ಲಿ ೯೮೬ ಹೆಕ್ಟರ್ ಪ್ರದೇಶದಲ್ಲಿ ರೇಷ್ಮೆ ಕೃಷಿ ಮಾಡಲಾಗುತ್ತದೆ. ಕೃಷಿಯಲ್ಲಿ ಭತ್ತ, ಜವಾರ್

ಜೋಳ, ಸೂರ್ಯಕಾಂತಿ, ಶೇಂಗಾ, ಬೆಂಗಾಲ್ ಗ್ರಾಮ್ ಬೆಳೆಯಲಾಗುತ್ತದೆ. ವಾಣಿಜ್ಯಬೆಳೆಯಾಗಿ ಹತ್ತಿ ಬೆಳೆಯಲ್ಲಿಡುತ್ತದೆ. ಕಾರಿಫ್ ನಲ್ಲಿ ಭತ್ತ, ರೆಡ್‌ಗ್ರಾಮ್, ಗ್ರೀನ್ ಗ್ರಾಮ್, ಬಾಜ್ರಾ, ಸೂರ್ಯಕಾಂತಿ, ಶೇಂಗಾ, ಹತ್ತಿ, ಹರಳು ಇತ್ಯಾದಿಗಳನ್ನ ಬೆಳೆಲಾಗುತ್ತದೆ.ರಬಿ ಅವಧಿಯಲ್ಲಿ ಸೂರ್ಯಕಾಂತಿ, ಬೆಂಗಾಲ್ ಗ್ರಾಮ್, ಹತ್ತಿ  ತಂಬಾಕು ಮತ್ತು ಗೋದಿ ಬೆಳೆಯಲಾಗುತ್ತದೆ. ಬೇಸಿಗೆ ಅವಧಿಯಲ್ಲಿ ಭತ್ತ, ಹತ್ತಿ, ಜೋಳ, ಬಾಜ್ರಾ, ಶೇಂಗಾ, ಸೂರ್ಯಕಾಂತಿಯನ್ನ ಬೆಳೆಯಲಾಗುತ್ತದೆ. ತೋಟಗಾರಿಕೆಯ ಬೆಳೆಗಳೆಂದರೆ ಹಣ್ಣುಗಳು. ಸಹಿ ನಿಂಬೆ, ಮಾವು, ದಾಳಿಂಬೆ ಮತ್ತು ಪರಂಗಿ ಹಣ್ಣನ್ನು ಬೆಳೆಯಲಾಗುತ್ತದೆ. ಮೊಸಂಬಿ ಹಣ್ಣಿನ ಉತ್ಪಾದನೆಯಲ್ಲಿ ರಾಯಚೂರು ಜಿಲ್ಲೆ ರಾಜ್ಯದಲ್ಲೇ ಪ್ರಥಮ. ಜಿಲ್ಲೆಯಲ್ಲಿ ಬೆಳೆಯುವ ಪ್ರಮುಖ ತರಕಾರಿಗಳೆಂದರೆ ಟೊಮೆಟೋ, ಬದನೆಕಾಯಿ ಹಾಗೂ ಹಸಿರು ಮೆಣಸಿನಕಾಯಿ. ಹಾಲು ಉತ್ಪಾದನೆ ಮತ್ತು ಕೋಳಿ ಸಾಗಾಣಿಕೆಯನ್ನು ಇಲ್ಲಿ ಕಾಣಬಹುದು. ಸಾಗುವಳಿಯಾಗುತ್ತಿರುವ ಒಟ್ಟು ಬೆಳೆಗಳಲ್ಲಿ ಶೇಕಡಾ ೧ರಷ್ಟು ಹಣ್ಣು ಬೆಳೆಗಳು, ಶೇಕಡಾ ೧ರಷ್ಟು ತರಕಾರಿಗಳು, ಶೇಕಡಾ ೨ ಇತರೆ ಬೆಳೆಗಳು ಶೇಕಡಾ ೧೩ರಷ್ಟು ಎಣ್ಣೆ ಬೀಜಗಳು, ಶೇಕಡಾ ೨೮ರಷ್ಟು ವಾಣಿಜ್ಯ ಬೆಳೆಗಳು, ಶೇಕಡಾ ೫೭ರಷ್ಟು ದಾನ್ಯಗಳನ್ನು ಬೆಳೆಯಲಾಗುತ್ತದೆ. ೨೦೧೦-೧೧ರಲ್ಲಿ ಒಟ್ಟು ೮.೩೮,೬೦೦ ಹೆಕ್ಟರ್ ಪ್ರದೇಶ ಕೃಷಿಗೆ ಬಳಕೆಯಾಗಿದೆ. ೨೦.೫೬೩ ಹೆಕ್ಟರ್ ಭೂಮಿ ಕೃಷಿಯೇತರಕ್ಕೆ ಬಳಕೆಯಾಗಿದೆ. ೨೦.೮೫೦ ಹೆಕ್ಟರ್ ಭೂಮಿ ಬಂಜರು ಭೂಮಿಯಾಗಿದೆ. ೨೦೧೧-೧೨ಕ್ಕೆ ೫೪೧೧೩೫ ಹೆಕ್ಟರ್ ಭೂಮಿ ಬಳಕೆಯಾಗಿದೆ. ೨೭೪೭೫೫ ಹೆಕ್ಟರ್ ಬೀಳು ಭೂಮಿಯಾಗಿದೆ. ಜಲ್ಲೆಯಲ್ಲಿ ೪೬.೩೧ರಷ್ಟು ಭೂಮಿ ನೀರಾವರಿಗೆ ಒಳಪಟ್ಟಿದೆ. ಇದರಲ್ಲಿ ತುಂಗಭದ್ರ ಎಡದಂತೆ ಕಾಲುವೆ ಯೋಜನೆಯಿಂದ ಶೇಕಡಾ ೧೮ರಷ್ಟು ಕೃಷಿ ಭೂಮಿ ನೀರಾವರಿ ಸೌಲಭ್ಯ ಪಡದಿದೆ. ಸಿಂಧನೂರು, ಮಾನ್ವಿ, ದೇವದುರ್ಗ ಮತ್ತು ರಾಯಚೂರು ತಾಲ್ಲೂಕುಗಳು ಕೃಷ್ಣ ನದಿಯಿಂದ ನೀರಾವರಿ ಸೌಲಭ್ಯಗಳನ್ನು ಪಡೆದಿದೆ. ಪಕ್ಕದ ಆಂಧ್ರ ಪ್ರದೇಶದ ಜನ ಭತ್ತ ಉತ್ಪಾದನೆಯಲ್ಲಿ ಪರಿಣತಿ ಹೊಂದಿದ್ದು ಸಾಕಷ್ಟು ಸಂಖ್ಯೆಯಲ್ಲಿ ರಾಯಚೂರು ಜಿಲ್ಲೆಗೆ ಬಂದಿದ್ದು ಹೊಸ ಜನವಸತಿ ಪ್ರದೇಶಗಳು ಇತ್ತೀಚೆಗೆ ಸೃಷ್ಠಿಯಾಗಿವೆ. ಇವರು ವಲಸೆ ಬಂದು ಭೂಮಿ ಖರೀದಿಸಿ ಅಪಾರ ಪ್ರಮಾಣದ ಭತ್ತ ಉತ್ಪಾದನೆ ಮಾಡುತ್ತಿದ್ದಾರೆ. ಇವರು ಇಲ್ಲಿಯೇ ವಾಸಿಸುತ್ತಿದ್ದು ಸ್ವಂತ ಮನೆಗಳನ್ನು ಮಾಡಿಕೊಂಡಿದ್ದಾರೆ ಹಾಗೂ ಮತದಾನದ ಹಕ್ಕನ್ನು ಪಡೆದಿದ್ದಾರೆ. ಮತದಾರರ ಪಟ್ಟಿಯಲ್ಲಿ ಇವರು ಹೆಸರುಗಳು ಸೇರ್ಪಡೆಗೊಂಡಿವೆ. ರಾಜಕೀಯ ಲಾಭಕ್ಕಾಗಿ ಸ್ಥಳೀಯ ಜನಪ್ರತಿನಿಧಿಗಳೇ ಇದನ್ನು ಪ್ರೋತ್ಸಾಹಿಸುತ್ತಿದ್ದಾರೆ. ರಾಯಚೂರು ಜಿಲ್ಲೆಯ ಭತ್ತ ಬೆಳೆಯುವ ಪ್ರದೇಶಗಳಲ್ಲಿ ಸ್ಥಳೀಯ ಜಮೀನ್ದಾರರು ಕಾರ್ಮಿಕರಾಗಿದ್ದಾರೆ ದೂರದ ಆಂಧ್ರದಿಂದ ಬಂದ ಕಾರ್ಮಿಕರು ಜಮೀನ್ದಾರರಾಗಿದ್ದಾರೆ ಎನ್ನಲಾಗಿದೆ.

### ೨.೩. ಭೂ ಹಿಡುವಳಿ ಮತ್ತು ವಿಸ್ತೀರ್ಣ

ಜಿಲ್ಲೆಯ ಒಟ್ಟು ೭೧೦೪ ದೊಡ್ಡ ಭೂ ಹಿಡುವಳಿದಾರರಲ್ಲಿ ಪರಿಶಿಷ್ಟ ಜಾತಿಯ ಪರುಷ ಮಹಿಳೆ ಇಬ್ಬರೂ ಸೇರಿ ೧೩೩ ಜನರಿದ್ದಾರೆ. ಇದೇ ಅತ್ಯಂತ ಕಡಿಮೆ ದೊಡ್ಡ ಭೂ ಹಿಡುವಳಿ ಹೊಂದಿರುವ ವರ್ಗವಾಗಿದೆ. ಅದೇರೀತಿ ಪರಿಶಿಷ್ಟ ಪಂಗಡದಲ್ಲಿ ೪೩೫ ಜನರಿದ್ದಾರೆ. ದೊಡ್ಡ ಭೂ

ಹಿಡುವಳಿದಾರರಲ್ಲಿ ಇತರೇ ಜನಾಂಗಕ್ಕೆ ಸೇರಿದ ಒಟ್ಟು ೩೩೭೧ ಜನರಿದ್ದು ಒಟ್ಟು ೫.೧೩ ಲಕ್ಷ ಹೆಕ್ಟರ್ ವಿಸ್ತೀರ್ಣದ ಭೂಮಿಯನ್ನು ಹೊಂದಿದ್ದಾರೆ. ಜಿಲ್ಲೆಯ ಬಹುತೇಕ ಭೂಮಿ ಇತರೆ ಜನಾಂಗದವರ ಹಿಡಿತದಲ್ಲಿದೆ. ಇಲ್ಲಿ ಇರತೇ ವರ್ಗಗಳಲ್ಲಿ ಲಿಂಗಾಯತ ಪ್ರಬಲ ಮತ್ತು ಪ್ರಮುಖ ಜಾತಿಯಾಗಿದ್ದು ಅತೀ ಹೆಚ್ಚು ದೊಡ್ಡ ಭೂ ಹಿಡುವಳಿಗಳನ್ನು ಹೊಂದಿದ್ದಾರೆ. ಜಿಲ್ಲೆಯಲ್ಲಿ ಅತೀಸಣ್ಣ ಮತ್ತು ಸಣ್ಣ ಹಿಡುವಳಿದಾರರು ಅಧಿಕ ಸಂಖ್ಯೆಯಲ್ಲಿದ್ದು ಕಡಿಮೆ ಭೂ ಒಡೆತನ ಹೊಂದಿದ್ದಾರೆ. ಇದು ಭೂಮಿಯಂತಹ ಸಂಪತ್ತಿನ ಅಸಮಾನ ಹಂಚಿಕೆಯನ್ನು ಸೂಚಿಸುತ್ತದೆ. ಒಂದು ಹೆಕ್ಟರ್‌ಗಿಂತ ಕಡಿಮೆ ಇರುವ ಪರಿಶಿಷ್ಟ ಜಾತಿಯ ಅತೀಸಣ್ಣ ಹಿಡುವಳಿದಾರರಲ್ಲಿ ದೇವದರ್ಗ ತಾಲ್ಲೂಕಿನಲ್ಲಿ ೪೭೬೫ ಪುರುಷರಿದ್ದು ೨೭೮೮ ಹೆಕ್ಟರ್ ಭೂಮಿಯನ್ನು ಹೊಂದಿದ್ದಾರೆ. ಅದೇರೀತಿ ೭೫೨ ಮಹಿಳೆಯರು ೪೬೩ ಹೆಕ್ಟರ್ ವಿಸ್ತೀರ್ಣದ ಭೂಮಿಯನ್ನು ಹೊಂದಿದ್ದಾರೆ. ಸಿಂಧನೂರು ತಾಲ್ಲೂಕಿನಲ್ಲಿ ೨೦೫೩ ಪುರುಷರಿದ್ದು ೧೨೪೫ ಹೆಕ್ಟರ್ ವಿಸ್ತೀರ್ಣದ ಭೂಮಿಯನ್ನು ಹೊಂದಿದ್ದಾರೆ. ೭೨೨ ಮಹಿಳೆಯರು ೪೩೪ ಹೆಕ್ಟರ್ ವಿಸ್ತೀರ್ಣದ ಭೂಮಿಯನ್ನು ಹೊಂದಿದ್ದಾರೆ. ಜಿಲ್ಲೆಯ ೫ ತಾಲ್ಲೂಕುಗಳಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ಹೆಚ್ಚು ಅತೀಸಣ್ಣ ಹಿಡುವಳಿದಾರರಿರುವುದು ಕರ್ನಾಟಕ ರಾಜ್ಯದಲ್ಲೇ ಅತೀ ಹಿಂದುಳಿದದ್ದು ಎಂದು ಹೇಳಲ್ಪಡುವ ದೇವದುರ್ಗ ತಾಲ್ಲೂಕಿನಲ್ಲಿ. ಜಿಲ್ಲೆಯ ೫ ತಾಲ್ಲೂಕುಗಳ ಪರಿಶಿಷ್ಟ ಜಾತಿಯ ಸಣ್ಣ ಹಿಡುವಳಿದಾರರು ಹೆಚ್ಚಾಗಿರುವುದು ದೇವದುರ್ಗ ತಾಲ್ಲೂಕಿನಲ್ಲಿ (೩೧೫೫). ಅದೇರೀತಿ ಪರಿಶಿಷ್ಟ ಪಂಗಡದ ಸಣ್ಣ ಹಿಡುವಳಿದಾರರು ಹೆಚ್ಚಾಗಿರುವುದು ದೇವದುರ್ಗ ತಾಲ್ಲೂಕಿನಲ್ಲಿ (೫೨೮೬).

### ೨.೪ ಭೂ ಬಳಕೆ

ಜಿಲ್ಲೆಯ ಒಟ್ಟು ಭೂಮಿಯಲ್ಲಿ ಶೇಕಡಾ ೫ರಷ್ಟು ಅರಣ್ಯವಿದೆ. ಶೇಕಡಾ ೪ರಷ್ಟು ಭೂಮಿ ಸಾಗುವಳಿಗೆ ಒಳಪಟ್ಟಿಲ್ಲ. ಶೇಕಡಾ ೬ರಷ್ಟು ಸಾಗುವಳಿಗೆ ಯೋಗ್ಯವಲ್ಲ. ಶೇಕಡಾ ೨೮ರಷ್ಟು ಪ್ರಸಕ್ತ ಬೀಳು ಭೂಮಿ ಇದೆ. ಶೇಕಡಾ ೫೫ರಷ್ಟು ನಿವ್ವಳ ಬಿತ್ತನೆಗೆ ಒಳಪಟ್ಟಿದೆ. ಅಂದರೆ ಒಟ್ಟು ಭೂಮಿಯಲ್ಲಿ ೪.೫೮ ಲಕ್ಷ ಹೆಕ್ಟರ್ ಭೂಮಿ ನಿವ್ವಳ ಬಿತ್ತನೆಗೆ ಒಳಪಟ್ಟಿದೆ. ಶೇಕಡಾ ೨ರಷ್ಟು ಭೂಮಿ ಶಾಶ್ವತ ಬಳಕೆಗೆ ಬರುವುದಿಲ್ಲ.

೨೦೧೧-೧೨ರ ಅಂಕಿ ಅಂಶಗಳ ಪ್ರಕಾರ ರಾಯಚೂರು ಜಿಲ್ಲೆಯ ಭೂಮಿಯ ಬಳಕೆಯಲ್ಲಿ ಒಟ್ಟು ೨.೮೦ ಲಕ್ಷ ಹೆಕ್ಟರ್ ಪ್ರಸಕ್ತ ಬೀಳು ಭೂಮಿ ಇದೆ. ೪.೫೮ ಲಕ್ಷ ಹೆಕ್ಟರ್‌ನಷ್ಟು ನಿವ್ವಳ ಬಿತ್ತನೆ ಭೂಮಿಯಾಗಿದೆ. ಈ ಕೆಳಗಿನ ಕೋಷ್ಟಕದಲ್ಲಿ ಜಿಲ್ಲೆ ಮತ್ತು ಅಧ್ಯಯನ ಕ್ಷೇತ್ರದ ತಾಲ್ಲೂಕಗಳ ಬೀಳು ಭೂಮಿ ಮತ್ತು ನಿವ್ವಳ ಬಿತ್ತನೆ ಭೂಮಿಯ ವಿವರಗಳನ್ನು ನೀಡಲಾಗಿದೆ.[೧೦]




ರಾಯಚೂರು ಜಿಲ್ಲೆಯ ಭೂ ಬಳಕೆಯ ವಿವರಗಳು (ಹೆಕ್ಟರ್‌ಗಳಲ್ಲಿ)

| ಕ್ರಸಂ. | ತಾಲ್ಲೂಕು | ಬೀಳು ಭೂಮಿ | | | ಬಿತ್ತನೆಯಾದ ನಿವ್ವಳ ಪ್ರದೇಶ |
|---|---|---|---|---|---|
| | | ಪ್ರಸ್ತುತ | ಇತರೆ | ಒಟ್ಟು | |
| ೧ | ದೇವದುರ್ಗ | ೪೩೭೮೩ | ೬೪೬೯ | ೫೦೨೫೨ | ೭೬೦೯೩ |
| ೨ | ಸಿಂದುನೂರು | ೪೪೨೭೯ | ೮೪೪೧ | ೫೨೭೨೦ | ೮೮೭೭೩ |
| | ಒಟ್ಟು | ೮೮೦೬೨ | ೧೪೯೧೦ | ೧೦೨೯೭೨ | ೧೬೪೮೬೬ |

ಮೂಲ: ಜಿಲ್ಲಾ ಪಂಚಾಯತ್ (೨೦೧೨). ರಾಯಚೂರು ಜಿಲ್ಲಾ ಅಂಕಿಅಂಶಗಳ ನೋಟ,

### ೨.೫. ಕೃಷಿ ಕಾರ್ಮಿಕ ಪರಿಸ್ಥಿತಿ ವಿಶ್ಲೇಷಣೆ

೨೦೦೧ರ ಜನಗಣತಿ ಪ್ರಕಾರ ರಾಯಚೂರು ಜಿಲ್ಲೆಯಲ್ಲಿ ಒಟ್ಟು ೩೨೮೯೧ ಕೃಷಿ ಕಾರ್ಮಿಕರಿದ್ದಾರೆ. ಇದು ಗ್ರಾಮೀಣ ಮತ್ತು ನಗರ ಎರಡನ್ನೂ ಒಳಗೊಂಡಿದೆ. ಇದರಲ್ಲಿ ೧೨೫೩೫೪ ಪುರುಷರು ಹಾಗೂ ೨೦೩೧೫೭ ಮಹಿಳೆಯರು ಇದ್ದಾರೆ. ಅಂದರೆ ಕೃಷಿ ಮಹಿಳಾ ಕಾರ್ಮಿಕರ ಸಂಖ್ಯೆ ಹೆಚ್ಚಾಗಿರುವುದನ್ನು ಕಾಣಬಹುದು. ಈ ಹಿಂದೆ ಹೇಳಿದಂತೆ ಕೃಷಿ ಕಾರ್ಮಿಕರಲ್ಲಿ ಸಾಮಾನ್ಯವಾಗಿ ಸಾಕ್ಷರತೆ ಹಾಗೂ ಆದಾಯಗಳು ಕಡಿಮೆ ಇರುತ್ತವೆ. ಅಪೌಷ್ಟಿಕತೆ ಮತ್ತು ಬಡತನ ಹೆಚ್ಚಾಗಿರುತ್ತದೆ. ಕೃಷಿ ಕಾರ್ಮಿಕರಿಗೆ ಗ್ರಾಮಗಳಲ್ಲಿ ಬದುಕಿನ ಅವಕಾಶಗಳು ಕಡಿಮೆ ಇರುವುದರಿಂದ ನಗರಗಳಿಗೆ ವಲಸೆ ಹೋಗುತ್ತಿದ್ದಾರೆ. ಇವರು ನಗರಗಳಲ್ಲಿ ಸಾಮಾನ್ಯವಾಗಿ ದಿನಗೂಲಿ ಕಾರ್ಮಿಕರಾಗಿ ಕಟ್ಟಡ ಮತ್ತು ರಸ್ತೆಗಳ ನಿರ್ಮಾಣ ಕಾರ್ಯಗಳಲ್ಲಿ ತೊಡಗುತ್ತಾರೆ. ಇಂತಹ ಕಾರ್ಯಗಳಲ್ಲಿ ತೊಡಗಿದ ಕಾರ್ಮಿಕರಿಗೆ ಯಾವುದೇ ಸಾಮಾಜಿಕ ರಕ್ಷಣೆ ಇರುವುದಿಲ್ಲ ಎಂಬುದನ್ನು ಅಧ್ಯಯನಗಳು ತಿಳಿಸುತ್ತವೆ.

ಹೀಗೆ ಈ ಜಿಲ್ಲೆಯ ಕೃಷಿ ಕಾರ್ಮಿಕರು ನಗರಗಳಿಗೆ ವಲಸೆ ಹೋಗಿ ಅನಿಶ್ಚಿತ ಅಭದ್ರತೆಯ ಬದುಕನ್ನು ನಿರ್ವಹಿಸುತ್ತಾರೆ.

ಜಿಲ್ಲೆಯಲ್ಲಿ ಅಧ್ಯಯನ ಕೈಗೊಂಡ ಎರಡು ತಾಲ್ಲೂಕುಗಳ ಕೃಷಿ ಕಾರ್ಮಿಕರ ಸಂಖ್ಯೆ ಈ ಕೆಳಗಿನಂತಿದೆ.

| ಕ್ರ.ಸಂ. | ತಾಲ್ಲೂಕು | ಕೃಷಿಕಾರ್ಮಿಕರು (ಗ್ರಾಮೀಣ ಮಾತ್ರ) | | | ಶೇಕಡವಾರು ಒಟ್ಟು ಮುಖ್ಯ ಕೆಲಸಗಾರರಲ್ಲಿ |
|---|---|---|---|---|---|
| | | ಹೆಣ್ಣು | ಗಂಡು | ಒಟ್ಟು | |
| ೧ | ದೇವದುರ್ಗ | ೨೩೮೯೨ | ೧೬೯೪೬ | ೪೦೦೩೮ | ೭೫.೦೮.೧ |
| ೨ | ಸಿಂಧನೂರು | ೪೬೧೪೯ | ೨೮೯೮೭ | ೭೫೧೩೬ | ೬೨.೪೭೧ |

ಮೂಲ: ಜಿಲ್ಲಾ ಪಂಚಾಯತ್ (೨೦೧೧-೧೨). ರಾಯಚೂರು ಜಿಲ್ಲಾ ಅಂಕಿಅಂಶಗಳ ನೋಟ

ಮೇಲಿನ ಕೋಷ್ಟಕದಲ್ಲಿ ದೇವದುರ್ಗ ಹಾಗೂ ಸಿಂಧನೂರು ಎರಡೂ ತಾಲ್ಲೂಕುಗಳ ಕೃಷಿ ಕಾರ್ಮಿಕರಲ್ಲಿ ಮಹಿಳೆಯ ಸಂಖ್ಯೆ ಹೆಚ್ಚಾಗಿದೆ. ಹೆಚ್ಚಿನ ಸಮಸ್ಯೆಗಳಿಗೆ ಈಡಾಗುವವರು ಮಹಿಳೆಯರು ಎಂಬುದನ್ನು ತೋರಿಸುತ್ತದೆ. ಮಹಿಳಾ ಕೃಷಿ ಕಾರ್ಮಿಕರಿಗೆ ಬದುಕಿನ ಅವಕಾಶಗಳನ್ನು ಸ್ಥಳೀಯವಾಗಿ ವಿಸ್ತರಿಸುವ ಪ್ರಯತ್ನ ಮಾಡಿ ಸಾಮಾಜಿಕ ರಕ್ಷಣೆ ಒದಗಿಸಬೇಕು. ೨೦೧೧-೧೨ ವಾರ್ಷಿಕ ಜನಸಂಖ್ಯಾ ಲಕ್ಷಣಗಳ ಸೂಚ್ಯಂಕಗಳ ಪ್ರಕಾರ ರಾಯಚೂರು ಜಿಲ್ಲೆಯಲ್ಲಿ ಒಟ್ಟು ಕೆಲಸಗಾರರು ೭.೩೨ ಲಕ್ಷವಿದ್ದರೆ ಇದರಲ್ಲಿ ಶೇಕಡಾ ೨೭ರಷ್ಟು ವ್ಯವಸಾಯೇತರ ಕೆಲಸಗಾರರಿದ್ದಾರೆ. ಜಿಲ್ಲೆಯಲ್ಲಿ ಒಟ್ಟು ೫.೪೪ ಲಕ್ಷ ಮುಖ್ಯ ಕೆಲಸಗಾರರಿದ್ದು ಇದರಲ್ಲಿ ಶೇಕಡಾ ೬೦.೩೫ರಷ್ಟು ಕೃಷಿ ಕಾರ್ಮಿಕರಿದ್ದಾರೆ. ದೇವದುರ್ಗ ತಾಲ್ಲೂಕಿನಲ್ಲಿ ಶೇಕಡಾ ೭೫ರಷ್ಟು ಮತ್ತು ಸಿಂಧನೂರಿನಲ್ಲಿ ಶೇಕಡಾ ೬೨.೪೭ರಷ್ಟು ಕೃಷಿ ಕಾರ್ಮಿಕರಿದ್ದಾರೆ. ರಾಯಚೂರು ಜಿಲ್ಲೆಯ ಜನರ ಮುಖ್ಯ ವೃತ್ತಿ ಕೃಷಿಯಾಗಿದೆ. ಮಳೆಯ ಏರಿಳಿತ ಅನಿಶ್ಚಿತತೆಯಿಂದ ಜಿಲ್ಲೆ ಬರಗಾಲ ಪೀಡಿತ ಪ್ರದೇಶವೆಂದು ಗುರುತಿಸಲ್ಪಟ್ಟಿದೆ. ಜಿಲ್ಲೆಯಲ್ಲಿ ಎರಡು ಪ್ರಮುಖ ನದಿಗಳು ಹರಿಯುತ್ತಿದ್ದು ನೀರಾವರಿ ಸೌಲಭ್ಯಗಳಿದ್ದರು ಗ್ರಾಮಗಳಲ್ಲಿ ಉದ್ಯೋಗವಕಾಶಗಳು ಜೀವನೋಪಾಯ ಮಾರ್ಗಗಳು ಇಲ್ಲದಂತಾಗಿ ಕೃಷಿ ಕಾರ್ಮಿಕರು ಬೇರೆ ಬೇರೆ ನಗರಗಳಿಗೆ ಬೇಸಿಗೆಯ ಪ್ರಾರಂಭದಲ್ಲೇ ವಲಸೆ ಹೋಗುತ್ತಾರೆ. ಇದು ಈ ಜಿಲ್ಲೆಯ ಸಾಮಾಜಿಕ ಆರ್ಥಿಕ ಪರಿಸ್ಥಿತಿಯನ್ನು ಸೂಚಿಸುತ್ತದೆ.

### ರಾಯಚೂರು ಜಿಲ್ಲೆಯ ಕೈಗಾರಿಕಾ ಚಿತ್ರಣ

ಜಿಲ್ಲೆಯಲ್ಲಿ ೭೦೦೦ಕ್ಕೂ ಹೆಚ್ಚು ಸಣ್ಣ ಅತೀಸಣ್ಣ ಕೈಗಾರಿಕೆಗಳು ನೋಂದಾಯಿಸಿಕೊಂಡಿವೆ. ರಾಯಚೂರು, ಲಿಂಗಸೂರು, ದೇವದುರ್ಗ, ಮಾನವಿ ಮತ್ತು ಸಿಂಧನೂರು ತಾಲ್ಲೂಕುಗಳಲ್ಲಿ ೭೩೭ ಘಟಕಗಳಿದ್ದು ಸುಮಾರು ೨೫೦೦೦ ಸಾವಿರ ಲಕ್ಷಗಳಷ್ಟು ಬಂಡವಾಳ ಹೂಡಿಕೆ ಮಾಡಲಾಗಿದೆ ಹಾಗು ೩೧೦೮೮ ಉದ್ಯೋಗಗಳನ್ನು ಸೃಷ್ಟಿಸಲಾಗಿದೆ.

**ಜಿಲ್ಲೆಯ ಪ್ರಸ್ತುತ ಅಸ್ತಿತ್ವದಲ್ಲಿರುವ ಸೂಕ್ಷ್ಮ ಸಣ್ಣ ಉದ್ಯಮಗಳು ಹಾಗೂ ಕರಕುಶಲ ಘಟಕಗಳು**

ರಾಯಚೂರು ಜಿಲ್ಲೆಯಲ್ಲಿ ಪ್ರಸ್ತುತ ವಿವಿಧ ಸ್ವರೂಪದ ಸೂಕ್ಷ್ಮ ಸಣ್ಣ ಉದ್ಯಮಗಳು ಹಾಗೂ ಕರಕುಶಲ ಘಟಕಗಳು ಅಸ್ತಿತ್ವದಲ್ಲಿದ್ದು ಕಾರ್ಯನಿರತವಾಗಿವೆ ಎನ್ನಲಾಗಿದೆ. ಅವುಗಳಲ್ಲಿ ಕೃಷಿ ಮತ್ತು ಆಹಾರ ಆಧಾರಿತ, ಹತ್ತಿ ಜವಳಿ, ಮರ ಆಧಾರಿತ ಉಪಕರಣ, ಪೇಪರ್ ಮತ್ತು ಮುದ್ರಣ ಉತ್ಪನ್ನ, ಚರ್ಮ ಆಧಾರಿತ ಉತ್ಪನ್ನಗಳು ಘಟಕಗಳು, ಕೆಮಿಕಲ್ ಆಧಾರಿತ,ರಬ್ಬರ್, ಪ್ಲಾಸ್ಟಿಕ್ ಆಧಾರಿತ, ಇಂಜಿನಿಯರಿಂಗ್ ಘಟಕಗಳು, ಎಲೆಕ್ಟ್ರಿಕಲ್ ಮತ್ತು ಎಲೆಕ್ಟ್ರಾನಿಕ್ಸ್ ಆಧಾರಿತ, ರಿಪೇರಿ ಮತ್ತು ಸೇವೆ ಮತ್ತು ಇತರೆ ಎಲ್ಲಾ ಸೇರಿ ಒಟ್ಟು ೮೨೩೬ ಘಟಕಗಳಿದ್ದು ೩೬೫೦೦ ಉದ್ಯೋಗಗಳನ್ನು ಸೃಷ್ಟಿಯಾಗಿವೆ.

**ಜಿಲ್ಲೆಯ ಬೃಹತ್ ಕೈಗಾರಿಕೆಗಳು ಮತ್ತು ಸಾರ್ವಜನಿಕ ಉದ್ಯಮಗಳು**

ರಾಯಚೂರು ಜಿಲ್ಲೆಯಲ್ಲಿ ಪ್ರಸ್ತುತ ಬೃಹತ್ ಕೈಗಾರಿಕೆಗಳು ಮತ್ತು ಸಾರ್ವಜನಿಕ ಉದ್ಯಮ ಗಳೆಂದರೆ ಹಟ್ಟಿ ಚಿನ್ನದ ಗಣಿ ಕಂಪನಿ, ಲಿಂಗಸಗೂರು ಹತ್ತಿರವಿದ್ದು ಚಿನ್ನವನ್ನು ಉತ್ಪಾದನೆ ಮಾಡುತಿದ್ದು ೪೦೧೮ ಉದ್ಯೋಗಗಳನ್ನು ಸೃಷ್ಟಿಸಿದೆ ಹಾಗೆಯೇ ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಶಕ್ತಿನಗರ, ರಾಯಚೂರು ಜಿಲ್ಲೆ ಇಲ್ಲಿ ವಿದ್ಯುತ್ ಉತ್ಫಾದನೆ ಮಾಡುತ್ತಿದೆ. ಹೀಗೆ ವಿವಿಧ ಕಂಪನಿಗಳು ಬೇರೆ ಬೇರೆ ಉತ್ಪನ್ನಗಳನ್ನು ಉತ್ಪಾದಿಸುತ್ತಿದ್ದು ಹಲವಾರು ಉದ್ಯೋಗಗಳನ್ನು ಸೃಷ್ಟಿಸಿವೆ. ಅವುಗಳಲ್ಲಿ ಕೆಲವು ಕೈಗಾರಿಕೆಗಳೆಂದರೆ ರಾಯಚೂರು ಸಾಲ್ವೆಂಟ್ ರಾಯಚೂರು, ಸಾಮಾನ್ಯ ಎಣ್ಣೆ ಬೀಜ ಬೆಳೆಗಾರರ ಸಹಕಾರ ಸಂಸ್ಥೆ ನಿಯಮಿತ ರಾಯಚೂರು ಹಾಗು ಸುರನಾ ಇಂಡಸ್ಟ್ರೀಸ್ ಲಿಮಿಟೆಡ್ ರಾಯಚೂರು.[೧೧]

ಜಿಲ್ಲೆಯಲ್ಲಿ ಅನೇಕ ಅಕ್ಕಿ ಮಿಲ್‌ಗಳಿದ್ದು, ಮುಖ್ಯವಾಗಿ ರಾಯಚೂರು ಮತ್ತು ಸಿಂಧನೂರು ತಾಲ್ಲೂಕುಗಳಲ್ಲಿ ರೈಸ್‌ಮಿಲ್‌ಗಳಿವೆ. ಬೇರೆ ಬೇರೆ ದೇಶಗಳಿಗೆ ರಾಯಚೂರು ಅಕ್ಕಿಯನ್ನುರಫ್ತು ಮಾಡುತ್ತವೆ. ಈ ಅಕ್ಕಿ ವಿಶ್ವ ಶ್ರೇಷ್ಠ ದರ್ಜೆ ಗುಣಮಟ್ಟದ್ದು ಎನ್ನಲಾಗುತ್ತದೆ.[೧೨] ರಾಯಚೂರು ಥರ್ಮಲ್ ವಿದ್ಯುತ್ ಘಟಕ ಕರ್ನಾಟಕದ ಬಹುತೇಕ ವಿದ್ಯುತ್ ಅನುಭೋಗದವನ್ನು ಪೂರೈಸುತ್ತದೆ. ರಾಯಚೂರು ಹತ್ತಿ ಉದ್ಯಮದ ಪ್ರಮುಖ ವ್ಯಾಪಾರ ಮರುಕಟ್ಟೆಯಾಗಿದೆ.[೧೩] ರಾಯಚೂರು ಜಿಲ್ಲೆ ಇಷ್ಟೆಲ್ಲಾ ಸಣ್ಣ. ಅತೀ ಸಣ್ಣ ಉದ್ಯಮ ಘಟಕಗಳು ಹಾಗೂ ಬೃಹತ್ ಕೈಗಾರಿಕೆಗಳು, ಸಾರ್ವಜನಿಕ ಉದ್ಯಮಗಳನ್ನು, ರೈಸ್ ಮಿಲ್‌ಗಳು, ಹತ್ತಿ ಮಾರುಕಟ್ಟೆಗಳನ್ನು ಹೊಂದಿದ್ದರೂ ಕೇಂದ್ರ ಪಂಚಾಯತ್ ರಾಜ್ ಸಚಿವಾಲಯದ ಪ್ರಕಾರ ದೇಶದ ಅತೀ ಹಿಂದುಳಿದ ೨೫೦ ಜಿಲ್ಲೆಗಳಲ್ಲಿ ಕರ್ನಾಟಕದ ರಾಯಚೂರು ಜಿಲ್ಲೆಯೂ ಒಂದು ಎನ್ನಲಾಗಿದೆ. ೨೦೦೬ರಲ್ಲಿ ಈ ರೀತಿ ರಾಯಚೂರು ಅತೀ ಹಿಂದುಳಿದ ದೇಶದ ಜಿಲ್ಲೆಗಳಲ್ಲಿ ಒಂದು ಎಂದು ಗುರುತಿಸಲ್ಪಟ್ಟಿತ್ತು. ಹೀಗೆ ಅತೀ ಹಿಂದು ಜಿಲ್ಲೆಗಳಲ್ಲಿ ಒಂದು ಎಂದು ಗುರುತಿಸಲ್ಪಟ್ಟು ಕರ್ನಾಟಕದ ಹಿಂದುಳಿದ ಪ್ರದೇಶಗಳ ಅನುದಾನ ನಿಧಿ ಕಾರ್ಯಕ್ರಮದಡಿ (ಬಿಆರ್‌ಜಿಎಫ್) ನೆರವನ್ನು ಪಡೆಯುತ್ತಿರುವ ಐದು ಜಿಲ್ಲೆಗಳಲ್ಲಿ ರಾಯಚೂರು ಸಹ ಅಂದು.[೧೪]

**ಜಿಲ್ಲೆಯ ಆಡಳಿತ**

ರಾಯಚೂರು, ಇದು ಜಿಲ್ಲಾ ಕೇಂದ್ರ, ಜಿಲ್ಲಾಧಿಕಾರಿ ಜಿಲ್ಲೆಯು ಪ್ರಮುಖ ಆಡಳಿತಾಧಿಕಾರಿ. ಜಿಲ್ಲಾ ಪಂಚಾಯಿತ್‌ನ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಮತ್ತೊಬ್ಬ ಮುಖ್ಯ ಜಿಲ್ಲಾ ಮಟ್ಟದ ಆಡಳಿತಾಧಿಕಾರಿ. ಜಿಲ್ಲೆಯ ಬಹುತೇಕ ಅಭಿವೃದ್ಧಿ ಕಾರ್ಯಗಳು ನಡೆಯುವುದು ಜಿಲ್ಲಾ ಪಂಚಾಯತ್ ಅಡಿಯಲ್ಲಿ. ಆಡಳಿತ ಘಟಕಗಳಲ್ಲಿ ಉಪವಿಭಾಗಗಳು ೦೧, ತಸೀಲುಗಳು ೦೫, ನಾಡ ಕಛೇರಿಗಳು ೧೦, ಹೋಬಳಿಗಳು ೩೭, ಗ್ರಾಮ ಪಂಚಾಯಿತಿಗಳು ೧೬೪, ಕಂದಾಯ ಗ್ರಾಮಗಳು ೮೩೦, ಜನ ವಸತಿ ಇರುವ ಗ್ರಾಮಗಳು ೮೩೦, ಜನ ವಸತಿ ಇಲ್ಲದ ಗ್ರಾಮಗಳು ೫೩, ವಿಧಾನ ಸಭೆ ಕ್ಷೇತ್ರಗಳು ೦೫, ಲೋಕ ಸಭಾ ಕ್ಷೇತ್ರಗಳು ೦೫, ಜಿಲ್ಲಾ ಪಂಚಾಯತ್ ಚುನಾಯಿತ ಸದಸ್ಯರು ೩೫, ಇವರಲ್ಲಿ ಗಂಡಸರು ೧೭, ಹೆಂಗಸರು ೧೮ ಒಟ್ಟು ೩೫. ಇದರಲ್ಲಿ ಪ.ಜಾ ೭ ಪ.ಪಂಗಡ ೮ ಇತರೆ ಹಿಂದುಳಿದ ವರ್ಗ ೨ ಸಾಮಾನ್ಯ ೧೮. ತಾಲ್ಲೂಕು ಪಂಚಾಯತ್ ಸದಸ್ಯರು ಒಟ್ಟು ೧೩೦, ಗ್ರಾಮ ಪಂಚಾಯತ್ ಸದಸ್ಯರು ಒಟ್ಟು ೩೨೧೮.

**೨.೬. ಜನಸಂಖ್ಯೆ**

೨೦೧೧ರ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೧೯.೨೮ ಲಕ್ಷವಿದ್ದು ಇದರಲ್ಲಿ ಗ್ರಾಮೀಣ ಜನಸಂಖ್ಯೆ ೧೨.೪೮ ಲಕ್ಷದಷ್ಟಿದೆ. ಒಟ್ಟು ಜನಸಂಖ್ಯೆಯಲ್ಲಿ ನಗರದಲ್ಲಿ ಶೇಕಡಾ ೩೫.೨೪ರಷ್ಟಿದ್ದು ಗ್ರಾಮೀಣ ಪ್ರದೇಶಗಳಲ್ಲಿ ಶೇಕಡಾ ೬೪.೭೫ರಷ್ಟಿದೆ. ನಗರ ಮತ್ತು ಗ್ರಾಮೀಣ ಎರಡೂ ಸೇರಿ ಒಟ್ಟು ೨.೯೮ ಲಕ್ಷ ಕುಟುಂಬಗಳಿವೆ.

೧೯೯೧, ೨೦೦೧ ಹಾಗೂ ೨೦೧೧ರ ಜನಗಣತಿ ಪ್ರಕಾರ ರಾಯಚೂರು ಜಿಲ್ಲೆಯ ಜನಸಂಖ್ಯೆ

| ಪ್ರದೇಶ | ೧೯೯೧ | | | ೨೦೦೧ | | | ೨೦೧೧ | | |
|---|---|---|---|---|---|---|---|---|---|
| | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು |
| ಗ್ರಾಮೀಣ | ೫.೧೨೮೦೪ | ೫.೦೬೯೫೪ | ೧೦.೧೯೭೫೮ | ೬.೧೭.೩೩೨ | ೬೧೧೮೭೧ | ೧೨.೨೯.೨೦೩ | – | – | ೧೨೪೮೯೨೫ |
| ನಗರ | ೧೭೦೪೫೪ | ೧.೬೧೫೯೭ | ೩.೩೨೦೫೧ | ೨.೧೫೦೨೦ | ೨.೩೯೮೯ | ೪.೧೯೦೦೯ | – | – | ೬೭೯೮೮೭ |
| ಒಟ್ಟು | ೬.೮೩೨೫೮ | ೬.೬೮೫೫೧ | ೧೩೫,೮೦೯ | ೮೩೨೩೫೨ | ೮.೧೫೫೬೦ | ೧೬,೪೮೨೧೨ | ೯೬೪೫೧೧ | ೯೬೪೩೦೧ | ೧೯೨೮೮೧೨ |

ಮೂಲ: ರಾಯಚೂರು ಜಿಲ್ಲಾ ಅಂಕಿ ಅಂಶಗಳ ನೋಟ ೨೦೧೧-೨೦೧೨

೧೯೯೧ ರಿಂದ ೨೦೦೧ರ ಜಿಲ್ಲೆಯ ಜನಸಂಖ್ಯೆ ಬೆಳವಣಿಗೆಯ ದರ ದಾಖಲೆಯ ಶೇಕಡಾ ೨೩.೯೩ರಷ್ಟಿದ್ದು ೨೦೦೧ ರಿಂದ ೨೦೧೧ರ ಬೆಳವಣಿಗೆ ದರ ಶೇಕಡಾ ೧೫.೫೧ರಷ್ಟಿದೆ.

- ೨೦೧೧ರ ಜಿಲ್ಲೆಯ ಒಟ್ಟು ಜನಸಂಖ್ಯೆ ೧೯೨೮೮೧೨ರಷ್ಟಿದ್ದು ಗ್ರಾಮೀಣ ಜನಸಂಖ್ಯೆ ೧೨೪೮೯೨೫ ರಷ್ಟಿದೆ.
- ಕರ್ನಾಟಕ ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ರಾಯಚೂರು ಜಿಲ್ಲೆಯ ಪ್ರಮಾಣ ೩.೧೬.

೨೦೦೧ರ ಜನಗಣತಿ ಪ್ರಕಾರ ಜಿಲ್ಲೆಯ ತಾಲ್ಲೂಕು ವಾರು ಜನಸಂಖ್ಯೆ. ಅಧ್ಯಯನ ಕೈಗೊಂಡ ತಾಲ್ಲೂಕುಗಳ ವಿವರ ಮಾತ್ರ ನೀಡಲಾಗುತ್ತಿದೆ.

| ತಾಲ್ಲೂಕು | ಪ್ರದೇಶ | ಪುರುಷ | ಮಹಿಳೆ | ಒಟ್ಟು |
|---|---|---|---|---|
| ದೇವದುರ್ಗ | ಗ್ರಾಮೀಣ | ೯೧.೭೪೯ | ೯೦೨೯೩ | ೧.೮೨೦೮೨ |
| | ನಗರ | ೧೧೩೦೪ | ೧೦೬೮೮ | ೨೧೯೯೨ |
| ಸಿಂಧನೂರು | ಗ್ರಾಮೀಣ | ೧೪೪೯೭೮ | ೧.೪೯೮೪೯ | ೨೯೮೮೬೩ |
| | ನಗರ | ೩೧೩೭೬ | ೨೯೯೧೬ | ೬೧೨೯೨ |

ಮೂಲ: ರಾಯಚೂರು ಜಿಲ್ಲಾ ಅಂಕಿ ಅಂಶಗಳ ನೋಟ (೨೦೧೧-೧೨). ಜಿಲ್ಲಾ ಸಂಖ್ಯೆ ಸಂಗ್ರಹಣಾಧಿಕಾರಿಗಳ ಕಛೇರಿ, ರಾಯಚೂರು.

ಎರಡೂ ತಾಲ್ಲೂಕುಗಳಲ್ಲಿ ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಜನಸಂಖ್ಯೆ ಹೆಚ್ಚಾಗಿರುವುದನ್ನು ಕಾಣಬಹುದು. ಜಿಲ್ಲೆಯ ಒಟ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ೩೧,೭೨೬ (೩.೧೭ಲಕ್ಷ), ಪರಿಶಿಷ್ಟ ಪಂಗಡದ ಜನಸಂಖ್ಯೆ ಒಟ್ಟು ೩೦೩೦೪೨ (೩.೦೩ಲಕ್ಷ). ಜಿಲ್ಲೆಯ ಒಟ್ಟು ಜನ ಸಂಖ್ಯೆಯಲ್ಲಿ ಶೇಕಡಾ ೧೯.೦ರಷ್ಟು ಪರಿಶಿಷ್ಟ ಜಾತಿಯ ಜನಸಂಖ್ಯೆ ಇದ್ದರೆ, ಶೇಕಡಾ ೧೮.೧೫ರಷ್ಟು ಪರಿಶಿಷ್ಟ ಪಂಗಡದ ಜನಸಂಖ್ಯೆ ಇದೆ. ಇದರಲ್ಲಿ ಶೇಕಡಾ ೩೩.೦೭ರಷ್ಟು ಅತೀ ಹೆಚ್ಚು ಪಂ.ಪಂಗಡದ ಜನಸಂಖ್ಯೆ ದೇವದುರ್ಗ ತಾಲ್ಲೂಕಿನಲ್ಲಿದೆ.

## ೨.೭. ಜಿಲ್ಲೆಯ ಜನಸಾಂದ್ರತೆ ಮತ್ತು ಲಿಂಗಾನುಪಾತ

೨೦೧೧ರ ಜನಗಣತಿ ಪ್ರಕಾರ ಜಿಲ್ಲೆಯ ಜನಸಾಂದ್ರತೆ ಪ್ರತಿ ಚದರ ಕಿಲೋ ಮೀಟರ್‌ಗೆ ೨೨೮ ಜನರಿದ್ದಾರೆ. ಇದು ೨೦೦೧ರ ಜನಗಣತಿ ಪ್ರಕಾರ ೧೯೮ ಇತ್ತು. ಲಿಂಗಾನುಪಾತದಲ್ಲಿ ಸ್ವಲ್ಪ ಹೆಚ್ಚಳವಾಗಿದೆ. ೧೯೯೧ರ ಜನಗಣತಿ ಪ್ರಕಾರ ೯೭೬, ೨೦೦೧ರ ಜನಗಣತಿ ಪ್ರಕಾರ ೯೮೩, ೨೦೧೧ರ ಜನಗಣತಿ ಪ್ರಕಾರ ೧೦೦೦ರಷ್ಟಿದೆ. ೨೦೧೧ರ ಜನಗಣತಿ ಪ್ರಕಾರ ಮಕ್ಕಳ ಲಿಂಗಾನುಪಾತ ೯೫೦ ಇದ್ದು ೨೦೦೧ರ ಜನಗಣತಿ ಪ್ರಕಾರ ಇದು ೯೬೪ರಷ್ಟಿತ್ತು. ಒಟ್ಟು ಜನ ಸಂಖ್ಯೆಯಲ್ಲಿ ೦-೦೬ ವರ್ಷದ ಮಕ್ಕಳ ಸಂಖ್ಯೆ ಶೇಕಡಾ ೧೪.೭೧ರಷ್ಟಿದ್ದು ಇದು ೨೦೦೧ರ ಜನಗಣತಿ ಪ್ರಕಾರ ಶೇ. ೧೬.೯೫ರಷ್ಟಿದ್ದು, ಶೇಕಡಾ ೨.೨೪ರಷ್ಟು ಕಡಿಮೆಯಾಗಿದೆ.

## ೨.೮. ಸಾಕ್ಷರತೆ

ಜಿಲ್ಲೆಯ ಸಾಕ್ಷರತೆ ಈ ಕೆಳಗಿನಂತಿದೆ.

| ವರ್ಗೀಕರಣ | ೧೯೯೧ | ೨೦೦೧ | ೨೦೧೧ | ದಶಕವಾರು ಹೆಚ್ಚಳ |
|---|---|---|---|---|
| ಪುರುಷ | ೪೬.೭೫ | ೬೧.೫ | ೭೦.೪೭ | ೧೫.೨೭ |
| ಮಹಿಳೆ | ೨೧.೭೦ | ೩೫.೯೦ | ೪೮.೭೩ | ೧೫.೧೪ |
| ಒಟ್ಟು | ೩೪.೩೪ | ೪೮.೮ | ೫೯.೫೬ | ೧೫.೨೦ |

ಮೂಲ: ರಾಯಚೂರು ಜಿಲ್ಲಾ ಅಂಕಿ ಅಂಶಗಳ ನೋಟ ೨೦೧೧-೧೨.

೨೦೦೧ರ ಜನಗಣತಿ ಪ್ರಕಾರ ಜಿಲ್ಲೆಯ ಗ್ರಾಮೀಣ ಸಾಕ್ಷರತೆ ನೋಡುವುದಾದರೆ ಒಟ್ಟು ಗ್ರಾಮೀಣ ಸಾಕ್ಷರತೆ ಶೇಕಡಾ ೪೨.೫ರಷ್ಟಿದ್ದು, ಇದರಲ್ಲಿ ಪುರುಷರ ಸಾಕ್ಷರತೆ ಶೇಕಡಾ ೫೬.೧ರಷ್ಟಿದ್ದರೆ ಮಹಿಳೆಯರದ್ದು ಕೇವಲ ಶೇಕಡಾ ೨೮.೯ರಷ್ಟಿದೆ. ರಾಯಚೂರು ಜಿಲ್ಲೆಯ ಸಾಕ್ಷರತೆ ರಾಜ್ಯದ ಮತ್ತು ರಾಷ್ಟ್ರದ ಸರಾಸರಿಗಿಂತ ಕಡಿಮೆ ಇದೆ. ೨೦೦೧ರ ಜನಗಣತಿ ಪ್ರಕಾರ ರಾಜ್ಯದ ಸಾಕ್ಷರತೆ ಶೇಕಡಾ ೬೩.೪೨ರಷ್ಟಿತ್ತು.

ತಾಲ್ಲೂಕುವಾರು ಸಾಕ್ಷರತೆ ದೇವದುರ್ಗ ಮತ್ತು ಸಿಂಧನೂರು ತಾಲ್ಲೂಕುಗಳ ಮಾಹಿತಿ ಮಾತ್ರ ನೀಡಲಾಗಿದೆ.

| ತಾಲ್ಲೂಕು | ಪ್ರದೇಶ | ೨೦೦೧ | | |
|---|---|---|---|---|
| | | ಪುರುಷ | ಮಹಿಳೆ | ಒಟ್ಟು |
| ದೇವದುರ್ಗ | ಗ್ರಾಮೀಣ | ೪೧.೬೯ | ೨೦.೮೯ | ೩೧.೩೭ |
| | ನಗರ | ೫೦.೧೨ | ೩೬.೩೦ | ೪೩.೪೦ |
| ಸಿಂಧನೂರು | ಗ್ರಾಮೀಣ | ೫೨.೧೫ | ೨೯.೨೦ | ೪೦.೯೬ |
| | ನಗರ | ೬೨.೬೯ | ೪೪.೨೦ | ೫೩.೬೯ |

ಮೂಲ: ರಾಯಚೂರು ಅಂಕಿ ಅಂಶ ನೋಟ ೨೦೧೧-೧೨

ಮೇಲಿನ ಕೋಷ್ಟಕದಲ್ಲಿ ನೋಡುವಂತೆ ಜಿಲ್ಲೆಯಲ್ಲಿ ದೇವದುರ್ಗ ತಾಲ್ಲೂಕಿನ ಸಾಕ್ಷರತೆ ಪ್ರಮಾಣ ಅತ್ಯಂತ ಕಡಿಮೆ ಇದೆ. ವಿಶೇಷವಾಗಿ ಮಹಿಳಾ ಸಾಕ್ಷರತೆ ಪ್ರಕಾರ ತುಂಬಾ ಕಡಿಮೆ ಇದೆ. ಅದೇ ರೀತಿ ಜಿಲ್ಲೆಯಾದ್ಯಂತ ಮಹಿಳಾ ಸಾಕ್ಷರತೆ ಕಡಿಮೆ ಇದ್ದು, ಶಿಕ್ಷಣ ಸೌಲಭ್ಯ ಹಕ್ಕಿನಿಂದ ವಂಚಿತರಾಗಿರುವುದನ್ನು ಸೂಚಿಸುತ್ತದೆ.

### ೨.೯. ಜಿಲ್ಲೆಯ ಬ್ಯಾಂಕಿಂಗ್ ವಿವರಗಳು

ಭಾರತದಲ್ಲಿ ಗ್ರಾಮೀಣ ಸಾಲ ಪೂರೈಕೆ ವ್ಯವಸ್ಥೆಯಲ್ಲಿ ಬಹು ಸಂಸ್ಥೆ ವಿಧಾನ ಇರುವಂತೆ ಕರ್ನಾಟಕ ಮತ್ತು ರಾಯಚೂರು ಜಿಲ್ಲೆಯಲ್ಲಿ ಇದೆ ವ್ಯವಸ್ಥೆಯಿದೆ. ಹಣಕಾಸು ಮಾರುಕಟ್ಟೆಯಲ್ಲಿ ಸಂಘಟಿತ ಮತ್ತು ಅಸಂಘಟಿತ ಎರಡೂ ವಲಯಗಳು ಹಣಕಾಸು ಸಾಲ ಸೌಲಭ್ಯಗಳನ್ನು ಪೂರೈಸುತ್ತಿವೆ. ಜಿಲ್ಲೆಯ ಸಾಮಾನ್ಯ ವಿವರಳ ದೃಷ್ಟಿಯಿಂದ ಈ ಕೆಳಗೆ ಸಂಘಟಿತ ಸಾಲ ಮೂಲದ ಹಣಕಾಸು ಬ್ಯಾಂಕುಗಳ ವಿವರ ಮಾತ್ರ ನೀಡಲಾಗಿದೆ. ಈ ಅಧ್ಯಯನದಲ್ಲಿ ಸಂಘಟಿತ ಮತ್ತು ಅಸಂಘಟಿತ ಹಣಕಾಸು ವಲಯಗಳ ಸಮಸ್ಯೆ ಮತ್ತು ಪರಿಹಾರಗಳ ಕಡೆ ಗಮನ ನೀಡಲಾಗಿದೆ. ಅಸಂಘಟಿತ ಮಾರುಕಟ್ಟೆಯಲ್ಲಿ ಸಾಲ ಪೂರೈಸುವವರ ಬಗ್ಗೆ ಕ್ಷೇತ್ರ ಕಾರ್ಯದಲ್ಲಿ ಸರಿಯಾದ ಮಾಹಿತಿ ದೊರೆಯಲಲ್ಲ. ಜಿಲ್ಲೆಯಲ್ಲಿ ಒಟ್ಟು ೧೮೨ ಬ್ಯಾಂಕುಗಳಿವೆ. ೯೭೬೯ ಲಕ್ಷ ಸಾಲವನ್ನು ಈ ಬ್ಯಾಂಕುಗಳು ೨೦೧೨ ಮಾರ್ಚ್ ಅಂತ್ಯಕ್ಕೆ ಕೃಷಿ ಕ್ಷೇತ್ರಕ್ಕೆ ಪೂರೈಸಿವೆ. ವಾಣಿಜ್ಯ ಬ್ಯಾಂಕುಗಳು ೧೦೫, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ೬೧, ಜಿಲ್ಲಾ ಕೇಂದ್ರಿಯ ಸಹಕಾರ ಬ್ಯಾಂಕುಗಳು ೧೧, ಕ್ಯಾಸ್ ಕಾರ್ಡ್ ಬ್ಯಾಂಕ್ (ಪಿಎಲ್‌ಡಿ) ೦೫, ಕರ್ನಾಟಕ ಸ್ಟೇಟ್ ಪೈನಾನ್ಸ್ ಕಾರ್ಪೋರೇಶನ್ ೦೧, ಪ್ರಾಥಮಿಕ ಸಹಕಾರ ಸಾಲ ಸಂಸ್ಥೆಗಳು ೧೨೪. ಎ) ವ್ಯವಸಾಯ ಸಹಕಾರ ಸಂಸ್ಥೆಗಳು ೧೨೪, ಸದಸ್ಯರ ಸಂಖ್ಯೆ ೧೬೨೭೮೩, ಬಿ) ವ್ಯವಸಾಯೇತರ ಸಹಕಾರ ಸಂಘ ೧೮೮, ಸದಸ್ಯರು ೫೩೩೪೭.[೧೫]

**ತಾಲ್ಲೂಕು ವಾರು ಕೃಷಿ ಸಹಕಾರ ಸಾಲ ಸಂಸ್ಥೆಗಳು**

| ಕ್ರ.ಸ | ತಾಲ್ಲೂಕು | ಪ್ರಾ.ಸ.ಸಾ. ಸಂಖ್ಯೆ | ಸಂಸ್ಥೆಗಳು ಸದಸ್ಯರು | DCC ಬ್ಯಾಂಕ್ | PLD ಬ್ಯಾಂಕ್ | ಗ್ರಾಮೀಣ ಬ್ಯಾಂಕು | ವಾಣಿಜ್ಯ ಬ್ಯಾಂಕ್‌ಗಳು |
|---|---|---|---|---|---|---|---|
| ೧ | ದೇವದುರ್ಗ | ೧೩ | ೧೭೯೮೮ | ೧ | ೧ | ೦೯ | ೦೮ |
| ೨ | ಲಿಂಗಸಗೂರು | ೨೪ | ೩೨೫೫೩ | ೧ | ೧ | ೦೯ | ೧೫ |
| ೩ | ಮಾವನಿ | ೩೦ | ೩೮೭೮೬ | ೨ | ೧ | ೧೩ | ೨೦ |
| ೪ | ರಾಯಚೂರು | ೨೫ | ೩೧೩೭೩ | ೬ | ೧ | ೧೫ | ೪೬ |
| ೫ | ಸಿಂಧನೂರು | ೩೨ | ೪೨೦೮೩ | ೧ | ೧ | ೧೫ | ೧೬ |
| | ಒಟ್ಟು | ೧೨೪ | ೧೬೨೭೮೩ | ೧೧ | ೦೫ | ೬೧ | ೧೦೫ |

**ಮೂಲ: ರಾಯಚೂರು ಜಿಲ್ಲಾ ಅಂಕಿ ಅಂಶಗಳು ೨೦೧೧-೧೨**

## ರಾಯಚೂರು ಜಿಲ್ಲೆಯ ಸಾರಿಗೆ ಸೌಲಭ್ಯಗಳು

ಜಿಲ್ಲೆಯಲ್ಲಿ ಉತ್ತಮ ರೈಲು ಸಾರಿಗೆ ಸೌಲಭ್ಯಗಳಿವೆ. ರಾಷ್ಟ್ರೀಯ ಹೆದ್ದಾರಿ ಉದ್ದ ಮಾಹಿತಿ ಲಭ್ಯವಿಲ್ಲ. ರಾಜ್ಯ ಹೆದ್ದಾರಿ ೧೦೦೬.೩೨ ಕಿ.ಮೀ, ಮುಖ್ಯ ಜಿಲ್ಲಾ ಹೆದ್ದಾರಿ ೧೪೮೫.೧೪ ಕಿ.ಮೀ, ಗ್ರಾಮೀಣರಸ್ತೆ ೧೯೬೪.೮೨ ಕಿ.ಮೀ.

## ಸಾರ್ವಜನಿಕ ಆರೋಗ್ಯ ಸೌಲಭ್ಯಗಳು

ಇವುಗಳಲ್ಲಿ ೨೦೧೦-೧೧ರಲ್ಲಿ ಆಲೋಪಥಿ ಆಸ್ಪತ್ರೆಗಳು ೦೫, ಆಲೋಪತಿ ಆಸ್ಪತ್ರೆಯ ಬೆಡ್‌ಗಳ ಸಂಖ್ಯೆ ೮೫೦, ಆಯುರ್ವೇಧಿಕ ಆಸ್ಪತ್ರೆಗಳು ೦೩, ಆಯುರ್ವೇದಿಕ ಆಸ್ಪತ್ರೆಗಳು ೩೧, ಸಮುದಾಯ ಅರೋಗ್ಯ ಕೇಂದ್ರಗಳು ೦೬, ಹಾಸಿಗೆಗಳು ೧೮೦, ಪ್ರಾಥಮಿಕ ಆರೋಗ್ಯ ಕ್ಷೇತ್ರ ೪೬, ಹಾಸಿಗೆಗಳು ೨೭೬, ಉಪ ಆರೋಗ್ಯ ಕೇಂದ್ರಗಳು ಖಾಸಗಿ ಆಸ್ಪತ್ರೆಗಳು ೧೮೧, ಕುಟುಂಬ ಕಲ್ಯಾಣ ಕೇಂದ್ರಗಳು ೨೦೧೨ರಲ್ಲಿ ೪೬, ಉಪಕೇಂದ್ರಗಳು ೨೦೧೨ರಲ್ಲಿ ೨೧೩, ರಕ್ತ ನಿಧಿಗಳು ೨೦೧೨ರಲ್ಲಿ ೦೫.

## ಶಿಕ್ಷಣ

ಜಿಲ್ಲೆಯಲ್ಲಿ ೨೦೧೦-೧೧ಕ್ಕೆ ಪ್ರಾಥಮಿಕ ಶಾಲೆಗಳು ೧೮೦೬, ಮಾಧ್ಯಮಿಕ ಶಾಲೆಗಳು ೩೦೭, ಪ್ರೌಢಶಾಲೆಗಳು ೩೮೨, ಕಾಲೇಜುಗಳು ೩೨ ಪದವಿ ಪೂರ್ವ ಸೇರಿ. ತಾಂತ್ರಿಕ ವಿಶ್ವವಿದ್ಯಾಲಯಗಳು ೦೮, ಮೆಡಿಕಲ್ ಕಾಲೇಜು ೦೧, ಇಂಜಿನಿಯರಿಂಗ್ ಕಾಲೇಜು ೦೧, ಕೈಗಾರಿಕಾ ತರಬೇತಿ ಕೇಂದ್ರಗಳು ೦೨, ಕಾನೂನು ಕಾಲೇಜು ೦೨ ಪಾಲಿಟಿಕ್ಸ್ ಕಾಲೇಜು ೦೨ ಹಾಗು ಸರ್ಕಾರ ಕೃಷಿ ವಿಶ್ವವಿದ್ಯಾಲಯ ಸ್ಥಾಪನೆಯಾಗಿದೆ.

## ೨.೧೦. ಅಧ್ಯಯನ ತಾಲ್ಲೂಕಗಳ ಪರಿಚಯ

ರಾಯಚೂರು ಜಿಲ್ಲೆ ಐದು ತಾಲ್ಲೂಕುಗಳಲ್ಲಿ ಎರಡು ತಾಲ್ಲೂಕುಗಳಾದ ದೇವದುರ್ಗ ಮತ್ತು ಸಿಂಧನೂರನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಯಿತು. ದೇವದುರ್ಗ ರಾಜ್ಯದಲ್ಲೆ ಅತೀ ಹಿಂದುಳಿದ ತಾಲ್ಲೂಕಾಗಿದೆ. ಮಾನವ ಅಭಿವೃದ್ಧಿ ಸೂಚ್ಯಾಂಕ, ಸಾಕ್ಷರತೆ ಸೂಚಿಗಳಿಲ್ಲಿ ಹಿಂದುಳಿದಿದ್ದು ಅತೀ ಹೆಚ್ಚು ಕೃಷಿ ಕಾರ್ಮಿಕರನ್ನು ಹೊಂದಿದೆ. ಜಿಲ್ಲೆಯ ಒಟ್ಟು ಕೆಲಸಗಾರಲ್ಲಿ ಶೇಕಡಾ ೭೦ರಷ್ಟು ಜನರು ಕೃಷಿ ಕಾರ್ಮಿಕರಾಗಿದ್ದಾರೆ. ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೧೯.೦ರಷ್ಟು ಜನರು ಪರಿಶಿಷ್ಟ ಜಾತಿಗೆ ಸೇರಿದ್ದು ಶೇಕಡಾ ೧೮.೫ರಷ್ಟು ಜನರು ಪರಿಶಿಷ್ಟ ಪಂಗಡಕ್ಕೆ ಸೇರಿದ್ದಾರೆ. ಇದರಲ್ಲಿ ದೇವದುರ್ಗ ತಾಲ್ಲೂಕಿನ ಶೇಕಡಾ ೩೩.೦೫ರಷ್ಟು ಜನರು ಪರಿಶಿಷ್ಟ ಪಂಗಡಕ್ಕೆ ಸೇರಿದ್ದಾರೆ. ಜಿಲ್ಲೆಯಲ್ಲಿ ಅತೀ ಹೆಚ್ಚು ಪರಿಶಿಷ್ಟ ಪಂಗಡದ ಜನರನ್ನು ಹೊಂದಿರುವ ತಾಲ್ಲೂಕು ದೇವದುರ್ಗ. ಹೀಗೆ ದೇವದುರ್ಗ ಅತ್ಯಂತ ಹಿಂದುಳಿದಿದ ತಾಲ್ಲೂಕಾಗಿ ರುವುದರಿಂದ ಹಾಗೂ ಸಿಂಧನೂರು ನೀರಾವರಿ ಪ್ರದೇಶವಾಗಿರುವುದರಿಂದ ಈ ಎರಡು ತಾಲ್ಲೂಕುಳನ್ನು ಸಂಶೋಧನೆಗೆ ಆಯ್ಕೆ ಮಾಡಿಕೊಳ್ಳಲಾಯಿತು. ಸಿಂಧನೂರು ತಾಲ್ಲೂಕಿನ ರಾಗಲಪರ್ವಿ

ಮತ್ತು ಯಾಪಲಪರ್ವಿ ಗ್ರಾಮಗಳನ್ನು ಅಧ್ಯಯನಕ್ಕೆ ಅಯ್ಕೆ ಮಾಡಿಕೊಳ್ಳಲಾಗಿದೆ. ರಾಗಲಪರ್ವಿ ಗ್ರಾಮ ಪಂಚಾಯಿತಿ ಕೇಂದ್ರವಾಗಿದ್ದು ಇದೇ ಪಂಚಾಯಿತಿಯ ವಲ್ಕಂದಿನ್ನಿ ಗ್ರಾಮದ ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಘವನ್ನು ಅಧ್ಯಯನಕ್ಕೆ ಒಳಪಡಿಸಲಾಯಿತು. ಅದೇ ರೀತಿ ದೇವದುರ್ಗ ತಾಲ್ಲೂಕಿನ ಹೇರಂಡೆ ಮತ್ತು ಜಾಲಹಳ್ಳಿ ಗ್ರಾಮಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ದೇವದುರ್ಗ ತಾಲ್ಲೂಕಿನ ಜಾಲಹಳ್ಳಿ ಗ್ರಾಮದ ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಘವನ್ನು ಅಧ್ಯಯನಕ್ಕೆ ಒಳಪಡಿಸಲಾಯಿತು. ಎರಡೂ ಸಹಕಾರ ಸಂಸ್ಥೆಗಳಿಂದ ಸಾಲ ಪಡೆದ ರೈತರನ್ನು ಸಂದರ್ಶನಕ್ಕೆ ಒಳಪಡಿಸಲಾಯಿತು. ಈ ಎರಡೂ ಸಹಕಾರ ಸಂಸ್ಥೆಗಳ ಕಾರ್ಯದರ್ಶಿಗಳೊಂದಿಗೆ ಸಂದರ್ಶನ ನಡೆಸಲಾಯಿತು. ರಾಯಚೂರು ಜಿಲ್ಲಾ ಉಪನಿಭಂದಕರಾದ ಶ್ರೀ ನಾಯಕ್‌ರವರೊಂದಿಗೆ ಸಹ ಸಂದರ್ಶನ ನಡೆಸಲಾಯಿತು.  ಸಿಂಧನೂರು ೧೫೯ ಚ.ಕಿ. ಭೂ ವಿಸ್ತೀರ್ಣ ಹೊಂದಿದೆ. ಸಿಂಧನೂರು ತಾಲ್ಲೂಕಿನಲ್ಲಿ ೨ ನಾಡ ಕಛೇರಿಗಳಿದ್ದು ೧೪ ಹೋಬಳಿಗಳಿಂದ ೩೪ ಗ್ರಾಮ ಪಂಚಾಯಿತಿಗಳಿವೆ. ೧೬೦ ಜನ ವಸತಿ ಇರುವ ೧೩ ಜನ ವಸತಿ ಇಲ್ಲದ ಒಟ್ಟು ೧೭೩ ಕಂದಾಯ ಗ್ರಾಮಗಳಿವೆ. ೨೦೧೧ರ ಜನಗಣತಿ ಪ್ರಕಾರ ತಾಲ್ಲೂಕಿನಲ್ಲಿ ೩.೯೨ ಲಕ್ಷ ಜನ ಸಂಖ್ಯೆ ಇದ್ದು ೨೦೦೧ರ ಜನಗಣತಿ ಪ್ರಕಾರ ೬೫ ಸಾವಿರ ಕುಟುಂಬಗಳಿವೆ. ಸಿಂಧನೂರು ತಾಲ್ಲೂಕಿನಲ್ಲಿ ೨೦೦೧ರ ಜನಗಣತಿ ಪ್ರಕಾರ ೫೯೦೦೦ ಸಾವಿರ ಪರಿಶಿಷ್ಟ ಪಂಗಡದ ಜನರಿದ್ದು ಜಿಲ್ಲೆಯಲ್ಲಿ ಒಟ್ಟು ಜನಸಂಖ್ಯೆಯಲ್ಲಿ ಪ.ಜನಾಂಗದವರು ಶೇಕಡಾ ೧೩ರಷ್ಟು ಇದ್ದಾರೆ. ಇನ್ನು ೫೪೧೧೭ರಷ್ಟು ಪರಿಶಿಷ್ಟ ಜಾತಿಯವರಿದ್ದು ಶೇಕಡಾ ೧೬.೬೦ರಷ್ಟಿದ್ದಾರೆ. ೨೦೧೧ರ ಜನಗಣತಿ ಪ್ರಕಾರ ೨೨೫ರಷ್ಟು ಜನಸಾಂದ್ರತೆ ಇದ್ದು ೯೮ ಲಿಂಗಾನುಪಾತವಿದೆ. ಸಾಕ್ಷರತೆ ೨೦೦೧ ಪ್ರಕಾರ ನಗರ ಗ್ರಾಮೀಣ ಒಟ್ಟಾಗಿ ಪರುಷರಲ್ಲಿ ಶೇಕಡಾ ೬೪.೬ರಷ್ಟು ಸಾಕ್ಷರತೆ ಇದ್ದರೆ, ಮಹಿಳೆಯರಲ್ಲಿ ಶೇಕಡಾ ೩೭.೧ರಷ್ಟು ಸಾಕ್ಷರತೆ ಇದೆ. ಗ್ರಾಮೀಣ ಭಾಗದಲ್ಲಿ ಪುರುಷರಲ್ಲಿ ಶೇಕಡಾ ೪೮.೪ರಷ್ಟು ಸಾಕ್ಷರತೆ ಇದ್ದರೆ, ಮಹಿಳೆಯರಲ್ಲಿ ಶೇಕಡಾ ೩೪.೩ರಷ್ಟು ಸಾಕ್ಷರರು ಇದ್ದಾರೆ. ಸಿಂಧನೂರು ತಾಲ್ಲೂಕಿನಲ್ಲಿ ೨೦೦೧ರ ಜನಗಣತಿ ಪ್ರಕಾರ ಒಟ್ಟು ೫೫೮೬೫ ಕೃಷಿ ಸಾಗುವಳಿದಾರರಿದ್ದಾರೆ. ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೨೯.೫೩ರಷ್ಟು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗದವರಿದ್ದಾರೆ. ೩೦೦೨ರಷ್ಟು ಗೃಹ ಕೈಗಾರಿಕೆ ಕೆಲಸಗಾರರಿದ್ದಾರೆ. ೩೧೧೦೮ ಇತರೆ ಕೆಲಸಗಾರರಿದ್ದಾರೆ. ೧.೬೦ ಲಕ್ಷ ಒಟ್ಟು ಕೆಲಸಗಾರರಿದ್ದಾರೆ. ಇದರಲ್ಲಿ ೭೭೯೬೦ರಷ್ಟು ಕೃಷಿ ಕಾರ್ಮಿಕರಿದ್ದಾರೆ ಮತ್ತು ೩೪೧೧೦ ಕೃಷಿಯೇತರ ಕೆಲಸಗಾರರಿದ್ದಾರೆ. ೧.೬೦ ಲಕ್ಷ ಹೆಕ್ಟರ್ ಭೌಗೋಳಿಕ ವಿಸ್ತೀರ್ಣದಲ್ಲಿ ೧೦೭೫ ಹೆಕ್ಟರ್ ಅರಣ್ಯವಿದೆ. ೩೯೦೫ ಹೆಕ್ಟರ್ ವ್ಯವಸಾಯೇತರ ಭೂಮಿ ಇದೆ. ೭೪೪೯ ಹೆಕ್ಟರ್ ಬಂಜರು ಭೂಮಿ ಇದೆ. ಸಾಗುವಳಿ ಮಾಡದಿರುವ ಇತರ ಭೂಮಿ ೬೨೪೪ ಹೆಕ್ಟರ್ ನಷ್ಟಿದೆ. ೧.೧೭ ಲಕ್ಷ ಹೆಕ್ಟರ್ ನಷ್ಟು ಭೂಮಿ ಬಿತ್ತನೆ ಭೂಮಿಯಾಗಿದೆ. ಸಿಂಧನೂರಿನಲ್ಲಿ ೨೯೪೦ ಪರಿಶಿಷ್ಟ ಜಾತಿಗೆ ಸೇರಿದ ಅತಿ ಸಣ್ಣ ಹಿಡುವಳಿದಾರರಿದ್ದಾರೆ. ಒಟ್ಟು ೧೭೮೧ರಷ್ಟು ಭೂ ವಿಸ್ತೀರ್ಣ ಭೂಮಿಯನ್ನು ಹೊಂದಿದ್ದಾರೆ. ಅತಿ ಸಣ್ಣ ಹಿಡುವಳಿದಾರ ಭೂ ವಿಸ್ತೀರ್ಣ ಒಂದು ಹೆಕ್ಟರ್‌ಗಿಂತ ಕಡಿಮೆ (<೧ ಹೆಕ್ಟರ್)

ಇರುತ್ತದೆ. ೨೭೭೫ ಜನ ಮತ್ತು ೧೬೭೯ ಭೂ ವಿಸ್ತೀರ್ಣ ಹೊಂದಿದ ಪರಿಶಿಷ್ಟ ಪಂಗಡದ ಅತೀ ಸಣ್ಣ ಭೂ ಹಿಡುವಳಿದಾರರಿದ್ದಾರೆ. ೨೧೫೪೭ ಇತರೆ ಅತೀ ಸಣ್ಣ ಭೂ ಹಿಡುವಳಿದಾರರಿದ್ದಾರೆ. ೧೧೭೯೬ ಭೂ ವಿಸ್ತೀರ್ಣ ಹೊಂದಿದ್ದಾರೆ. ಅಧೇ ೧೮೦೨ ಸಣ್ಣ ಹಿಡುವಳಿದಾರರು (೧–೨ ಹೆಕ್ಟರ್) ಪರಿಶಿಷ್ಟ ಜಾತಿಗೆ ಸೇರಿದರೆ, ೨೬೫೨ ಸಣ್ಣ ಭೂ ಹಿಡುವಳಿದಾರರು ಪರಿಶಿಷ್ಟ ಪಂಗಡಕ್ಕೆ ಸೇರಿದ್ದು ೧೭೩೪೦ ಇತರೆ ಸಣ್ಣ ಭೂ ಹಿಡುವಳಿದಾರರಿದ್ದಾರೆ. ಒಟ್ಟಾಗಿ ೨೧೭೯೪ ಸಣ್ಣ ಭೂ ಹಿಡುವಳಿದಾರರಿದ್ದಾರೆ. ಸಿಂಧನೂರು ತಾಲ್ಲೂಕಿನಲ್ಲಿ ೫೬೬೮ ಮಧ್ಯಮ ಭೂ ಹಿಡುವಳಿದಾರರಿದ್ದಾರೆ. (೪–೧೦ ಹೆಕ್ಟರ್ ಸಿಂಧನೂರು ತಾಲ್ಲೂಕಿನಲ್ಲಿ ಕೇವಲ ೧೬ ಪರಿಶಿಷ್ಟ ಜಾತಿಯ ದೊಡ್ಡ ಹಿಡುವಳಿದಾರರಿದ್ದು (೧೦ ಹೆಕ್ಟರ್ ಗೂ ಹೆಚ್ಚು) ೧೮೮.೪ ಹೆಕ್ಟರ್ ಭೂ ವಿಸ್ತೀರ್ಣ ಹೊಂದಿದ್ದಾರೆ. ೫೯೧ ದೊಡ್ಡ ಭೂ ಹಿಡುವಳಿದಾರರು ಇತರೆ ಜನಾಂಗಕ್ಕೆ ಸೇರಿದ್ದು ೭೫೩೬ ಹೆಕ್ಟರ್ ಭೂ ವಿಸ್ತೀರ್ಣ ಹೊಂದಿದ್ದಾರೆ. ಒಟ್ಟು ೬೫೨ ದೊಡ್ಡ ಭೂ ಹಿಡುವಳಿದರರಿದ್ದು ೮೨೬೫ ಹೆಕ್ಟರ್ ಭೂ ವಿಸ್ತೀರ್ಣ ಹೊಂದಿದ್ದಾರೆ. ಒಟ್ಟು ದೊಡ್ಡ ಭೂ ಹಿಡುವಳಿದಾರರಲ್ಲಿ ಶೇಕಡಾ ೦.೦೨ರಷ್ಟು ಭೂಮಿಯು ಪರಿಶಿಷ್ಟ ಜಾತಿಗೆ ಸೇರಿದ್ದರೆ ಶೇ ೦.೦೬ರಷ್ಟು ಭೂಮಿ ಪರಿಶಿಷ್ಟ ಜನಾಂಗಕ್ಕೆ ಸೇರಿದೆ. ಶೇಕಡಾ ೯೧.೧೮ರಷ್ಟು ಭೂಮಿ ಇತರೆ ಜನಾಂಗದ ದೊಡ್ಡ ಭೂ ಹಿಡುವಳಿದಾರರಿಗೆ ಸೇರಿದೆ. ಈ ಅಂಕಿ ಅಂಶಗಳ ಪ್ರಕಾರ ಅತೀ ಹೆಚ್ಚು ಭೂಮಿಯನ್ನು– ಸಂಪತ್ತು ಅಥವಾ ಭೂ ವಿಸ್ತೀರ್ಣ ಇತರೇ ಜನಾಂಗಕ್ಕೆ ಸೇರಿದ ದೊಡ್ಡ ರೈತರ ಹಿಡಿತದಲ್ಲಿದೆ. ಇತರೆ ಜನಾಂಗದಲ್ಲಿ ಲಿಂಗಾಯತ ಜಾತಿಯ ರೈತರು ಪ್ರಬಲರಾಗಿದ್ದಾರೆ.

ಜಿಲ್ಲೆಯಲ್ಲಿ ಒಟ್ಟು ೫ ತಾಲ್ಲೂಕುಗಳಿಂದ ೪೪೬೮ ದೊಡ್ಡ ಭೂ ಹಿಡುವಳಿದಾರರಿದ್ದು ೫೯೪೨೯.೯೩ ಸಾವಿರ ಹೆಕ್ಟರ್‌ರಷ್ಟು ಭೂ ವಿಸ್ತೀರ್ಣವನ್ನು ಹೊಂದಿದ್ದಾರೆ. ಇದರಲ್ಲಿ ೩೮೫೯ ದೊಡ್ಡ ಭೂ ಹಿಡುವಳಿದಾರರು ಇತರೇ ಜನಾಂಗಕ್ಕೆ ಸೇರಿದ್ದು ಒಟ್ಟು ೫೧೩೭೧ ಸಾವಿರ ಹೆಕ್ಟರ್ ನಷ್ಟು ಭೂ ವಿಸ್ತೀರ್ಣ ಹೊಂದಿದ್ದಾರೆ. ಒಟ್ಟು ೪೮೦ ದೊಡ್ಡ ಭೂ ಹಿಡುವಳಿದಾರರು ಪರಿಶಿಷ್ಟ ಪಂಗಡಕ್ಕೆ ಸೇರಿದ್ದ ೬೧೭೧ ಹೆಕ್ಟರ್ ಭೂ ವಿಸ್ತೀರ್ಣ ಹೊಂದಿದ್ದಾರೆ. ಅದೇ ರೀತಿ ೧೪೯ ದೊಡ್ಡ ಭೂ ಹಿಡುವಳಿದಾರರು ಪರಿಶಿಷ್ಟ ಜಾತಿಗೆ ಸೇರಿದ್ದ ೧೮೮೬ ಹೆಕ್ಟರ್ ಭೂ ವಿಸ್ತೀರ್ಣ ಹೊಂದಿದ್ದಾರೆ. ಅಂಕಿಅಂಶಗಳ ಪ್ರಕಾರ ಶೇಕಡಾ ೧೦.೧೪ರಷ್ಟು ದೊಡ್ಡ ಭೂ ಹಿಡುವಳಿದಾರರು ಪರಿಶಿಷ್ಟ ಪಂಗಡಕ್ಕೆ ಸೇರಿದ್ದ ಒಟ್ಟು ದೊಡ್ಡ ಭೂ ಹಿಡುವಳಿದಾರರ ಭೂ ವಿಸ್ತೀರ್ಣದಲ್ಲಿ ಶೇಕಡಾ ೧೦.೩೮ರಷ್ಟು ದೊಡ್ಡ ಭೂ ಹಿಡುವಳಿಯನ್ನು ಹೊಂದಿದ್ದಾರೆ. ಅದೇ ರೀತಿ ಒಟ್ಟು ದೊಡ್ಡ ಭೂ ಹಿಡುವಳಿದಾರರಲ್ಲಿ ಕೇವಲ ಶೇಕಡಾ ೦೩.೩೩ರಷ್ಟು ದೊಡ್ಡ ಭೂ ಹಿಡುವಳಿದಾರರು ಪರಿಶಿಷ್ಠ ಜಾತಿಗೆ ಸೇರಿದ್ದು ಕೇವಲ ಶೇ ೦೩.೧೭ರಷ್ಟು ದೊಡ್ಡ ಭೂ ಹಿಡುವಳಿ ವಿಸ್ತೀರ್ಣ ಹೊಂದಿದ್ದಾರೆ. ಶೇಕಡಾ ೮೫.೯೨ರಷ್ಟು ದೊಡ್ಡ ಭೂ ಹಿಡುವಳಿದಾರರು ಇತರೆ ಜನಾಂಗಕ್ಕೆ ಸೇರಿದ್ದು, ಒಟ್ಟು ಭೂ ಹಿಡುವಳಿಯಲ್ಲಿ ಶೇಕಡಾ ೮೬.೪೪ರಷ್ಟು ದೊಡ್ಡ ಭೂ ಹಿಡವಳಿ ವಿಸ್ತೀರ್ಣವನ್ನು ತಮ್ಮ

ಹಿಡಿತದಲ್ಲಿ ಇಟ್ಟುಕೊಂಡಿದ್ದಾರೆ. ಇತರೇ ಜನಾಂಗದವರು ಎಂದರೆ ಪ್ರಮುಖವಾಗಿ ಲಿಂಗಾಯತರು, ಕುರುಬರು ಮತ್ತು ಇತರರು. ಭೂಮಿ ಪ್ರಮುಖ ಆಸ್ತಿ ಸಂಪತ್ತಾಗಿ ಕೆಲವೇ ಕೆಲವರ ಹಿಡಿದಲ್ಲರುವುದನ್ನು ಕಾಣಬಹುದು.[೧] ಜಿಲ್ಲೆಯ ಒಟ್ಟು ೮೪೪೨ ಚದರ ಕಿ.ಮೀ ಭೂ ವಿಸ್ತೀರ್ಣದಲ್ಲಿ ದೇವದುರ್ಗ ತಾಲ್ಲೂಕು ೧೫೦೮ ಚ.ಕಿ.ಮಿ ಹೊಂದಿದೆ. ಇದು ೨ ನಾಡ ಕಛೇರಿಗಳು, ೪ ಹೋಬಳಿಗಳು ೩೯ ಗ್ರಾಮ ಲೆಕ್ಕಿಗರ ವೃತ್ತಗಳನ್ನು ೨೮ ಗ್ರಾಮ ಪಂಚಾಯಿತಿಗಳನ್ನು ಒಳಗೊಂಡಿದೆ. ೦೧ ಪಟ್ಟಣ, ೨೦೦೧ರ ಜನಗಣತಿ ಪ್ರಕಾರ ೧೭೩ ಜನ ವಸತಿ ಇರುವ, ೧೫ ಜನ ವಸತಿ ಇಲ್ಲದ ಒಟ್ಟು ೧೮೮ ಗ್ರಾಮಗಳಿವೆ. ೧೮೮ ಗ್ರಾಮಗಳಲ್ಲಿ ಎಲ್ಲವುಕ್ಕೂ ವಿದ್ಯುಚ್ಛಕ್ತಿ ಸಂಪರ್ಕವಿದೆ. ಈ ತಾಲ್ಲೂಕಿನ ೧೨ ಉಪಗ್ರಾಮಗಳು ಅಥವಾ ಹ್ಯಾಮ್ಲಟ್‌ಗಳಿಗೆ ವಿದ್ಯುತ್ ಸಂಪರ್ಕವಿಲ್ಲ. ತಾಲ್ಲೂಕಿಲ್ಲಿ ಒಟ್ಟು ೨೦೧೧ರಜನಗಣತಿ ಪ್ರಕಾರ ೨.೮೧ ಲಕ್ಷ ಜನರಿದ್ದಾರೆ. ಇವರಲ್ಲಿ ೧.೪೦ ಲಕ್ಷ (೧೪೮೯೧೯) ಪುರುಷರು, ೧.೪೦ ಲಕ್ಷ (೧೪೦೦೨೦) ಮಹಿಳೆಯರಿದ್ದಾರೆ. ೨೦೦೧ರ ಜನಗಣತಿ ಪ್ರಕಾರ ತಾಲ್ಲೂಕಿನಲ್ಲಿ ಗ್ರಾಮೀಣ ಪ್ರದೇಶದಲ್ಲಿ ೩೩೪೯೬ ಹಾಗೂ ನಗರ ಪ್ರದೇಶದಲ್ಲಿ ೩೬೫೬ ಒಟ್ಟು ೩೭೧೫೨ ಕುಟುಂಬಗಳಿವೆ. ೨೦೦೧ ಜನಗಣತಿ ಪ್ರಕಾರ ದೇವದುರ್ಗ ತಾಲ್ಲೂಕಿನಲ್ಲಿ ಗ್ರಾಮೀಣ ಪ್ರದೇಶದಲ್ಲಿ ೨೦೦೪೬೩ ಹಾಗೂ ನಗರ ಪ್ರದೇಶದಲ್ಲಿ ೨೧೯೪ ಜನ ಸಂಖ್ಯೆ ಇದೆ. ೨೦೦೧ ಜನಗಣತಿ ಪ್ರಕಾರ ದೇವದುರ್ಗ ತಾಲ್ಲೂಕಿನಲ್ಲಿ ನಗರ, ಗ್ರಾಮೀಣ ಎರಡನ್ನು ಸೇರಿಸಿ ಒಟ್ಟು ೪೦೬೮೯ ಜನ ಪರಿಶಿಷ್ಟ ಜಾತಿಗೆ ಸೇರಿದ್ದು ಒಟ್ಟು ಜನಸಂಖ್ಯೆಯಲ್ಲಿ ಪ್ರತಿಶಕ ಶೇಕಡಾ ೧೯.೯ರಷ್ಟು ಜನರಿದ್ದಾರೆ. ಅದೇ ರೀತಿ ೨೦೦೧ರ ಜನಗಣತಿ ಪ್ರಕಾರ ಈ ತಾಲ್ಲೂಕಿನಲ್ಲಿ ನಗರ ಗ್ರಾಮೀಣ ಎರಡನ್ನು ಸೇರಿಸಿ ಒಟ್ಟು ೬೯೧೩೧ ಪರಿಶಿಷ್ಟ ಪಂಗಡದ ಜನ ಸಂಖ್ಯೆ ಇದ್ದ ಒಟ್ಟು ಜನಸಂಖ್ಯೆಗೆ ಪ್ರತಿಶತ ಪರಿಶಿಷ್ಟ ಪಂಗಡದ ಜನಸಂಖ್ಯೆ ಶೇಕಡ ೩೩%. ೨೦೧೧ರ ಜನಗಣತಿ ಪ್ರಕಾಶ ೧೪೮ ಸಾಂದ್ರತೆ ಮತ್ತು ೯೮೨ರ ಲಿಂಗಾನುಪಾತವಿದೆ. ೦-೬ ವಯೋಮಾನದ ಅನುಪಾತ ೯೭೦ ಇದೆ. ತಾಲ್ಲೂಕಿನ ಒಟ್ಟು ಸಾಕ್ಷರತೆ ಶೇಕಡಾ ೩೮.೩ರಷ್ಟಿದೆ. ಇದರಲ್ಲಿ ಪುರುಷ ಸಾಕ್ಷರತೆ ಶೇಕಡಾ ೫೦.೧ರಷ್ಟಿದ್ದ ಮಹಿಳಾ ಸಾಕ್ಷರತೆ ಕೇವಲ ೨೬.೩ರಷ್ಟಿದೆ. ಜಿಲ್ಲೆಯ ಐದು ತಾಲ್ಲೂಕುಗಳಲ್ಲಿ ಅತ್ಯಂತ ಕಡಿಮೆ ಸಾಕ್ಷರತೆ ಇರುವ ತಾಲ್ಲೂಕು ದೇವದುರ್ಗ. ಲಿಂಗಸಗೂರು ೫೧.೦ ಮಾನವಿ ೫೩, ರಾಯಚೂರು ೫೫.೬, ಸಿಂಧನೂರು ೫೦.೮. ಮಹಿಳಾ ಸಾಕ್ಷರತೆ ಉಳಿದ ಎಲ್ಲಾ ತಾಲ್ಲೂಕಿಗಿಂತ ಕಡಿಮೆ ಇದೆ. ಈ ಅಂಕಿ ಅಂಶಗಳು ದೇವದುರ್ಗ ತಾಲ್ಲೂಕಿನ ಶೈಕ್ಷಣಿಕ ಸ್ಥಿತಿಗತಿಯನ್ನು ಸೂಚಿಸುತ್ತಾ ಶೈಕ್ಷಣಿಕವಾಗಿ ಹಿಂದುಳಿದಿರುವುದನ್ನು ಪ್ರತಿಬಿಂಬಿಸುತ್ತದೆ. ಗ್ರಾಮೀಣ ಸಾಕ್ಷರತೆ ಒಟ್ಟು ೩೬.೬ರಷ್ಟಿದ್ದು ಇದರಲ್ಲಿ ಪುರುಷ ಸಾಕ್ಷರತೆ ೪೮.೭ ಮಹಿಳಾ ಸಾಕ್ಷರತೆ ಕೇವಲ ೨೪.೮ರಷ್ಟಿದೆ. ಗ್ರಾಮಿಣ ಪ್ರದೇಶದ ಒಟ್ಟು ಸಾಕ್ಷರತೆ ಹಾಗೂ ಮಹಿಳಾ ಸಾಕ್ಷರತೆಯು ಉಳಿದ ತಾಲ್ಲೂಕುಗಳಿಂತ ಕಡಿಮೆ ಇದೆ. ಜಿಲ್ಲೆಯ ೩೧೪೧೩೧ (೩.೧೪) ಲಕ್ಷ ಕೃಷಿ ಕಾರ್ಮಿಕರಿದ್ದು ಇದರಲ್ಲಿ ದೇವದುರ್ಗ ತಾಲ್ಲೂಕಿನಲ್ಲಿ ನಗರ ಮತ್ತು ಗ್ರಾಮೀಣ ಎರಡು ಸೇರಿಸಿ ೪೧೫೬೩ ಕೃಷಿ ಕಾರ್ಮಿಕರಿದ್ದಾರೆ. ಇದರಲ್ಲಿ ಮಹಿಳಾ ಕೃಷಿ ಕಾರ್ಮಿಕರು ೨೩೮೩೦ರಷ್ಟಿದ್ದಾರೆ. ಪುರುಷರು ೧೭೭೩೩ರಷ್ಟಿದ್ದಾರೆ.

ಅಂದರೆ ಶೇಕಡಾ ೫೭ರಷ್ಟು ಮಹಿಳಾ ಕೂಲಿ ಕಾರ್ಮಿಕರಿದ್ದಾರೆ. ಮಹಿಳಾ ಕೂಲಿ ಕಾರ್ಮಿಕರ ಸಂಖ್ಯೆ ಹೆಚ್ಚಾಗಿದೆ. (ಜಿಲ್ಲೆಯಲ್ಲಿ ಗ್ರಾಮೀಣ ಪ್ರದೇಶದ ಒಟ್ಟು ಕೂಲಿ ಕಾರ್ಮಿಕ ಸಂಖ್ಯೆ ೩೧೪೧೩೧ರಲ್ಲಿ ಮಹಿಳೆಯರು ೧೯೫೧೬೫ (೧.೯೫ ಲಕ್ಷ) ಪರುಷರು ೧.೧೮ಲಕ್ಷ. ಜಿಲ್ಲೆಯ ಒಟ್ಟು ಕೃಷಿ ಕಾರ್ಮಿಕರಲ್ಲಿ ಶೇ ೬೨.೧೨ರಷ್ಟು ಮಹಿಳಾ ಕೃಷಿ ಕಾರ್ಮಿಕರಿದ್ದಾರೆ.

**ಜನಸಂಖ್ಯಾ ಲಕ್ಷಣಗಳ ಸೂಚ್ಯಾಂಕಗಳು–೨೦೧೧–೧೨**

**ತಾಲ್ಲೂಕುವಾರು ವಿವರ**

| ಕ್ರ.ಸ. | ತಾಲ್ಲೂಕು | ಒಟ್ಟು ವ್ಯವಸಾಯೇತರ ಕೆಲಸ ಗಾರರು | ಒಟ್ಟು ಕೆಲಸ ಗಾರರು | ಪ್ರತಿಶತ ವ್ಯವಸಾಯೇತರ ಕೆಲಸ ಗಾರರ ಸಂಖ್ಯೆ | ಒಟ್ಟು ಕೃಷಿ ಕಾರ್ಮಿಕರು | ಒಟ್ಟು ಮುಖ್ಯ ಕೆಲಸ ಗಾರರು | ಪ್ರತಿಶತ ಕೃಷಿ ಕಾರ್ಮಿಕರು |
|---|---|---|---|---|---|---|---|
| ೧ | ದೇವದುರ್ಗ | ೧೯೫೮೨ | ೮೯೦೬೯ | ೨೨ | ೪೧೫೬೩ | ೫೫೩೫೨ | ೭೫.೦೮ |
| ೨ | ಸಿಂಧನೂರು | ೩೪೧೧೦ | ೧೬೭೯೩೫ | ೨೦ | ೭೭೯೬೦ | ೧೨೪೭೪೪ | ೬೨.೪೯ |

**ಮೂಲ:** ಜಿಲ್ಲಾ ಪಂಚಾಯತ್ (೨೦೧೧–೧೨). ರಾಯಚೂರು ಜಿಲ್ಲಾ ಅಂಕಿ ಅಂಶಗಳ ನೋಟ–೨೦೧೧–೧೨

ಜಿಲ್ಲೆಯ ಒಟ್ಟು ಮುಖ್ಯ ಕೆಲಸಗಾರರು ೫.೪೪ ಲಕ್ಷ, ದೇವದುರ್ಗ ತಾಲ್ಲೂಕಿನ ಮುಖ್ಯ ಕೆಲಸಗಾರರು ೫೫೩೫೨, ಇದರಲ್ಲಿ ಒಟ್ಟು ಕೃಷಿ ಕಾರ್ಮಿಕರ ಸಂಖ್ಯೆ ೪೧೫೬೩, ಅಂದರೆ ಶೇಕಡಾ ೭೫.೦೮ರಷ್ಟು ಕೃಷಿ ಕಾರ್ಮಿಕರು. ಸಿಂಧನೂರು ೧೨೪೭೪೪ ಮುಖ್ಯ ಕೆಸಲಗಾರರು ಇದರಲ್ಲಿ ಕೃಷಿ ಕಾರ್ಮಿಕರು ೭೭೯೬೦ ಅಂದರೆ ೬೨.೪೯ರಷ್ಟು ಕೃಷಿ ಕಾರ್ಮಿಕರು. ಜಿಲ್ಲೆಯ ಒಟ್ಟು ಮುಖ್ಯ ಕೆಲಸಗಾರರು ೫.೪೪ ಇದರಲ್ಲಿ ಕೃಷಿ ಕಾರ್ಮಿಕರ ಸಂಖ್ಯೆ ಒಟ್ಟು ೩.೨೮ ಲಕ್ಷ ಅಂದರೆ ಕೃಷಿ ಕಾರ್ಮಿಕರು ಜಿಲ್ಲೆಯಲ್ಲಿ ಶೇಕಡಾ ೬೦ರಷ್ಟು.

ದೇವದುರ್ಗ ತಾಲ್ಲೂಕಿನ ಭೂಮಿಯ ಬಳಕೆಯಲ್ಲಿ ೨೦೧೧–೧೨ರ ಪ್ರಕಾರ ೧೫೮೭೯ ಹೆಕ್ಟರ್ ಭೌಗೋಳಿಕ ವಿಸ್ತೀರ್ಣದಲ್ಲಿ ೫೩೦೧ ಹೆಕ್ಟರ್ ಅರಣ್ಯ, ೪೯೯ ಹೆಕ್ಟರ್ ವ್ಯವಸಾಯೇತರ ಭೂಮಿ, ೪೯೭೯ ಹೆಕ್ಟರ್ ಬಂಜರು ಭೂಮಿ, ಸಾಗುವಳಿ ಮಾಡದಿರುವ ಇತರ ಒಟ್ಟು ಭೂಮಿ ೯೩೫೫ ಹೆಕ್ಟರ್, ಒಟ್ಟು ಬೀಳು ಭೂಮಿ ೫೦೨೫೨ ಹೆಕ್ಟರ್, ಒಟ್ಟು ನಿವ್ವಳ ಬಿತ್ತನೆ ಭೂಮಿ ೭೬೮೯೩ ಸಾವಿರ ಹೆಕ್ಟರ್. ಜಿಲ್ಲೆಯಲ್ಲಿ ಒಟ್ಟು ೧೫೮೮೧ ಪರಿಶಿಷ್ಟ ಜಾತಿಯ ಅತಿ ಸಣ್ಣ ಹಿಡುವಳಿದಾರರಿದ್ದು ಇದರಲ್ಲಿ ದೇವದುರ್ಗ ತಾಲ್ಲೂಕಿನಲ್ಲಿ ಒಟ್ಟು ೩೫೩೧ರಷ್ಟಿದ್ದು, ೨೧೭೯

ಹೆಕ್ಟರ್ ಭೂ ವಿಸ್ತೀರ್ಣ ಹೊಂದಿದ್ದಾರೆ. ಅದೇ ರೀತಿ ಜಿಲ್ಲೆಯ ಒಟ್ಟು ೧೯೪೬ ಪರಿಶಿಷ್ಟ ಪಂಗಡದ ಅತೀ ಸಣ್ಣ ಭೂ ಹಿಡುವಳಿದಾರರಿದ್ದು ೧೧೪೦೪.೮೪ ಹೆಕ್ಟರ್ ಭೂ ವಿಸ್ತೀರ್ಣ ಹೊಂದಿದ್ದರೆ ದೇವದುರ್ಗದ ತಾಲ್ಲೂಕಿನಲ್ಲಿ ಅತಿ ಹೆಚ್ಚು ೫೫೧೭ ಪರಿಶಿಷ್ಟ ಪಂಗಡದ ಅತೀ ಸಣ್ಣ ಭೂ ಹಿಡುವಳಿದಾರರಿದ್ದು ೩೨೨೩.೩೧ ಹೆಕ್ಟರ್ ಭೂಮಿ ಹೊಂದಿದ್ದಾರೆ. ಜಿಲ್ಲೆಯ ಒಟ್ಟು ೧.೦೧ ಲಕ್ಷ ಇತರೇ ಜನಾಂಗದ ಅತಿ ಸಣ್ಣ ಭೂ ಹಿಡುವಳಿದಾರರಿದ್ದು ಇದರಲ್ಲಿ ೧೬೮೭೩ ಇತರೆ ಅತೀ ಸಣ್ಣ ಭೂ ಹಿಡುವಳಿದಾರರು ದೇವದುರ್ಗ ತಾಲ್ಲೂಕಿಗೆ ಸೇರಿದ್ದಾರೆ. ೩೬೭೧ ಪರಿಶಿಷ್ಟ ಜಾತಿಯ ಸಣ್ಣ ಭೂ ಹಿಡುವಳಿದಾರರಿದ್ದ ೫೨೮೨ ಹೆಕ್ಟರ್ ಭೂ ವಿಸ್ತೀರ್ಣ ಹೊಂದಿದ್ದು. ೬೦೨೦ ಪರಿಶಿಷ್ಟ ಜನಾಂಗದ ಸಣ್ಣ ಭೂ ಹಿಡುವಳಿದಾರರಿದ್ಧಾರೆ. ಜಿಲ್ಲೆಯ ೨೧೨೪೪ ಪರಿಶಿಷ್ಟ ಜನಾಂಗದ ಸಣ್ಣ ಭೂ ಹಿಡುವಳಿದಾರರಲ್ಲಿ ೬೦೨೦ ಜನ ದೇವದುರ್ಗ ತಾಲ್ಲೂಕಿನಲ್ಲಿದ್ದಾರೆ. ಅಂದರೆ ಜಿಲ್ಲೆಯಲ್ಲಿ ಅತೀ ಹೆಚ್ಚು ಪರಿಶಿಷ್ಟ ಜನಾಂಗದ ಸಣ್ಣ ಭೂ ಹಿಡುವಳಿದಾರರಿವುದು ದೇವದುರ್ಗ ತಾಲ್ಲೂಕಿನಲ್ಲಿ. ಜಿಲ್ಲೆಯಾದ್ಯಂತ ೧.೧೧ ಲಕ್ಷ ಇತರೇ ಜನಾಂಗದ ಸಣ್ಣ ಭೂ ಹಿಡುವಳಿದಾರರಿದ್ದ ದೇವದುರ್ಗ ತಾಲ್ಲೂಕಿನಲ್ಲಿ ೨೦೯೨ ಜನರಿದ್ದಾರೆ. ಜಿಲ್ಲೆಯ ಒಟ್ಟು ೩.೩೨ ಲಕ್ಷ ಭೂ ಹಿಡುವಳಿದಾರರಲ್ಲಿ ಇದರಲ್ಲಿ ೫೭೭೫೩ ಭೂ ಹಿಡುವಳಿದಾರರು ದೇವದುರ್ಗಕ್ಕೆ ಸೇರಿದ್ದಾರೆ. ಅಂದರೆ ಜಿಲ್ಲೆಯಲ್ಲೇ ಕಡಿಮೆ ಭೂ ಹಿಡುವಳಿದಾರರಿರುವ ತಾಲ್ಲೂಕು ದೇವದುರ್ಗ. ಇತರೇ ತಾಲ್ಲೂಕುಗಳಾದ ಲಿಂಗಸಗೂರು ೬೮೭೫೪, ಮಾನವಿ ೭೪೩೦೫, ರಾಯಚೂರು ೪೯೫೩, ಸಿಂಧನೂರು ೭೧೨೬೮ ಭೂ ಹಿಡುವಳಿದಾರರನ್ನು ಹೊಂದಿದೆ. ೪೯೩ ಇತರೇ ಜನಾಂಗದ ಮಧ್ಯಮ ಭೂ ಹಿಡುವಳಿದಾರರಿದ್ದು ಒಟ್ಟು ೫೭೯೦ ಮಧ್ಯಮ ಭೂ ಹಿಡುವಳಿದಾರರಿದ್ದಾರೆ. ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿಗೆ ಸೇರಿದ ೩೪ ಜನ ದೊಡ್ಡ ಭೂ ಹಿಡಯವಳಿದಾರರಿದ್ದು ೪೨೬.೨೨ ಹೆಕ್ಟರ್ ಭೂಮಿ ಹೊಂದಿದ್ದಾರೆ. ೧೨೧ ಪರಿಶಿಷ್ಟ ಪಂಗಡ ದೊಡ್ಡ ಭೂ ಹಿಡುವಳಿದಾರರಿದ್ದ ೧೫೩೦.೧೭ ಭೂ ವಿಸ್ತೀರ್ಣ ಹೊಂದಿದ್ದಾರೆ. ಅದೇ ರೀತಿ ೬೪೯ ಇತರೇ ಜನಾಂಗದ ದೊಡ್ಡ ಭೂ ಹಿಡುವಳಿದಾರರಿದ್ದ ೮೭೨೧.೮೪ ಹೆಕ್ಟರ್ ಭೂ ವಿಸ್ತೀರ್ಣ ಹೊಂದಿದ್ದಾರೆ. ದೇವದುರ್ಗ ತಾಲ್ಲೂಕಿನಲ್ಲಿ ಒಟ್ಟು ೮೦೪ ದೊಡ್ಡ ಭೂ ಹಿಡುವಳಿದಾರರಿದ್ದ ೧೦೬೭೮.೩೩ ಹೆಕ್ಟರ್ ಭೂ ವಿಸ್ತೀರ್ಣ ಹೊಂದಿದ್ದಾರೆ. ೮೦೪ ಒಟ್ಟು ದೊಡ್ಡ ಭೂ ಹಿಡುವಳಿದಾರರು ಇತರೇ ಜನಾಂಗಕ್ಕೆ ಸೇರಿದ್ದ ೮೭೨೧.೯೪ ಹೆಕ್ಟರ್ ಭೂಮಿಯನ್ನು ಹೊಂದಿದ್ದಾರೆ ಅಂದರೆ ಒಟ್ಟು ದೊಡ್ಡ ಭೂ ಹಿಡುವಳಿದಾರರ ಭೂಮಿಯಲ್ಲಿ ಶೇಕಡಾ ೮೭.೬೭ ಭೂಮಿಯನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿದ್ದಾರೆ. ಭೂಮಿ ಸಂಪತ್ತಿನ ಅಸಮಾನತೆಯನ್ನು ಇದು ಸೂಚಿಸುತ್ತದೆ. ಬದುಕಿನ ಭದ್ರತೆಯಾದ ಭೂಮಿ ಕೆಲವರ ಹಿಡಿತದಲ್ಲಿರುವುದನ್ನ ಸೂಚಿಸುತ್ತದೆ. ಶೇಕಡಾ ೮೧.೬೭ರಷ್ಟು ಭೂ ಇತರೇ ಜನಾಂಗಗಳಾದ ಲಿಂಗಾಯತ, ಕುರುಬ ಜನಾಂಗದ ವಶದಲ್ಲಿರುವುದನ್ನು ಕಾಣಬಹುದು. ಪರಿಶಿಷ್ಟರ ಜನಸಂಖ್ಯೆ ಹೆಚ್ಚು ಹೆಚ್ಚಾಗಿದ್ದು ಕಡಿಮೆ ಭೂ ಒಡೆತನ ಹೊಂದಿರುವುದನ್ನು ನೋಡಬಹುದು. ದೇವದುರ್ಗ ತಾಲ್ಲೂಕಿನಲ್ಲಿ ೪೯ ಪ್ರೌಢಶಾಲೆಗಳಿವೆ. ಒಂದು ಸರ್ಕಾರಿ ಆಸ್ಪತ್ರೆ ಇದ್ದು ೩ ನರ್ಸಿಂಗ್

ಹೋಂಗಳಿವೆ. ೪೫ ಖಾಸಗಿ ನರ್ಸಿಂಗ್ ಹೋಂಗಳಿವೆ. ಒಟ್ಟು ೧೯ ಬ್ಯಾಂಕ್ ಶಾಖೆಗಳಿದ್ದ ೮೮೦೨ ಲಕ್ಷ ಕೃಷಿ ಸಾಲ ನೀಡಲಾಗಿದೆ. ತಾಲ್ಲೂಕಿನಲ್ಲಿ ಒಟ್ಟು ೨೦೧೧-೧೨ರ ಸಾಲಿನಲ್ಲಿ ೧೫ ರೈತರ ಆತ್ಮಹತ್ಯೆ ಪ್ರಕರಣಗಳು ಸಂಭವಿಸಿದ್ದು ೩ ಪ್ರಕರಣಗಳಿಗೆ ೩ ಲಕ್ಷ ಪರಿಹಾರ ನೀಡಲಾಗಿದೆ.

**ಅಧ್ಯಯನ ಗ್ರಾಮಗಳು**

ಸಿಂಧನೂರು ತಾಲ್ಲೂಕು ಜವಳಗೇರ ಹೋಬಳಿಯ ರಾಗಲಪರ್ವಿ ಗ್ರಾಮ ಪಂಚಾಯಿತಿ ವ್ಯಾಪ್ತಿಯ ರಾಗಲಪರ್ವಿ ಮತ್ತು ಯಪಲಪರ್ವಿ ಗ್ರಾಮಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಯಿತು. ಇದೇ ಪಂಚಾಯಿತಿಯ ವಲ್ಕಂದಿನ್ನಿ ಗ್ರಾಮದಲ್ಲಿ ಪ್ರಾಥಮಿಕ ಕೃಷಿ ಸಾಲ ಸಹಕಾರ ಸಂಘವು ಕಾರ್ಯ ನಿರ್ವಹಿಸುತ್ತಿದೆ.

| ಗ್ರಾಮಗಳು | ತಾಲ್ಲೂಕು | ಹೋಬಳಿ | ಜಿಲ್ಲೆ |
|---|---|---|---|
| ರಾಗಲಪರ್ವಿ | ಸಿಂಧನೂರು | ಜವಳಗೇರ | ರಾಯಚೂರು |
| ಯಾಪಲಪರ್ವಿ | ಸಿಂಧನೂರು | ಜವಳಗೇರ | ರಾಯಚೂರು |
| ಜಾಲಹಳ್ಳಿ | ದೇವದುರ್ಗ | ಜಾಲಹಳ್ಳಿ | ರಾಯಚೂರು |
| ಹೇರುಂಡಿ | ದೇವದುರ್ಗ | ಜಾಲಹಳ್ಳಿ | ರಾಯಚೂರು |

ಗ್ರಾಮ ಅಧ್ಯಯನ ವಿಧಾನವು ವ್ಯವಸ್ಥಿತವಾದ ಮಾದರಿ ಪ್ರಶ್ನಾವಳಿಯನ್ನು ಒಳಗೊಂಡಿತ್ತು. ಅಧ್ಯಯನ ವಸ್ತುವಿಷಯಕ್ಕೆ ಸಂಬಂಧಿಸಿದ ಪಾಲುದಾರರಾದ ಅತೀ ಸಣ್ಣ, ಸಣ್ಣ ರೈತರು ಹಾಗೂ ದೊಡ್ಡ ರೈತರು, ಕೃಷಿ ಕಾರ್ಮಿಕರು, ಭೂರಹಿತ ಕಾರ್ಮಿಕರೊಂದಿಗೆ ವ್ಯವಸ್ಥಿತವಾದ ಸಂದರ್ಶನ ನಡೆಸಲಾಯಿತು. ಇವರನ್ನು ಮನೆಗಳಲ್ಲಿ ವೈಯಕ್ತಿಕವಾಗಿ ಹಾಗೂ ಗುಂಪು ಚರ್ಚೆಗಳ ಮೂಲಕ ಸಂದರ್ಶಿಸಲಾಯಿತು. ಅದೇ ರೀತಿ ಗ್ರಾಮಗಳಲ್ಲಿ ಯಾದೃಚ್ಚಿಕ ವಿಧಾನದ ಮೂಲಕ ಮನೆಗಳನ್ನು ಆಯ್ಕೆ ಮಾಡಿಕೊಂಡು ಮನೆ ಮನೆ ಬೇಟಿ ಮಾಡಲಾಯಿತು. ಒಟ್ಟು ೩೧೯ ಫಲಾನುಭವಿಗಳು ೪ ಗ್ರಾಮಗಳಲ್ಲಿ ಸಂದರ್ಶನ ಮಾಡಲಾಯಿತು. ಸಂದರ್ಶನದೊಂದಿಗೆ ಅವಲೋಕನ ವಿಧಾನವನ್ನು ಅಳವಡಿಸಿಕೊಳ್ಳಲಾಯಿತು. ರೈತನನ್ನು ಸಂದರ್ಶನಕ್ಕೆ ಆಯ್ಕೆ ಮಾಡಿಕೊಳ್ಳುವಾಗ, ಜಾತಿಯನ್ನು ಮುಖ್ಯ ಸೂಚ್ಯಾಂಕವಾಗಿ ಬಳಸಿಕೊಳ್ಳಲಾಗಿದೆ. ಇದರಲ್ಲಿ ಪರಿಶಿಷ್ಟ ಜಾತಿ, ಪಂಗಡ ಹಾಗೂ ಹಿಂದುಳಿದ ವರ್ಗಗಳು ಕುರುಬ, ಉಪ್ಪಾರ ಮತ್ತು ಪತ್ತಾರ್ ಸಮುದಾಯಕ್ಕೆ ಸೇರಿದವನ್ನು ಹಾಗು ಲಿಂಗಾಯತನ್ನು ಸಂದರ್ಶಿಸಲಾಗಿದೆ. ಅಧ್ಯಯನದಲ್ಲಿ ಉತ್ತರ ಕರ್ನಾಟಕದಲ್ಲಿ ರಾಯಚೂರನ್ನು ಒಳಗೊಂಡು ಬಹುಸಂಖ್ಯಾತ ಪ್ರಬಲ ಸಮುದಾಯವೆಂದೇ ಗುರುತಿಸಲ್ಪಡುವ ಲಿಂಗಾಯತ ವರ್ಗವನ್ನು ಇತರೇ ವರ್ಗವೆಂದು ಪರಿಗಣಿಸಲಾಗಿದೆ. ಒಟ್ಟು ಮಾಹಿತಿದರರಲ್ಲಿ ಶೇಕಡಾ ೫೩ರಷ್ಟು ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಸೇರಿದ್ದಾರೆ. ಸಂದರ್ಶನದಲ್ಲಿ ವಿಧವೆಯೊಂದಿಗೆ ಚರ್ಚೆ ನಡೆಸಲಾಯಿತು. ಗ್ರಾಮಗಳನ್ನು ನೀರಾವರಿ ಸೌಲಭ್ಯವಿರುವ ಹಾಗೂ ಇನ್ನೊಂದು ಒಣ ಪ್ರದೇಶ

ಮಳೆ ಆಶ್ರಿತ ಸಾಗುವಳಿ ಮಾಡುವ ಆಧಾರದ ಮೇಲೆ ಆಯ್ಕೆ ಮಾಡಿಕೊಳ್ಳಲಾಯಿತು. ಭಾರತದ ಬಹು ಸಂಸ್ಥೆಗಳ ಬ್ಯಾಂಕಿಂಗ್ ಪದ್ಧತಿಯ ಮುಖ್ಯ ಭಾಗವಾದ ಸಂಘಟಿತ ಹಣಕಾಸು ವ್ಯವಸ್ಥೆಯಡಿ ಬರುವ ಸಹಕಾರ ಸಂಘಗಳು ಕಾರ್ಯ ನಿರ್ವಹಿಸುವ ಗ್ರಾಮಗಳನ್ನು ಆಯ್ಕೆ ಮಾಡಿಕೊಳ್ಳಲಾಯಿತು. ತಾಲ್ಲೂಕು ಮತ್ತು ಹೋಬಳಿಗೆ ಹತ್ತಿರವಿರುವ ಮತ್ತು ದೂರವಿರುವ ಗ್ರಾಮಗಳನ್ನು ಆಯ್ಕೆ ಮಾಡಿಕೊಳ್ಳಲಾಯಿತು. ವಾಣಿಜ್ಯ ಬ್ಯಾಂಕು ಮತ್ತು ಸಹಕಾರ ಸಂಘಗಳ ಸಾಲ ನೀತಿ, ನಿಯಮಗಳ ಅಧ್ಯಯನದ ಮೂಲಕ ಸಂಘಟಿತ ಹಣಕಾಸು ವ್ಯವಸ್ಥೆಯನ್ನು ವಿಶ್ಲೇಷಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ. ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳು, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳಿಂದ ಮಾಹಿತಿ ಪಡೆಯಲು ಶ್ರಮಿಸಿದರೂ ಸಮರ್ಪಕವಾದ ಮಾಹಿತಿ ಲಭಿಸಲಿಲ್ಲ. ಈ ಕಾರಣದಿಂದ ಸಹಕಾರ ಸಂಘಗಳ ವ್ಯವಸ್ಥೆಯಲ್ಲಿ ಪ್ರಾಥಮಿಕ ಕೃಷಿ ಸಹಕಾಲ ಸಾಲ ಸಂಘ ಮತ್ತು ಭೂ ಅಭಿವೃದ್ಧಿ ಬ್ಯಾಂಕುಗಳ ಸಾಲ ಪೂರೈಕೆ ವ್ಯವಸ್ಥೆಗೆ ಆದ್ಯತೆ ನೀಡಲಾಯಿತು. ಈ ಅಧ್ಯಯನದಲ್ಲಿ ಪರಿಮಾಣಾತ್ಮಕ ಮತ್ತು ಗುಣಾತ್ಮಕ ವಿಧಾನ ಎರಡನ್ನು ಅನುಸರಿಸಲಾಗಿದೆ. ಅದರಲ್ಲಿ ಈ ಅಧ್ಯಯನದ ಮಾಹಿತಿಗಳ ಮೂಲಕ ಕೈಗೊಳ್ಳುವ ವಿಶ್ಲೇಷಣೆ ಸ್ಥಳೀಯ ವ್ಯವಸ್ಥೆ, ಅಧ್ಯಯನ ಕ್ಷೇತ್ರಕ್ಕೆ ಸಂಬಂಧಿಸಿದ್ದಾಗಿದೆ. ಇಲ್ಲಿ ಕಂಡುಬರುವ ಪಲಿತಾಂಶಗಳನ್ನು ಸಾರ್ವತ್ರಿಕವಾಗಿ ಎಲ್ಲ ಕ್ಷೇತ್ರಗಳಲ್ಲಿ ಇದೇ ಪರಿಸ್ಥಿತಿ ಇರುತ್ತದೆ ಎಂದು ಹೇಳುವುದು ಸರಿಯಿಲ್ಲ. ಅದ್ದರಿಂದ ಅಧ್ಯಯನದ ಪಲಿತಾಂಶ ಮತ್ತು ಪರಿಣಾಮಗಳು ಈ ಕ್ಷೇತ್ರಕ್ಕೆ ಸಂಬಂಧಿಸಿರುತ್ತದೆ. ಆದರೂ ಈ ಅಧ್ಯಯನದ ಪಲಿತಾಂಶಗಳ ಆಧಾರದ ಮೇಲೆ ಸಂಘಟಿತ ಹಣಕಾಸು ವ್ಯವಸ್ಥೆಯ ಕಾರ್ಯಚರಣೆ, ನೀತಿ ನಿಯಮಗಳು, ಧೋರಣೆಗಳ ಆ ಮೂಲಕ ಈ ವ್ಯವಸ್ಥೆಯ ಸಾಲನೀತಿಗಳ ವಿಶ್ಲೇಷಣೆ ಮಾಡಲು ಪ್ರಯತ್ನಿಸಲಾಗಿದೆ. ಆ ಮೂಲಕ ಈ ವ್ಯವಸ್ಥೆಯ ಸಮಸ್ಯೆಗಳನ್ನು ಗುರುತಿಸಲು ಈ ಅಧ್ಯಯನ ಸಹಾಯಕಾರಿಯಾಗುತ್ತದೆ. ಅದಕ್ಕೆ ಪರಿಹಾರವನ್ನು ಕಂಡುಕೊಳ್ಳವಲ್ಲಿ ನೆರವಾಗುತ್ತದೆ ಎಂಬ ಆಶಯ ಇಟ್ಟುಕೊಳ್ಳಲಾಗಿದೆ.

ಗ್ರಾಮ ಅಧ್ಯಯನ ಗ್ರಾಮಗಳ ಸಾಮಾನ್ಯ ಮಾಹಿತಿ, ಗ್ರಾಮಗಳ ಜಾತಿ ಪದ್ಧತಿ, ಸಾಮಾಜಿಕ ಆರ್ಥಿಕ ಪರಿಸ್ಥಿತಿಗಳನ್ನ ಒಳಗೊಂಡಿದೆ. ಭಾರತದಲ್ಲಿ ಜನಸಂಖ್ಯೆ, ಅಭಿವೃದ್ಧಿ ನೀತಿ ಮತ್ತು ಅಭಿವೃದ್ಧಿ ಫಲಗಳನ್ನು ಕುರಿತು ಚರ್ಚಿಸುವಾಗ ಜಾತಿ ಪರಿಕಲ್ಪನೆಯನ್ನು ಹೊರಗಿಟ್ಟು ವಿಶ್ಲೇಷಿಸುವ ಅಥವಾ ಜಾತಿ ಪರಿಕಲ್ಪನೆಯನ್ನು ಪರಿಗಣಿಸದಿರುವುದು ಅಪೂರ್ಣ ಚರ್ಚೆಯಾಗುವುದು. ಹಿಂದೂ ಸಮಾಜದ ಏಣಿ ಶ್ರೇಣಿ ವ್ಯವಸ್ಥೆಯಲ್ಲಿ ಜಾತಿ ಕಲ್ಪನೆಯನ್ನು ಮುಖ್ಯವಾದುದು. ಇದು ಪುರಾತನ ಕಾಲದಿಂದಲೂ ಅಸ್ತಿತ್ವದಲ್ಲಿ ಆಧುನಿಕ ಸಮಾಜದಲ್ಲಿ ಜಾತಿ ಕಲ್ಪನೆ ಅಸ್ತಿತ್ವದಲ್ಲಿದೆ. ಇಂದಿಗೂ ಮಾನವನ ಸಾಮಾಜಿಕ ಜೀವನದಲ್ಲಿ ಜಾತಿ ಉಳಿದುಕೊಂಡಿದೆ. ಜಾತಿಯ ಆಧಾರದಲ್ಲೇ ಅನೇಕ ಅಂಶಗಳ ಸಂಗತಿಗಳು ನಿರ್ಧಾರವಾಗುತ್ತದೆ. ಮುಂದೆಯೂ ಭವಿಷ್ಯದಲ್ಲಿ ಈ ಜಾತಿ ಪದ್ಧತಿ ಮತ್ತು ಪರಿಕಲ್ಪನೆ ನಿರ್ನಾಮ ಸಾಧ್ಯವಿಲ್ಲವೆನ್ನುವಂತಾಗಿದೆ. ಈ ಕಾರಣದಿಂದಲೇ ಭಾರತದ

ರಾಜಕೀಯ ವ್ಯವಸ್ಥೆಯಲ್ಲಿ ಮತ್ತು ಯೋಜನೆಗಳಲ್ಲಿ ಜಾತಿಯನ್ನು ಪರಿಗಣಿಸಲಾಗುತ್ತದೆ. (ರಾವ್:೧೯೮೧:೬೬) ಕೆಳಜಾತಿಗಳು ಎಂಬ ಪರಿಭಾಷೆಯ ಗೊಂದಲವಾಗಿದೆ ಎನ್ನಲಾಗುತ್ತದೆ. ಸಾಮಾಜಿಕ ಸ್ತಾನಮಾನಗಳ ಆಧಾರದ ಮೇಲೆ ಜಾತಿಗಳನ್ನು ವರ್ಗೀಕರಿಸುವ ಪ್ರಯತ್ನಗಳು ನಡೆದಿದೆ. ಭಾರತೀಯ ವ್ಯವಸ್ಥೆಯಲ್ಲಿ ಕೆಳಜಾತಿಗಳನ್ನ ಪರಿಶಿಷ್ಟ ಜಾತಿ, ಪಂಗಡ, ದಲಿತ, ಹರಿಜನ ವಂಚಿತವರ್ಗ, ಶೋಶಿತ ವರ್ಗ, ಹಿಂದುಳಿದ ವರ್ಗಗಳು ಹೀಗೆ ಹಲವು ರೀತಿಯಲ್ಲಿ ಬಳಕೆಯಲ್ಲಿದೆ. ಸಂವಿಧಾನದ ಘೋಷಣೆ ಪ್ರಕಾರ ೧೯೫೦ರಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳೆಂದು ಕರೆಯಲಾಗದೆ. ೧೯೫೬ ತಿದ್ದುಪಡಿ ಘೋಷಣೆ ಪ್ರಕಾರ ಕನಾಟಕದಲ್ಲಿ ೧೨೬ ಪರಿಶಿಷ್ಟ ಜಾತಿಗಳಿವೆ ಎನ್ನಲಾಗಿದೆ. ಕರ್ನಾಟಕ ರಾಜ್ಯದಲ್ಲಿ ಬ್ರಾಹ್ಮಣ, ಲಿಂಗಾಯತ, ಒಕ್ಕಲಿಗ, ಕುರುಬ, ತಿಗಳ, ಉಪ್ಪಾರ, ಅಗಸ, ಪತ್ತಾರ್ ಹೀಗೆ ಅನೇಕ ಜಾತಿಗಳಿವೆ. ಜಾತಿ ಪದ್ಧತಿಯ ಶ್ರೇಣಿಯಲ್ಲಿ ಕರ್ನಾಟಕದಲ್ಲಿ ಲಿಂಗಾಯತ ಮತ್ತು ಒಕ್ಕಲಿಗ ಜಾತಿಗಳು ಪ್ರಬಲ ಎನ್ನಲಾಗಿದೆ. ರಾಯಚೂರು ಜಿಲ್ಲೆಯಲ್ಲಿ ಈ ಹಿಂದೆ ತಿಳಿಸಿದಂತೆ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೪೦ರಷ್ಟು ಜನ ಸಂಖ್ಯೆ ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಸೇರಿದ್ದಾರೆ. ಇದರಲ್ಲಿ ಶೇಕಡಾ ೧೯ರಷ್ಟು ಪರಿಶಿಷ್ಟ ಜಾತಿಗೂ, ಶೇಕಡಾ ೧೮.೫ರಷ್ಟು ಪರಿಶಿಷ್ಟ ಪಂಗಡಕ್ಕೂ ಸೇರಿದ್ದಾರೆ. ಜಿಲ್ಲೆಯ ಪ್ರಬಲ ಜನಾಂಗವೆಂದು ಲಿಂಗಾಯ ಜಾತಿ ಗುರುತಿಸಲ್ಪಟ್ಟಿದೆ. ಈ ಹಿಂದೆ ತಿಳಿಸಿದಂತೆ ಶೇಕಡಾ ೮೬.೪೪ರಷ್ಟು ದೊಡ್ಡ ಭೂ ಹಿಡುವಳಿಗಳು ಇತರೇ ಜನಾಂಗಕ್ಕೆ ಸೇರಿದೆ. ಇತರೇ ಜನಾಂಗಗಳಲ್ಲಿ ಲಿಂಗಾಯತ ಮತ್ತು ಕುರುಬ ಜನಾಂಗಗಳು ಪ್ರಮುಖವಾದದು. ಜಿಲ್ಲೆಯಲ್ಲಿ ಭೂ ಸಂಪತ್ತು ಪ್ರಮುಖ ಆರ್ಥಿಕ ಸ್ಥಾನಮಾನಗಳನ್ನ ಸೂಚಿಸುವ ಅಂಶವಾಗಿ ಪ್ರಬಲ ಜಾತಿಗಳಾದ ಲಿಂಗಾಯತ ಕುರುಬ ಜಾತಿಗಳ ಹಿಡಿತದಲ್ಲಿದೆ.

**೨.೧೧. ಅಧ್ಯಯನ ಗ್ರಾಮಗಳ ಸಾಮಾಜಿಕ ಆರ್ಥಿಕ ಪರಿಸ್ಥಿತಿ ಮತ್ತು ಜಾತಿ ಸಂಯೋಜನೆ**

**ರಾಗಲಪರ್ವಿ;** ಗ್ರಾಮದಲ್ಲಿ ಒಟ್ಟು ೩೦೦೦ ಜನ ಸಂಖ್ಯೆ ಇದೆ. ೬೫೦ ಕುಟುಂಬಗಳಿವೆ. ಗ್ರಾಮದಲ್ಲಿ ಪರಿಶಿಷ್ಟ ಜಾತಿ, ಪಂಗಡ, ಮುಸ್ಲಿಂ, ಲಿಂಗಾಯತ ಮತ್ತು ಕುರುಬ ಜನಾಂಗದ ಜನರು ವಾಸವಾಗಿದ್ದಾರೆ. ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೬೦ರಷ್ಟು ಪರಿಶಿಷ್ಟ ಪಂಗಡಕ್ಕೆ ಸೇರಿದರೆ, ಶೇಕಡಾ ೩೦ರಷ್ಟು ಲಿಂಗಾಯತ ಮತ್ತು ಕುರುಬ ಜನಾಂಗಕ್ಕೆ ಸೇರಿದ್ದಾರೆ. ಶೇಕಡಾ ೧೦ರಷ್ಟು ಮುಸ್ಲಿಮರಿದ್ದಾರೆ. ಪರಿಶಿಷ್ಟ ಜಾತಿಯ ಜನಸಂಖ್ಯೆ ಕಡಿಮೆ ಪ್ರಮಾಣದಲ್ಲಿದ್ದಾರೆ. ಗ್ರಾಮ ಪಂಚಾಯಿತಿ ಕಛೇರಿ ಇದೆ. ಗ್ರಾಮದಲ್ಲಿ ಪ್ರಾಥಮಿಕ, ಮಾಧ್ಯಮಿಕ ಹಾಗೂ ಸರ್ಕಾರಿ ಪ್ರೌಢಶಾಲೆಯಿದೆ. ೫೦೦ಕ್ಕೂ ಹೆಚ್ಚು ಬಿಪಿಎಲ್ ಕಾರ್ಡುಗಳಿದ್ದು, ೪೫ಕ್ಕೂ ಹೆಚ್ಚು ಅಂತ್ಯೋದಯ ಕಾರ್ಡುಗಳಿವೆ. ೭೦ ಎಪಿಎಲ್ ಕಾರ್ಡುಗಳಿವೆ. ೨ ಅಂಗನವಾಡಿ ಕೇಂದ್ರಗಳಿವೆ. ಸರ್ಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರವಿದೆ. ನಾಲ್ವರು ಗ್ರಾಮ ಪಂಚಾಯಿತಿ ಸದಸ್ಯರಿದ್ದಾರೆ. ಇಬ್ಬರು ಪುರುಷರು ಇಬ್ಬರು ಮಹಿಳೆಯರು. ಒಬ್ಬರು ಮಾಜಿ ಜಿಲ್ಲಾ ಪಂಚಾಯಿತಿ ಮತ್ತು ಒಬ್ಬರು ತಾಲ್ಲೂಕು ಪಂಚಾಯಿತಿ

ಸದಸ್ಯರಿದ್ದಾರೆ. ಗ್ರಾಮದಲ್ಲಿ ೩೦೦ಕ್ಕೂ ಹೆಚ್ಚು ಅತಿ ಸಣ್ಣ ರೈತರಿದ್ದಾರೆ. ೪೦೦ಕ್ಕೂ ಹೆಚ್ಚು ಸಣ್ಣ ರೈತರಿದ್ದಾರೆ. ೭೦ ಮಧ್ಯಮ ರೈತರಿದ್ದು ೭೫ಕ್ಕೂ ಹೆಚ್ಚು ದೊಡ್ಡ ರೈತರಿದ್ದಾರೆ. ಬಹುತೇಕ ದೊಡ್ಡರೈತರು ಲಿಂಗಾಯತ ಜಾತಿಗೆ ಸೇರಿದ್ದಾರೆ. ಅತಿ ಸಣ್ಣ ರೈತರು ಪರಿಶಿಷ್ಟ ಜಾತಿ ಮತ್ತು ಪಂಗಡ ಎರಡಕ್ಕೂ ಸೇರಿದ್ದಾರೆ. ಸಣ್ಣ ರೈತರಲ್ಲಿ ಬಹುತೇಕರು ಪರಿಶಿಷ್ಟ ಪಂಗಡಕ್ಕೆ ಸೇರಿದ್ದಾರೆ. ಮಧ್ಯಮ ರೈತರು ಹೆಚ್ಚು ಕಡಿಮೆ ಎಲ್ಲರೂ ಲಿಂಗಾಯತ ಜನಾಂಗಕ್ಕೆ ಸೇರಿದ್ದಾರೆ. ಗ್ರಾಮದಲ್ಲಿ ೩೦೦ಕ್ಕೂ ಹೆಚ್ಚು ಜನರು ಕೃಷಿ ಕಾರ್ಮಿಕರಿದ್ದು, ಭೂರಹಿತ ಕಾರ್ಮಿಕರು ಇದ್ದಾರೆ. ಕುರುಬರು, ಪರಿಶಿಷ್ಟ ಪಂಗಡಕ್ಕೆ ಭೂರಹಿತ ಕಾರ್ಮಿಕರು ಸೇರಿದ್ದಾರೆ. ಕೃಷಿ ಕಾರ್ಮಿಕರು ಬಹುತೇಕ ಕೂಲಿ ಕೆಲಸಕ್ಕೆ ಉದ್ಯೋಗಕ್ಕಾಗಿ ಬೆಂಗಳೂರು ನಗರಕ್ಕೆ ವಲಸೆ ಹೋಗುತ್ತಾರೆ. ತಮ್ಮ ತುಂಡು ಭೂಮಿಗಳನ್ನು ಗುತ್ತಿಗೆಗೆ ಕೊಟ್ಟು ವಲಸೆ ಹೋಗುತ್ತಾರೆ. ಪ್ರಸ್ತುತ ೩೦೦ಕ್ಕೂ ಹೆಚ್ಚು ಜನ ಬೆಂಗಳೂರು ನಗರಕ್ಕೆ ಜೀವನ ನಿರ್ವಹಣೆಗಾಗಿ ವಲಸೆ ಹೋಗಿದ್ದಾರೆ. ವಲಸೆ ಹೋಗಿರುವ ಕೃಷಿ ಕಾರ್ಮಿಕರಲ್ಲಿ ಹೆಚ್ಚಿನವರು ಪರಿಶಿಷ್ಟ ಜಾತಿ, ಪಂಗಡ ಜನಾಂಗಕ್ಕೆ ಹಾಗೂ ಮುಸ್ಲಿಂ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಸುಮಾರು ೩೦ ಕುಟುಂಬಗಳು ಭೂಮಿ ಹೊಂದಿಲ್ಲದೆ ಭೂರಹಿತರಾಗಿದ್ದಾರೆ. ರಾಗಲಪರ್ವಿ ಗ್ರಾಮದಲ್ಲಿ ೨ ವಿಧವಾ ಮಹಿಳೆಯರನ್ನು ಸಂದರ್ಶನ ಮಾಡಲಾಯಿತು. ಒಬ್ಬರು ವಿಧವಾ ಮಹಿಳೆಯ ವೈಯಕ್ತಿಕ ಅಧ್ಯಯನ (ಕೇಸ್ ಸ್ಟಡಿ– case study) ಸಿದ್ದಪಡಿಸಲಾಗಿದೆ. ಈ ಅಧ್ಯಯನ ವಿಧವೆ ಮಹಿಳೆಯರು ಸಾಮಾಜಿಕ ಆರ್ಥಿಕ ಪರಿಸ್ಥಿತಿಗಳನ್ನ ತಿಳಿಸುತ್ತದೆ. ಒಂದು ಟೈಲರಿಂಗ್ ಯಂತ್ರ ಇಟ್ಟುಕೊಂಡಿದ್ದು ಮಹಿಳೆ ಮಕ್ಕಳ ಬಟ್ಟೆ ಹೊಲೆಯುವ ಮೂಲಕ ಬದುಕನ್ನ ನಡೆಸುತ್ತಿದ್ದಾರೆ. ಇವರಿಗೆ ಸಾಲದ ಅಗತ್ಯವಿದೆ. ಆದರೆ ಭೂರಹಿತ ಕುಟುಂಬವಾಗಿದ್ದು ಆಧಾರ ಒದಗಿಸಲು ಸಾಧ್ಯವಾಗದೆ ಸಾಂಸ್ಥಿಕ ವ್ಯವಸ್ಥೆಯಿಂದ ಸಾಲ ಪಡೆಯಲು ಸಾಧ್ಯವಾಗಿಲ್ಲ. ಈ ಹಿಂದೆ ತಿಳಿಸಿದಂತೆ ಸಹಕಾರ ಸಂಸ್ಥೆಗಳೂ ಸಹ ಈ ವರ್ಗಗಳಿಗೆ ಸಾಲ ಪೂರೈಸುವಲ್ಲಿ ಯಾವುದೇ ಪಾತ್ರ ವಹಿಸುತ್ತಿಲ್ಲ. ಭೂಮಿ ಇಲ್ಲದೆ ಬ್ಯಾಂಕುಗಳಿಂದ ಸಾಲ ಪಡೆಯಲು ಸಾಧ್ಯವೆ ಇಲ್ಲ. ಕೃಷಿಯೇತರ ಚಟುವಟಿಕೆಳಿಗೆ ವಲ್ಕಂದಿನ್ನಿ ಸಹಕಾರ ಸಂಸ್ಥೆ ಸಾಲ ಒದಗಿಸಿದರೂ ಬುಸಿನೆಸ್ ಡೆವಲಪ್‌ಮೆಂಟ್ ಕಾರ್ಯಕ್ರಮದಡಿ ಅಂಗಡಿ, ಇತರೇ ದಿನ ನಿತ್ಯ ವ್ಯವಹಾರ ಚಟುವಟಿಕೆಗಳಿಗೆ ಸಾಲ ನೀಡುತ್ತದೆ. ಆದರೆ ಸಾಲ ಪಡೆಯಲು ಸಹಕಾರ ಸಂಸ್ಥೆ ಸದಸ್ಯರಾಗಿರಬೇಕು. ಉಳಿತಾಯ ಖಾತೆ ಹೊಂದಿದ್ದು, ಖಾತೆಯಲ್ಲಿ ಉಳಿತಾಯ ಹಣವಿರಬೇಕು. ಈ ಆಧಾರದ ಮೇಲೆ ಸಾಲ ನೀಡುತ್ತಾರೆ. ಸಾಲ ನೀಡಿದ ಮೇಲೆ ಪ್ರತಿದಿನ ಪಿಗ್ಮಿ ಮೂಲಕ ಸಾಲ ವಸೂಲಿ ಮಾಡಿಕೊಳ್ಳಲಾಗುತ್ತದೆ. ಈ ವಿಧವೆಗೆ ಪ್ರತಿದಿನ ಪಿಗ್ಮಿ ನೀಡುವ ಸಾಧ್ಯತೆಯೂ ಇಲ್ಲ. ಹಾಗೆಯೇ ಈ ರೀತಿ ಸಾಲ ದೊರೆಯುತ್ತದೆ ಎಂಬ ಮಾಹಿತಿಯೂ ಇಲ್ಲ. ಚಿಕ್ಕದಾದ ಎಂಚಿನ ಮನೆಯನ್ನು ಸಗಣಿ ನೆಲದಲ್ಲಿ ವಾಸಿಸುತ್ತಿದ್ದು ಗಂಡ ತೀರಿಹೋಗಿದ್ದಾನೆ ಈಕೆಯ ಕಾಲಿನ ಭಾಗದಲ್ಲಿ ತೊಂದರೆ ಇದ್ದು ಅಂಗವಿಕಲರೂ ಆಗಿದ್ದಾಳೆ. ಗ್ರಾಮದಲ್ಲಿ ಆರು ಸ್ವಸಹಾಯ ಗುಂಪುಗಳಿವೆ. ಅಂಗನವಾಡಿ ಶಿಕ್ಷಕಿ ಶಿವಮ್ಮ ೬ ಗುಂಪುಗಳಲ್ಲಿ ೩ ಗುಂಪುಗಳನ್ನು ರಚಿಸಿದ್ದಾರೆ. ಇವರ ಪ್ರಕಾರ ೬ ಗುಂಪುಗಳಲ್ಲಿ ಇವರುರಚಿಸಿದ ೩ ಗುಂಪುಗಳು

ಕಾರ್ಯ ನಿರ್ವಹಿಸುತ್ತವೆ. ಈ ೩ ಗುಂಪುಗಳಲ್ಲಿ ಒಟ್ಟು ೫೭ ಸದಸ್ಯರಿದ್ದಾರೆ. ಈ ೫೭ ಜನರೂ ಕೂಲಿ ಕೃಷಿ ಕಾರ್ಮಿಕ ಮತ್ತು ವ್ಯವಸಾಯ ಕುಟುಂಬಗಳಿಗೆ ಸೇರಿದ್ದಾರೆ. ಇದರಲ್ಲಿ ४೫ ಪರಿಶಿಷ್ಟ ಪಂಗಡದವರು ೧४ ಪರಿಶಿಷ್ಟ ಜಾತಿಯ, ೩ ಕುರುಬ, ಕುಂಬಾರ, ಮುಸ್ಲೀಮರಿದ್ದಾರೆ ಸೇರಿದ್ದಾರೆ. ೩ ಸಂಘಗಳ ಉಳಿತಾಯ ಚಟುವಟಿಕೆಯಲ್ಲಿ ತೊಡಗಿದ್ದಾರೆ. ಈ ಗುಂಪಿನ ಸದಸ್ಯರಿಗೆ ಸಾಲದ ಅಗತ್ಯವಿದೆ. ಕೃಷಿ, ಶಿಕ್ಷಣ, ಆರೋಗ್ಯ, ಜೀವನಕ್ಕೆ ಹಣಕಾಸಿನ ಅಗತ್ಯವಿದೆ. ಸಾಲ ಪಡೆಯುವ ಇಚ್ಛೆಯೂ ಇದೆ. ಆದರೆ ಇವರೆಲ್ಲ ಸಂಘಟಿತ ಹಣಕಾಸು ವ್ಯವಸ್ಥೆಯಡಿ ಸಾಲ ಸೌಲಭ್ಯ ಪಡೆಯಲು ಬೇಕಾದ ಭದ್ರತೆ ಮತ್ತು ಸಾಲ ಪಡೆಯಲು ಮಾಡಬೇಕಾದ ಖರ್ಚುಗಳನ್ನು ಭರಿಸಲು ಸಾಧ್ಯವಿಲ್ಲ. ಹೀಗಾಗಿ ಸಂಘಟಿತ ಸಾಲ ವ್ಯವಸ್ಥೆಯಿಂದ ದೂರ ಉಳಿದಿದ್ದಾರೆ. ವಲ್ಕಂದಿನ್ನಿ ಗ್ರಾಮದ ಸಹಕಾರ ಸಂಘದ ಕಾರ್ಯದರ್ಶಿಯು ಮಹಿಳಾ ಸ್ವಸಹಾಯ ಗುಂಪಿನ ಸಾಮಾಜಿಕ ಒಗ್ಗಟ್ಟು ಮತ್ತು ಸಂಘಟನೆ, ಅವರ ಸಾಮಾಜಿಕ ಐಕ್ಯತೆಯನ್ನು ಗುಂಪಿನ ಸದಸ್ಯರ ಭದ್ರತೆಯನ್ನಾಗಿ ಪರಿಗಣಿಸಿ ಸಾಲ ನೀಡುವ ಸಾದ್ಯತೆಯನ್ನು ತಳ್ಳಿ ಹಾಕುತ್ತಾರೆ. ಅದೇರೀತಿ ಕಾರ್ಯದರ್ಶಿಯು ಈ ಗುಂಪುಗಳಿಗೆ ಸಾಲ ನೀಡಲು ಸಾದ್ಯವಿಲ್ಲ ಎಂಬುದಕ್ಕೆ ನೀಡುವ ಕಾರಣವೆಂದರೆ ಈ ಗುಂಪುಗಳ ಸದಸ್ಯರಲ್ಲಿ ಬಹುತೇಕರು ಕೃಷಿ ಕಾರ್ಮಿಕರು, ಭೂರಹಿತರು ಹಾಗೂ ಪರಿಶಿಷ್ಟರು. ಇವರು ವಲಸೆ ಹೋಗುತ್ತಿರುತ್ತಾರೆ. ಈ ಗುಂಪುಗಳ ಕಾರ್ಯನಿರ್ವಹಣೆ ಹಾಗೂ ಮಾರ್ಗದರ್ಶನದ ಜವಾಬ್ದಾರಿಯನ್ನು ವಹಿಸಲು ಸಹಕಾರ ಸಂಸ್ಥೆಗಳಿಗೆ ಸಾಧ್ಯವಿಲ್ಲ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಸಾರ್ವಜನಿಕ ಬ್ಯಾಂಕುಗಳು ಈ ರೀತಿಯ ಗುಂಪುಗಳಿಗೆ ಹಣಕಾಸು ನೀಡುತ್ತವೆ. ಸ್ವಸಹಾಯ ಮಹಿಳಾ ಗುಂಪುಗಳನ್ನು ಪ್ರೋತ್ಸಾಹಿಸುವಂತಹ ನೀತಿಗಳನ್ನು ಅಪೆಕ್ಸ್ ಮಟ್ಟದ ಹಣಕಾಸು ಸಂಸ್ಥೆಗಳು (ಆರ್‌ಬಿಐ ಮತ್ತು ನಬಾರ್ಡ್) ಮಾಡಿದ್ದರೂ ಇಂತಹ ಗುಂಪುಗಳಿಗೆ ಸಾಲ ಒದಗಿಸುವುದು ಸ್ಥಳೀಯ ಬ್ಯಾಂಕುಗಳ ತೀರ್ಮಾನವನ್ನು ಅವಲಂಬಿಸಿದೆ. ಈ ಗ್ರಾಮದಲ್ಲಿ ೫೦ ಜನ ಸಣ್ಣ ರೈತರಿದ್ದಾರೆ. ಈ ರೈತರ ಭೂ ಹಿಡುವಳಿ ವಿಸ್ತೀರ್ಣ ೨ ರಿಂದ ४ ಹೆಕ್ಟರ್, ೧೨೦ ಜನ ಅತಿ ಸಣ್ಣ ರೈತರಿದ್ದಾರೆ. ಇವರ ಭೂ ಹಿಡುವಳಿ ವಿಸ್ತೀರ್ಣ ೨ ಹೆಕ್ಟರ್‌ಗಿಂತ ಕಡಿಮೆ. ೭೦ ದೊಡ್ಡ ರೈತರದ್ದು ವಲ್ಕಂದಿನ್ನಿ ಸಹಕಾರ ಸಂಘದಿಂದ ಸಾಲ ಪಡೆದಿದ್ದಾರೆ. ದೊಡ್ಡ ರೈತರ ಭೂ ಹಿಡುವಳಿ ವಿಸ್ತೀರ್ಣ ೧೦ ಎಕರೆಯಿಂದ ಮೇಲ್ಪಟ್ಟಿದೆ. ದೊಡ್ಡ ರೈತರು ದೊಡ್ಡಮಟ್ಟದ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳುತ್ತಾರೆ. ಭತ್ತ, ಜೋಳ, ಹತ್ತಿ ಬೆಳೆಗಳನ್ನು ಬೆಳೆಯುತ್ತಾರೆ. ಗ್ರಾಮದಲ್ಲಿ ಖಾಸಗಿ ಲೇವಾದೇವಿಗಾರರಿದ್ದು ಸಾಲಗಳನ್ನು ಪೂರೈಸುತ್ತಾರೆ. ಇವರು ತಿಂಗಳಿಗೆ ಶೇಕಡಾ ೩ ಬಡ್ಡಿ ದರದಲ್ಲಿ ವಾರ್ಷಿಕ ಶೇಕಡಾ ೩೬ರಷ್ಟು ಬಡ್ಡಿದರದಲ್ಲಿ ಸಾಲ ನೀಡುವರಿದ್ದಾರೆ ಎಂದು ತಿಳಿದು ಬಂದಿತು. ಆದರೆ ಸಾಲ ನೀಡುವ ಸಾಹುಕಾರರ ಮಾಹಿತಿಯನ್ನು ಯಾರು ನೀಡಲಿಲ್ಲ. ಮಾಹಿತಿ ನೀಡಲು ಜನ ಹಿಂಜರಿದ ಹಿಂದಿನ ಕಾರಣ ಗ್ರಹಿಸುವುದಾದರೆ ಸಾಹುಕಾರರ ಪ್ರಭಾವ. ಎಷ್ಟು ಜನ ಸಾಹುಕಾರರು ಸಾಲ ನೀಡುತ್ತಾರೆ ಎಂದು ತಿಳಿದು ಬರಲಿಲ್ಲ. ದೊಡ್ಡ ರೈತರು ಜವಳಗೇರದ ಸಿಂಡಿಕೇಟ್ ಬ್ಯಾಂಕಿನಲ್ಲಿ ಸಾಲ ಪಡೆದಿದ್ದಾರೆ. ಅಸಂಘಟಿತ ಮಾರುಕಟ್ಟೆಯಲ್ಲಿ ವ್ಯಾಪಾರಸ್ಥರು ಹೆಚ್ಚು ಪ್ರಭಾವಿಗಳಾಗಿದ್ದು ಹತ್ತಿರದ

ಉದ್ಬಾಳ್ ಪಟ್ಟಣ ಮತ್ತು ರಾಯಚೂರು ಗಂಜ್‌ಗಳಿಂದ ತಮ್ಮ ಸಾಲ ಪೂರೈಕೆ ವ್ಯವಹಾರಗಳನ್ನು ನಡೆಸುತ್ತಾರೆ. ಇವರು ರೈತರಿಗೆ ಕೃಷಿ ಉತ್ಪಾದನಾ ಸಾಮಾಗ್ರಿಗಳಾದ ಗೊಬ್ಬರ, ಬಿತ್ತನೆ ಬೀಜ, ಕ್ರಿಮಿನಾಶಕಗಳನ್ನು ಪೂರೈಸುತ್ತಾರೆ. ಅದೇರೀತಿ ಅನುಭೋಗಕ್ಕೆ ಮತ್ತು ಸಾಮಾಜಿಕ ಉದ್ದೇಶಗಳಿಗೆ ಸಹ ನಗದು ಸಾಲ ನೀಡುತ್ತಾರೆ. ಪರಿಶಿಷ್ಟರು, ಆಸ್ತಿರಹಿತರು ಮತ್ತು ರೈತರು ಎಲ್ಲಾ ವರ್ಗದ ಜನರು ಸಮುದಾಯ ಕೃಷಿ ಕಾರ್ಮಿಕರು ಭೂರಹಿತ ವರ್ಗಗಳು ಸಂಘಟಿತ ಮಾರುಕಟ್ಟೆಯಲ್ಲಿ ವ್ಯಾಪಾರಸ್ಥರಿಂದ ಸಾಲಗಳನ್ನು ಪಡೆಯುತ್ತಾರೆ. ಸಹಕಾರ ಸಂಘಗಳು ನೀಡುವ ಸಾಲದ ಪ್ರಮಾಣ ಕಡಿಮೆ ಹಾಗು ಸಾಲ ದೊರೆಯುತ್ತದೆಂಬ ಭರವಸೆಯು ಇರುವುದಿಲ್ಲ. ದೊಡ್ಡ ರೈತರು ಹೆಚ್ಚಿನ ಪ್ರಮಾಣದ ಸಾಲ ಅಗತ್ಯವಿರುತ್ತದೆ. ಹೀಗೆ ಸಾಲದ ಬೇಡಿಕೆ ಮತ್ತು ಪೂರೈಕೆಗಳ ಅಂತರ ಮತ್ತು ಕೈಗೆಟುಕದ ಬ್ಯಾಂಕುಗಳ ಸಾಲನೀತಿಗಳಿಂದ ಜನ ಸಾಲಕ್ಕಾಗಿ ವ್ಯಾಪಾರಸ್ಥರು ಮತ್ತು ಸ್ಥಳೀಯ ಸಾಹುಕಾರರನ್ನು ಅವಲಂಬಿಸಿದ್ದಾರೆ. ಅತೀಸಣ್ಣ ಮತ್ತು ಸಣ್ಣ ರೈತರು, ಪರಿಶಿಷ್ಟ ಸಮುದಾಯ ಮತ್ತು ಕೃಷಿ ಕಾರ್ಮಿಕರು ಭೂರಹಿತ ವರ್ಗಗಳು ಅಸ್ತಿರಹಿತ ವರ್ಗಗಳಾಗಿ ಸ್ವತಂತ್ರವಾಗಿ ಸ್ವಾವಲಂಬಿ ಬದುಕನ್ನು ಕಟ್ಟಿಕೊಳ್ಳಲು ಹೆಣಗುತ್ತಿದ್ದಾರೆ. ಅಭಿವೃದ್ಧಿಯ ಲಾಭಗಳನ್ನು ಪಡೆದು ಅಭಿವೃದ್ಧಿ ಪ್ರಕ್ರಿಯೆ ಪಾಲುದಾರರುವ ಬದಲು ಈ ಪ್ರಕ್ರಿಯೆಯಿಂದ ಹೊರಗುಳಿದು ಅತಂತ್ರವಾಗಿ ಬದುಕನ್ನು ನಡೆಸುತ್ತಿದ್ದಾರೆ. ಬಹುತೇಕರ ವಲಸೆ ಹೋಗುತ್ತಾರೆ. ಗ್ರಾಮೀಣ ನಗರ ಸಮಾಜದಲ್ಲಿ ಯೋಗ್ಯ ಬದುಕನ್ನು ಕಟ್ಟಿಕೊಳ್ಳಲಾಗಿದೆ. ಆರ್ಥಿಕ ಸಾಮಾಜಿಕವಾಗಿ ಕೆಳಮಟ್ಟದಲ್ಲಿದ್ದಾರೆ.

**ಯಾಪಲಪರ್ವಿ:** ಈ ಗ್ರಾಮದಲ್ಲಿ ೧೦೦೦ ಜನಸಂಖ್ಯೆ ಇದೆ. ೩೫೦ ಕುಟುಂಬಗಳಿವೆ. ಗ್ರಾಮದಲ್ಲಿ ವಿವಿಧ ಜಾತಿಯ ಜನಗಳು ವಾಸಿಸುತ್ತಿದ್ದಾರೆ. ಪರಿಶಿಷ್ಟ ಜಾತಿ, ಪಂಗಡ, ಲಿಂಗಾಯತರು, ಕುರುಬರು, ಬಡಿಗೇರ ಮುಸ್ಲೀಮ್ ಸುಮದಾಯದವರಿದ್ದಾರೆ. ಇದರಲ್ಲಿ ಪರಿಶಿಷ್ಟ ಪಂಗಡಕ್ಕೆ ಸೇರಿದವರು ಶೇಕಡಾ ೬೦ರಷ್ಟಿದ್ದಾರೆ. ಶೇಕಡಾ ೩೦ರಷ್ಟು ಜನಸಂಖ್ಯೆ ಇತರೇ ಸಮುದಾಯದಗಳಿಗೆ ಸೇರಿದೆ. ಶೇಕಡಾ ೧೦ರಷ್ಟು ಪರಿಶಿಷ್ಟ ಜಾತಿಗೆ ಸೇರಿದ್ದಾರೆ. ಬಹುತೇಕ ಜನಸಂಖ್ಯೆ ಪರಿಶಿಷ್ಟ ಪಂಗಡಕ್ಕೆ ಸೇರಿದೆ. ಪ್ರಾಥಮಿಕ ಶಾಲೆಯಿದೆ. ಬಿಪಿಎಲ್ ಕಾರ್ಡುಗಳ ಸಂಖ್ಯೆ ಹೆಚ್ಚಾಗಿವೆ ಅಂತ್ಯೋದಯ ಕಾರ್ಡುಗಳೂ ಇವೆ. ಅಂಗನವಾಡಿ ಇದೆ. ಆರೋಗ್ಯ ಸೇವೆಗಳಿಗೆ ಇಲ್ಲಿಂದ ೫–೬ ಕಿ.ಮೀ. ದೂರದ ಪೋತ್ನಾಳ್ ಪಟ್ಟಣಕ್ಕೆ ಹೋಗುತ್ತಾರೆ. ಇಬ್ಬರು ಗ್ರಾಮ ಪಂಚಾಯಿತಿ ಸದಸ್ಯರಿದ್ದು. ಒಬ್ಬರು ಪ.ಜಾತಿ ಇನ್ನೊಬ್ಬರು ಪರಿಶಿಷ್ಟ ಪಂಗಡಕ್ಕೆ ಸೇರಿದ್ದಾರೆ. ೪೦ ಕುಟುಂಬಗಳು ಸಣ್ಣ ರೈತರಿದ್ದು ಪರಿಶಿಷ್ಟ ಪಂಗಡಕ್ಕೆ ಸೇರಿದ್ದಾರೆ. ಸಣ್ಣ ಮತ್ತು ಮಧ್ಯಮ ರೈತರು ಗ್ರಾಮದಲ್ಲಿ ಇದ್ದಾರೆ. ದೊಡ್ಡ ರೈತರಿದ್ದು ಸಾಮನ್ಯ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿದ್ದಾರೆ. ಕೃಷಿ ಕಾರ್ಮಿಕರು ಹೆಚ್ಚಾಗಿದ್ದಾರೆ. ಕೃಷಿ ಕಾರ್ಮಿಕರಿಗೆ ತುಂಡು ಭೂಮಿ ಇದ್ದು ಕೃಷಿ ಚಟುವಟಿಕೆಗಳ ದುಬಾರಿ ವೆಚ್ಚವನ್ನ ಭರಿಸಲು ಸಾಧ್ಯವಾಗದೆ ಹಣಕಾಸಿನ ತೊಂದರೆಗಳಿರುವ ಜನರು ತಮ್ಮ ಭೂಮಿಯನ್ನು ಬೇರೆಯವರಿಗೆ ಗುತ್ತಿಗೆ ಕೊಟ್ಟು ತಾವು ಬೇರೆಯವರ ಹೊಲದಲ್ಲಿ ಕೂಲಿ ಮಾಡುತ್ತಾರೆ. ಹಾಗೆಯೇ

ಉದ್ಯೋಗ ಹರಸುತ್ತ ಬದುಕಿನ ಅವಕಾಶಗಳನ್ನು ಹುಡುಕುತ್ತಾ ಬೆಂಗಳೂರು ನಗರಗಳಿಗೆ ವಲಸೆ ಹೋಗುತ್ತಾರೆ. ಈ ರೀತಿಯ ಕೃಷಿ ಕಾರ್ಮಿಕ ವರ್ಗಕ್ಕೆ ಸೇರಿದವರು ೧೫೦ ಹೆಚ್ಚು ಜನರಿದ್ದು ಶೇಕಡಾ ೧೫ಕ್ಕೂ ಹೆಚ್ಚಿಗೆ ಜನರಿದ್ದಾರೆ. ಅದೇ ರೀತಿ ಶೇಕಡಾ ೧೦ರಷ್ಟು ಪರಿಶಿಷ್ಟ ಜಾತಿ ಪಂಗಡಕ್ಕೆ ಸೇರಿದ ಭೂರಹಿತ ವರ್ಗವಿದೆ. ಭೂರಹಿತರು ಮತ್ತು ಕೃಷಿ ಕಾರ್ಮಿಕರು ಆರೋಗ್ಯ, ಉದ್ಯೋಗ, ವರಮಾನ, ಮಾವನ ಅಭಿವೃದ್ಧಿ ಸೂಚ್ಯಾಂಕದಲ್ಲಿ ಕೆಳಮಟ್ಟದಲ್ಲಿದ್ದು ಸಾಕ್ಷರತೆ, ಅಪೌಷ್ಟಿಕತೆ ಮತ್ತು ಅಸಮಾನತೆಯ ಸಮಸ್ಯೆಗಳನ್ನ ಎದುರಿಸುತ್ತಾರೆ. ಸಾಮಾಜಿಕ ಆರ್ಥಿಕ ಅವಕಾಶಗಳಿಂದ ವಂಚಿತರಾಗಿ ಬದುಕುತ್ತಾರೆ. ಕೆಲವು ರೈತರು ವಲ್ಕಂದಿನ್ನಿ ಸಹಕಾರ ಸಂಸ್ಥೆಯಿಂದ ಬೆಳೆ ಸಾಲ ಪಡೆದಿದ್ದಾರೆ. ಸಾಲ ಪಡೆದವರಲ್ಲಿ ಸಾಮಾನ್ಯ ವರ್ಗಕ್ಕೆ ಮತ್ತು ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಸೇರಿದ್ದಾರೆ. ಸಂದರ್ಶನದಲ್ಲಿ ತಿಳಿದುಬಂದಂತೆ ಗ್ರಾಮದ ಬಹುತೇಕರು ಖಾಸಗೀ ಮೂಲದಿಂದ ಸಾಲ ಪಡೆಯುತ್ತಾರೆ. ಈ ರೀತಿ ಸಾಲ ಪಡೆಯುವರು ಶೇಕಡಾ ೭೦ರಷ್ಟು ಜನರು. ಈ ಗ್ರಾಮದ ಜನರು ಹತ್ತಿರದ ಪಟ್ಟಣ ಪೋತ್ನಾಳ್ ಹಾಗೂ ಸಿಂದನೂರಿನ ವ್ಯಾಪಾರಸ್ಥರಿಂದ ಸಾಲ ಪಡೆಯುತ್ತಾರೆ. ಖಾಸಗೀ ಲೇವಾದೇವಿಗಳು ವಿದಿಸುವ ಬಡ್ಡಿ ಮಾಸಿಕ ೩ರಿಂದ ೬ರ ಮರೆಗೂ ಇರುತ್ತದೆ. ವಾರ್ಷಿಕ ಶೇಕಡಾ ೩೬ರಿಂದ ೭೦ರವರೆಗೂ ಇರುತ್ತದೆ. ಈ ರೀತಿ ಖಾಸಗೀ ಮೂಲದಿಂದ ಸಾಲ ಪಡೆಯುವವರು ಯಾರು? ಏಕೆ? ಅದರಿಂದಾಗುವ ಪರಿಣಾಮಗಳೇನು? ಎಂಬುದನ್ನು ಮುಂದಿನ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

**ಜಾಲಹಳ್ಳಿ** : ಜಾಲಹಳ್ಳಿ ದೇವದುರ್ಗ ತಾಲ್ಲೂಕಿನ ಹೋಬಳಿ ಕೇಂದ್ರ. ದೇವದುರ್ಗದಿಂದ ಒಂದುವರೆ ಗುಂಟೆ ಯಾದಗಿರಿ ಜಿಲ್ಲೆಯ ಕಡೆ ಪ್ರಯಾಣ ಮಾಡಿದರೆ ಜಾಲಹಳ್ಳಿ ಸಿಗುತ್ತದೆ. ೨೦೦೦೦ ಜನಸಂಖ್ಯೆ ಇದ್ದ ೫೦೦೦ಕ್ಕೂ ಹೆಚ್ಚಿನ ಕುಟುಂಬಗಳಿವೆ. ಕೃಷ್ಣಾ ನದಿ ನೀರು ಪ್ರದೇಶದಲ್ಲಿ ಹರಿಯುತ್ತದೆ. ಇಡೀ ಜಾಲಹಳ್ಳಿ ಪ್ರದೇಶ ನೀರಾವರಿಗೆ ಒಟ್ಟುಪಟ್ಟಿದ್ದು ನಿರಂತರ ಕೃಷಿ ಚಟುವಟಿಕೆಗಳು ನಡೆಯುತ್ತವೆ. ಭತ್ತ, ಹತ್ತಿ, ಶೇಂಗ, ಸೂರ್ಯಕಾಂತಿ ಮತ್ತು ಕಬ್ಬು ಇತ್ಯಾದಿ ಬೆಳೆಗಳನ್ನು ಬೆಳೆಯುತ್ತಾರೆ. ಪರಿಶಿಷ್ಟ ಜಾತಿ, ಪಂಗಡ, ಕುರುಬರು, ಬ್ರಾಹ್ಮಣರು, ಲಿಂಗಾಯತರು ಪತ್ತಾರ್, ಕಬ್ಬೇರು, ವಡ್ಡರು, ಉಪ್ಪಾರರು, ಇತ್ಯಾದಿ ಸಮುದಾಯಗಳ ಜನರು ವಾಸಿಸುತ್ತಿದ್ದಾರೆ. ಒಟ್ಟು ಜನ ಸಂಖ್ಯೆಯಲ್ಲಿ ಶೇಕಡಾ ೫೦ರಷ್ಟು ಪರಿಶಿಷ್ಟ ಜನಾಂಗದವರಿದ್ದಾರೆ. ಶೇಕಡಾ ೨೦%ರಷ್ಟು ಲಿಂಗಾಯತರು, ಶೇಕಡಾ ೧೫ರಷ್ಟು ಮುಸ್ಲೀಮರು, ಶೇಕಡಾ ೧೫ರಷ್ಟು ಪರಿಶಿಷ್ಟ ಜಾತಿಯವರು ಶೇಕಡಾ ೧೦ರಷ್ಟು ಇತರೇ ಸಮುದಾಯವರಿದ್ದಾರೆ. ಹೋಬಳಿ ಕೇಂದ್ರವಾದ್ದರಿಂದ ಶೈಕ್ಷಣಿಕ ಸೌಲಭ್ಯಗಳಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸರ್ಕಾರಿ ಪದವಿಪೂರ್ವ ಕಾಲೇಜು, ಖಾಸಗಿ ಡಿಗ್ರಿ ಮತ್ತು ಪದವಿ ಪೂರ್ವ ಕಾಲೇಜುಗಳಿವೆ. ಸರ್ಕಾರಿ ಹಾಗೂ ಖಾಸಗಿ ಪ್ರೌಢಶಾಲೆಗಳಿವೆ. ೬ ಖಾಸಗಿ ಪ್ರಾಥಮಿಕ ಶಾಲೆಗಳಿದ್ದು ೨ ಸರ್ಕಾರಿ ಶಾಲೆಗಳಿವೆ. ೨೫೦೦ ಬಿಪಿಎಲ್ ಕಾರ್ಡುಗಳು, ೮೦೦ ಎಪಿಎಲ್ ಕಾರ್ಡುಗಳು ಮತ್ತು ೮೦೦ ಅಂತ್ಯೋದಯ ಕಾರ್ಡುಗಳು ವಿತರಣೆಯಾಗಿವೆ.

೮ ಅಂಗನವಾಡಿ ಕೇಂದ್ರಗಳಿವೆ. ಒಂದು ಸರ್ಕಾರಿ ಆಸ್ಪತ್ರೆ ಇದ್ದು, ಖಾಸಗಿ ಆರ್‌ಎಂಪಿ ಕ್ಲಿನಿಕ್‌ಗಳು ಹೆಚ್ಚಾಗಿವೆ. ಒಟ್ಟು ೨೨ ಗ್ರಾಮ ಪಂಚಾಯ್ತಿ ಸದಸ್ಯರಿದ್ದು ೧೪ ಜನ ಪುರುಷರು ೮ ಜನ ಮಹಿಳಾ ಪಂಚಾಯಿತಿ ಸದಸ್ಯರಿದ್ದಾರೆ. ಒಬ್ಬರು ಜಿಲ್ಲಾ ಪಂಚಾಯಿತಿ ಹಾಗೂ ಒಬ್ಬರು ತಾಲ್ಲೂಕು ಪಂಚಾಯಿತಿ ಸದಸ್ಯರಿದ್ದಾರೆ. ಶೇಕಡಾ ೪೦ರಷ್ಟು ಅತಿ ಸಣ್ಣ ರೈತರು ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಸೇರಿದ್ದಾರೆ. ಶೇಕಡಾ ೬ರಷ್ಟು ಅತಿ ಸಣ್ಣ ರೈತರು ಇತರೇ ಸಮುದಾಯಗಳಿಗೆ ಸೇರಿದ್ದಾರೆ. ೧ ರಿಂದ ೨ ಎಕರೆ ಭೂಮಿಗಿಂತ ಕಡಿಮೆ ಇರುವ ಅತೀ ಸಣ್ಣ ರೈತರು ತಮ್ಮ ಭೂಮಿಗಳನ್ನು ಗುತ್ತಿಗೆ ನೀಡಿ ಕೂಲಿಗಾಗಿ ಉದ್ಯೋಗಗಳನ್ನು ಹರಸುತ್ತಾ ಬೆಂಗಳೂರು, ಪೂನ, ಬಾಂಬೆ ನಗರಗಳಿಗೆ ಜನ ವಲಸೆ ಹೋಗುತ್ತಾರೆ. ಸಣ್ಣ ರೈತರಲ್ಲಿ ಶೇಕಡಾ ೨೬ರಷ್ಟು ಜನ ಪರಿಶಿಷ್ಟ ಜಾತಿ ಪಂಗಡಕ್ಕೆ ಸೇರಿದ್ದು, ಶೇಕಡಾ ೬ರಷ್ಟು ಜನ ಇತರೇ ಜನಾಂಗಕ್ಕೆ ಸೇರಿದ್ದಾರೆ. ಗ್ರಾಮದಲ್ಲಿ ಶೇಕಡಾ ೨೦ರಷ್ಟು ದೊಡ್ಡ ರೈತರು ಲಿಂಗಾಯತ ಸಮುದಾಯಕ್ಕೆ ಸೇರಿದ್ದಾರೆ ಶೇಕಡಾ ೬೦ರಷ್ಟು ಪರಿಶಿಷ್ಟರು ಸಮುದಾಯದವರು ಕೂಲಿ ಮಾಡುತ್ತಾರೆ. ಕೂಲಿ ವೃತ್ತಿಯನ್ನು ಅವಲಂಬಿಸಿದ್ದಾರೆ. ಮುಸ್ಲೀಂ ಮತ್ತು ಇತರೇ ಜನಾಂಗಕ್ಕೆ ಸೇರಿದ್ದು ಕೂಲಿಯನ್ನು ಅವಲಂಬಿಸಿರುವ ಜನರಿದ್ದಾರೆ. ಗ್ರಾಮದಲ್ಲಿ ಪ್ರಾಥಮಿಕ ಕೃಷಿ ಸಾಲ ಸಹಕಾರ ಸಂಸ್ಥೆ ಇದ್ದು ೩೪ ಗ್ರಾಮಗಳ ವ್ಯಾಪ್ತಿಯನ್ನು ಹೊಂದಿದೆ. ಇದೇ ಗ್ರಾಮದಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ ಹಾಗೂ ಪ್ರಗತಿ ಗ್ರಾಮೀಣ ಬ್ಯಾಂಕ್‌ಗಳೂ ಕಾರ್ಯನಿರ್ವಹಿಸುತ್ತಿದೆ. ಸಹಕಾರ ಸಂಸ್ಥೆಯಲ್ಲಿ ೪೦೦ ಸಾಲ ಖಾತೆಗಳಿದ್ದು, ೪೦೦ ರೈತರಿಗೆ ಬೆಳೆ ಸಾಲ ನೀಡಲಾಗಿದೆ. ಇದರಲ್ಲಿ ಶೇಕಡಾ ೫೦ರಷ್ಟು ಸಾಲಗಳನ್ನ ಪರಿಶಿಷ್ಟ ಜನಾಂಗಕ್ಕೆ ನೀಡಲಾಗಿದೆ ಎಂದು ಸಹಕಾರ ಸಂಸ್ಥೆಯ ಕಾರ್ಯದರ್ಶಿ ಹೇಳುತ್ತಾರೆ. ಶೇಕಡಾ ೫ರಷ್ಟು ಸಾಲಗಳನ್ನು ಪರಿಶಿಷ್ಟ ಜಾತಿಯ ಜನರಿಗೆ ನೀಡಲಾಗಿದೆ. ಇತರೇ ಜನಾಂಗದವರು ಸಾಲಗಳನ್ನು ಪಡೆದಿದ್ದಾರೆ. ಸುಮಾರು ೧೦೦ ಖಾತೆಗಳು ಲಿಂಗಾಯತ ಸಮುದಾಯಗಳಿಗೆ ಸೇರಿದ್ದಾರೆ. ಗ್ರಾಮದಲ್ಲಿ ರೈತರು ಮತ್ತು ಕಾರ್ಮಿಕರಿಗೆ ಕಡಿಮೆ ಮೊತ್ತದ ಅಂದರೆ ರೂ. ೫೦೦೦ ಮತ್ತು ೨೦೦೦ಗಳನ್ನ ನೀಡುವ ಖಾಸಗಿ ಲೇವಾದೇವಿಗಾರರಿದ್ದಾರೆ. ಇವರು ಶೇಕಡಾ ೩ರಷ್ಟು ಮಾಸಿಕ ಬಡ್ಡಿ ವಿಧಿಸುತ್ತಾರೆ. ಗ್ರಾಮದಲ್ಲಿ ಟ್ರೇಡಿಂಗ್ ಮಾಡುವ ಟ್ರೇಡರ್ಸ್‌ಗಳಿಂದ ರೈತರು ಮುಖ್ಯವಾಗಿ ಸಣ್ಣ, ಅತೀ ಸಣ್ಣ ರೈತರು ಸಾಲ ಪಡೆಯುತ್ತಾರೆ. ಕೃಷಿಗೆ ಬೇಕಾದ ಹೂಡುವಳಿಗಳನ್ನು ಸಾಲದರೂಪದಲ್ಲಿ ಪಡೆದು ಕೃಷಿ ಉತ್ಪನ್ನ ಬಂದ ನಂತರ ಅದನ್ನು ಮಾರಿ ತಮ್ಮ ಸಾಲ ತೀರಿಸುತ್ತಾರೆ. ಬೆಳೆ ನಿರೀಕ್ಷಿಸುವ ಮಟ್ಟದಲ್ಲಿ ಬರದಿದ್ದರೆ ಮತ್ತೆ ಮುಂದಿನ ಬೆಳೆಗೆ ಅವರಿಂದಲೇ ಸಾಲ ಪಡೆಯುತ್ತಾರೆ. ಮೊದಲ ಸಲ ಮತ್ತು ಎರಡನೇ ಸಲ ಪಡೆದ ಸಾಲವನ್ನು ಒಟ್ಟಾಗಿ ಹಿಂತಿರುಗಿಸಬೇಕು. ಹೀಗೆ ಸಾಲ ಪಡೆಯುವುದು ಸಾಲ ಹಿಂತಿರುಗಿಸಲು ಸಾಧ್ಯವಾಗದಿದ್ದಾಗ ವ್ಯಾಪಾರಸ್ಥರ ಒತ್ತಡದಿಂದ ತಮ್ಮ ಜಮೀನುಗಳನ್ನು ಮಾರಾಟ ಮಾಡಿ ಸಾಲ ತೀರಿಸುತ್ತಾರೆ. ಭೂಮಿ ಕಳೆದುಕೊಂಡ ಇವರು ಕೂಲಿ ಕಾರ್ಮಿಕರಾಗಿ ಬದಲಾಗಿ ನಗರಗಳಿಗೆ ವಲಸೆ ಹೋಗುತ್ತಾರೆ ಎಂದು ತಿಳಿದು ಬಂದಿತು.

**ಹೇರುಂಡಿ** : ಈ ಗ್ರಾಮ ದೇವದುರ್ಗ ತಾಲ್ಲೂಕಿನ ಜಾಲಹಳ್ಳಿ ಹೋಬಳಿಯ ಒಣ ಭೂಮಿ ಪ್ರದೇಶವಾಗಿದ್ದು ಸರಿಯಾದ ಸಂಪರ್ಕ ಸೌಲಭ್ಯಗಳಿಲ್ಲ. ಮಳೆ ಆಶ್ರಿತ ಬೆಳೆ ಮಾಡಲಾಗುತ್ತದೆ. ಹೋಬಳಿ ಕೇಂದ್ರದಿಂದ ೧೨ ಕಿಮೀ ದೂರದಲ್ಲಿದೆ. ಈ ಗ್ರಾಮದಲ್ಲಿ ೧೫೦೦ ಜನ ಸಂಖ್ಯೆ ಇದ್ದು ೩೦೦ ಕುಟುಂಬಗಳಿವೆ. ಮುಸ್ಲೀಮರು, ಪರಿಶಿಷ್ಟ ಜಾತಿ, ಕಬ್ಬೇರು, ಲಿಂಗಾಯತ ಸಮುದಾಯಗಳು ಗ್ರಾಮದಲ್ಲಿ ನೆಲೆಸಿವೆ. ಶೇಕಡಾ ೫೫ರಷ್ಟು ಲಿಂಗಾಯತ ಸಮುದಾಯವರಿದ್ದಾರೆ. ಶೇಕಡಾ ೨೦ರಷ್ಟು ಪರಿಶಿಷ್ಟ ಜಾತಿಯವರಿದ್ದಾರೆ. ಶೇಕಡಾ ೫ರಷ್ಟು ಮುಸ್ಲೀಮ್ ಜನರಿದ್ದಾರೆ. ಗ್ರಾಮದಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಿವೆ. ೨ ಅಂಗನವಾಡಿ ಕೇಂದ್ರಗಳಿವೆ. ಆಸ್ಪತ್ರೆ ಸೌಲಭ್ಯಗಳಿಗಾಗಿ ಇಲ್ಲಿನ ಜನರು ಜಾಲಹಳ್ಳಿಗೆ ಬರುತ್ತಾರೆ. ೩ ಗ್ರಾಮ ಪಂಚಾಯಿತಿ ಸದಸ್ಯರಿದ್ದು ೨ ಪುರುಷ ಮತು ಒಬ್ಬರು ಮಹಿಳೆಯರಿದ್ದಾರೆ. ಗ್ರಾಮದಲ್ಲಿ ಅತಿಸಣ್ಣ, ಸಣ್ಣ ಮತ್ತು ದೊಡ್ಡ ರೈತರಿದ್ದು, ದೊಡ್ಡ ರೈತರೆಲ್ಲರೂ ಪ್ರಬಲ ಲಿಂಗಾಯತ ಸಮುದಾಯಕ್ಕೆ ಸೇರಿದವರಾಗಿರುತ್ತಾರೆ. ಈ ಜಾತಿಯವರು ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ವಾಗಿ ಉತ್ತಮ ಸ್ಥಿತಿಯಲ್ಲಿದ್ದಾರೆ. ಕೃಷಿ ಕಾರ್ಮಿಕರು ಮತ್ತು ಭೂರಹಿತ ಕಾರ್ಮಿಕರಿದ್ದು ಪರಿಶಿಷ್ಟ ಜಾತಿಗೆ ಸೇರಿದ್ದು ಉದ್ಯೋಗಕ್ಕೆ ಇವರು ಬಾಂಬೆ, ಬೆಂಗಳೂರು ವಲಸೆ ಹೋಗುತ್ತಾರೆ. ಅದೇ ರೀತಿ ಕಬ್ಬೇರು ಮತ್ತು ಮುಸ್ಲೀಮ್ ಜನಾಂಗಕ್ಕೆ ಸೇರಿದ ಭೂರಹಿತ ಕಾರ್ಮಿಕರು ಇದ್ದಾರೆ. ಗ್ರಾಮದಲ್ಲಿ ೪೦ ಜನ ಜಾಲಹಳ್ಳಿ ಸಹಕಾರ ಸಂಸ್ಥೆಯಿಂದ ಸಾಲ ಪಡೆದಿದ್ದು, ಇವರಲ್ಲಿ ಕೇವಲ ೫ ಜನ ಪರಿಶಿಷ್ಟ ಜಾತಿಗೆ ಸೇರಿದ್ದರೆ ೩೫ ಜನರು ಲಿಂಗಾಯತ ಜಾತಿಗೆ ಸೇರಿದ್ದಾರೆ. ಗ್ರಾಮದ ಬಹುತೇಕ ಭೂಮಿ ಪ್ರಬಲ ಲಿಂಗಾಯತ ಸಮುದಾಯದವರ ಹಿಡಿತದಲ್ಲಿದೆ. ಸಹಕಾರ ಸಂಸ್ಥೆಯು ಇವರ ಹಿಡಿತ ಅಥವಾ ಪ್ರಭಾವದಲ್ಲಿದ್ದು ಹೆಚ್ಚು ಸಾಲಗಳನ್ನು ಪಡೆದಿದ್ದಾರೆ. ಲಿಂಗಾಯತ ಜಾತಿಗೆ ಸೇರಿದ ದೊಡ್ಡ ರೈತರೆಲ್ಲಾ ಜಾಲಹಳ್ಳಿಯ ವಾಣಿಜ್ಯ ಬ್ಯಾಂಕಿನಿಂದಲೂ ಸಾಲ ಸೌಲಭ್ಯ ಪಡೆದಿದ್ದಾರೆ. ಹೀಗೆ ಸಾಂಸ್ಥಿಕ ಹಣಕಾಸು ವ್ಯವಸ್ಥೆಯ ಸಾಲ ಸೌಲಭ್ಯಗಳ ಅನುಕೂಲ ಪಡೆಯುವವರು ಇವರೆ. ಗ್ರಾಮದಲ್ಲಿ ಉದ್ಯೋಗವಕಾಶಗಳು ಕಡಿಮೆ. ಕೃಷಿ ಕಾರ್ಮಿಕರು ಮತ್ತು ಭೂರಹಿತರ ಕಾರ್ಮಿಕರು ವಲಸೆ ಹೋಗುತ್ತಾರೆ. ಜೀವನಕ್ಕೆ ಭದ್ರತೆ ಇಲ್ಲ.

### ೨.೧೨. ಜಿಲ್ಲಾ ಸಾಲ ಯೋಜನಾ ಪ್ರಕ್ರಿಯೆ

ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ ರಾಯಚೂರು ಜಿಲ್ಲೆಯ ಲೀಡ್ ಬ್ಯಾಂಕ್. ಲೀಡ್ ಬ್ಯಾಂಕ್ ವ್ಯವಸ್ಥೆಯಡಿ ಸ್ಥಳೀಯ ಮಟ್ಟದ ಸಾಲ ಯೋಜನೆಗಳನ್ನು ರಾಷ್ಟ್ರೀಯ ಅಭಿವೃದ್ಧಿ ಯೋಜನೆಗೆ ಪೂರಕವಾಗಿ ಪ್ರತಿ ಜಿಲ್ಲೆಯಲ್ಲಿ ನಿರಂತರವಾಗಿ ಮಾಡಲಾಗುತ್ತದೆ. ಲೀಡ್ ಬ್ಯಾಂಕ್‌ಗೆ ನಿರ್ಧಿಷ್ಟ ಜವಾಬ್ದಾರಿಗಳನ್ನು ನೀಡುವ ಮೂಲಕ ಹಣಕಾಸು ಸಂಸ್ಥೆಗಳು ಮುಖ್ಯವಾಗಿ ಬ್ಯಾಂಕುಗಳನ್ನು ಅಭಿವೃದ್ಧಿಯ ಸಾಧನವನ್ನಾಗಿ ಮಾಡುವ ಉದ್ದೇಶವಿದೆ. ಲೀಡ್ ಬ್ಯಾಂಕುಗಳ ನಿರ್ವಹಿಸಬೇಕಾದ ಜವಾಬ್ದಾರಿಗಳೆಂದರೆ, ಜಿಲ್ಲೆಯಲ್ಲಿ ಬೆಳವಣಿಗೆ ಹೊಂದುತ್ತಿರುವ ಕೇಂದ್ರಗಳನ್ನು ಗುರ್ತಿಸುವುದು,

ಠೇವಣಿ ಸಂಗ್ರಹ ಅವಕಾಶಗಳ ಪರಿಶೀಲನೆ ಮತ್ತು ಇತರೆ ಸಾಲ ಮೂಲಗಳ ಪರಿಶೀಲನೆ ಹಾಗು ಜಿಲ್ಲೆಯ ಸಾಲ ಅಗತ್ಯಗಳು, ಸಾಲ ಬೇಡಿಕೆ ಮತ್ತು ಪೂರೈಕೆಯ ಅಂತರಗಳ ಗುರ್ತಿಸುವಿಕೆ. ಸರ್ಕಾರಿ ಇಲಾಖೆ ಮತ್ತು ಸಂಸ್ಥೆಗಳೊಂದಿಗೆ ಸಮನ್ವಯ ಇತ್ಯಾದಿ. ಜಿಲ್ಲೆಗಳ ಸಾಲ ಸೌಲಭ್ಯಗಳನ್ನು ಸಮರ್ಪಕವಾಗಿ ಪೂರೈಸಿ ಅಭಿವೃದ್ಧಿ ಚಟುವಟಿಕೆಗಳನ್ನು ಪ್ರೇರೇಪಿಸಿ ಜಿಲ್ಲೆಯ ಆರ್ಥಿಕತೆಗಳ ಸುಧಾರಣೆಗೆ ಶ್ರಮಿಸುವುದು ಲೀಡ್ ಬ್ಯಾಂಕ್ ವ್ಯವಸ್ಥೆ ಮತ್ತು ಪರಿಕಲ್ಪನೆಯ ಉದ್ದೇಶ. ರಾಯಚೂರು ಜಿಲ್ಲೆಯಲ್ಲಿ ೨೦೧೩-೧೪ನೇ ವರ್ಷದ ವಾರ್ಷಿಕ ಸಾಲ ಯೋಜನೆಯನ್ನು ಸಿದ್ಧಪಡಿಸಲಾಗಿದೆ. ಈ ಯೋಜನೆಯನ್ನು ಸರ್ಕಾರದ ನೀತಿಗಳು ಹಾಗೂ ಮಾರ್ಗದರ್ಶಿ ನಿಯಮಗಳ ಪ್ರಕಾರ ಸಿದ್ಧಪಡಿಸಲಾಗಿದೆ. ಈ ಯೋಜನೆ ತಯಾರಿಸುವಾಗ ಜಿಲ್ಲೆಯ ಎಲ್ಲಾ ಬ್ಯಾಂಕುಗಳು, ನಬಾರ್ಡ್, ಸರ್ಕಾರ ಮತ್ತು ಇತರೆ ಸಂಸ್ಥೆಗಳನ್ನು ತೊಡಗಿಸಿಕೊಳ್ಳಲಾಗಿದೆ. ಈ ಪ್ರಕ್ರಿಯೆಯ ನಂತರ ಅಂತಿಮವಾಗಿ ಜಿಲ್ಲಾ ಸಾಲ ಯೋಜನೆಯನ್ನು ತಯಾರಿಸಲಾಗುತ್ತದೆ. ಗ್ರಾಮೀಣ ಆರ್ಥಿಕತೆಯ ಸಾಲದ ಅಗತ್ಯಗಳನ್ನು ವಿಸ್ತರಿಸಲು ಹೆಚ್ಚಿನ ಗಮನವನ್ನು ಜಿಲ್ಲಾ ಸಾಲ ಯೋಜನೆಯಲ್ಲಿ ನೀಡಲಾಗಿದೆ. ಕೃಷಿ, ಸಣ್ಣ ಕೈಗಾರಿಕೆ, ಸಣ್ಣ ಮಧ್ಯಮ ವ್ಯಾಪಾರ ಚಟುವಟಿಕೆಗಳು ಮತ್ತು ಪೂರಕ ಸೇವೆಗಳಿಗೆ ಸಾಲಗಳನ್ನು ಪೂರೈಸುವುದು ಪ್ರಮುಖ ಅಂಶವಾಗಿದೆ. ಹೀಗೆ ಜಿಲ್ಲೆಯ ಸಾಲದ ಅಗತ್ಯಗಳು, ಸಾಲ ವಿಸ್ತರಣೆ, ಬ್ಯಾಂಕು ಶಾಖೆಗಳ ವಿಸ್ತರಣೆ, ಸಾಲ ಯೋಜನೆಗಳ ಸಿದ್ದತೆ ಮತ್ತು ಅನುಷ್ಠಾನವನ್ನು ಲೀಡ್ ಬ್ಯಾಂಕು ವ್ಯವಸ್ಥೆಯಡಿ ವ್ಯವಸ್ಥಿತವಾಗಿ ನಿರಂತರವಾಗಿ ಮಾಡಲಾಗುತ್ತದೆ.[೧೭] ಲೀಡ್ ಬ್ಯಾಂಕ್ ಬೇರೆ ಬೇರೆ ಮೂಲಗಳಿಂದ ಸಾಲ ನೀಡಲು ಲಭ್ಯವಿರುವ ನಿಧಿಯನ್ನು ಪರಿಶೀಲಿಸುತ್ತದೆ. ಈ ದಿ ಮೂಲಗಳೆಂದರೆ ಠೇವಣಿ ಹಣ, ಸಾಲ ವಸೂಲಾತಿ, ನಬಾರ್ಡ್ ಮತ್ತು ಖಃಖ ಹಾಗೂ ಸಹಕಾರ ಸಂಸ್ಥೆಗಳು ಸಂಗ್ರಹಿಸುವ ಶೇರು ಹಣ ಇತ್ಯಾದಿ. ಅದೇ ರೀತಿ ನಿರ್ಧಿಷ್ಟ ಯೋಜನಾ ಅವಧಿಯಲ್ಲಿ ಬೇರೆ ಬೇರೆ ಸಂಸ್ಥೆಗಳು ಅನುಷ್ಠಾನಗೊಳಿಸಬೇಕಾದ ಅಭಿವೃದ್ಧಿ ಕಾರ್ಯಕ್ರಮಗಳ ಮಾಹಿತಿ ಸಂಗ್ರಹಿಸುತ್ತದೆ. ಅಭಿವೃದ್ಧಿ ಯೋಜನೆಗಳನ್ನು ಜಾರಿಗೆ ತರಲು ಅಗತ್ಯವಿರುವ ಹಣಕಾಸು ಸಂಪನ್ಮೂಲ ಕ್ರೋಡಿಕರಣ ಬಗ್ಗೆ ಗಮನ ಹರಿಸುತ್ತದೆ. ವಿವಿಧ ಸಂಸ್ಥೆಗಳ, ಬ್ಯಾಂಕುಗಳ ಸಾಲ ಗುರಿ ಮತ್ತು ನಿರ್ಧಿಷ್ಟ ಸಾಲ ನಿಯಮದ ಆಧಾರದ ಮೇಲೆ ಸಾಲ ನೀಡಲು ನಿಧಿಗಳ ಹಾಗು ಸಂಪನ್ಮೂಲಗಳ ಹಂಚಿಕೆ ಮಾಡುತ್ತದೆ. ಸಾಲ ಸಂಪನ್ಮೂಲಗಳ ಹಂಚಿಕೆಗೆ ಸಂಬಂದಿಸಿದ ಅನುಮೋದನೆ ಕುರಿತು ಜಿಲ್ಲಾ ಸಾಲ ಯೋಜನೆ ಸಭೆಯಲ್ಲಿ ಚರ್ಚಿಸಲಾಗುತ್ತದೆ. ಪ್ರತಿ ಬ್ಯಾಂಕು ಒಬ್ಬ ಸಮನ್ವಯ ಅಧಿಕಾರಿಯನ್ನು ಹೊಂದಿರುತ್ತದೆ. ಈ ಸಮನ್ವಯ ಅಧಿಕಾರಿ ತಮ್ಮ ಬ್ಯಾಂಕಿಗೆ ಹಂಚಿಕೆಯಾದ ಸಾಲ ಸಂಪನ್ಮೂಲವನ್ನು ಆ ಬ್ಯಾಂಕಿನ ಜಿಲ್ಲೆಯ ಎಲ್ಲಾ ಶಾಖೆಗಳ ನಡುವೆ ಮರು ಹಂಚಿಕೆ ಮಾಡುತ್ತಾನೆ. ರೀತಿ ಮರು ಹಂಚಿಕೆ ಮಾಡುವಾಗ ಸಮನ್ವಯ ಅಧಿಕಾರಿ ಲೀಡ್ ಬ್ಯಾಂಕ್‌ನೊಂದಿಗೆ ಸಂಪರ್ಕದಲ್ಲಿರುತ್ತಾನೆ. ಲೀಡ್ ಬ್ಯಾಂಕ್ ವಿವಿಧ ಬ್ಯಾಂಕುಗಳ ಕಾರ್ಯಭಾರ, ಕೆಲಸದ ಪ್ರಮಾಣಗಳಿಗೆ ಅನುಗುಣವಾಗಿ ಸಿಬ್ಬಂದಿ ನೇಮಕಾತಿ ವಿಷಯದಲ್ಲಿ ತನ್ನನ್ನು ತೊಡಗಿಸಿ ಕೊಳ್ಳುತ್ತದೆ. ಸಾಲಯೋಜನೆಗಳ ನಿರಂತರ

ಮತ್ತು ವ್ಯವಸ್ಥಿತ ಅನುಷ್ಠಾನಕ್ಕೆ ಅನುಕೂಲವಾಗುವಂತೆ ಸಿಬ್ಬಂದಿ ನೇಮಕಾತಿ ಪ್ರಕ್ರಿಯೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತದೆ. ವಿವಿಧ ಬ್ಯಾಂಕುಗಳು ತಮ್ಮ ಜಿಲ್ಲಾ ಸಾಲ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸವ ಸಮನ್ವಯ ಕಾರ್ಯವನ್ನು ಲೀಡ್ ಬ್ಯಾಂಕ್ ನಿರ್ವಹಿಸುತ್ತದೆ.[೧೮]

## ಕೃಷಿ ಕಾರ್ಮಿಕರ ಪರಿಸ್ಥಿತಿಯ ವಿಶ್ಲೇಷಣೆ

ರಾಯಚೂರು ಜಿಲ್ಲೆ ಹೈದರಾಬಾದ್ ಕರ್ನಾಟಕದ ಜಿಲ್ಲೆಗಳಲ್ಲಿ ಒಂದು. ಹೈದರಾಬಾದ್ ಕರ್ನಾಟಕ ಹಲವು ಸಮಸ್ಯೆ ಮತ್ತು ಸವಾಲುಗಳನ್ನು ಎದುರಿಸುತ್ತಿದೆ. ಹೈದರಾಬಾದ್ ಕರ್ನಾಟಕದ ಜನತೆ ಸಮಾನ ಅವಕಾಶಗಳು ಅಭಿವೃದ್ಧಿಗಾಗಿ ನಿರಂತರವಾಗಿ ಹೋರಾಡುತ್ತಿದ್ದಾರೆ. ಈ ಭಾಗದ ಕೃಷಿ ಕಾರ್ಮಿಕರ ಸಂಖ್ಯೆಯೂ ಹೆಚ್ಚಾಗಿದೆ. ಈ ಹಿನ್ನೆಲೆಯಲ್ಲಿ ಈ ಅಧ್ಯಯನದಲ್ಲಿ ಹೈದರಾಬಾದ್ ಕರ್ನಾಟಕ ಕೃಷಿ ಕಾರ್ಮಿಕರ ಆರ್ಥಿಕ ಪರಿಸ್ಥಿತಿಯನ್ನು ವಿಶ್ಲೇಷಿಸುವ ಪ್ರಯತ್ನ ಇಲ್ಲಿ ಮಾಡಲಾಗಿದೆ. ದೇಶದ ೨/೩ ನಷ್ಟು ಕಾರ್ಮಿಕ ಶಕ್ತಿ ಗ್ರಾಮೀಣ ಪ್ರದೇಶಗಳು ವಾಸಿಸುತ್ತಿದೆ. ಕೂಲಿ ಆಧಾರಿತ ಉದ್ಯೋಗ ಅವರ ಬದುಕಿನ ಮೂಲವಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಗುರಿ ಆಧಾರಿತ ಬಡತನ ನಿರ್ಮೂಲನೆ ಮತ್ತು ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನುರೂಪಿಸಿ ಜಾರಿಗೊಳಿಸುವ ಸರ್ಕಾರ ಕೃಷಿ ಕಾರ್ಮಿಕ ವರ್ಗವನ್ನು ಆಧಾರವಾಗಿಟ್ಟುಕೊಳ್ಳುತ್ತದೆ. ಸಾಂಪ್ರಾದಾಯಿಕ ಕೃಷಿ ಕ್ಷೇತ್ರದಲ್ಲಿ ತೊಡಗಿರುವ ಜನರ ಪ್ರಮಾಣ ಹೆಚ್ಚು ಕಡಿಮೆ ಹಾಗೆ ಇದೆ. ಬದಲಾಗಿಲ್ಲ. ಆರ್ಥಿಕತೆಯಲ್ಲಿ ಕೃಷಿ ಕ್ಷೇತ್ರ ಕಡಿಮೆ ಉತ್ಪಾದಕತೆ ಮತ್ತು ಇದ್ನು ಅವಲಂಬಿಸಿರುವ ಜನರು ಜೀವನಾಧಾರ ಮಟ್ಟದಲ್ಲೆ ಇರುವ ಒಂದು ಸಾಂಪ್ರಾದಾಯಿಕ ವಲಯವಾಗಿ ಉಳಿದಿದೆ. ಆರ್ಥಿಕತೆಯಲ್ಲಿ ಕೈಗಾರಿಕಾ ಕಾರ್ಮಿಕರಿಗೆ ಹೋಲಿಸದರೆ ಕೃಷಿ ಕಾರ್ಮಿಕರು ಯಾವುದೇ ಹಕ್ಕು ಅಥವಾ ಅವಕಾಶಗಳನ್ನು ಹೊಂದಿಲ್ಲ. ಕೃಷಿ ಕಾರ್ಮಿಕ ವರ್ಗ ಒಂದು ಅಸಂಘಟಿತ ವರ್ಗವಾಗಿ ಉಳಿದಿದೆ. ಇವರಿಗೆ ಕನಿಷ್ಠ ಕೂಲಿ ಸೌಲಭ್ಯವಿಲ್ಲ. ಉದ್ಯೋಗ ಭದ್ರತೆ ಇಲ್ಲ. ಕೆಲಸದ ಅವಧಿ ಸೀಮಿತವಾಗಿಲ್ಲ. ಕಡಿಮೆ ಕೂಲಿ ಪಡೆದು ಹೆಚ್ಚು ಅವಧಿ ಕೆಲಸ ನಿರ್ವಹಿಸುತ್ತಾರೆ. ಕಾರ್ಮಿಕ ಶಕ್ತಿ ಪೂರೈಕೆ ಹೆಚ್ಚಾಗಿರುತ್ತದೆ. ಆದರೆ ಅದರ ಬಳಕೆ ಕಡಿಮೆ ಇರುತ್ತದೆ.[೧೯]

## ಕೃಷಿ ಕಾರ್ಮಿಕ ಪರಿಕಲ್ಪನೆ

ಕೃಷಿ ಕಾರ್ಮಿಕ ಪರಿಕಲ್ಪನೆಯನ್ನು ವ್ಯಾಖ್ಯಾನಿಸುವುದಾದರೆ ೧೯೫೦-೫೧ರ ಅಗ್ರಿಕಲ್ಚರ್ ಲೇಬರ್ ಎನ್‌ಕ್ವೈರಿ ಪ್ರಕಾರ ಕೃಷಿ ಕಾರ್ಮಿಕ ಅಂದರೆ ಕೃಷಿ ಚಟುವಟಿಕೆಗಳಲ್ಲಿ ಹಿಂದಿನ ವರ್ಷ ತಾನು ಕೆಲಸ ಮಾಡಿದ ಒಟ್ಟು ದಿನಗಳಲ್ಲಿ ಶೇಕಡಾ ೫೦ರಷ್ಟು ದಿನಗಳು ಕೂಲಿಗಾಗಿ ನೇಮಿಸಲ್ಪಟ್ಟ ವ್ಯಕ್ತಿ. ಸೆನ್ಸಸ್ ವ್ಯಾಖ್ಯಾನ ಪ್ರಕಾರ ಕುಟುಂಬದ ಶೇಕಡಾ ೫೦ರಷ್ಟು ಸದಸ್ಯರು ಭೂಮಿ ಇದ್ದು ಅಥವಾ ಇಲ್ಲದೆ ಇರುವವರು ಕೃಷಿ ಚಟುವಟಿಕೆಯನ್ನು ಮುಖ್ಯ ಆದಾಯ ಮೂಲವನ್ನಾಗಿ ಮಾಡಿಕೊಂಡಿದ್ದರೆ ಅಂತಹ ಕುಟುಂಬವನ್ನು ಕೃಷಿ ಕಾರ್ಮಿಕ ಕುಟುಂಬ ಎನ್ನಲಾಗಿದೆ.[೨೦]

### ಕೃಷಿ ಕಾರ್ಮಿಕರ ಸಂಖ್ಯೆಯ ಹೆಚ್ಚಳ

ಬಡತನ ಹೆಚ್ಚಾದ್ದರಿಂದ ಗ್ರಾಮೀಣ ಆರ್ಥಿಕತೆಯಲ್ಲಿ ಕೃಷಿ ಕಾರ್ಮಿಕರ ಸಂಖ್ಯೆಯು ಹೆಚ್ಚಿದೆ. ರಾಷ್ಟ್ರೀಯ ಕಾರ್ಮಿಕ ಆಯೋಗದ ಪ್ರಕಾರ ೧೯೫೧–೨೦೦೧ರ ಅವಧಿಯಲ್ಲಿ ಕಾರ್ಮಿಕ ಶಕ್ತಿಯು ಶೇಕಡಾ ೧೯.೭ ರಿಂದ ೨೬.೬೯ಕ್ಕೆ ಹೆಚ್ಚಿದೆ ಎಂದು ಹೇಳಿದೆ.

**ಭಾರತದ ಆರ್ಥಿಕತೆಯಲ್ಲಿ ಕೃಷಿ ಕಾರ್ಮಿಕರ ಹೆಚ್ಚಳ**

| ಜನಗಣತಿ ವರ್ಷ | ಒಟ್ಟು ಜನಸಂಖ್ಯೆ (ದಶಲಕ್ಷ) | ಒಟ್ಟು ಶ್ರಮ ಶಕ್ತಿ (ದಶಲಕ್ಷ) | ಕೃಷಿ ಕಾರ್ಮಿಕ (ಶೇಕಡಾ) | ಒಟ್ಟು ಶ್ರಮ ಶಕ್ತಿಯಲ್ಲಿ ಕಾರ್ಮಿಕ ಶಕ್ತಿ (ಶೇಕಡಾ) |
|---|---|---|---|---|
| ೧೯೫೧ | ೩೬೧.೩೧ | ೧೩೯.೪೨ | ೨೭.೫ | ೧೯.೭೨ |
| ೧೯೬೧ | ೪೩೯.೨೩ | ೧೮೮.೬೮ | ೩೧.೫೨ | ೧೬.೭೧ |
| ೧೯೭೧ | ೫೪೭.೯೫ | ೧೮೦.೩೭ | ೪೭.೪೮ | ೨೫.೩೩ |
| ೧೯೮೧ | ೬೮೫.೦೨ | ೨೨೨.೨೧ | ೫೫.೪೭ | ೨೪.೯೪ |
| ೧೯೯೧ | ೮೪೬.೩ | ೩೧೮.೭೩ | ೭೩.೦೭ | ೨೬.೦೨ |
| ೨೦೦೧ | ೧೦೨೭.೦೧ | ೪೦೨.೫೧ | ೧೦೭.೪೫ | ೨೬.೬೯ |
| ೨೦೧೧ | | | | |

ಮೂಲ: ೧) ಕೆ.ಎ.ರಸೂರ್, ಚನ್ನಬಸವಗೌಡ ಅಂಡ್ ಬೂಕ್ಕಲ್ ನಾಗೇಂದ್ರಪ್ಪ (೨೦೧೧).

೨) ಸೆನ್ಸಸ್ ಆಫ್ ಇಂಡಿಯಾ, ೨೦೦೧ ಸೀರೀಸ್, ಪ್ರೈಮರಿ ಸೆನ್ಸಸ್ ಅಬ್ಸ್ಟ್ರಾಕ್ಟ್, ಜನರಲ್ ಪಾಪುಲೇಷನ್, ಗೌರ್ನಮೆಂಟ್ ಆಫ್ ಇಂಡಿಯಾ, ನ್ಯೂಡೆಲ್ಲಿ.

೩) ಇಂಡಿಯನ್ ಲೇಬರ್ ಜರನಲ್, ವಾಲ್ಯೂಮ್ ೩೫, ನಂ ೩, ಮಾರ್ಚ್ ೧೯೯೪, ಪು.೨೮೮–೨೯೦

### ಕರ್ನಾಟಕದಲ್ಲಿ ಕೃಷಿ ಕಾರ್ಮಿಕರ ಹೆಚ್ಚಳ

ಭಾರತದ ಆರ್ಥಿಕತೆಯಂತೆ ಕರ್ನಾಟಕದ ಆರ್ಥಿಕತೆಯಲ್ಲಿ ಇಂದಿಗೂ ಶೇಕಡಾ ೫೬ ರಿಂದ ೬೦ರಷ್ಟು ಜನ ಕೃಷಿಯನ್ನು ಅವಲಂಬಿಸಿದ್ದಾರೆ. ಭಾರತದಂತೆ ಕರ್ನಾಟಕದ ರಾಜ್ಯಾದಾಯದಲ್ಲಿ ಕೃಷಿಯ ಕೊಡುಗೆ ಕಡಿಮೆಯಾಗಿದೆ ಆದರೆ ಕೃಷಿಯನ್ನು ಅವಲಂಬಿಸಿರುವ ಜನರ ಸಂಖ್ಯೆ ಕಡಿಮೆಯಾಗಿಲ್ಲ. ಕೃಷಿ ಮೇಲಿನ ಒತ್ತಡ ಕಡಿಮೆ ಆಗಿಲ್ಲ. ಕರ್ನಾಟಕದಲ್ಲಿ ಒಟ್ಟು ಮುಖ್ಯ ಕೆಲಸಗಾರರಿಗೆ ಹೋಲಿಸಿದರೆ ಕೃಷಿ ಕಾರ್ಮಿಕರ ಸಂಖ್ಯೆ ಹೆಚ್ಚಾಗಿದೆ. ೧೯೬೧ರಲ್ಲಿ ಶೇಕಡಾ

೧೨.೬ರಷ್ಟಿದ್ದದ್ದು, ೧೯೭೧ಕ್ಕೆ ಶೇಕಡಾ ೨೬.೭ಕ್ಕೆ ಹೆಚ್ಚಿತು. ೧೯೮೧ರಲ್ಲಿ ಹೆಚ್ಚಾಗಲಿಲ್ಲ. ಆದರೆ ೧೯೯೧ಕ್ಕೆ ಮತ್ತೆ ೨೮.೭೫ಕ್ಕೆ ಹೆಚ್ಚಿತು. ೨೦೦೧ರ ಅವಧಿಯಲ್ಲಿ ೨೬.೪೬ರಷ್ಟಿತ್ತು ೨೦೧೧ರಲ್ಲಿ ೨೫.೬೭ರಷ್ಟಾಗಿದೆ. ಸ್ವಲ್ಪ ಮಟ್ಟದ ಇಳಿಕೆ ಕಂಡು ಬಂದಿದೆ.[೨]

೨.೧೩. ರಾಯಚೂರು ಜಿಲ್ಲೆಯ ಕೃಷಿ ಕಾರ್ಮಿಕರ ಹೆಚ್ಚಳ (ಲಕ್ಷಗಳಲ್ಲಿ)

| ಜನಗಣತಿ ವರ್ಷ | ಒಟ್ಟು ಮುಖ್ಯ ಕೆಲಸಗಾರರು | ಕೃಷಿ ಕಾರ್ಮಿಕರು | ಒಟ್ಟು ಕೆಲಸಗಾರರಲ್ಲಿ ಕೃಷಿಕಾರ್ಮಿಕರ ಪ್ರಮಾಣ |
|---|---|---|---|
| ೧೯೭೧ | ೫೨೭೦೦೧ | ೧೯೩೭೩೬ | ೩೬.೭೬ |
| ೧೯೮೧ | ೭೩೧೩೧೦ | ೩೧೪೩೩೨ | ೪೨.೯೮ |
| ೧೯೯೧ | ೯೭೦೯೦೦ | ೪೨೨೫೪೮೦೧ | ೪೩.೮೨ |
| ೨೦೦೧ | ೭೩೨೭೬೨ | ೩೨೮೪೯೧ | ೪೪.೮೦ |

ಮೂಲ: ೧) ಜಿಲ್ಲಾ ಪಂಚಾಯತ್ ರಾಯಚೂರು, ಜಿಲ್ಲಾ ಅಂಕಿಅಂಶಗಳ ನೋಟ ೨೦೧೧-೧೨

೨) ಭಾರತ ಜನಗಣತಿ ೧೮೭೧. ಜಿಲ್ಲಾ ಸಾಂಖಿಕ ನಿರ್ದೇಶನಾಲಯ, ರಾಯಚೂರು. ಪು.೨೧-೨೨

ರಾಯಚೂರು ಜಿಲ್ಲಾ ಆಂಕಿ ಅಂಶಗಳ ನೋಟ ೨೦೧೧-೧೨ರ ಪ್ರಕಾರ ಜಿಲ್ಲೆಯಲ್ಲಿ ಒಟ್ಟು ಮುಖ್ಯ ಕೆಲಸಗಾರಾರು ೫೪೪೦೦೦ (೫.೪೪ ಲಕ್ಷ)ರಷ್ಟಿದ್ದು ಇದರಲ್ಲಿ ಕೃಷಿ ಕಾರ್ಮಿಕರ ಸಂಖ್ಯೆ ೩೨೮೪೯೧ (೩.೨೮ ಲಕ್ಷ) ಆಗಿದೆ. ಒಟ್ಟು ಮುಖ್ಯ ಕೆಲಸಗಾರರಲ್ಲಿ ಕೃಷಿ ಕಾರ್ಮಿಕರ ಶೇಕಡವಾರು ಪ್ರಮಾಣ ೬೦ರಷ್ಟಿದೆ ಅಂದರೆ ರಾಯಚೂರು ಜಿಲ್ಲೆಯಲ್ಲಿ ಕೃಷಿ ಕಾರ್ಮಿಕರ ಸಂಖ್ಯೆ ಬೆಳೆಯುತ್ತಿದ್ದು, ಇವರು ಈ ಹಿಂದೆ ತಿಳಿಸಿದಂತೆ ದುಸ್ಥಿತಿಯ ಬದಕನ್ನು ನಡೆಸುತ್ತಿದ್ದು ಸಮಾಜದ ಅಂಚಿನಲ್ಲಿ ವಾಸಿಸುತ್ತಿದ್ದಾರೆ. ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದಿದ್ದಾರೆ. ಕೃಷಿ ಕಾರ್ಮಿಕರು ಗ್ರಾಮೀಣ ಪ್ರದೇಶಗಳಲ್ಲಿ ಬದುಕಿನ ಅವಕಾಶಗಳು ಕ್ಷೀಣಿಸಿರುವುದರಿಂದ ಉದ್ಯೋಗಕ್ಕಾಗಿ ಬೆಂಗಳೂರು, ಪೂನ, ಹೈದರಾಬಾದ್ ನಗರಗಳಿಗೆ ವಲಸೆ ಹೋಗುತ್ತಿದ್ದಾರೆ. ರಾಯಚೂರು ಜಿಲ್ಲೆಯಲ್ಲಿ ವಲಸೆ ಒಂದು ಸಾಮಾನ್ಯ ಸಂಗತಿಯಾಗಿದೆ. ಆ ಮೂಲಕ ಇನ್ನಷ್ಟು ಸಾಮಾಜಿಕ ಅಭದ್ರತೆಗೆ ಒಳಗಾಗುತ್ತಿದ್ದಾರೆ. ಅಧ್ಯಯನದಲ್ಲಿ ಕಂಡು ಬಂದಂತೆ ಕೃಷಿ ಕಾರ್ಮಿಕರು ಸಂಘಟಿತ ಹಣಕಾಸು ವ್ಯವಸ್ಥೆಯಿಂದ ಅಂದರೆ ಬ್ಯಾಂಕುಗಳಿಂದ ಯಾವುದೇ ರೀತಿಯ ಸಾಲಗಳನ್ನ ಪಡೆಯುತ್ತಿಲ್ಲ. ಸಾಲ ಸೌಲಭ್ಯಗಳು ಇವರಿಗೆ ಮರಿಚಿಕೆಯಾಗಿಯೇ ಉಳಿದಿವೆ. ಕೃಷಿ ಕಾರ್ಮಿಕರಲ್ಲಿ ಪರಿಶಿಷ್ಟರೆ ಹೆಚ್ಚಾಗಿದ್ದಾರೆ. ಸಂದರ್ಶನದ ವೇಳೆಯಲ್ಲಿ ಕೃಷಿ ಕಾರ್ಮಿಕರು ತಿಳಿಸಿದಂತೆ ಖಾಸಗೀ ಮೂಲದವರೂ ಇವರಿಗೆ ಸಾಲಗಳನ್ನು ನೀಡುವುದಿಲ್ಲ. ಕಾರಣ ಸಾಲ ಹಿಂದಿರುಗಿ ಬರುವುದಿಲ್ಲವೆಂದು. ವರ್ಷದಲ್ಲಿ ಅರ್ಧಕ್ಕೂ ಹೆಚ್ಚು

ದಿನಗಳು ಇವರು ವಲಸೆ ಹೋಗುವುದರಿಂದ ಗ್ರಾಮಗಳಲ್ಲಿ ದೊರಕುವುದಿಲ್ಲ. ಹೀಗಾಗಿ ಅಸಂಘಟಿತ ಮೂಲದಿಂದ ಸಾಲ ಪಡೆದಿಲ್ಲ. ಸಂದರ್ಶನ ಮತ್ತು ಅವಲೋಕನದಲ್ಲಿ ತಿಳಿದುಬಂದಂತೆ ಖಾಸಗಿಯವರು ಮುಖ್ಯವಾಗಿ ಹೂಡುವಳಿ ಪೂರೈಸುವ ವ್ಯಾಪಾರಸ್ಥರು ಕೃಷಿ ಕಾರ್ಮಿಕರಿಗೆ ಸಾಲ ನೀಡುವುದಿಲ್ಲ. ನಾಲ್ಕು ಗ್ರಾಮಗಳನ್ನು ಒಳಗೊಂಡಂತೆ ಒಟ್ಟು ೩೧೯ ಜನರನ್ನು ಸಂದರ್ಶಸಿದ್ದು ಇದರಲ್ಲಿ ಶೇಕಡಾ ೭೨.೪೯ರಷ್ಟು ಜನರಿಗೆ ಸಂಘಟಿತ ಮೂಲದಿಂದ ಅಂದರೆ ಬ್ಯಾಂಕುಗಳಿಂದ ಸಾಲ ಸೌಲಭ್ಯಗಳು ದೊರೆತಿಲ್ಲ. ಇದರಲ್ಲಿ ಶೇಕಡಾ ೨೮ ಕೃಷಿ ಕಾರ್ಮಿಕರು–ಭೂರಹಿತ ಕಾರ್ಮಿಕರಿಗೆ ಯಾವುದೇ ಸಾಲಗಳು ದೊರೆತಿಲ್ಲ. ಶೇಕಡಾ ೨೮ ಕೃಷಿ ಕಾರ್ಮಿಕರು–ಭೂರಹಿತ ಕಾರ್ಮಿಕರಲ್ಲಿ ಶೇಕಡಾ ೮೮ರಷ್ಟು ಪರಿಶಿಷ್ಟರಿದ್ದಾರೆ. ಈ ವರ್ಗಗಳು ಸಂಘಟಿತ ಹಣಕಾಸು ವಲಯದ ಸಾಲ ಸೌಲಭ್ಯಗಳು ಮಾತ್ರವಲ್ಲದೆ ಸರ್ಕಾರದ ಅಭಿವೃದ್ಧಿ ಯೋಜನೆಗಳ ಅನುಕೂಲಗಳಿಂದಲೂ ಹೊರಗುಳಿದಿರುತ್ತಾರೆ. ಸಂಪನ್ಮೂಲಗಳಿಲ್ಲದೆ ಆಸ್ತಿರಹಿತ ವರ್ಗಗಳಾಗಿ ಸಾಮಾಜಿಕ ಆರ್ಥಿಕವಾಗಿ ಹಿಂದುಳಿದಿದ್ದು ದುಸ್ಥಿತಿಯ ಬದುಕನ್ನು ನಡೆಸುತ್ತಾರೆ. ಭೂಮಿ ಒಂದು ಸರಕಲ್ಲ. ಅದೊಂದು ಪ್ರತಿಷ್ಠೆಯ ಸಂಗತಿ. ಅದಕ್ಕೆ ಸಮಾಜದಲ್ಲಿ ಪ್ರತಿಷ್ಠೆಯ ಸ್ಥಾನವಿದೆ. ಇದೊಂದು ಪರಂಪರೆಯ ಸಮಸ್ಯೆ ಅನಾಧಿ ಕಾಲದಿಂದಲೂ ಭೂಮಿ ಪ್ರತಿಷ್ಠಿತರ ಮಾಲೀಕತ್ವದಲ್ಲಿ ಇರುತ್ತಾ ಬಂದಿದೆ. ಪರಿಶಿಷ್ಟರಿಗೆ ಭೂ ಮಾಲೀಕತ್ವದ ಅವಕಾಶಗಳು ದೊರೆಯಲೇ ಇಲ್ಲ.[೨]

**ಕೊನೆ ಟಿಪ್ಪಣಿಗಳು**

೧. ಕರ್ನಾಟಕ ಸರ್ಕಾರ (೨೦೦೫). ಮಾನವ ಅಭಿವೃದ್ಧಿ ವರದಿ, ಕರ್ನಾಟಕ ಸರ್ಕಾರ, ಯೋಜನಾ ಆಯೋಗ, ಬೆಂಗಳೂರು, ಪುಟ. ೮೫

೨. ಜೇನ್ಸ್ ಲರ್ಸಿ, ಇಸಾಬೆಲ್ ಗುರಿನ್ ಮತ್ತುರವಿ ಶ್ರೀವಾಸ್ತವ್ (೨೦೧೨). ಮೈಗ್ರೇಟಿಂಗ್ ಬಿಟ್‌ವೀನ್‌ರೂರಲ್ ರಾಯಚೂರ್ ಅಂಡ್ ಬೂಮ್ ಟೌನ್ ಬೆಂಗಳೂರು, ಕ್ಲಾಸ್ ರಿಲೇಶನ್ ಅಂಡ್ ದಿ ಸರ್ಕ್ಯುಲೇಶನ್ ಆಫ್ ಲೇಬರ್ ಇನ್ ಸೌತ್ ಇಂಡಿಯಾ, ಗ್ಲೋಬಲ್ ಲೇಬರ್ ಜರ್ನಲ್, ವಾಲ್ಯೂಮ್ ೩, ಇಶು ೧, ಜೋನಾಥನ್ ಪ್ಯಾಂಟೆಡನ್, ಯೂನಿವರ್ಸಿಟಿ ಆಫ್ ಈಸ್ಟ್ ಆಂಜಿಲ, ಯುನೈಟೆಡ್ ಕಿಂಗ್‌ಡಮ್ ಪುಟ.೧೩೬–೧೯೯.)

೩. ಕರ್ನಾಟಕ ಸರ್ಕಾರ (೨೦೦೨). ಪ್ರಾದೇಶಿಕ ಅಸಮತೋಲನ ನಿವಾರಣಾ ಉನ್ನಾಧಿಕಾರ ಸಮಿತಿಯ ಅಂತಿಮ ವರದಿ ೨೦೦೨. ಕರ್ನಾಟಕ ಸರ್ಕಾರ, ಯೋಜನಾ ಆಯೋಗ, ಬೆಂಗಳೂರು, ಪುಟ. ೩೦೮)

೪. ಜ್ಯೋತ್ನಾ ಸಿಂಗ್ (೨೦೧೨). ಇನ್ ಫೋರ್ ಮನ್ತ್ಸ್ ೩೫೮ ಚೆಲ್ಡ್ರನ್ಸ್ ಡೈಡ್ ಮಾಲ್ ನ್ಯೂಟ್ರೀಶನ್ ಇನ್ ರಾಯಚೂರು ಡಿಸ್ಟ್ರಿಕ್ಟ್, ಡಿಸೆಂಬರ್ ೨೧, ೨೦೧೨, ಡಕ್ಕನ್ ಹೆರಾಲ್ಡ್, ಪು.೯

೫. ಕುರಿಯನ್ ಸಿ.ಟಿ (೧೯೯೨) ಗ್ರೋಥ್ ವಿತ್ ಜಸ್ಟಿಸ್' ಆಸ್‌ಪೆಕ್ಟ್ಸ್ ಆಫ್ ಇಂಡಿಯಾಸ್ ಡೆವಲಪ್‌ಮೆಂಟ್ ಎಕ್ಸ್‌ಪೀರಿಯನ್ಸ್, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ಮದ್ರಾಸ್, ಪು.೪–೧೫

೬. ಕರ್ನಾಟಕ ಸರ್ಕಾರ (೨೦೦೨). ಪ್ರಾದೇಶಿಕ ಅಸಮತೋಲನ ನಿವಾರಣಾ ಉನ್ನಾಧಿಕಾರ ಸಮಿತಿಯ ಅಂತಿಮ ವರದಿ ೨೦೦೨. ಕರ್ನಾಟಕ ಸರ್ಕಾರ, ಯೋಜನಾ ಆಯೋಗ, ಬೆಂಗಳೂರು, ಪು.೩೦೮

೭. ಮೈಕ್ರೋ, ಸ್ಮಾಲ್ ಅಂಡ್ ಮೀಡಿಯಮ್ ಎಂಟರ್‌ಪ್ರೈಸಸ್ (೨೦೧೧). ಮಿನಿಸ್ಟ್ರಿ ಆಫ್ ಎಮ್‌ಎಸ್‌ಎಮ್‌ಇ, ಗೌರ್ನಮೆಂಟ್ ಆಫ್ ಇಂಡಿಯಾ, ಪು.೪–೭

8. www.Raichur.ntc.in

೯. ಡಿಸ್ಟ್ರಿಕ್ಟ್ ಎನ್‌ಆರ್‌ಡಿಎಮ್‌ಸ್ ಸೆಂಟರ್ (೨೦೦೬). ಜಿಲ್ಲಾ ಪಂಚಾಯತ್, ರಾಯಚೂರು. ಪು.೫

೧೦. ಜಿಲ್ಲಾ ಪಂಚಾಯತ್ (೨೦೧೨). ರಾಯಚೂರು ಜಿಲ್ಲಾ ಅಂಕಿಅಂಶಗಳ ನೋಟ, ಕರ್ನಾಟಕ ಸರ್ಕಾರ, ಪು.೫೧

೧೧. ಡವಲಪ್‌ಮೆಂಟ್ ಇಸ್ಟಿಟ್ಯೂಟ್, ಎವ್‌ಎಸ್‌ಎವ್‌ಇ (೨೦೦೬) ಮಿನಿಸ್ಟ್ರಿ ಆಫ್ ಎಮ್‌ಎಸ್‌ಎಮ್‌ಇ ಗೌರ್ನಮೆಂಟ್ ಆಫ್ ಇಂಡಿಯಾ, ಪು ೮–೧೦

೧೨. ಜಿಲ್ಲಾ ಪಂಚಾಯತ್ (೨೦೧೨). ರಾಯಚೂರು ಜಿಲ್ಲಾ ಅಂಕಿಅಂಶಗಳ ನೋಟ, ಕರ್ನಾಟಕ ಸರ್ಕಾರ, ಪು.೪೦

೧೩. ಕರ್ನಾಟಕದ ಸರ್ಕಾರ (೨೦೧೧). ಕೈಗಾರಿಕೆ ವಾಣಿಜ್ಯ ಇಲಾಖೆ, ಕರ್ನಾಟಕ ಸರ್ಕಾರ, ಪು.೧೦–೧೨

೧೪. ಮಿನಿಸ್ಟ್ರಿ ಆಫ್ ಪಂಚಾಯತ್ ರಾಜ್ (೨೦೦೯). ಎ ನೋಟ್ ಆನ್ ದಿ ಬ್ಯಾಕ್ ವರ್ಡ್ ರೀಜನ್ಸ್ ಗ್ರಾಂಟ್ ಫಂಡ್ ಪ್ರೋಗ್ರಾಮ್, ಗೌರ್ನಮೆಂಟ್ ಆಫ್ ಇಂಡಿಯಾ, ಪು. ೧೮–೨೦)

೧೫. ಲೀಡ್ ಬ್ಯಾಂಕ್ (೨೦೧೩). ರಾಯಚೂರು ಜಿಲ್ಲೆಯ ವಾರ್ಷಿಕ ಸಾಲ ಯೋಜನೆ, ಲೀಡ್ ಬ್ಯಾಂಕ್ ಆಫೀಸ್, ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ ರಾಯಚೂರು. ಪುಟ:೫೫

೧೬. ಕೃಷಿ ಗಣತಿ (೨೦೧೦–೧೧). ಆರ್ಥಿಕ ಸಾಂಖಿಕ ನಿರ್ದೇಶನಾಲಯ, ಬೆಂಗಳೂರು, ಪು.೫೦–೫೧

೧೭. ಮಿನಿಸ್ಟ್ರಿ ಆಫ್ ಪಂಚಾಯತ್ ರಾಜ್ (೨೦೦೯). ಎ ನೋಟ್ ಆನ್ ದಿ ಬ್ಯಾಕ್ ವರ್ಡ್ ರೀಜನ್ಸ್ ಗ್ರಾಂಟ್ ಫಂಡ್ ಪ್ರೋಗ್ರಾಮ್, ಗೌರ್‍ನಮೆಂಟ್ ಆಫ್ ಇಂಡಿಯಾ, ಪು.೨-೩

೧೮. ಗುರುದೇವ್ ಸಿಂಗ್ (೧೯೮೯). ಇನ್‌ಸ್ಟಿಟ್ಯೂಶನಲ್ ಪೈನಾನ್ಸ್ ಇನ್‌ರೂರಲ್ ಇಂಡಿಯಾ: ಎಫಿಷಿಯನ್ಸಿ ಅಂಡ್ ಎಫಿಕೆಸಿ, ಆಕ್ಸ್‌ಫರ್ಡ್ ಎಸ್‌ಬಿಹೆಚ್ ಪಬ್ಲೀಷಿಂಗ್ ಕೊ.ಪ್ರೈ.ಲಿಮಿಟೆಡ್, ನ್ಯೂಡೆಲ್ಲಿ ಪು. ೧೨೨-೧೨೩.

೧೯. ಕೆ.ಎ. ರಸೂರ್, ಚನ್ನಬಸವನಗೌಡ, ಅಂಡ್ ಬೂಕ್ಕಲೆ ನಾಗೇಂದ್ರಪ್ಪ (೨೦೧೧). ಆನ್ ಎಕನಾಮಿಕ್ ಅನಾಲಿಸಿಸ್ ಆಫ್ ಅಗ್ರಿಕಲ್ಚರಲ್ ಲೇಬರ್ ಇನ್ ಹೈದರಾಬಾದ್ ಕರ್ನಾಟಕ ಪ್ರಾಜೆಕ್ಟ್ ಇಲ್ಲಿ ಕೆ.ಕೆ.ಬಾಗ್ಚಿ ೨೦೧೧. ಅಗ್ರೇರಿಯನ್ ಕ್ರೈಸಿಸ್, ಪಾರ್ಮರ್ಸ್ ಸೂಸೈಡ್ಸ್ ಅಂಡ್ ಲೈವ್‌ಲಿಹುಡ್ ಸೆಕುರಿಟಿ ಆಫ್‌ರೂರಲ್ ಲೇಬರ್ ಇನ್ ಇಂಡಿಯಾ, ಅಭಿಜಿತ್ ಪಬ್ಲಿಕೇಶನ್ ಡೆಲ್ಲಿ, ಪು. ೨೨೩.

೨೦. ವಿ.ಎಮ್. ದಾಂಡೇಕರ್ (೧೯೯೪). ದಿ ಇಂಡಿಯನ್ ಎಕನಾಮಿ ೧೯೪೭-೯೨, ವಾಲ್ಯೂಮ್-೧, ಅಗ್ರಿಕಲ್ಚರ್, ಸೇಜ್ ಪಬ್ಲಿಕೇಶನ್, ನ್ಯೂಡೆಲ್ಲಿ ಪು.೧೩೦-೧೩೧.

೨೧. ಸೆನ್ಸಸ್ (೨೦೧೧). ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಸ್, ಕರ್ನಾಟಕ, ಸೆನ್ಸಸ್ ಆಫ್ ಇಂಡಿಯಾ ೨೦೧೧, ಪು.೧೨

೨೨. ಟಿ.ಆರ್. ಚಂದ್ರಶೇಖರ್ (೨೦೧೦). ಧರೆ ಹತ್ತಿ ಉರಿದರೆ; ಪ್ರಚಲಿತ ಕರ್ನಾಟಕ ಕುರಿತ ಬರಹಗಳು ಪಲ್ಲವಿ ಪ್ರಕಾಶನ, ಬಳ್ಳಾರಿ, ಪು. ೨೩೮-೨೩೯ ನೋಡಿ

ಅಧ್ಯಾಯ ಮೂರು

# ಗ್ರಾಮೀಣ ಹಣಕಾಸು ಕಾರ್ಯಕ್ರಮಗಳು ಮತ್ತು ಸಾಲ ನೀತಿಗಳ ಅನುಷ್ಠಾನ

ಈ ಅಧ್ಯಾಯವನ್ನು ಎರಡು ಭಾಗಗಳಲ್ಲಿ ಚರ್ಚಿಸಲಾಗಿದೆ. ಭಾಗ ಒಂದರಲ್ಲಿ ಗ್ರಾಮೀಣ ಹಣಕಾಸು ಸಂಯೋಜನೆ ಅಂದರೆ ಗ್ರಾಮೀಣ ಪ್ರದೇಶದಲ್ಲಿ ಸಾಲ ಪೂರೈಸುವ ಸಂಘಟಿತ ಮತ್ತು ಅಸಂಘಟಿತ ಮೂಲಗಳು, ಅವುಗಳ ಲಕ್ಷಣಗಳು, ಉದ್ದೇಶಗಳು, ಸಾಲ ನಿಯಮಗಳು ಹಾಗೂ ಈ ಮೂಲಗಳ ಆಲೋಚನೆಗಳನ್ನು ಚರ್ಚಿಸಲಾಗಿದೆ. ಭಾಗ ಎರಡರಲ್ಲಿ ಗ್ರಾಮೀಣ ಹಣಕಾಸು ಕಾರ್ಯಕ್ರಮಗಳು ಮತ್ತು ಸಾಲ ನೀತಿಗಳ ಅನುಷ್ಠಾನವನ್ನು ಕುರಿತು ಚರ್ಚಿಸಲಾಗಿದೆ.

**ಭಾಗ–೧**

**೩.೧. ಗ್ರಾಮೀಣ ಹಣಕಾಸು ಸಂಯೋಜನೆ**

ಸಾಗುವಳಿದಾರನಿಗೆ ಉತ್ಪಾದನೆ ಮತ್ತು ಅನುಭೋಗ ಎರಡಕ್ಕೂ ಸಾಲದ ಅಗತ್ಯವಿದೆ. ಸಾಂಪ್ರದಾಯಕವಾಗಿ ಕೃಷಿಕನ ಸಾಲದ ಅಗತ್ಯತೆಗಳನ್ನು ಭೂ ಮಾಲೀಕರು, ವ್ಯಾಪರಸ್ಥರು ಹಾಗೂ ಲೇವಾದೇವಿಗಳು ಈಡೇರಿಸುತ್ತಿದ್ದರು. ಆದರೆ ಇವರು ಅಧಿಕ ಬಡ್ಡಿದರ ವಿಧಿಸಿ ಕೃಷಿಕರನ್ನು ಶೋಷಿಸುತ್ತಿದ್ದರು. ಭಾವಿ ತೆಗೆಸುವಂತಹ ಕೃಷಿ ಸುಧಾರಣಾ ಚಟುವಟಿಕೆಗಳಿಗೆ ಸಾಲ ಒದಗಿಸುವ ಅಧಿಕೃತ ಪ್ರಯತ್ನಗಳು ಸರ್ಕಾರದ ಕಡೆಯಿಂದ ಪ್ರಾರಂಭವಾದವು.[೧] ೧೭೯೩ರಲ್ಲಿ ತಕ್ಕಾವಿ ಸಾಲ ವ್ಯವಸ್ಥೆ ಜಾರಿಗೆ ತರುವುದರೊಂದಿಗೆ ಕಡಿಮೆ ಬಡ್ಡಿ ಸಾಲಗಳನ್ನು ನೀಡಲಾಯಿತು. ಈ ವ್ಯವಸ್ಥೆಯಡಿ ಭೂಮಿಯನ್ನು ಆಧಾರವಾಗಿಟ್ಟುಕೊಂಡು ಕೃಷಿ ಅಭಿವೃದ್ಧಿ ಕಾರ್ಯಗಳಿಗೆ ಸಾಲ ಸೌಲಭ್ಯಗಳನ್ನು

ಪೂರೈಸಲಾಯಿತು. ಈ ವ್ಯವಸ್ಥೆಯ ದೋಷಗಳನ್ನು ಪರಿಗಣಿಸಿ ಇದಕ್ಕೆ ಪೂರಕವಾದ ಬದಲಿಯಾಗಿ ಸಹಕಾರಿ ಸಾಲ ವ್ಯವಸ್ಥೆಯನ್ನು ೧೯೦೪ರಲ್ಲಿ ಜಾರಿಗೆ ತರಲಾಯಿತು. ಸ್ವಾತಂತ್ರ್ಯದ ಸಮಯದಲ್ಲಿ ಕೃಷಿಕರು ಸಹಕಾರಿ ಬ್ಯಾಂಕುಗಳಿಂದ ಸಾಲ ಮತ್ತು ಅನುದಾನದರೂಪದಲ್ಲಿ ಹಣಕಾಸು ಪಡೆಯುತ್ತಿದ್ದರು. ಆದರೆ ಕೃಷಿ ಕ್ಷೇತ್ರದ ಸಾಲ ಪೂರೈಕೆಯಲ್ಲಿ ಇದರ ಪ್ರಮಾಣ ಶೇಕಡಾ ೭.೩ರಷ್ಟಿತ್ತು ಶೇಕಡಾ ೯೨ ಕೃಷಿ ಸಾಲಗಳು ಖಾಸಗೀ ಲೇವಾದೇವಿಗಳ ಮಾರುಕಟ್ಟೆಯಿಂದ ಮೂಲಕ ಪೂರೈಕೆಯಾಗುತ್ತಿತ್ತು. ೧೯೪೯ರಲ್ಲಿ ಗ್ರಾಮೀಣ ಬ್ಯಾಂಕಿಂಗ್ ತನಿಖಾ ಸಮಿತಿ ಗ್ರಾಮೀಣ ಪ್ರದೇಶದಲ್ಲಿ ಬ್ಯಾಂಕಿಂಗ್ ಸೌಲಭ್ಯಗಳ ವಿಸ್ತರಣೆಗೆ ಕೈಗೊಳ್ಳಬಹುದಾದ ಕ್ರಮಗಳ ಕುರಿತು ಕೆಲವು ಸಲಹೆಗಳನ್ನು ನೀಡಿತು.[೨] ೧೯೫೪ ಅಖಿಲ ಭಾರತ ಗ್ರಾಮೀಣ ಸಾಲ ಸಮೀಕ್ಷೆ ಪ್ರಕಾರ ದೊಡ್ಡ ಸಾಗುವಳಿದಾರರು ಸಂಘಟಿತ ಹಣಕಾಸು ಸಂಸ್ಥೆಗಳಿಂದ ಸಾಲ ಸೌಲಭ್ಯಗಳನ್ನು ಪಡೆದಿದ್ದರು. ಸಣ್ಣ ಮತ್ತು ಮಧ್ಯಮ ರೈತರು ಖಾಸಗಿ ವ್ಯಕ್ತಿಗಳು ಮತ್ತು ಸಂಸ್ಥೆಗಳಿಂದ ಪಡೆದಿದ್ದರು. ಧೀರ್ಘಾವಧಿ ಸಾಲಗಳನ್ನು ಭೂ ಅಡಮಾನ ಬ್ಯಾಂಕುಗಳು ನೀಡಿದ್ದವು. ಆದರೆ ಇವುಗಳು ಹೆಚ್ಚಾಗಿ ಹಳೆ ಸಾಲಗಳನ್ನು ಮರುಪಾವತಿ ಮಾಡಲು ಸಾಲಗಳನ್ನು ನೀಡಿದ್ದವು.[೩] ಮೇಲಿನ ಸಮಸ್ಯೆಗಳನ್ನು ಗಂಭೀರವಾಗಿ ಪರಿಗಣಿಸಲಾಯಿತು. ಇಂದಿಗೂ ಈ ಪರಿಸ್ಥಿತಿ ಮುಂದುವರಿದಿದೆ. ಪ್ರಸ್ತುತ ಅಧ್ಯಯನದ ಪ್ರಕಾರ ರಾಯಚೂರು ಜಿಲ್ಲೆಯ ಸಹಕಾರಿ ಸಾಲ ಸಂಸ್ಥೆಗಳು ಸರ್ಕಾರ ಸಾಲ ಮನ್ನಾ ಯೋಜನೆಯಡಿ ಬಿಡುಗಡೆ ಮಾಡಿದ ಹಣದಲ್ಲಿ ಸಾಲಗಳನ್ನು ನೀಡಿರುವುದು ತಿಳಿದು ಬಂದಿದೆ. ಮುಂದೆ ೧೯೬೦ರ ನಂತರ ಹೆಚ್ಚಿದ ಕೃಷಿ ಸಾಲ ಬೇಡಿಕೆಯನ್ನು ಪೂರೈಸಲು ೧೯೬೯ರಲ್ಲಿ ದೊಡ್ಡ ಖಾಸಗೀ ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಿಸಲಾಯಿತು. ೧೯೬೦ ರಿಂದ ೧೯೮೦ ಅ ಅವಧಿಯವರೆಗೂ ಸಹಕಾರ ಸಾಲ ವ್ಯವಸ್ಥೆ ಅ ಮೂಲಕ ಕೃಷಿಗೆ ಪೂರೈಕೆಯಾಗುವ ಗ್ರಾಮೀಣ ಸಾಲ ಪೂರೈಕೆ ವ್ಯವಸ್ಥೆಯ ದೋಷಗಳನ್ನು ಸರಿಪಡಿಸಿ ಸುಧಾರಣೆಗೆ ಕ್ರಮಗಳನ್ನು ಕೈಗೊಳ್ಳಲಾಗಿದೆ. ನಂತರ ೧೯೯೧ರಲ್ಲಿ ಭಾರತ ಸರ್ಕಾರ ಹೊಸ ಆರ್ಥಿಕ ನೀತಿ ಪ್ರಕಟಿಸಿತು. ಈ ಹೊಸ ನೀತಿಯು ಆರ್ಥಿಕತೆಯ ಅಸಮತೋಲನವನ್ನು ಸರಿಪಡಿಸಿ ಸಮಗ್ರ ವ್ಯವಸ್ಥೆಯಲ್ಲಿ ಬದಲಾವಣೆ ತರುವ ಮುಲಕ ಪ್ರಮುಖ ವಲಯಗಳಲ್ಲಿ ಸ್ಪರ್ಧಾತ್ಮಕತೆ ತಂದು ಈ ವಲಯಗಳ ದಕ್ಷತೆಯನ್ನು ಸುಧಾರಿಸುವ ಉದ್ದೇಶ ಇಟ್ಟುಕೊಳ್ಳಲಾಯಿತು. ಇದಕ್ಕೆ ಪೂರಕವಾಗಿ ಹಣಕಾಸು ವಲಯದಲ್ಲಿ ಸುಧಾರಣೆತರಲಾಯಿತು. ಈ ನಿಟ್ಟಿನಲ್ಲಿ ೧೯೯೧ರಲ್ಲಿ ಭಾರತದ ಹಣಕಾಸು ಸಚಿವಾಲಯ ಹಣಕಾಸು ವ್ಯವಸ್ಥೆಯ ನಿಯಮಗಳು, ಕಾರ್ಯಕ್ರಮಗಳು ಮತ್ತು ಹಣಕಾಸು ಸಂಘಟನೆ ವಿಷಯಗಳನ್ನ ಪರಿಶೀಲಿಸಲು ಸಮಿತಿಯನ್ನುರಚಿಸಿತು. ೧೯೯೧ರ ಅಂತ್ಯಕ್ಕೆ ತನ್ನ ವರದಿಯನ್ನು ಸಲ್ಲಿಸಿತು. ಸಮಿತಿ ತನ್ನ ವರದಿಯಲ್ಲಿ ನಿರ್ದೇಶಿತ ಸಾಲ ಕಾರ್ಯಕ್ರಮಗಳಡಿಯಲ್ಲಿ ಸಾಲ ನೀಡುವುದನ್ನು ನಿಲ್ಲಸಬೇಕೆಂದು ಸಲಹೆ ನೀಡಿತು. ಹಾಗೆಯೇ ಬ್ಯಾಂಕುಗಳು ಲಾಭಗಳಿಕೆಗೆ ಆದ್ಯತೆ ನೀಡಬೇಕು ಮತ್ತು ಬ್ಯಾಂಕುಗಳ ಖಾಸಗೀಕರಣಕ್ಕೆ ಒತ್ತು ನೀಡುವಂತೆ ಸರ್ಕಾರಕ್ಕೆ ಈ ಸಮಿತಿ ಸಲಹೆ ನೀಡಿತು. ಮುಂದೆ ಸರ್ಕಾರ ಹನ್ನೊಂದನೇ ಪಂಚವಾರ್ಷಿಕ ಯೋಜನೆಯ "ಒಳಗೊಳ್ಳುವ ಅಭಿವೃದ್ಧಿ-ಒಳಗೊಳ್ಳುವ ಹಣಕಾಸು" ಸರ್ಕಾರದ

೧೧ನೇ ಪಂಚವಾರ್ಷಿಕ ಯೋಜನೆಯ ಉದ್ದೇಶವಾದ ಆರ್ಥಿಕತೆಯ ಒಳಗೊಳ್ಳುವ ಅಭಿವೃದ್ಧಿ (ಇನ್‌ಕ್ಲೂಸಿವ್ ಗ್ರೋಥ್) ಪ್ರಕ್ರಿಯೆಗೆ ಪೂರಕವಾಗಿ ಆರ್‌ಬಿಐ ಹಣಕಾಸು ಒಳಗೊಳ್ಳುವಿಕೆ(ಫೈನ್ಯಾನ್ಸಿಯಲ್ ಇನ್‌ಕ್ಲೂಷನ್)ಗೆ ಹೆಚ್ಚಿನ ಮಹತ್ವ ನೀಡಿದೆ. ಆದರೆ ಸಂಘಟಿತ ಸಾಲ ಮೂಲದ ಹಣಕಾಸು ಸೇವೆಗಳಿಂದ ವಂಚಿತರಾದ ಸಮಾಜದ ದುರ್ಬಲ ವರ್ಗಗಳನ್ನು ಸಂಘಟಿತ ಹಣಕಾಸು ವ್ಯವಸ್ಥೆಯ ಒಳಗೆ ತರುವುದು ಹಣಕಾಸು ಒಳಗೊಳ್ಳುವಿಕೆ ಪ್ರಕ್ರಿಯೆಯ ಬಹುದೊಡ್ಡ ಸವಾಲಾಗಿದೆ.

ಅಲ್ಪಾವಧಿ ಮತ್ತು ದೀರ್ಘಾವಧಿ ಸಾಲಗಳ ನಡುವೆ ವ್ಯತ್ಯಾಸಗಳಿವೆ. ಕೃಷಿ ಕ್ಷೇತ್ರದ ಸಾಲ ಅಗತ್ಯಗಳನ್ನು ಗ್ರಾಮೀಣ ಪ್ರದೇಶಗಳಲ್ಲಿ ಜನರು ಬೇರೆ ಬೇರೆ ಮೂಲಗಳಿಂದ ಪೂರೈಸಿಕೊಳ್ಳುತ್ತಾರೆ. ಈ ಉದ್ದೇಶಗಳ ಆಧಾರದ ಮೇಲೆ ಸಾಲದ ಅಗತ್ಯಗಳು ಮತ್ತು ಅವಧಿಗಳು ನಿರ್ಧಾರವಾಗುತ್ತವೆ. ಈ ಅಗತ್ಯಗಳನ್ನು ಪೂರೈಸುವ ಗ್ರಾಮೀಣ ಹಣಕಾಸು ಮಾರುಕಟ್ಟೆಗಳಲ್ಲಿ ಸಂಘಟಿತ ಮತ್ತು ಅಸಂಘಟಿತ ವಲಯಗಳಿವೆ. ಸಂಘಟಿತ ಹಣಕಾಸು ವಲಯದಲ್ಲಿ ಸಾರ್ವಜನಿಕ ಹಣಕಾಸು ಸಂಸ್ಥೆಗಳಾದ ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳು, ಗ್ರಾಮೀಣ ಬ್ಯಾಂಕುಗಳು ಹಾಗೂ ಸಹಕಾರ ಸಂಸ್ಥೆಗಳಿವೆ. ಅಸಂಘಟಿತ ಹಣಕಾಸು ವಲಯದಲ್ಲಿ ಲೇವಾದೇವಿಗಳು, ವ್ಯಾಪಾರಸ್ಥರು, ಜಮೀನ್ದಾರರು, ಸ್ನೇಹಿತರು ಹಾಗೂ ಸಂಬಂಧಿಕರಿದ್ದಾರೆ. ಸಂಘಟಿತ ಮೂಲದಿಂದ ಸಾಲ ಪಡೆಯುವಾಗ ಈ ಸಂಸ್ಥೆಗಳ ಸಾಲ ನಿಯಮಗಳಿಗೆ ಅನುಗುಣವಾಗಿ ಸಾಲ ಪಡೆಯಬೇಕು. ಈ ಸಂಸ್ಥೆಗಳು ನಿರ್ಧಿಷ್ಟ ಉದ್ದೇಶಗಳಿಗೆ ಮಾತ್ರ ಸಾಲ ನೀಡುತ್ತವೆ. ಕೃಷಿ ಕ್ಷೇತ್ರದ ಉತ್ಪಾದನೆಗೆ ಸಾಲ ನೀಡುತ್ತವೆ. ಈ ಸಾಲಗಳನ್ನು ನಿರ್ಧಿಷ್ಟ ಮಿತಿಯೊಳಗೆ ನೀಡಲಾಗುತ್ತದೆ. ಈ ವಲಯದಿಂದ ಸಾಲ ಪಡೆಯುವ ಅವಕಾಶಗಳು ಸಣ್ಣ ಅತೀ ಸಣ್ಣ ಹಿಡುವಳಿದಾರರಿಗಿಂತ ದೊಡ್ಡ ಹಿಡುವಳಿದಾರರು, ಆರ್ಥಿಕವಾಗಿ ಪ್ರಬಲವಾಗಿರುವವರಿಗೆ ಹೆಚ್ಚಾಗಿರುತ್ತವೆ. ಕಾರಣ ಈ ವಲಯದ ನಿಯಮಗಳನ್ನು ಪಾಲಿಸುವ ಆರ್ಥಿಕ ಸಾಮರ್ಥ್ಯ ಇರುವುದು ಇವರಿಗೆ. ಸಾಲ ಸೌಲಭ್ಯಗಳು ಮತ್ತು ಭೂ ಹಿಡುವಳಿಗೆ ಸಂಬಂಧವಿದೆ. ದೊಡ್ಡಹಿಡುವಳಿದಾರರು ದೊಡ್ಡ ಮಟ್ಟದಲ್ಲಿ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳುವವರು ಸಂಘಟಿತ ಮೂಲದಿಂದ ಹೆಚ್ಚು ಪ್ರಯೋಜನ ಪಡೆಯುತ್ತಾರೆ. ಸಣ್ಣ ಅತೀ ಸಣ್ಣ ಹಿಡುವಳಿದಾರರು ಸಂಘಟಿತ ಹಣಕಾಸು ಸಂಸ್ಥೆಗಳ ಕಠಿಣ ಸಾಲ ನಿಯಮಗಳನ್ನು ಅನುಸರಿಸುವ ಅರ್ಹತೆ ಮತ್ತು ಅವಕಾಶಗಳು ಇಲ್ಲದೆ ಸಾಲಗಳಿಗಾಗಿ ಅಸಂಘಟಿತ ಮೂಲಗಳನ್ನು ಅವಲಂಬಿಸುತ್ತಾರೆ. ಸಣ್ಣ ಅತೀ ಸಣ್ಣ ಹಿಡುವಳಿದಾರರು ಕೃಷಿ ಕ್ಷೇತ್ರದ ದುಬಾರಿ ವೆಚ್ಚಗಳನ್ನು ಬರಿಸಲಾಗದೆ ಕೃಷಿ ಉತ್ಪಾದನೆ ಕೈಗೊಳ್ಳಲಾಗುವುದಿಲ್ಲ. ಕೃಷಿ ಉತ್ಪಾದನೆ ಕೈಗೊಂಡರೂ ಕೃಷಿ ಹೂಡುವಳಿ ಮತ್ತು ನೀರಾವರಿ ಸಮಸ್ಯೆಗಳಿಂದ ತಮ್ಮ ಸಣ್ಣ ಹಿಡುವಳಿಗಳಿಂದ ಅಧಿಕ ಉತ್ಪಾದನೆ ಪಡೆಯಲಾಗುವುದಿಲ್ಲ. ಇದರಿಂದ ಇವರು ಸಂಘಟಿತ ವಲಯಗಳಿಂದ ಉತ್ಪಾದನೆ ಚಟುವಟಿಕೆಗಳಿಗೆ ಸಾಲ ಪಡೆಯಲು ಸಾಧ್ಯವಾಗು ವುದಿಲ್ಲ. ಇವರು ಈ ಮೂಲದಿಂದ ಸಾಲ ಪಡೆಯಲು ಯತ್ನಿಸುವುದೂ ಇಲ್ಲ. ಭೂರಹಿತ ಕಾರ್ಮಿಕರಿಗೆ ಸಂಘಟಿತ ಮೂಲಗಳಿಂದ ಸಾಲ ಪಡೆಯುವುದು ಕನಸೇ ಸರಿ. ದೊಡ್ಡ, ಸಣ್ಣ

ಹಿಡುವಳಿದಾರ, ಕೃಷಿ ಕಾರ್ಮಿಕ, ಭೂರಹಿತ ಕಾರ್ಮಿಕ ಎಂಬ ವ್ಯತ್ಯಾಸಗಳಿಲ್ಲದೆ ಎಲ್ಲಾ ವರ್ಗದ ಜನರಿಗೂ ಸಾಲಗಳ ಅಗತ್ಯವಿರುತ್ತದೆ. ನಿಯಮಗಳನ್ನು ಪಾಲಿಸುವ ಸಾಮರ್ಥ್ಯವಿರುವುದರಿಂದ ದೊಡ್ಡ ಮತ್ತು ಮಧ್ಯಮ ರೈತರು ಸಂಘಟಿತ ಮೂಲದಿಂದ ಸಾಲ ಸೌಲಭ್ಯ ಪಡೆಯುತ್ತಾರೆ. ಆದರೆ ಅಗತ್ಯವಿದ್ದಷ್ಟು ಸಾಲ ದೊರೆಯದಿರಬಹುದು. ಹೆಚ್ಚಿನ ಪ್ರಮಾಣದ ಸಾಲಗಳು ಅಗತ್ಯವಿದ್ದಾಗ ಇವರು ಅಸಂಘಟಿತ ಮೂಲದಿಂದ ಪಡೆಯುತ್ತಾರೆ. ಆದರೆ ಅಸಂಘಟಿತ ಮೂಲದ ಋಣಾತ್ಮಕ ಪರಿಣಾಮಗಳಿಂದ ಪಾರಾಗುವ ಸಾಮರ್ಥ್ಯವಿರುತ್ತದೆ. ಹಾಗಾಗಿ ಈ ಮೂಲದ ಯಾವುದೇ ಗಂಭೀರ ಸಮಸ್ಯೆಗೆ ಸಿಲುಕುವುದಿಲ್ಲ. ಆದರೆ ಸಣ್ಣ ಅತೀ ಸಣ್ಣ, ಕೃಷಿ ಕಾಮಿಕರ ವರ್ಗಗಳ ಪರಿಸ್ಥಿತಿ ಭಿನ್ನವಾಗಿದೆ. ಇವರು ಕೃಷಿ ಉತ್ಪಾದನೆಗೆ ಮತ್ತು ಕೃಷಿಯೇತರ ಉದ್ದೇಶಕ್ಕೆ ಅಗತ್ಯವಾದ ಸಣ್ಣ ಸಾಲ ದೊಡ್ಡ ಸಾಲ ಎರಡನ್ನೂ ಅಸಂಘಟಿತ ಮೂಲದಿಂದ ಪಡೆಯುತ್ತಾರೆ. ಸಾಲ ಪಡೆಯುವವರು ತಮ್ಮ ತುಂಡು ಭೂಮಿಗಳನ್ನು ಅಡವಿಟ್ಟು ಸಾಲ ಪಡೆಯುತ್ತಾರೆ. ಬರಗಾಲ, ನಿರಂತರ ಬೆಳೆ ನಷ್ಟ, ನೀರಾವರಿ ಸಮಸ್ಯೆ, ಬೆಲೆಗಳ ಸ್ಥಿತ್ಯಂತರ ಸಮಸ್ಯೆಗಳಿಂದ ಅಸಂಘಟಿತ ಮಾರುಕಟ್ಟೆಯಿಂದ ಪಡೆದ ಸಾಲವನ್ನು ತೀರಿಸಲಾಗದೆ ಅಸಹಾಯಕರಾಗಿ ಇತರೆ ಆದಾಯಗಳು ಇಲ್ಲದೆ ಭೂಮಿಯನ್ನು ಕಳೆದುಕೊಂಡು ದುಸ್ಥಿತಿಗೆ ತಲುಪುತ್ತಾರೆ. ಈ ಪರಿಸ್ಥಿತಿ ರೈತರನ್ನು ಆತ್ಮಹತ್ಯೆಯಂತಹ ಪ್ರಯತ್ನಗಳಿಗೆ ಪ್ರೇರೇಪಿಸುತ್ತದೆ. ಸರ್ಕಾರ ಸಣ್ಣ ರೈತರಿಗೆ ಸಾರ್ವಜನಿಕ ಬ್ಯಾಂಕುಗಳ ಮೂಲಕ ಸಾಲ ಸೌಲಭ್ಯ ನೀಡುತ್ತಿದೆ ಎಂದು ಅಂಕಿಅಂಶಗಳು ಹೇಳುತ್ತವೆ. ಆದರೆ ಹೀಗೆ ದೊರೆತ ಸಾಲಗಳ ಪ್ರಮಾಣ ಅತ್ಯಂತ ಕಡಿಮೆ. ಸಾಲಗಳು ಕಂತುಗಳಲ್ಲಿ ದೊರೆಯುತ್ತವೆ. ಹಾಗೂ ಕೃಷಿ ಉತ್ಪಾದನೆ ಚಟುವಟಿಕೆಗಳು ನಡೆಯುವ ಸಮಯದಲ್ಲಿ ದೊರೆಯುವುದಿಲ್ಲ. ಹೀಗಾಗಿ ಕಡಿಮೆ ಮೊತ್ತದ ಸಾಲವನ್ನು ಆದಾಯ ಬರುವ ಉದ್ದೇಶಕ್ಕಿಂತ ಇತರೆ ಸಾಮಾಜಿಕ ಉದ್ದೇಶಕ್ಕೆ ಬಳಕೆ ಯಾಗುತ್ತದೆ. ಇದರಿಂದ ಸಣ್ಣ, ಅತೀ ಸಣ್ಣ ರೈತರ ಸಾಮಾಜಿಕ, ಆರ್ಥಿಕ ಬದುಕಿನ ಮೇಲೆ ಇಂತಹ ಸಾಲಗಳ ಧನಾತ್ಮಕ ಪರಿಣಾಮ ಶೂನ್ಯ ಎನ್ನಬಹುದು. ಗ್ರಾಮೀಣ ಸಾಲ ಪೂರೈಕೆ ವ್ಯವಸ್ಥೆಯನ್ನು ಕೆಳಗಿನ ಚಿತ್ರದಲ್ಲಿ ನೀಡಲಾಗಿದೆ. ಈ ವ್ಯವಸ್ಥೆಯು ಸಂಘಟಿತ ಮತ್ತು ಅಸಂಘಟಿತ ಮಾರುಕಟ್ಟೆಗಳನ್ನು ಒಳಗೊಂಡಿದೆ. ಸಂಘಟಿತ ಮೂಲವು ಬಹು ಸಂಸ್ಥೆ ಸಾಲ ಪೂರೈಕೆ ವಿಧಾನದಿಂದ ಕೂಡಿದ್ದು ಮುಖ್ಯವಾಗಿ ಸಾರ್ವಜನಿಕ ಮತ್ತು ಖಾಸಗೀ ಬ್ಯಾಂಕನ್ನು ಒಳಗೊಂಡಿದೆ. ಸಾರ್ವಜನಿಕ ಬ್ಯಾಂಕುಗಳೆಂದರೆ ಸಹಕಾರ ಸಾಲ ಸಂಸ್ಥೆಗಳು, ಗ್ರಾಮೀಣ ಬ್ಯಾಂಕುಗಳು ಮತ್ತು ವಾಣಿಜ್ಯ ಬ್ಯಾಂಕು ಗಳಾಗಿವೆ. ಅಸಂಘಟಿತ ಹಣಕಾಸು ಮಾರುಕಟ್ಟೆ ಹಲವು ಮೂಲಗಳಿಂದ ಕೂಡಿದೆ. ಅವುಗಳೆಂದರೆ ಸ್ಥಳೀಯ ವ್ಯಾಪಾರಸ್ಥರು, ಕಮಿಷನ್ ಏಜೆಂಟುಗಳು, ಜಮೀನ್ದಾರರು, ಸ್ನೇಹಿತರು, ಸಂಬಂಧಿಕರು ಮತ್ತು ಲೇವಾದೇವಿಗಾರರು. ರಾಯಚೂರು ಜಿಲ್ಲೆಯಲ್ಲಿ ಸ್ಥಳೀಯ ವ್ಯಾಪಾರಸ್ಥರನ್ನು ಕೃಷಿಗೆ ಬೇಕಾದ ಸಾಮಗ್ರಿ ಅಥವಾ ಹೂಡುವಳಿ ಪೂರೈಕೆ ಮಾಡುವವರು (ಇನ್ಪುಟ್ ಸಪ್ಲೆಯರ್) ಎನ್ನಲಾಗುತ್ತದೆ. ಇವರು ಜಿಲ್ಲೆ, ತಾಲ್ಲೂಕು ಕೇಂದ್ರಗಳಲ್ಲಿ ವಾಸಿಸುತ್ತ ತಮ್ಮ ವ್ಯವಹಾಗಳನ್ನು ನಿರ್ವಹಿಸುತ್ತಾರೆ. ಅಸಂಘಟಿತ ಸಾಲ ಮಾರುಕಟ್ಟೆ ಸಂಘಟಿತ ಮೂಲಕ್ಕಿಂತ ಭಿನ್ನವಾದ ಲಕ್ಷಣಗಳಿಂದ

ಕೂಡಿದೆ. ಅವುಗಳೆಂದರೆ ಗ್ರಾಹಕರೊಂದಿಗಿನ ಅನೌಪಚಾರಿಕ ವರ್ತನೆ, ಸಾಲ ಪಡೆಯುವವರ ವಯಕ್ತಿಕ ವಿವರಗಳ ಮಾಹಿತಿ ಸಂಗ್ರಹ ಮತ್ತು ವೈಯಕ್ತಿಕ ಸಂಪರ್ಕಗಳು, ಸರಳ ಲೆಕ್ಕದಾಖಲಾತಿಗಳ ನಿರ್ವಹಣೆ, ಪರಿಸ್ಥಿಗೆ ಅನುಗುಣವಾಗಿ ಸಾಲ ನಿಯಮಗಳನ್ನು ಸಡಿಲಿಸುವಿಕೆ ಮತ್ತು ಹಣಕಾಸು ವ್ಯವಹಾರಗಳ ಗೌಪ್ಯತೆ ಇತ್ಯಾದಿ ಲಕ್ಷಣಗಳನ್ನು ಒಳಗೊಂಡಿದೆ. ಸಾಲಗಳು ಅಭಿವೃದ್ಧಿ ಚಕ್ರದ ಚಲನೆಗೆ ಅಗತ್ಯ. ಅದೇ ರೀತಿ ಸಾಲಗಳನ್ನು ಬಡತನ ನಿರ್ಮೂಲನೆ, ಸಾಮಾಜಿಕ, ಆರ್ಥಿಕ ಅಸಮಾನತೆ ನಿವಾರಣೆಯ ಸಾಧನ ಇನ್ನಲಾಗುತ್ತದೆ. ಗ್ರಾಮೀಣ ಅಭಿವೃದ್ಧಿಯನ್ನು ಪ್ರೇರೇಪಿಸುವಲ್ಲಿ ಸಾಲ ಪ್ರಮುಖ ಪಾತ್ರ ವಹಿಸುತ್ತದೆ.[೪] ಅಭಿವೃದ್ಧಿ ರಾಷ್ಟ್ರಗಳಲ್ಲಿ ತಾಂತ್ರಿಕ ಬದಲಾವಣೆ ಮತ್ತು ಹೊಸ ಉತ್ಪಾದನಾ ವ್ಯವಸ್ಥೆಯ ಅಳವಡಿಕೆಯಿಂದ ಸಾಲಕ್ಕೆ ಬೇಡಿಕೆ ಸೃಷ್ಟಿಯಾಗುತ್ತದೆ. ಆದರೆ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಅಥವಾ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಅದರ ಸ್ಥಿತಿಗತಿಗಳು ವಿಭಿನ್ನ. ಇಲ್ಲಿ ಅಭಿವೃದ್ಧಿಯ ಪ್ರಕ್ರಿಯೆಗೆ ಪ್ರೋತ್ಸಾಹ, ಪ್ರೇರಣೆ ನೀಡಿ ಅಭಿವೃದ್ಧಿಯ ವೇಗವನ್ನು ಹೆಚ್ಚಿಸುವ ಅಗತ್ಯವಿದೆ. ಅಭಿವೃದ್ಧಿ ಪ್ರಕ್ರಿಯೆಯನ್ನು ವೇಗೋತ್ಕರ್ಷಗೊಳಿಸಬೇಕು. ಈ ಪ್ರಯತ್ನದಲ್ಲಿ ಯೋಜಿತ ನೀತಿಯನ್ನುರೂಪಿಸಬೇಕು. ಪ್ರಕ್ರಿಯೆಯಲ್ಲಿ ಸರ್ಕಾರ ಮತ್ತು ಸರ್ಕಾರ ನಿಯಂತ್ರಿತ ಸಂಸ್ಥೆಗಳು ಸಕ್ರೀಯವಾಗಿ ಪಾಲ್ಗೊಂಡು ಅಭಿವೃದ್ಧಿ ಪ್ರಕ್ರಿಯೆಯನ್ನು ಪ್ರೋತ್ಸಾಹಿಸಬೇಕು. ಈ ಹಿನ್ನೆಲೆಯಲ್ಲಿ ಸಾಲ, ಅಭಿವೃದ್ಧಿಯ ಪ್ರೇರಣೆಯಾಗಿ ಕಾರ್ಯನಿರ್ವಹಿಸುಬೇಕು. ಅಭಿವೃದ್ಧಿ ತಜ್ಞರು ಹೇಳುವಂತೆ ಸಾಲ ಸೌಲಭ್ಯಗಳು ಅಭಿವೃದ್ಧಿ ಮಾದರಿ ಅಥವಾ ಪ್ರಕ್ರಿಯೆಯ ಭಾಗವಾಗಿ ಕಾರ್ಯನಿರ್ವಹಿಸಬೇಕು. ಆರ್ಥಿಕ ಬೆಳೆವಣಿಗೆಯ ಪ್ರೇರಣೆಗೆ ಅಗತ್ಯವಾದ ಸಾಲ ಸೌಲಭ್ಯಗಳನ್ನು ಒದಗಿಸುವಂತೆ ಸಾಂಸ್ಥಿಕ ವ್ಯವಸ್ಥೆ ಸೃಷ್ಟಿಸಬೇಕು. ಅಗತ್ಯ ಸಂಸ್ಥೆಗಳನ್ನು ಸ್ಥಾಪಿಸಬೇಕು. ಇಂತಹ ಸಾಲ ಸಂಸ್ಥೆಗಳು ಸಮಾಜದ ಇಲ್ಲಾ ವರ್ಗಗಳ ಜನರ ಸಾಲದ ಬೇಡಿಕೆಗಳನ್ನು ಪೂರೈಸಬೇಕು. ಪಡೆದ ಸಾಲಗಳನ್ನು ಜನರು ತಮ್ಮ ಅಭಿವೃದ್ಧಿಗೆ ಬಳಸಿಕೊಳ್ಳುವಂತಹ ವ್ಯವಸ್ಥೆಯನ್ನು ಸೃಷ್ಟಿಸಬೇಕು. ಆ ಮೂಲಕ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಎಲ್ಲರೂ ಪಾಲ್ಗೊಳ್ಳುವಂತಹ ಅವಕಾಶ ಸೃಷ್ಟಿಸಬೇಕು. ಇಂತಹ ಪ್ರಯತ್ನ ಮತ್ತು ಅಭಿವೃದ್ಧಿ ಪ್ರೇರಿತ ಸಾಲ ನೀತಿಗಳಿಂದ ಮಾತ್ರ ಸಾಮಾಜಿಕ ಮತ್ತು ಆರ್ಥಿಕ ಸಮಾನತೆ ತರಲು ಸಾಧ್ಯವಾಗುತ್ತದೆ. ಆದರೆ ಈ ರೀತಿಯ ಅಭಿವೃದ್ಧಿ ತಂತ್ರ ಅಥವಾ ಧೋರಣೆಯನ್ನು (ವಾನ್‌ಪಿಷ್ಕ: ೧೯೯೧) ಪ್ರಶ್ನಿಸುತ್ತಾರೆ. ಅಭಿವೃದ್ಧಿಯ ಸಾಧನವಾಗಿ ಸಾಲಕ್ಕೆ ಹೆಚ್ಚಿನ ಆಧ್ಯತೆ ನೀಡುವುದು ಮತ್ತು ಅತಿಯಾದ ನಂಬಿಕೆ ಹಿಡುವುದು ಸರಿಯಲ್ಲ ಎನ್ನುತ್ತಾರೆ. ಆದರೂ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳಲ್ಲಿ ಸಾಲ ಸೌಲಭ್ಯಗಳು ಅಭಿವೃದ್ಧಿಯ ಪ್ರೇರಣೆಯಾಗಿ, ಬಡತನ ನಿರ್ಮೂಲನೆ ಹಾಗೂ ಆದಾಯ ಸಮಾನತೆ ತರುವಲ್ಲಿ ನೆರವಾಗುತ್ತದೆ ಎಂಬುದನ್ನು ಎಲ್ಲರೂ ಮನಗೊಳ್ಳಬೇಕಾಗಿದೆ. ಗ್ರಾಮೀಣ ಹಣಕಾಸು ಸಂಯೋಜನೆಗೆ ಸಂಬಂಧಿಸಿದ ಪಟ್ಟಿಯನ್ನು ಮುಂದೆ ನೀಡಲಾಗಿದೆ.(ಗ್ರಾಮೀಣ ಹಣಕಾಸು ವ್ಯವಸ್ಥೆಯ ಸಂಯೋಜನೆಯ ಪಟ್ಟಿ ಗಮನಿಸಿ ಪು.೧೩೨)




ಮೂಲ: ದಿನೇಶ್ ಚಂದ್ರ (1993). *ರೂರಲ್ ಕ್ರೆಡಿಟ್: ರೋಲ್ ಆಫ್ ಇನ್‌ಫಾರ್ಮಲ್ ಸೆಕ್ಟರ್*, ಸೆಗ್ಮೆಂಟ್ ಬುಕ್ಸ್, ನ್ಯೂಡೆಲ್ಲಿ, ಪು.32

## ೩.೨. ಅಸಂಘಟಿತ ಸಾಲ ಮೂಲ

ಪ್ರಸ್ತುತ ಭಾರತದ ಗ್ರಾಮೀಣ ಹಣಕಾಸು ವ್ಯವಸ್ಥೆ ಹಲವು ಮೂಲ ಮತ್ತು ಸಂಸ್ಥೆಗಳನ್ನು ಒಳಗೊಂಡಿದೆ. ಇವುಗಳು ಗ್ರಾಮೀಣ ಜನರಿಗೆ ಸಾಲ ಸೌಲಭ್ಯ ಪೂರೈಸುವ ಕಾರ್ಯದಲ್ಲಿ ತೊಡಗಿವೆ. ಈ ವ್ಯವಸ್ಥೆಯು ಪ್ರಮುಖವಾಗಿ ಸಂಘಟಿತ ಮತ್ತು ಅಸಂಘಟಿತ ಮೂಲಗಳನ್ನು ಒಳಗೊಂಡಿದೆ. ಸಂಘಟಿತ ಮೂಲವು ಬಹು ಸಂಸ್ಥೆ ವಿಧಾನದಿಂದ ಕೂಡಿದೆ. ಅದೇ ರೀತಿ ಅಸಂಘಟಿತ ಮಾರುಕಟ್ಟೆಯೂ ಹಲವು ಸಂಸ್ಥೆಗಳಿಂದ ಕೂಡಿದೆ. ಈ ಎರಡೂ ವ್ಯವಸ್ಥೆಯಿಂದ ನೇರ ಮತ್ತು ಪರೋಕ್ಷ ಸಾಲಗಳು ಪೂರೈಕೆಯಾಗುತ್ತವೆ. ಈ ಎರಡೂ ಮೂಲಗಳ ಕಾರ್ಯಚಟುವಟಿಕೆಗಳನ್ನು ಚರ್ಚಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

### ಖಾಸಗೀ ಲೇವಾದೇವಿಗಾರರು

ಭಾರತದಲ್ಲಿ ಕೃಷಿಗೆ ಪೂರೈಕೆಯಾಗುವ ಸಾಲದಲ್ಲಿ ಹಣದ ಲೇವಾದೇವಿಗಾರರ ಪಾತ್ರ ಪ್ರಮುಖ. ಹಿಂದೆ ಗ್ರಾಮೀಣ ಪ್ರದೇಶದಲ್ಲಿ ರೈತರಿಗೆ ಸಾಲ ನೀಡುತ್ತಿದ್ದ ಏಕೈಕ ದೊಡ್ಡ ಮೂಲವೆಂದರೆ ಲೇವಾದೇವಿಗಳು. ಇವರು ರೈತರ ಜಮೀನನ್ನು ಭದ್ರತೆಯಾಗಿಟ್ಟುಕೊಂಡು ಹಾಗೂ ಚರಾಸ್ತಿಯಾದ ಚಿನ್ನ, ಒಡವೆಗಳ ಭದ್ರತೆಯ ಮೇಲೆ ಅಲ್ಪಾವಧಿ ಸಾಲಗಳನ್ನು ನೀಡುತ್ತಿದ್ದರು. ಉತ್ಪಾದಕ ಮತ್ತು ಅನುಭೋಗದ ಉದ್ದೇಶಗಳೆರಡಕ್ಕೂ ಸಾಲ ನೀಡುತ್ತಿದ್ದರು. ರೈತರು ಲೇವಾದೇವಿಗಳಿಂದ ಸುಲಭವಾಗಿ ಯಾವುದೇ ಸಂಕೀರ್ಣತೆ ಇಲ್ಲದೆ, ಔಪಚಾರಿಕ ನಿಯಮಗಳಿಲ್ಲದೆ ಸಾಲ ಸೌಲಭ್ಯವನ್ನು ಪಡೆಯುತ್ತಾರೆ. ಲೇವಾದೇವಿಗಳಿಗೆ, ಸಾಲ ಪಡೆಯುವ ರೈತರ ಮರು ಪಾವತಿ ಸಾಮರ್ಥ್ಯ, ಅವರ ಆಸ್ತಿಗಳು ಮತ್ತು ಅವರ ಗುಣ ವ್ಯಕ್ತಿತ್ವಗಳ ಬಗ್ಗೆ ಪೂರ್ಣ ಜ್ಞಾನವಿರುತ್ತದೆ. ಲೇವಾದೇವಿಗಳು ಯಾವುದೇ ವೇಳೆ ಅಥವಾ ಸಂದರ್ಭದಲ್ಲಿ ಸಾಲ ನೀಡುತ್ತಾರೆ. ಇವರು ತಮ್ಮ ಸಾಲನೀಡುವ ವ್ಯವಹಾರಗಳಲ್ಲಿ ತುಂಬಾ ಉದಾರವಾದ ಮನೋಭಾವ ಹೊಂದಿದ್ದು ಸರಳ ನಿಯಮಗಳನ್ನು ಪಾಲಿಸುತ್ತಾರೆ. ಸಾಲ ಪಡೆಯುವ ರೈತರ ಮೇಲೆ ಸಂಪೂರ್ಣ ನಿಯಂತ್ರಣ ಹೊಂದಿರುತ್ತಾರೆ. ತಮ್ಮದೇ ಆದ ಹಲವು ವಿಧಾನಗಳ ಮೂಲಕ ತಾವು ನೀಡಿದ ಸಾಲವನ್ನು ಹಿಂತಿರುಗಿ ಪಡೆಯುತ್ತಾರೆ. ಲೇವಾದೇವಿಗಳು ಗ್ರಾಮೀಣ ಪ್ರದೇಶಗಳಲ್ಲಿ ಆರ್ಥಿಕ ಮತ್ತು ಸಾಮಾಜಿಕವಾಗಿ ಪ್ರಬಲವಾಗಿರುತ್ತಾರೆ. ಹಲವು ಪ್ರಶ್ನಾರ್ಥಕ ಕ್ರಮಗಳ ಮೂಲಕ ತಾವು ನೀಡಿದ ಸಾಲವನ್ನು ಹಿಂದಿರುಗಿ ಪಡೆಯುತ್ತಾರೆ. ಇವರ ಈ ಕ್ರಮಗಳು ಶೋಷಣೆ–ಅಮಾನವೀಯವಾಗಿರುತ್ತವೆ. ಸಾಲದ ಅಗತ್ಯವಿರುವ ಅನಕ್ಷರಸ್ಥ ರೈತರಿಂದ ಖಾಲಿ ಪೇಪರ್ ಮೇಲೆ ಸಹಿ ಮಾಡಿಸಿಕೊಳ್ಳುವುದು. ನೀಡುವ ಸಾಲದಲ್ಲಿ ಮುಂಗಡ ಬಡ್ಡಿ ಮುರಿದುಕೊಳ್ಳವುದು. ಲೆಕ್ಕ ಪತ್ರಗಳನ್ನು ತಿದ್ದವುದು ಸಾಲ ಪಡೆಯುವ ರೈತರು ಆಸ್ತಿಯ ಮೇಲೆ ಮಾರಾಟ ಪತ್ರ ಪಡೆಯುವುದು. ಅಧಿಕ ಬಡ್ಡಿ ವಿಧಿಸುವುದು. ಅಸಲು ಮತ್ತು ಬಡ್ಡಿ ಮರುಪಾವತಿ ಮಾಡಿದಕ್ಕೆ ಯಾವುದೇ ರಸೀದಿ ಇತ್ಯಾದಿ ದಾಖಲೆಗಳನ್ನು ನೀಡದೇ ಇರುವುದು. ಸಾಲ ಪಡೆದ ಸಣ್ಣ ರೈತರು ತಾವು ಬೆಳೆದ ಬೆಳೆಯನ್ನು ಕಡಿಮೆ ಬೆಲೆಗೆ ನೀಡುವಂತೆ ಒತ್ತಾಯಿಸುವುದು.

ಸಾಲ ಮರು ಪಾವತಿ ಆಗದೇ ಇದ್ದಲ್ಲಿ ಆಸ್ತಿ ಮುಟ್ಟುಗೋಲು ಹಾಕಿಕೊಳ್ಳವುದು. ಅಸಲು ಮತ್ತು ಬಡ್ಡಿ ನೀಡುವುದು ವಿಳಂಬವಾದರೆ ಸಾರ್ವಜನಿಕವಾಗಿ ನಿಂದಿಸಿ ಮಾನಸಿಕ ಕಿರುಕುಳ ನೀಡುವುದು ಇತ್ಯಾದಿಗಳು. ಇವು ಲೇವಾದೇವಿಗಳ ಅಮಾನವೀಯ ಶೋಷಿತ ಸಾಲ ವಸೂಲಾತಿಗೆ ಕೆಲವು ನಿದರ್ಶನಗಳು. ಆದರೆ ಎಲ್ಲಾ ಲೇವಾದೇವಿಗಳನ್ನು ಶೋಷಿಸುವವರು ಎಂದು ಹೇಳಲಾಗುವುದಿಲ್ಲ. ಗ್ರಾಮೀಣ ಪ್ರದೇಶದ ರೈತರ ಸಾಲದ ಅಗತ್ಯಗಳನ್ನು ಪೂರೈಸುವಲ್ಲಿ ಅಸಂಘಟಿತ ವಲಯದ ಲೇವಾದೇವಿಗಳು ಪ್ರಮುಖ ಪಾತ್ರವಹಿಸುತ್ತಾರೆ. ಅಖಿಲ ಭಾರತ ಗ್ರಾಮೀಣ ಸಾಲ ಸಮೀಕ್ಷೆ (ಎಐಆರ್‌ಸಿಎಸ್) ಪ್ರಕಾರ ೧೯೫೧–೫೨ರಲ್ಲಿ ರೈತರು ಪಡೆದ ಸಾಲಗಳಲ್ಲಿ ಅಸಂಘಟಿತ ವಲಯದ ಕೊಡುಗೆ ಶೇಕಡಾ ೭೦ರಷ್ಟಿತ್ತು. ಇದರಲ್ಲಿ ಲೇವಾದೇವಿಗಳ ಪಾಲು ಶೇಕಡಾ ೯೨.೭ರಷ್ಟಿತ್ತು.[೫] ೧೯೬೧–೬೨ರ ಅಖಿಲ ಭಾರತ ಸಾಲ ಹೂಡಿಕೆ ಸಮೀಕ್ಷೆ (ಎಐಆರ್‌ಸಿಎಸ್)ನ ಪ್ರಕಾರ ಲೇವಾದೇವಿಗಳ ಕೊಡುಗೆ ಒಟ್ಟು ಸಾಲ ನೀಡಿಕೆಯಲ್ಲಿ ಶೇಕಡಾ ೫೦ರಷ್ಟಿತ್ತು. ೧೯೭೦–೭೧ರಲ್ಲಿ ಲೇವಾದೇವಿಗಳ ಕೊಡುಗೆ ಶೇಕಡಾ ೩೬ಕ್ಕೆ ಇಳಿಯಿತು ಮತ್ತು ೧೯೮೧–೮೨ರಲ್ಲಿ ಇವರ ಕೊಡುಗೆ ಶೇಕಡಾ ೧೬.೧ರಷ್ಟಾಯಿತು. ಹಣದ ಲೇವಾದೇವಿಗಳ ಸಾಲ ವಸೂಲಾತಿ ಕ್ರಮಗಳನ್ನು ನಿಯಂತ್ರಿಸುವ ಅನೇಕ ಪ್ರಯತ್ನಗಳು ನಡೆದವು. ಈ ನಿಟ್ಟಿನಲ್ಲಿ ಅನೇಕ ಕಾಯಿದೆಗಳನ್ನು ಜಾರಿಗೆ ತರಲಾಯಿತು. ಕೃಷಿ ಸಾಲ ಕಾಯಿದೆ ೧೮೭೯, ೧೯೧೮ರ ಕಾಯಿದೆ ಮತ್ತು ೧೯೩೦ರ ಲೆಕ್ಕಪತ್ರ ನಿಯಂತ್ರಣ ಕಾಯಿದೆ ಇತ್ಯಾದಿಗಳು. ಹಲವು ರಾಜ್ಯ ಸರ್ಕಾರಗಳು ಇದರ ಬಗ್ಗೆ ಕಾಯಿದೆಗಳನ್ನು ಜಾರಿಗೆ ತಂದವು. ಈ ಕಾಯಿದೆಗಳು ಲೇವಾದೇವಿಗಳನ್ನು ನೊಂದಾಯಿಸಿ, ಅನುಮತಿ ಪಡೆದು ಲೇವಾದೇವಿ ವ್ಯವಹಾರ ನಡೆಸಲು ಅವಕಾಶ ಮಾಡಿಕೊಟ್ಟಿತು. ನಿರ್ಧಿಷ್ಟ ನಮೂನೆಯಲ್ಲಿ ಲೆಕ್ಕ ಪತ್ರಗಳನ್ನು ಇಡುವುದು. ಸಾಲ ಪಡೆಯುವವರಿಗೆ ಅವರು ಮರು ಪಾವತಿಸಿದ ಅಸಲು ಮತ್ತು ಬಡ್ಡಿಗಳಿಗೆ ರಸೀದಿ ನೀಡುವುದು, ಗರಿಷ್ಠ ಬಡ್ಡಿದರವನ್ನು ನಿಗದಿ ಮಾಡುವುದು. ಸಾಲ ಪಡೆಯುವವರ ಹಿತ ಕಾಯುವುದು ಅವರನ್ನು ಹಿಂಸೆಯಿಂದರಕ್ಷಿಸುವುದು. ಕಾಯಿದೆ ಉಲ್ಲಂಘನೆಗೆ ದಂಡ ವಿಧಿಸುವ ಅವಕಾಶಗಳನ್ನು ಕಾಯಿದೆಯಡಿಯಲ್ಲಿ ಜಾರಿಗೆ ತರಲಾಯಿತು. ಆರ್.ಬಿ.ಐ ಸಹ ಲೇವಾದೇವಿಗಳ ಚಟುವಟಿಕೆಗಳನ್ನು ನಿಯಂತ್ರಿಸುತ್ತದೆ. ಆದರೆ ಕಾಯಿದೆಗಳು, ಕಾನೂನು ಕ್ರಮಗಳು ಹಾಗೂ ಆರ್.ಬಿ.ಐನ ಪ್ರಯತ್ನಗಳು ಹೆಚ್ಚು ಪರಿಣಾಮಕಾರಿ ಯಾಗಿರಲಿಲ್ಲ. ಕಾರಣ ಕಾನೂನು ಕ್ರಮಗಳನ್ನು ಪರಿಶೀಲಿಸುವ ಮೇಲ್ವಿಚಾರಣಾ ವ್ಯವಸ್ಥೆ ಸರಿಯಾಗಿರಲಿಲ್ಲ. ಹಾಗೆಯೇ ಗ್ರಾಮೀಣ ಜನರ ಹಣಕಾಸು ಅಗತ್ಯಗಳನ್ನು ಪೂರೈಸುವ ಪರ್ಯಾಯ ಸಾಲ ಮೂಲಗಳು ಸಹ ಇರಲಿಲ್ಲ. ಹಾಗಾಗಿ ಈ ಕಾನೂನು ಕ್ರಮಗಳು ಯಶಸ್ವಿಯಾಗಲಿಲ್ಲ. ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಲೇವಾದೇವಿಗಳು ಸಾಲ ಸೌಲಭ್ಯಗಳನ್ನು ನೀಡುತ್ತಿದ್ದಾರೆ. ಸಾರ್ವಜನಿಕ ಬ್ಯಾಂಕುಗಳ ಶಾಖೆ ವಿಸ್ತರಣೆ, ಸಂಘಟಿತ ಹಣಕಾಸು ವಲಯದ ವ್ಯವಸ್ಥಿತ ಕಾರ್ಯ ಮತ್ತು ಬೆಳವಣಿಗೆ ನಂತರವೂ ಲೇವಾದೇವಿ ಚಟುವಟಿಕೆಗಳು ನಿರಂತರವಾಗಿ ನಡೆಯುತ್ತಿವೆ. ಸಣ್ಣ ಅತೀ ಸಣ್ಣ ರೈತ ವರ್ಗಗಳು ಲೇವಾದೇವಿಗಳಿಂದ ಸಾಲ ಸೌಲಭ್ಯ ಪಡೆದುಕೊಳ್ಳುತ್ತಿದ್ದಾರೆ. ೧೯೯೧ರ ಹಣಕಾಸು ಸುಧಾರಣೆ ನಂತರ ಸಾರ್ವಜನಿಕ ಬ್ಯಾಂಕುಗಳು

ಮುಖ್ಯವಾಗಿ ವಾಣಿಜ್ಯ ಬ್ಯಾಂಕುಗಳು ಮತ್ತು ಗ್ರಾಮೀಣ ಬ್ಯಾಂಕುಗಳು ಲಾಭಗಳಿಕೆಗೆ ಮಹತ್ವ ನೀಡಿದವು. ಸಹಕಾರ ಸಂಸ್ಥೆಗಳು ನೀಡುವ ಸಾಲ ಸಣ್ಣ ಪ್ರಮಾಣದಲ್ಲಿರುತ್ತದೆ. ಸರಿಯಾದ ಸಮಯದಲ್ಲಿ ದೊರೆಯುವುದಿಲ್ಲ. ಸಾಲ ಸಿಗುವ ಭರವಸೆಯೇ ಇರುವುದಿಲ್ಲ. ಈ ಸಂಸ್ಥೆಗಳು ಸ್ವಂತ ಸಂಪನ್ಮೂಲಗಳಿಲ್ಲದೆ ಸರ್ಕಾರ ಮತ್ತು ನಬಾರ್ಡ್‌ಗಳನ್ನು ಅವಲಂಬಿಸಿವೆ. ಸಂಘಟಿತ ಮೂಲದ ಸಾಲ ನಿಯಮ ನೀತಿಗಳು ಸಂಕೀರ್ಣವಾಗಿವೆ. ಮೇಲಾಗಿ ದುರ್ಬಲ ವರ್ಗಗಳ ಸಾಲದ ಅಗತ್ಯಗಳನ್ನು ಸಂಘಟಿತ ಮೂಲವು ನಿರ್ಲಕ್ಷಿಸುತ್ತವೆ. ಈ ಹಿನ್ನೆಲೆಯಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಲೇವಾದೇವಿಗಾರರು ಇನ್ನಷ್ಟು ಪ್ರಬಲರಾದರು. ಸಮಾಜದ ನಿರ್ಲಕ್ಷಿತ ವರ್ಗಗಳು ತಮ್ಮ ಸಾಲಗಳಿಗೆ ಲೇವಾದೇವಿಗಳು–ಅಸಂಘಟಿತ ಹಣಕಾಸು ಮಾರುಕಟ್ಟೆಯನ್ನು ಅವಲಂಬಿಸುವಂತಾಗಿದೆ. ಕ್ಷೇತ್ರ ಕಾರ್ಯದ ಮಾಹಿತಿ ವಿಶ್ಲೇಷಣೆ ಪ್ರಕಾರ ರಾಯಚೂರು ಜಿಲ್ಲೆಯ ದೇವದುರ್ಗ ಮತ್ತು ಸಿಂಧನೂರು ತಾಲ್ಲೂಕಿನ ಅಧ್ಯಯನ ಗ್ರಾಮಗಳ ಪ್ರಮುಖ ಲೇವಾದೇವಿಗಳೆಂದರೆ ಸ್ಥಳೀಯ ವ್ಯಾಪಾರಸ್ಥರು. ಇವರನ್ನು ಹೂಡುವಳಿ ಪೂರೈಕೆದಾರರು ಎನ್ನಲಾಗುತ್ತದೆ. ಇವರ ಸಾಲ ನಿಯಮಗಳು ಮತ್ತು ಸಾಲ ವ್ಯವಹಾರ ಚಟುವಟಿಕೆಗಳು, ಅದರ ಪರಿಣಾಮಗಳ ಬಗ್ಗೆ ಮುಂದಿನ ಭಾಗದಲ್ಲಿ ವಿಶ್ಲೇಷಿಸಿದ್ದೇನೆ. ಅದೇ ರೀತಿ ಸಣ್ಣ, ಅತೀಸಣ್ಣ ಮತ್ತು ದೊಡ್ಡ ರೈತರು ಎಲ್ಲರೂ ಖಾಸಗೀ ಮಾರುಕಟ್ಟೆಯಿಂದ ಸಾಲ ಪಡೆಯುತ್ತಿದ್ದಾರೆ. ಜಾಗತೀಕರಣದ ಸಂದರ್ಭದಲ್ಲಿ ಅಸಂಘಟಿತ ಮಾರುಕಟ್ಟೆಯು ಇನ್ನಷ್ಟು ಪ್ರಬಲ ಮತ್ತು ಕ್ರಿಯಾಶೀಲವಾಗುತ್ತಿದೆ. ಈ ಮೂಲದ ಪೂರ್ಣ ಪ್ರಕ್ರಿಯೆ ಕುರಿತು ಐದನೇ ಅಧ್ಯಾಯದಲ್ಲಿ ಚರ್ಚಿಸಿದ್ದೇನೆ.

**ಸ್ಥಳೀಯ ಬ್ಯಾಂಕರುಗಳು**

ಅಧಿಕ ಸಂಪನ್ಮೂಲ ಮತ್ತು ದೊಡ್ಡ ಪ್ರಮಾಣದ ವ್ಯವಹಾರಗಳ ಆಧಾರದ ಮೇಲೆ ಖಾಸಗೀ ಲೇವಾದೇವಿಗಳು ಮತ್ತು ಸ್ಥಳೀಯ ಬ್ಯಾಂಕುಗಳ ನಡುವೆ ವ್ಯತ್ಯಾಸವಿದೆ. ಸಾರ್ವಜನಿಕರಿಂದ ಠೇವಣಿ ಸ್ವೀಕಾರ, ಆಧುನಿಕ ಲೆಕ್ಕಪತ್ರ ವ್ಯವಸ್ಥೆ ಮತ್ತು ಸಂಘಟಿತ ಬ್ಯಾಂಕು ಮೂಲದೊಂದಿಗೆ ಹತ್ತಿರದ ಸಂಪರ್ಕವನ್ನು ಸ್ಥಳೀಯ ಬ್ಯಾಂಕರುಗಳು ಹೊಂದಿರುತ್ತಾರೆ. ಜೈನರು, ಚೆಟ್ಟಿಹಾರ್, ಮಾರ್‌ವಾಡಿಸ್, ಕಟ್ಟಾರೀಸ್, ರೋಹಿಲಾಸ್ ಮತ್ತು ಬೋಹರಸ್ ಇತ್ಯಾದಿಯವರು ಸ್ಥಳೀಯ ಬ್ಯಾಂಕು ವ್ಯವಹಾರ ಕೈಗೊಳ್ಳುವ ಪ್ರಮುಖ ಜಾತಿಗಳು. ೧೯೭೦ರ ಬ್ಯಾಂಕಿಂಗ್ ಕಮಿಷನ್ ಪ್ರಕಾರ ಭಾರತದಲ್ಲಿ ಇವರ ಸಂಖ್ಯೆ ಕಡಿಮೆ. ಸ್ಥಳೀಯ ಬ್ಯಾಂಕರುಗಳು ಸಾರ್ವಜನಿಕರಿಂದ ಠೇವಣಿ ಸ್ವೀಕರಿಸಿ ಅದಕ್ಕೆ ಬಡ್ಡಿ ನೀಡುತ್ತಾರೆ. ಇವರು ರೈತರಿಗೆ ಪರೋಕ್ಷವಾಗಿ ನೆರವಾಗುತ್ತಾರೆ. ರೈತರೊಂದಿಗೆ ಇವರು ನೇರ ಸಂಬಂಧ ಇಟ್ಟು ಕೊಳ್ಳುವುದಿಲ್ಲ. ಇವರು ವ್ಯಾಪಾರಸ್ಥರ ಮೂಲಕ ಪರೋಕ್ಷವಾಗಿ ರೈತರಿಗೆ ಸಾಲ ನೀಡುತ್ತಾರೆ. ಇವರು ಭರವಸೆ ಮತ್ತು ಹುಂಡಿಗಳನ್ನು ಭದ್ರತೆಯಾಗಿಟ್ಟುಕೊಂಡು ಸಾಲ ನೀಡುತ್ತಾರೆ. ಸ್ಥಳೀಯ ಬ್ಯಾಂಕರುಗಳು ಗ್ರಾಮೀಣ ಹಣಕಾಸು ಕ್ಷೇತ್ರದ ಮುಖ್ಯ ಭಾಗವದರೂ ಸಾಲ ನೀಡುವ ವ್ಯವಹಾರದಲ್ಲಿ ಅವರ ಪಾತ್ರ ಕಡಿಮೆ. ಸಾಲ ನೀಡಿಕೆ ಇವರ ಸಮಗ್ರ ವ್ಯವಹಾರಗಳ ಒಂದು ಭಾಗ. ವ್ಯಾಪಾರ ಚಟುವಟಿಕೆ ಇವರ ಪ್ರಮುಖ ವ್ಯವಹಾರ. ಈ

ಚಟುವಟಿಕೆಗಳಲ್ಲಿ ನಿರ್ವಹಿಸುವಾಗ ಇವರು ಸಾಂಪ್ರದಾಯಿಕ ಮನೋಭಾವ ಹೊಂದಿರುತ್ತಾರೆ. ಇವರು ಸಾಲ ನೀಡುವ ವ್ಯವಹಾರಕ್ಕೆ ಅಷ್ಟಾಗಿ ಗಮನ ಹರಿಸುವುದಿಲ್ಲ. ಸ್ಥಳೀಯ ಬ್ಯಾಂಕರುಗಳು ದೇಶದ್ಯಾಂತ ಚದುರಿ ಹೋಗಿದ್ದಾರೆ. ಅವರವರ ನಡುವೆಯೇ ಸಹಕಾರ ಕಡಿಮೆ. ಸಂಘಟಿತ ಹಣಕಾಸು ಮೂಲದೊಂದಿಗಿನ ಇವರ ಸಂಪರ್ಕಗಳು ಕೇವಲ ಅವರ ವೈಯುಕ್ತಿಕ ವ್ಯವಹಾರರಗಳಿಗೆ ಸಿಮೀತವಾಗಿದೆ. ಇವರು ಪ್ರಸ್ತುತ ವ್ಯಾಪಾರ-ವಾಣಿಜ್ಯ ಚಿನ್ನ-ಬೆಳ್ಳಿ ಹಾಗೂ ಇತರೆ ವ್ಯವಹಾರಕ್ಕೆ ಹೆಚ್ಚಿನ ಆಧ್ಯತೆ ನೀಡುತ್ತಾರೆ. ಸ್ವಾತಂತ್ರ್ಯ ನಂತರ ದೇಶದ ಆರ್ಥಿಕತೆಯಲ್ಲಿ ಬದಲಾವಣೆಗಳು ಸಂಬವಿಸಿದವು. ವ್ಯಾಪಾರ, ವಾಣಿಜ್ಯ, ಕೈಗಾರಿಕೆಗಳ ಬೆಳವಣಿಗೆಗೆ ಹೆಚ್ಚು ಆದ್ಯತೆ ದೊರೆಯಿತು. ಸ್ಥಳೀಯ ಬ್ಯಾಂಕರುಗಳು ಈ ಚಟುವಟಿಕೆಗಳಿಗೆ ತಮ್ಮ ಸಂಪನ್ಮೂಲಗಳನ್ನು ಬಳಸಿಕೊಂಡು ಸ್ರಾಂಪ್ರಾದಾಯಿಕ, ಕೌಟುಂಬಿಕ ವ್ಯವಹಾರವಾದ ಸ್ಥಳೀಯ ಸಾಲ ನೀಡಿಕೆಯನ್ನು ತ್ಯಜಿಸ ತೊಡಗಿದರು.

**ಭೂ ಮಾಲೀಕರು**

ರೈತರು ಮತ್ತು ಗ್ರಾಮೀಣ ಜನರಿಗೆ ಭೂಮಾಲೀಕರು ಹಣಕಾಸು ಪೋರೈಸುತ್ತಾರೆ. ಸಾಮಾನ್ಯವಾಗಿ ಸಣ್ಣ ಮತ್ತು ಅತಿಸಣ್ಣ ರೈತರು ತಮ್ಮ ಹಣಕಾಸು ಅಗತ್ಯಗಳಿಗಾಗಿ ಜಮೀನ್ದಾರರನ್ನು ಅವಲಂಬಿಸಿರುತ್ತಾರೆ. ಭೂಮಾಲೀಕರ ಸಾಲ ನೀಡಿಕೆ ಚಟುವಟಿಕೆಯು ಲೇವಾದೇವಿದಾರರ ವ್ಯವಹಾರದಂತೆ ಇರುತ್ತದೆ. ಸಾಲ ನೀಡುವಾಗ ಮತ್ತು ಹಿಂತುರುಗಿ ಪಡೆಯುವಾಗ ಕಠಿಣ ನಿಯಮಗಳನ್ನು ಅನುಸರಿಸುತ್ತಾರೆ. ಇವರು ಗ್ರಾಮೀಣ ಪ್ರದೇಶಗಳಲ್ಲಿ ಪ್ರಬಲ ಜಾತಿಗಳಿಗೆ ಸೇರಿದ್ದು ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕವಾಗಿ ಪ್ರಭಾವಿಗಳಾಗಿತ್ತಾರೆ. ಸಾಲ ಮರುಪಾವತಿಯಾಗದಿದ್ದಲ್ಲಿ ಜನರ್ನು ಹಿಂಸೆ ಮತ್ತು ಶೋಷಣೆ ಮಾಡುತ್ತಾರೆ. ಇವರು ಸಾಮಾನ್ಯವಾಗಿ ಅಧಿಕ ಬಡ್ಡಿದರ ವಿಧಿಸುತ್ತಾರೆ. ಸಾಲ ಮರುಪಾವತಿ ವಿಳಂಬವಾದರೆ ಬಡ್ಡಿಗೆ ಬಡ್ಡಿ ವಿಧಿಸುತ್ತಾರೆ. ಗ್ರಾಮೀಣ ಪ್ರದೇಶಗಳ ಭೂರಹಿತ ಕಾರ್ಮಿಕರು, ಸಣ್ಣ ಅತಿಸಣ್ಣ ರೈತರು ಉತ್ಪಾದನೆ ಮತ್ತು ಅನುಬೋಗಕ್ಕೆ ಹಾಗೂ ಇತರೆ ಸಾಮಾಜಿಕ ಚಟುವಟಿಕೆಗಳಿಗೆ ಭೂ ಮಾಲೀಕರಿಂದ ಸಾಲ ಪಡೆಯುತ್ತಾರೆ. ಇವರಿಂದ ಸಾಲ ಪಡೆದ ಭೂರಹಿತ ಕಾರ್ಮಿಕರು ಜೀತಾದಾಳುಗಳಾಗಿ ದುಡಿಯುತ್ತಿದ್ದರು. ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ ಸಾಲ ನಿಡಿಕೆಯಲ್ಲಿ ಭೂ ಮಾಲೀಕರು ಪ್ರಮುಖ ಪಾತ್ರ ವಹಿಸುತ್ತಿದ್ದರು. ಭೂ ಸುಧಾರಣಾ ಕಾಯಿದೆ ಮತ್ತು ಸಂಘಟಿತ ಹಣಕಾಸು ವಲಯದ ಅಭಿವೃದ್ಧಿಯ ನಂತರ ಅವರ ಮಹತ್ವ ಕಡಿಮೆಯಾಯಿತು. ೧೯೫೧-೫೨ರಲ್ಲಿ ಭೂ ಮಾಲೀಕರು ನೀಡುತ್ತಿದ್ದ ಸಾಲದ ಪ್ರಮಾಣ ಶೇಕಡಾ ೩.೩ರಷ್ಟಿದ್ದು ೧೯೬೧-೬ಕ್ಕೆ ಶೇಕಡಾ ೧೪.೪ಕ್ಕೆ ಹೆಚ್ಚಿತ್ತು. ಆದರೂ ೧೯೮೦ರ ನಂತರ ಇವರ ಪಾಲು ಶೇಕಡಾ ೮ಕ್ಕೆ ಕುಸಿಯಿತು. ಇತ್ತೀಚಿಗೆ ಇವರ ಪಾತ್ರ ಕಡಿಮೆಯಾಗಿದೆ.

**ವ್ಯಾಪರಸ್ಥರು ಮತ್ತು ಕಮಿಷನ್ ಏಜೆಂಟ್‌ಗಳು**

ಇವರು ಉತ್ಪಾದನಾ ಚಟುವಟಿಕೆಗಳಿಗೆ ಕೃಷಿಸಾಲ ನೀಡುತ್ತಾರೆ. ಕೃಷಿ ಚಟುವಟಿಕೆಗಳು ಪ್ರಾರಂಭವಾಗುವುದಕ್ಕೆ ಮುಂಚೆ ಅಂದರೆ ಸಾಗುವಳಿ ಪ್ರಾರಂಭದಲ್ಲಿ ಮತ್ತು ಮಧ್ಯಭಾಗದಲ್ಲಿ ಸಾಲ

ನೀಡುತ್ತಾರೆ ಮತ್ತು ಅಗತ್ಯವಿದ್ದಾಗಲೆಲ್ಲಾ ಸಾಲ ನೀಡಿತ್ತಾರೆ. ಹತ್ತಿ, ತಂಬಾಕು, ಕಬ್ಬು, ಶೇಂಗಾ ಇತ್ಯಾದಿ ವಾಣಿಜ್ಯ ಬೆಳೆಗಳಿಗೆ ಸಾಲ ನೀಡುತ್ತಾರೆ. ಸಾಲ ಪಡೆದ ಸಣ್ಣ ಅತಿ ಸಣ್ಣ ರೈತರು ತಾವು ಬೆಳೆದ ಕೃಷಿ ಉತ್ಪನ್ನವನ್ನು ಇವರಿಗೆ ನೀಡಬೇಕು. ಇತ್ತೀಚಿನ ದಿನಗಳಲ್ಲಿ ಈ ಸಾಲ ಮೂಲ ಹೆಚ್ಚು ಪ್ರಭಾವಯುತವಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದುಬಂದಂತೆ ಪ್ರಾಥಮಿಕ ಸಹಕಾರ ಸಂಘದಿಂದ ಸಣ್ಣ ಅತಿಸಣ್ಣ ರೈತರು ತಮ್ಮ ಜಮೀನುಗಳ ಭದ್ರತೆಯ ಮೇಲೆ ಸಾಲ ಪಡೆಯುತ್ತಿದ್ದಾರೆ. ಪರುಶಿಷ್ಠ ಜಾತಿ ಪಂಗಡಗಳು ಭೂ ದಾಖಲೆಗಳು ತಮ್ಮ ಹೆಸರಿನಲ್ಲಿರುವ ರೈತರು ಮಾತ್ರ ಸಹಕಾರ ಸಂಸ್ಥೆಗಳಿಂದ ಸಾಲ ಪಡೆಯುತ್ತಿದ್ದಾರೆ. ಆದರೆ ಸಹಕಾರಿ ಸಂಸ್ಥೆಗಳಿಂದ ಬರುವ ಸಾಲ ವಿಳಂಬವಾಗುತ್ತದೆ. ಕೃಷಿ ಉತ್ಪಾದನಾ ವೆಚ್ಚದ ಮೇಲೆ ಸಾಲ ನೀಡುವುದರಿಂದ ತುಂಡು ಭೂಮಿ ಇದ್ದು ಕಡಿಮೆ ಉತ್ಪನ್ನ ಪಡೆಯುವುದರಿಂದ ರೈತರಿಗೆ ಕಡಿಮೆ ಸಾಲ ದೊರೆಯುತ್ತದೆ. ರೈತರ ಮಾಹಿತಿ ಪ್ರಕಾರ ಕೃಷಿ ನಾಟಿ ಸಂದರ್ಭಗಳಲ್ಲಿ ಸಾಲ ಬೇಕಾಗಿದ್ದರೆ ಫಸಲು ಬರುವ ಸಂದರ್ಭದಲ್ಲಿ ಸಾಲ ಬಿಡುಗಡೆಯಾಗುತ್ತದೆ. ಈ ಸಂಸ್ಥೆಗಳು ನೀಡುವ ಸಾಲ ಕೃಷಿ ಉತ್ಪಾದನೆಗೆ ಉಪಯೋಗ ವಾಗುವುದಿಲ್ಲ ಹಾಗೂ ಕಡಿಮೆ ಪ್ರಮಾಣದಲ್ಲಿ ಸಾಲ ಸಿಗುತ್ತದೆ. ಹೀಗಾಗಿ ಬಿಡುಗಡೆಯಾದ ಕಡಿಮೆ ಮೊತ್ತದ ಸಾಲದ ಹಣವನ್ನು ಆ ಸಂದರ್ಭದ ಸಾಮಾಜಿಕ ಕಾರ್ಯಕ್ರಮಗಳಿಗೆ ಬಳಸಿಕೊಳ್ಳುತ್ತಾರೆ. ಈ ಸಂಸ್ಥೆಗಳು ಸಾಲದ ಹಣಕ್ಕಾಗಿ ಸರ್ಕಾರವನ್ನು ಅವಲಂಬಿಸುತ್ತವೆ. ಸರ್ಕಾರ ಹಣ ಬಿಡುಗಡೆ ಮಾಡಿದರೆ ಸಂಸ್ಥೆಗಳು ರೈತರಿಗೆ ನೀಡುತ್ತವೆ. ಸರ್ಕಾರದಿಂದ ಹಣ ಬಂದರೆ ಮಾತ್ರ ಸಂಸ್ಥೆಗಳಿಂದ ರೈತರಿಗೆ ಸಾಲ ಸಿಗುತ್ತದೆ ಇಲ್ಲದಿದ್ದರೆ ಇಲ್ಲ. ಈ ಸಂಸ್ಥಗಳಿಗೆ ಸರ್ಕಾರದ ಹಣ ಒರತುಪಡಿಸಿ ತಾವೇ ಸ್ವತಃ ರೈತರಿಗೆ ಅಗತ್ಯವಿದ್ದಾಗ ಸಾಲ ನೀಡುವ ಆರ್ಥಿಕ ಸಾಮರ್ಥ್ಯವಿಲ್ಲ. ಇವುಗಳಿಗೆ ಸಂಪನ್ಮೂಲಗಳ ಕೊರತೆ ಇದೆ. ಸಾಲ ಮನ್ನಾ ಆಗುತ್ತದೆ ಎಂಬ ಕಾರಣಕ್ಕೆ ಪಡೆದ ಸಾಲವನ್ನು ಮುರುಪಾವತಿ ಮಾಡುವುದೆ ಇಲ್ಲ. ಸಾಲ ಮನ್ನಾ ಯೋಜನೆ ಜಾರಿಗೆ ತರುವ ಮುನ್ನ ಸಹಕಾರ ಸಂಸ್ಥೆಗಳಿಂದ ಪಡೆದ ಸಾಲಗಳು ಮರುಪಾವತಿಯಾಗದೆ ಕೋಟ್ಯಾಂತರರೂಪಾಯಿಗಳು ಬಾಕಿ ಉಳಿದಿದೆ. ಪಿ.ಎಲ್.ಡಿ. ಬ್ಯಾಂಕುಗಳು ಕಳೆದ ೧೫-೨೦ ವರ್ಷಗಳಿಂದ ನೀಡಿದ ಸಾಲ ಮರುಪಾವತಿಯಾಗದೆ ಅವುಗಳ ವಸೂಲಾತಿ ಶೇಕಡಾ ೭೦ರಷ್ಟು ಮಾತ್ರ ಇದೆ. ಸಾಲ ಮನ್ನಾ ಎಂಬುದು ರಾಜಕೀಯ ಪ್ರೇರಣೆಯಿಂದ ನಡೆಯುವಂತಹದು. ಅಧಿಕಾರದ ಆಸೆಯಿಂದ ರಾಜಕೀಯ ಪಕ್ಷಗಳು ಸಾಲ ಮನ್ನಾ ಮಾಡಲಾಗುತ್ತದೆ ಎಂಬ ಘೋಷಣೆ ಮಾಡುತ್ತವೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಸಹಕಾರ ಸಂಘಗಳ ಮೂಲ ಭೂತ ಅಶಯಗಳ ಪ್ರಕಾರ ಗ್ರಾಮೀಣ ಜನರ ಜೀವನ ಸುಧಾರಿಸುವ ಅಬಿವೃದ್ಧಿಗೆ ನೆರವಾಗುವ ಸಂಸ್ಥೆಗಳಾಗಿ ಉಳಿದಿಲ್ಲ. ಈ ಸಂಸ್ಥೆಗಳು ಕೇವಲ ಸರ್ಕಾರದ ಸಾಲ ಮನ್ನಾ ವಿತರಿಸುವ ಸರ್ಕಾರದ ಸಂಸ್ಥೆಗಳಾಗಿ ಕಾರ್ಯ ನಿರ್ವಹಿಸುತ್ತಿವೆ. ಕಮಿಷನ್ ಏಜೆಂಟ್‌ಗಳು ಸಾಲ ಪಡೆಯುವವರ ಮತ್ತು ಸಾಲ ನೀಡುವವರ ನಡುವೆ ಮಧ್ಯವರ್ತಿಗಳಾಗಿ ಕಾರ್ಯ ನಿರ್ವಹಿಸುತ್ತಾರೆ. ಸಾಲ ಪಡೆಯಲು ಏಜೆಂಟ್ ನೆರವು ನೀಡುವುದಕ್ಕೆ ದುಬಾರಿ ಕಮಿಷನ್ ವಿಧಿಸುತ್ತಾರೆ. ವ್ಯಾಪರಸ್ಥರು ಏಜೆಂಟ್‌ಗಳಿಬ್ಬರು ಸಹ ರೈತರನ್ನು ಶೋಷಿಸುತ್ತಾರೆ. ಇವರ ಸಾಲ

ನೀಡಿಕೆ ೧೯೫೧–೫೨ರಲ್ಲಿ ಶೇಕಡಾ ೫.೫ರಷ್ಟಿತ್ತು ಒಟ್ಟು ಕೃಷಿ ಸಾಲ ನೀಡಿಕೆಯಲ್ಲಿ ಇವರ ಪಾಲು ೭೧–೭೨ರ ಅವಧಿಯಲ್ಲಿ ಶೇಕಡಾ ೮ಕ್ಕಿಂತ ಹೆಚ್ಚಿಗೆ ಇತ್ತು. ೧೯೮೧–೮೨ರ ಅವಧಿಯಲ್ಲಿ ಶೇಕಡಾ ೩.೨ಕ್ಕೆ ಇಳಿಯಿತು.[೬] ಆದರೆ ೧೯೯೧ರ ಹೊಸ ಆರ್ಥಿಕ ನೀತಿ ಮತ್ತು ಬ್ಯಾಂಕ್ ಸುಧಾರಣಾ ಅವಧಿಯ ನಂತರ ಗ್ರಾಮೀಣ ಪ್ರದೇಶದ ಕೃಷಿ ಸಾಲ ಪೂರೈಕೆಯಲ್ಲಿ ಇವರು ಮಧ್ಯವರ್ತಿಗಳಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ರೈತರು ಸ್ನೇಹಿತರು ಮತ್ತು ಸಂಬಂಧಿಕರಿಂದಲೂ ಸಾಲ ಪಡೆಯುತ್ತಾರೆ. ಅತೀ ಕಡಿಮೆ ಬಡ್ಡಿ ದರಕ್ಕೆ ಸಾಲ ಪಡೆಯುತ್ತಾರೆ. ಕೃಷಿ ಉತ್ಪನ್ನದ ಮಾರಾಟದಿಂದ ಬಂದ ಆದಯಾದಿಂದ ಕೂಡಲೆ ಇಂತಹ ಸಾಲಗಳನ್ನು ಮರಪಾವತಿಸುತ್ತಾರೆ.

**ಮಹಿಳಾ ಸ್ವ ಸಹಾಯ ಗುಂಪು**

ಸಮಾನ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯ ಮಹಿಳೆಯರು ಸಂಘಟಿತರಾಗಿ ಸ್ವಸಹಾಯ ಗುಂಪುಗಳನ್ನು ಕಟ್ಟಿಕೊಳ್ಳುತ್ತಾರೆ. ನಿರ್ಧಿಷ್ಟ ಉದ್ದೇಶ ಮತ್ತು ಗುರಿಗಳನ್ನು ಈ ಗುಂಪುಗಳು ಹೊಂದಿರುತ್ತವೆ. ಉಳಿತಾಯ ಇವರ ಸಾಮಾನ್ಯ ಚಟುವಟಿಕೆ. ೬ ತಿಂಗಳು ಅಥವಾ ೧ ವರ್ಷದ ಉಳಿತಾಯ ಚಟುವಟಿಕೆಗಳ ನಂತರ ಗುಂಪಿನ ಸದಸ್ಯರುಗಳ ನಡುವೆ ಆಂತರಿಕ ಸಾಲ ವ್ಯವಹಾರ ಪ್ರಾರಂಭಿಸುತ್ತಾರೆ. ಇಂತಹ ಗುಂಪಿನಲ್ಲಿ ೧೫ ರಿಂದ ೨೦ ಸದಸ್ಯರಿರುತ್ತಾರೆ. ಇದರಲ್ಲಿ ಇಬ್ಬರನ್ನು ಪ್ರತಿನಿಧಿಗಳನ್ನು ಆಯ್ಕೆಮಾಡುತ್ತಾರೆ. ಈ ಪ್ರತಿನಿಧಿಗಳು ಸರ್ಕಾರ, ಹಣಕಾಸು ಸಂಸ್ಥೆಗಳು, ಬ್ಯಾಂಕು ಇತರೇ ಸಂಘ ಸಂಸ್ಥೆಗಳ ಕಾರ್ಯಕ್ರಮಗಳು ಗುಂಪಿನ ಪ್ರತಿನಿಧಿಗಳಾಗಿ ಭಾಗವಹಿಸುತ್ತಾರೆ. ತಮ್ಮ ಉಳಿತಾಯ ಮತ್ತು ಆಂತರಿಕ ಸಾಲ ಚಟುವಟಿಕೆಗಳ ದಾಖಲೆಗಳನ್ನು ನಿರ್ವಹಿಸುತ್ತಾರೆ. ದಾಖಲೆ ನಿರ್ವಹಣೆಗೆ ಸದಸ್ಯರಲ್ಲಿ ಒಬ್ಬ ಅಕ್ಷರಸ್ಥರನ್ನು ಆರಿಸಿಕೊಳ್ಳತ್ತಾರೆ. ಬಾಂಗ್ಲಾದ ಮಹಮದ್ ಯೂನಸ್‌ರ ಗ್ರಾಮೀಣ ಬ್ಯಾಂಕ್ ಪರಿಕಲ್ಪನೆಯೇ ಈ ಮಹಿಳಾ ಗುಂಪುಗಳ ಸೈದ್ಧಾಂತಿಕ ನೆಲೆ. ಈ ಗುಂಪುಗಳ ಕಾರ್ಯ ಪ್ರವೃತ್ತಿಯನ್ನು ಅಭಿವೃದ್ಧಿಯ ಪರ್ಯಾಯ ವಿಧಾನವೆಂದು ಪರಿಗಣಿಸಲಾಗಿದೆ. ಅಭಿವೃದ್ಧಿಯ ನೀತಿಗಳನ್ನು ಸಮಗ್ರ ಮಟ್ಟದಲ್ಲಿ ಮೇಲ್ಮಟ್ಟದಲ್ಲಿರೂಪಿಸಿದರೆ ಅಭಿವೃದ್ಧಿಯ ಫಲ ಸಮಾಜದ ಕೆಳವರ್ಗದ ನಿರ್ಲಕ್ಷಿತರನ್ನು ತಲುಪುತ್ತದೆ. ಗ್ರಾಮಗಳನ್ನು ಮಟ್ಟುತ್ತದೆ ಎಂದು ವಾದಿಸಲಾಗುತ್ತಿತ್ತು. ಆದರೆ ಕಳೆದ ೫೦–೬೦ ವರ್ಷ ಈ ಧೋರಣೆಯಿಂದ ಪ್ರಗತಿಯ ಫಲ ಕೆಲವರನ್ನು ಮಾತ್ರ ತಲುಪಿತು. ಅಸಂಖ್ಯಾತ ಜನರನ್ನು ತಲುಪಲಿಲ್ಲ. ಅಭಿವೃದ್ಧಿ ಪ್ರಯೋಜನದಿಂದ ವಂಚಿತರಾಗಿ ಅವಕಾಶಗಳನ್ನು ಪಡೆಯಲಾಗದೆ ಯೋಗ್ಯ ಬದುಕಿಗಾಗಿ ನಿರಂತರ ಹೋರಾಟ ನಡೆಸುವವರ ಸಂಖ್ಯೆ ಹೆಚ್ಚಾಗಿದೆ. ಇದಕ್ಕೆ ನಿದರ್ಶನವಾಗಿ ೧೯೯೧ರ ಹೊಸ ಆರ್ಥಿಕ ನೀತಿ, ಮೊದಲ ಹಂತದ ಆರ್ಥಿಕ ಸುಧಾರಣೆಯಿಂದ ಪ್ರಗತಿಯ ದರ ಹೆಚ್ಚಾಗುತ್ತದೆ. ಉದ್ಯೋಗ ಸೃಷ್ಟಿಯಾಗುತ್ತವೆ. ಜನರ ಜೀವನ ಸುಧಾರಣೆಯಾಗುತ್ತದೆ ಎಂದು ಪ್ರತಿಪಾದಿಸಲಾಗಿತ್ತು. ಆದರೆ ಅಧ್ಯಯನಗಳ ಪ್ರಕಾರ ಈ ರೀತಿಯರಫ್ತು ಆಧಾರಿತ ಹಾಗೂ ಮಾರುಕಟ್ಟೆಯ ಆಧಾರಿತ ಆರ್ಥಿಕತೆಯ ಪ್ರಯೋಜನವನ್ನು ಸಾಮಾಜದ ಪ್ರಬಲ ವರ್ಗಗಳು ಪಡೆದವು. ಆದರೆ ಸಮಾಜದ ದುರ್ಬಲ

ವರ್ಗಗಳು ಈ ಆರ್ಥಿಕ ಮತ್ತು ಹಣಕಾಸಿನ ಸುಧಾರಣೆಗಳ ಅನುಕೂಲಗಳನ್ನು ಪಡೆಯಲಾಗಲಿಲ್ಲ. ಈ ರೀತಿಯ ಅಭಿವೃದ್ಧಿ ನೀತಿಗಳ ಪ್ರತಿಫಲದಿಂದ ವಂಚಿತ ವರ್ಗಗಳ ಬಗ್ಗೆ ಅಧ್ಯಯನಗಳು ಚರ್ಚಿಸಿವೆ. ಪ್ರಸ್ತುತ ನನ್ನ ಅಧ್ಯಯನದಲ್ಲಿ ಸಂಘಟಿತ ಹಣಕಾಸು ಮೂಲದ ಸಾಲ ಸೌಲಭ್ಯಗಳಿಂದ ವಂಚಿತರಾದ ವರ್ಗಗಳ ಬಗ್ಗೆಯೇ ಚರ್ಚಿಸಲಾಗಿದೆ. ಮಹಿಳಾ ಸ್ವಸಹಾಯ ಗುಂಪುಗಳು ಸಂಘಟಿತ ಹಣಕಾಸು ಮೂಲದಿಂದ ಭದ್ರತೆಗಳನ್ನು ನೀಡಲಾಗದ, ಸಾಮಾಜಿಕ, ಆರ್ಥಿಕವಾಗಿ ಹಿಂದುಳಿದ ಜಾತಿಗಳ ಮಹಿಳೆಯರು ವಿಶೇಷವಾಗಿ ಕೂಲಿ ಕಾರ್ಮಿಕ ಮಹಿಳೆಯರು ಸ್ವಸಹಾಯ ಗುಂಪುಗಳನ್ನು ಪರ್ಯಾಯ ಸಾಲ ವ್ಯವಸ್ಥೆಯನ್ನಾಗಿರೂಪಿಸಿಕೊಂಡು ಕಡಿಮೆ ಬಡ್ಡಿ ದರದಲ್ಲಿ ಗುಂಪುಗಳಿಂದ ಆಂತರಿಕವಾಗಿ ಯಾವುದೇ ಭದ್ರತೆಗಳನ್ನು ನೀಡದೆ ಸಹ ಸದಸ್ಯರ ಸಮ್ಮತಿ ಮೇರೆಗೆ ಸಾಲಗಳನ್ನು ಪಡೆದುಕೊಳ್ಳತ್ತಾರೆ. ಈ ಗುಂಪುಗಳಿಗೆ ತಮ್ಮ ಗುಂಪಿನ ಸಾಮಾಜಿಕ ಒಗ್ಗಟ್ಟಿನ (ಗ್ರೂಪ್ ಸೋಶಿಯಲ್ ಕೊಲ್ಯಾಟರಲ್) ಭದ್ರತೆಯ ಮೇರೆಗೆ ಬ್ಯಾಂಕುಗಳಿಂದ ಸಹಾಯ ಧನ ಆಧಾರಿತ ಸಾಲಗಳನ್ನು ಪಡೆಯುತ್ತಾರೆ. ಈ ಗುಂಪುಗಳು ಆಂತರಿಕ ಉಳಿತಾಯ ಮತ್ತು ಸಾಲಗಳಿಗೆ ಸೀಮಿತವಾಗದೆ ಹಲವು ಅಭಿವೃದ್ಧಿ ಚಟುವಟಿಕೆಗಳನ್ನು ನಡೆಸುತ್ತಿವೆ. ಇದರಿಂದ ಗುಂಪುಗಳು ತಮ್ಮ ಪ್ರಾಥಮಿಕ ಪರಿಕಲ್ಪನೆಯ ಮತ್ತು ವ್ಯಾಪ್ತಿಗಿಂತ ಆಚೆ ಕಾರ್ಯನಿರ್ವಹಿಸುತ್ತವೆ.[೭] ಮಹಿಳಾ ಸ್ವಸಹಾಯ ಗುಂಪುಗಳ ವಿಧಾನವನ್ನು ಪರ್ಯಾಯ ಅಭಿವೃದ್ಧಿ ಮಾದರಿಯೆಂದೇ ಕರೆಯಲಾಗುತ್ತದೆ. ಈ ರೀತಿಯ ಜನಾಧಾರಿತ ಅಭಿವೃದ್ಧಿ ಪ್ರಯತ್ನವು ಹೊಸ ಅಭಿವೃದ್ಧಿಯ ಸಿದ್ಧಾಂತವಾಗಿದೆ. ಇಂತಹ ಪ್ರಯತ್ನದಲ್ಲಿ ತಮ್ಮ ಅಗತ್ಯ ಮತ್ತು ಆಯ್ಕೆಗಳನ್ನ ನಿರ್ಧರಿಸುವಲ್ಲಿ ಜನರ ಪಾಲ್ಗೋಳ್ಳುವಿಕೆ ಇರುತ್ತದೆ. ಈ ರೀತಿಯ ಸಾಮೂಹಿಕ ಪಾಲ್ಗೋಳ್ಳುವಿಕೆ ಮತ್ತು ನಿರ್ಧಾರದಿಂದ ಅಭಿವೃದ್ಧಿಯು ಸಾಧ್ಯವಾಗುತ್ತದೆ.[೮] ಈ ರೀತಿಯ ಪ್ರಯತ್ನದಿಂದ ಅಭಿವೃದ್ಧಿಯ ಲಾಭ ಎಲ್ಲರನ್ನೂ ತಲುಪಬಹುದು. ಆಗ ಮಾತ್ರ ಇದು ಎಲ್ಲರನ್ನು ಒಳಗೊಂಡ ಅಭಿವೃದ್ಧಿಯಾಗುತ್ತದೆ. ಇಷ್ಟೆಲ್ಲದರ ನಡುವೆ ಮಹಿಳಾ ಸ್ವಸಹಾಯ ಗುಂಪುಗಳು ತಮ್ಮದೇ ಆದ ಸಮಸ್ಯೆಗಳನ್ನು ಹೊಂದಿವೆ. ಸುಸ್ಥಿರತೆ ಈ ಗುಂಪುಗಳ ಬಹು ದೊಡ್ಡ ಸವಾಲು. ಸ್ವತಂತ್ರವಾಗಿ ದೀರ್ಘಕಾಲದವರೆಗೆ ಈ ಗುಂಪುಗಳು ಕಾರ್ಯ ನಿರ್ವಹಿಸಬಲ್ಲವೇ? ಅದೇ ರೀತಿ ಈ ಗುಂಪುಗಳು ಬ್ಯಾಂಕುಗಳಿಂದ ಮತ್ತು ಸರ್ಕಾರಿ ಯೋಜನೆಗಳನ್ನು – ಸಹಾಯಧನವನ್ನು ಪಡೆಯುವುದಕ್ಕಾಗಿರಚನೆಗೊಂಡಿರುತ್ತವೆ. (ಅಸಂಘಟಿತ ಸಾಲ ಮೂಲದ ಪಟ್ಟಿ ಗಮನಿಸಿ, ಪು. ೧೪೦)

## ಅಸಂಘಟಿತ ಸಾಲ ವ್ಯವಸ್ಥೆ

- ಲೇವಾದೇವಿಗಳು
  - ಗ್ರಾಮೀಣ ಭಾಗ
    - ವೃತ್ತಿಪರರು
    - ವೃತ್ತಿಪರರಲ್ಲದವರು
      - ಭೂಮಾಲೀಕರು
      - ವ್ಯಾಪಾರಸ್ಥರು
      - ಹೂಡುವಳಿ
      - ಪೂರ್ಯಕೆದಾರರು
      - ಇತರರು
        - ಪುರೋಹಿತರು
        - ನಿವೃತ್ತಿವೇತನ ಪಡೆಯುವವರು
        - ಸ್ನೇಹಿತರು
        - ಸಂಬಂಧಿಕರು
  - ನಗರ ಪ್ರದೇಶ
    - ಪೌಲ್‌ಬ್ರೋಕರ್ಸ್
    - ವ್ಯಾಪಾರಸ್ಥರು
    - ಮರ್ಚೆಂಟ್‌ಗಳು
    - ಇತರೇ
- ಸ್ಥಳೀಯ ಬ್ಯಾಂಕುಗಳು
  - ವೃತ್ತಿಪರರು
    - ಮುಲ್ತಾನರು
    - ಶ್ರಾಫರು
    - ಚೆಟ್ಟಿಮಾರ್ಸ್
    - ಮಾರ್ವಾಡಿ
  - ವೃತ್ತಿಪರರಲ್ಲದವರು
    - ವ್ಯಾಪಾರಸ್ಥರು
    - ಮಾರ್ವಾಡಿಗಳು
    - ಕಮರ್ಷಿಯಲ್ ಏಜೆಂಟ್‌ಗಳು
    - ಇತರೆ
- ನಿಧಿಗಳು
- ಚಿಟ್‌ಗಳು
- ಮಹಿಳಾ ಸ್ವಸಹಾಯಗುಂಪುಗಳು

ಮೂಲ: ದಿನೇಶ್ ಚಂದ್ರ (1993). *ರೂರಲ್ ಕ್ರೆಡಿಟ್: ರೋಲ್ ಆಫ್ ಇನ್‌ಫಾರ್ಮಲ್ ಸೆಕ್ಟರ್*, ಸೆಗ್ಮೆಂಟ್ ಬುಕ್ಸ್, ನ್ಯೂಡೆಲ್ಲಿ, ಪು.33

## ೩.೩. ಸಂಘಟಿತ ಸಾಲ ಮೂಲ

ಸಾರ್ವಜನಿಕ ಬ್ಯಾಂಕುಗಳು, ಖಾಸಗಿ ಬ್ಯಾಂಕು, ಹಣಕಾಸು ಸಂಸ್ಥೆಗಳು, ಸರ್ಕಾರ ಇತರೆ ಮಾನ್ಯತೆ ಪಡೆದ ಸಂಘ ಸಂಸ್ಥೆ, ಕೇಂದ್ರ ಬ್ಯಾಂಕುಗಳ ನಿಯಮ ನಿರ್ದೇಶನದಂತೆ ಹಣಕಾಸು ಪೂರೈಸುವ ವಲಯವೇ ಸಂಘಟಿತ ಹಣಕಾಸು. ಈ ವಲಯ ಗ್ರಾಮೀಣ ಪ್ರದೇಶದಲ್ಲಿ ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳಿಗೆ ಹಣಕಾಸನ್ನು ಪೂರೈಸುತ್ತದೆ. ಕೃಷಿಗೆ ಪೂರೈಕೆಯಾಗುವ ಹಣಕಾಸಿನಲ್ಲಿ ಎರಡು ವಿಧಗಳಿವೆ. ಒಂದು ಭಾಗವನ್ನು ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗಳೆಂದು ಮತ್ತು ಇನ್ನೊಂದು ಭಾಗವನ್ನು ದಿರ್ಘಾವಧಿ ಸಾಲವೆಂದು ಕರೆಯಲಾಗುತ್ತದೆ. ಈ ಅಧ್ಯಯನದಲ್ಲಿ ಸಾರ್ವಜನಿಕ ಬ್ಯಾಂಕುಗಳು ಪೂರೈಸುವ ಕೃಷಿ ಸಾಲಕ್ಕೆ ಆಧ್ಯತೆ ನೀಡಲಾಗಿದೆ. ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲ ನೀಡುವ ಸಂಸ್ಥೆಗಳೆಂದರೆ ಸಹಕಾರಿ ಸಂಘಗಳು, ವಾಣಿಜ್ಯ ಬ್ಯಾಂಕುಗಳು, ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಮತ್ತು ಸರ್ಕಾರ. ಸಹಕಾರ ಸಾಲ ವ್ಯವಸ್ಥೆಯು ಬೇರೆ ಬೇರೆ ಸಂಸ್ಥೆಗಳನ್ನು ಒಳಗೊಂಡಿದೆ. ರಾಜ್ಯ ಮಟ್ಟದಲ್ಲಿ ರಾಜ್ಯ ಸಹಕಾರಿ ಬ್ಯಾಂಕುಗಳು, ಜಿಲ್ಲಾಮಟ್ಟದಲ್ಲಿ ಕೇಂದ್ರ ಸಹಕಾರಿ ಸಂಸ್ಥೆಗಳು ಹಾಗೂ ಗ್ರಾಮ ಮಟ್ಟದಲ್ಲಿ ಪ್ರಾಥಮಿಕ ಕೃಷಿ ಸಾಲ ಸಂಸ್ಥೆಗಳು. ಅದೇ ರೀತಿ ವಾಣಿಜ್ಯ ಬ್ಯಾಂಕು ಮತ್ತು ಪ್ರಾದೇಶಿಕ ಬ್ಯಾಂಕುಗಳು ಸಹ ಅಲ್ಫಾವಧಿ ಮತ್ತು ದೀರ್ಘಾವಧಿ ಸಾಲ ಪೂರೈಸುತ್ತವೆ. ವಾಣಿಜ್ಯ ಬ್ಯಾಂಕುಗಳು ತಮ್ಮ ಶಾಖೆಗಳ ಮೂಲಕ ನೇರವಾಗಿ ರೈತರಿಗೆ ಸಾಲ ಒದಗಿಸುತ್ತವೆ. ಹಾಗೆಯೇ ಪ್ರಾಥಮಿಕ ಕೃಷಿ ಸಾಲ ಸಹಕಾರ ಸಂಘಗಳ ಮುಲಕವೂ ವಿತರಿಸುತ್ತವೆ. ವಾಣಿಜ್ಯ ಬ್ಯಾಂಕು ಪ್ರಾಯೋಜಿತ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಗ್ರಾಮೀಣ ಪ್ರದೇಶದಲ್ಲಿ ಸಾಲ ಒದಗಿಸುವ ಕಾರ್ಯದಲ್ಲಿ ತೊಡಗಿವೆ. ಪ್ರಾದೇಶಿಕ ಬ್ಯಾಂಕುಗಳು ಸಹ ನೇರವಾಗಿ ಅಥವಾ ಪ್ರಾಥಮಿಕ ಸಹಕಾರ ಸಂಘಗಳ ಅಥವಾ ರೈತ ಸೇವಾ ಕೇಂದ್ರಗಳ ಮೂಲಕ ಸಾಲ ಒದಗಿಸುತ್ತವೆ. ಅಲ್ಪಾವಧಿ ಸಾಲಗಳು ೧ ವರ್ಷದವರೆಗೂ ಇರುತ್ತವೆ. ಪ್ರಸ್ತುತ ಕಿಸಾನ್ ಕ್ರೆಡಿಟ್ ಕಾರ್ಡ್ (ಕೆಸಿಸಿ) ಯೋಜನೆ ಮೂಲಕ ಈ ರೀತಿಯ ಸಾಲಗಳನ್ನು ನೀಡಲಾಗುತ್ತಿದೆ. ಭೂ ಅಭಿವೃದ್ಧಿ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕುಗಳು ಹಾಗೂ ಪ್ರಾದೇಶಿಕ ಬ್ಯಾಂಕಗಳು ದೀರ್ಘಾವಧಿ ಸಾಲಗಳನ್ನು ನೀಡುತ್ತದೆ. ದೀರ್ಘಾವಧಿ ಸಾಲಗಳು ೩ ವರ್ಷ, ೧೦ ರಿಂದ ೧೫ ವರ್ಷಗಳ ಅವಧಿಯವರೆಗೂ ಇರುತ್ತದೆ. ಸಹಕಾರಿ ಬ್ಯಾಂಕುಗಳು ರಾಜ್ಯ ಮಟ್ಟದಲ್ಲಿ ರಾಜ್ಯ ಸಹಕಾರ ಭೂ ಅಭಿವೃದ್ಧಿ ಬ್ಯಾಂಕುಗಳು, ಜಿಲ್ಲಾ ಮಟ್ಟದಲ್ಲಿ ಕೇಂದ್ರ ಸಹಕಾರ ಭೂ ಅಭಿವೃದ್ಧಿ ಬ್ಯಾಂಕುಗಳು ತಮ್ಮ ಶಾಖೆಗಳ ಮೂಲಕ ರೈತರಿಗೆ ದೀರ್ಘಾವಧಿ ಸಾಲಗಳನ್ನು ವಿತರಿಸುತ್ತವೆ. ಕೆಲವೊಮ್ಮೆ ಪ್ರಾಥಮಿಕ ಕೃಷಿ ಸಾಲ ಸಂಸ್ಥೆಗಳ ಮೂಲಕ ಸಹ ಸಾಲ ವಿತರಿಸಲಾಗುತ್ತದೆ. ವಾಣಿಜ್ಯ ಬ್ಯಾಂಕುಗಳು ನೇರವಾಗಿ ರೈತರಿಗೆ ಕೃಷಿ ಚಟುವಟಿಕೆಗಳಿಗೆ ದೀರ್ಘಾವಧಿ ಸಾಲಗಳನ್ನು ನೀಡುತ್ತವೆ. ನಬಾರ್ಡ್ ರಾಷ್ಟ್ರ ಮಟ್ಟದ ಪ್ರಮುಖ ಸಂಸ್ಥೆ. ಇದು ಮೇಲ್ಮಟ್ಟದ ಅಥವಾ ಅಪೆಕ್ಸ್ ಮಟ್ಟದ ಬ್ಯಾಂಕಾಗಿದ್ದು ಗ್ರಾಮೀಣ ಹಣಕಾಸು ವ್ಯವಸ್ಥೆಯ ಮೇಲ್ವಿಚಾರಕ ಬ್ಯಾಂಕಾಗಿದೆ. ಆರ್.ಬಿ.ಐ ರಾಷ್ಟ್ರದ ಅತ್ಯುನ್ನತ ಹಣಕಾಸು ಸಂಸ್ಥೆ. ಗ್ರಾಮೀಣ ಸಾಲ ಪೂರೈಕೆಗೆ ಸಂಬಂಧಿಸಿದ ಆರ್.ಬಿ.ಐ ನ ಸಾಲ ನೀತಿ,

ನಿಯಮ, ನಿರ್ಣಯಗಳು ಹಾಗೂ ಸಾಲ ಯೋಜನೆಗಳನ್ನು ನಬಾರ್ಡ್ ಅನುಷ್ಠಾನಗೊಳಿಸುತ್ತದೆ. ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳಿಗೆ ಪ್ರೋತ್ಸಾಹ ಆ ಮೂಲಕ ಗ್ರಾಮೀಣ ಅಭಿವೃದ್ಧಿ ಸಾಧಿಸುವುದು ನಬಾರ್ಡ್‌ನ ಪ್ರಮುಖ ಕಾರ್ಯ. ಈ ಉದ್ದೇಶ ಸಾಧಿಸಲು ನಬಾರ್ಡ್ ಗ್ರಾಮೀಣ ಪ್ರದೇಶಗಳಲ್ಲಿ ಕಾರ್ಯ ನಿರ್ವಹಿಸುವ ಹಣಕಾಸು ಸಂಸ್ಥೆಗಳಿಗೆ ನೆರವನ್ನು ನೀಡುತ್ತದೆ. ಈ ಸಂಸ್ಥೆಗಳಿಗೆ ಹಣಕಾಸನ್ನು ಪೂರೈಸುವುದು ನಬಾರ್ಡ್ ಮುಖ್ಯ ಜವಾಬ್ದಾರಿ. ನಬಾರ್ಡ್ ಸ್ಥಾಪನೆಗೆ ಮುಂಚೆ ಆರ್.ಬಿ.ಐ ಈ ಕಾರ್ಯವನ್ನು ನಿರ್ವಹಿಸುತ್ತಿತ್ತು. ಕೃಷಿ ಕ್ಷೇತ್ರದ ಹಣಕಾಸು ಅಗತ್ಯಗಳನ್ನು ಪೂರೈಸಿ ಕೃಷಿ ಬೆಳವಣಿಗೆಯನ್ನು ಆದ್ಯತೆಯಾಗಿಟ್ಟುಕೊಂಡು ಕಾರ್ಯ ನಿರ್ವಹಿಸಲು ಆರ್.ಬಿ.ಐ ಪ್ರತ್ಯೇಕ ಸಂಸ್ಥೆಗಳನ್ನು ಸ್ಥಾಪಿಸಿತು. ಈ ಸಂಸ್ಥೆಗಳು ರಾಷ್ಟ್ರಮಟ್ಟದ ಸಂಸ್ಥೆಗಳಾಗಿದ್ದವು. ಅವುಗಳೆಂದರೆ ಕೃಷಿ ಹಣಕಾಸು ನಿಗಮ ನಿಯಮಿತ ಹಾಗೂ ಕೃಷಿ ಪುನರ್ ಹಣಕಾಸು ಮತ್ತು ಅಭಿವೃದ್ಧಿ ನಿಗಮ. ಈ ಎರಡೂ ಸಂಸ್ಥೆಗಳನ್ನು ೧೯೮೨ರಲ್ಲಿ ಸ್ಥಾಪನೆಯಾದ ನಬಾರ್ಡ್‌ನಲ್ಲಿ ವಿಲೀನಗೊಳಿಸಲಾಯಿತು. ಆನಂತರ ನಬಾರ್ಡ್ ಗ್ರಾಮೀಣ ಪ್ರದೇಶಗಳ ಸಮಗ್ರ ಅಭಿವೃದ್ಧಿಯನ್ನ ನಿರ್ವಹಿಸತೊಡಗಿತು. ಕೃಷಿ ಮತ್ತ ಕೃಷಿಯೇತರ ಚಟುವಟಿಕೆಗಳಿಗೆ ಅಗತ್ಯವಾದ ಸಂಪನ್ಮೂಲಗಳನ್ನು ಪ್ರಸ್ತುತವಾಗಿ ನಬಾರ್ಡ್ ಪೂರೈಸುತ್ತಿದೆ. ಇದು ಸಹಕಾರ ಸಂಸ್ಥೆಗಳು ಹಾಗೂ ವಾಣಿಜ್ಯ ಬ್ಯಾಂಕುಗಳಿಗೆ ಹೂಡಿಕೆಯ ಸಾಲವಾಗಿ ಹಣಕಾಸನ್ನು ಪೂರೈಸುತ್ತದೆ. ನಬಾರ್ಡ್ ಹೀಗೆ ಗ್ರಾಮೀಣ ಹಣಕಾಸಿಗೆ ಸಂಬಂಧಿಸಿದ ನೀತಿ, ನಿಯಮ ಮತ್ತು ಯೋಜನೆಗಳನ್ನು ರೂಪಿಸುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಹಣಕಾಸು ಸೇವೆಗಳನ್ನು ಒದಗಿಸುವ ಕಾರ್ಯದಲ್ಲಿ ತೊಡಗಿರುವ ಸಂಸ್ಥೆಗಳ ಸಂಪನ್ಮೂಲಗಳ ತಳಹದಿ ಅಥವಾ ಆರ್ಥಿಕ ಭದ್ರತೆಯನ್ನ ನಬಾರ್ಡ್ ಸುಧಾರಿಸುತ್ತದೆ. ಹಾಗೆಯೇ ಈ ಸಂಸ್ಥೆಗಳ ಸಾಂಸ್ಥಿಕ ಅಭಿವೃದ್ಧಿಗೆ ನಬಾರ್ಡ್ ನೆರವಾಗುತ್ತದೆ. ಅದೇ ರೀತಿ ಸ್ವಸಹಾಯ ಗುಂಪುಗಳರಚನೆ, ಪರಿಕಲ್ಪನೆಯನ್ನು ಪ್ರೋತ್ಸಹಿಸುತ್ತಿದ್ದು ಕಿರು ಹಣಕಾಸು ವ್ಯವಸ್ಥೆಯ ಅಭಿವೃದ್ಧಿಗೆ ಬೇಕಾದ ಅಗತ್ಯ ನೆರವುಗಳನ್ನು ನೀಡುತ್ತದೆ.

**ಸಹಕಾರ ಸಂಸ್ಥೆಗಳು**

ವಾಣಿಜ್ಯ ಬ್ಯಾಂಕುಗಳು ಗ್ರಾಮೀಣ ಹಣಕಾಸು ವ್ಯವಸ್ಥೆ ಅಸ್ತಿತ್ವಕ್ಕೆ ಬರುವ ಮುಂಚೆ ಸಹಕಾರಿ ಸಂಸ್ಥೆಗಳು ಗ್ರಾಮೀಣ ಪ್ರದೇಶಗಳಲ್ಲಿ ಕೃಷಿಗೆ ಸಾಲ ಪೂರೈಸುವ ವ್ಯವಹಾರದಲ್ಲಿ ಏಕಸಾಮ್ಯ ಸಾಧಿಸಿದ್ದವು. ಸ್ವಾತಂತ್ರ್ಯಪೂರ್ವದಲ್ಲಿ ರೈತರು ತಮ್ಮ ಕೃಷಿಗೆ ಅಗತ್ಯವಿದ್ದ ಸಾಲಗಳಿಗೆ ಸಹಕಾರ ಸಂಸ್ಥೆಗಳನ್ನು ಅವಲಂಭಿಸಿದ್ದರು. ಇದಕ್ಕೆ ಕಾರಣ ಸಂಘಟಿತ ಮೂಲದಿಂದ ಕಡಿಮೆ ಬಡ್ಡಿದರಕ್ಕೆ ಸಾಲ ದೊರೆಯುತ್ತವೆ ಎಂಬ ಭಾವನೆ. ರೈತರ ಅಲ್ಪಾವಧಿ ಸಾಲ ಅಗತ್ಯಗಳಿಗೆ ಸಂಬಂಧಿಸಿದಂತೆ ಸಹಕಾರ ಸಾಲ ಸಂಸ್ಥೆಗಳು ಗ್ರಾಮೀಣ ಅಸಂಘಟಿತ ಹಣಕಾಸು ಮಾರುಕಟ್ಟೆ ವ್ಯವಹಾರವು ನಿಂತು ಮಟ್ಟಿಗೆ ಕಾರ್ಯ ನಿರ್ವಹಿಸುತ್ತವೆ ಎಂದು ಭಾವಿಸಲಾಗಿತ್ತು. ಭಾರತಲ್ಲಿ ಸಹಕಾರ ಸಂಸ್ಥೆಗಳು ರೈತರಿಗೆ ಅಲ್ಪಾವಧಿ, ಮಧ್ಯಮಾವಧಿ, ದೀರ್ಘಾವಧಿ ಸಾಲಗಳನ್ನು ಪೂರೈಸುವ ವ್ಯವಸ್ಥೆಯಾಗಿ ಅಸ್ತಿತ್ವಕ್ಕೆ ಬಂದಿತು. ದೇಶದ ಬಹುತೇಕ ಭಾಗಗಳಲ್ಲಿ ಅಲ್ಪಾವಧಿ ಸಾಲ ನೀಡಿಕೆ ವ್ಯವಸ್ಥೆಯು

ಇಂದಿಗೂ ಅಸ್ತಿತ್ವದಲ್ಲಿದೆ. ಇದು ಮೂರು ಹಂತದ ಒಕ್ಕೂಟ ವ್ಯವಸ್ಥೆ. ತಳಮಟ್ಟದಲ್ಲಿ ಪ್ರಾಥಮಿಕ ಕೃಷಿ ಸಾಲ ಸಂಸ್ಥೆಗಳು ಹಳ್ಳಿಗಳನ್ನು ತಮ್ಮ ಕಾರ್ಯಾವ್ಯಾಪ್ತಿಯ ಕ್ಷೇತ್ರವನ್ನಾಗಿ ಮಾಡಿಕೊಂಡು ಕಾರ್ಯಾನಿರ್ವಹಿಸುತ್ತವೆ. ಜಿಲ್ಲಾ ಮಟ್ಟದಲ್ಲಿ ಕೇಂದ್ರ ಸಹಕಾರ ಬ್ಯಾಂಕುಗಳು, ಅಪೆಕ್ಸ್ ಅಥವಾ ಮೇಲ್ಮಟ್ಟದಲ್ಲಿ ರಾಜ್ಯ ಸಹಕಾರಿ ಬ್ಯಾಂಕುಗಳು ಕಾರ್ಯ ನಿರ್ವಹಿಸುತ್ತವೆ. ಈ ಹಿಂದೆ ದೀರ್ಘಾವಧಿ ಸಹಕಾರ ಸಾಲ ವ್ಯವಸ್ಥೆಯಲ್ಲಿ ಎರಡು ಹಂತಗಳಿದ್ದವು. ಒಂದು ರಾಜ್ಯ ಮಟ್ಟದ್ದು, ಇನ್ನೊಂದು ತಾಲ್ಲೂಕು ಮಟ್ಟದ್ದು. ಹಲವು ರಾಜ್ಯಗಳು ರಾಜ್ಯ ಮಟ್ಟದಲ್ಲಿ ಬ್ಯಾಂಕೊಂದನ್ನು ಜಾರಿಗೆ ತಂದು ಆ ಬ್ಯಾಂಕಿನ ಶಾಖೆಗಳನ್ನು ತಾಲ್ಲೂಕು ಮತ್ತು ಜಿಲ್ಲಾ ಮಟ್ಟದಲ್ಲಿ ತೆರೆದವು. ಹೀಗೆ ದೀರ್ಘಾವಧಿ ಸಹಕಾರ ಸಾಲ ವ್ಯವಸ್ಥೆಯು ಒಂದು ಒಕ್ಕೂಟ ವ್ಯವಸ್ಥೆಯಾಗಿದೆ. ಭಾರತದಾದ್ಯಂತ ಅದರಲ್ಲೂ ದಕ್ಷಿಣ ಮತ್ತು ಪೂರ್ವ ರಾಜ್ಯಗಳಲ್ಲಿ ಈ ವ್ಯವಸ್ಥೆಯು ಹೆಚ್ಚು ಜಾರಿಯಲ್ಲಿದೆ. ಈ ಸಂಸ್ಥೆಗಳನ್ನು ರಾಜ್ಯ ಭೂ ಅಭಿವೃದ್ಧಿ ಬ್ಯಾಂಕುಗಳು ಮತ್ತು ಪ್ರಾಥಮಿಕ ಅಭಿವೃದ್ಧಿ ಬ್ಯಾಂಕುಗಳೆಂದು ಗುರುತಿಸಲಾಗುತ್ತದೆ. ರಾಜ್ಯ ಮಟ್ಟದಲ್ಲಿ ರಾಜ್ಯ ಸಹಕಾರಿ ಕೃಷಿ ಮತ್ತು ಗ್ರಾಮೀಣ ಬ್ಯಾಂಕುಗಳಿದ್ದು ಜಿಲ್ಲಾಮಟ್ಟದಲ್ಲಿ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿಯ ಶಾಖೆಗಳು ಕಾರ್ಯ ನಿರ್ವಹಿಸುತ್ತಿದ್ದು ಇವುಗಳು ರಾಜ್ಯ ಮತ್ತು ಪ್ರಾಥಮಿಕ ಅಂದರೆ ತಾಲ್ಲೂಕು ಮಟ್ಟದ ಬ್ಯಾಂಕುಗಳ ನಡುವೆ ಸಮನ್ವಯ ಸಂಸ್ಥೆಗಳಾಗಿ ಕಾರ್ಯನಿರ್ವಹಿಸುತ್ತಿವೆ.

ಪ್ರಾಥಮಿಕ ಸಹಕಾರಿ ಸಾಲ ಸಂಘಗಳು ಸಹಕಾರ ವ್ಯವಸ್ಥೆಯ ತಳಮಟ್ಟದ ಸಂಸ್ಥೆಗಳು. ಈ ಸಂಸ್ಥೆಗಳು ರೈತರಿಗೆ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗಳನ್ನು ಒದಗಿಸುತ್ತವೆ. ಈ ಸಂಸ್ಥೆಗಳು ತಳಮಟ್ಟದಲ್ಲಿ ಸಾಲ ಸೌಲಭ್ಯದ ಪೂರೈಕೆಯೊಂದಿಗೆ ಬಿತ್ತನೆ ಬೀಜ,ರಸಗೊಬ್ಬರ, ಕ್ರಿಮಿನಾಶಕಗಳನ್ನು ಪೂರೈಸುತ್ತವೆ. ಹಾಗೆಯೇ ಕೃಷಿ ಉಪಕರಣಗಳನ್ನು ಸಹ ಒದಗಿಸುತ್ತವೆ. ಹಾಗೆಯೇ ಕೃಷಿ ಉತ್ಪನ್ನಗಳ ಮಾರಾಟ ಚಟುವಟಿಯಲ್ಲಿ ಸಹ ತೊಡಗಿವೆ. ಕರ್ನಾಟಕದಲ್ಲಿ ಈ ಸಂಸ್ಥೆಗಳು ಠೇವಣಿಗಳನ್ನು ಸ್ವೀಕರಿಸುವ ವ್ಯವಹಾರವನ್ನು ಸಹ ನಿರ್ವಹಿಸುತ್ತಿವೆ. ಇವುಗಳು ನೀಡುವ ಅಲ್ಪಾವಧಿ ಮತ್ತು ಮದ್ಯಮಾಧಿ ಸಾಲಗಳ ಅವಧಿ ಒಂದು ವರ್ಷದಿಂದ ಮೂರು ವರ್ಷದವರೆಗೂ ಇರುತ್ತದೆ. ಈ ಸಂಸ್ಥೆಗಳು ನೀಡುವ ಸಾಲ ಸೀಮಿತವಾಗಿರುತ್ತವೆ. ಕರ್ನಾಟಕದ ಈ ಸಂಸ್ಥೆಗಳು ನೀಡುವ ಸಾಲ ಮಿತಿ ಮೊದಲೆ ನಿರ್ಧಾರವಾಗಿರುತ್ತದೆ. ಈ ಸಂಸ್ಥೆಗಳು ಪ್ರಸ್ತುತವಾಗಿ ಶೂನ್ಯ ಬಡ್ಡಿದರದಲ್ಲಿ ರೈತರಿಗೆ ಸಾಲ ನೀಡುತ್ತವೆ. ಎರಡು ಲಕ್ಷದವರೆಗೂ ಕಿಸಾನ್ ಕ್ರೆಡಿಟ್ ಕಾರ್ಡುಗಳ ಅಡಿಯಲ್ಲಿ ವಿತರಿಸುವ ಅಲ್ಪಾವಧಿಯ ಒಂದು ವರ್ಷದ ಬೆಳೆ ಸಾಲಕ್ಕೆ ಯಾವುದೇ ಬಡ್ಡಿ ವಿಧಿಸುವುದಿಲ್ಲ. ಎರಡು ಲಕ್ಷ ಮೇಲ್ಪಟ್ಟು ಮೂರು ಲಕ್ಷದ ವರೆಗೂ ಅಲ್ಪಾವಧಿ ಸಾಲಕ್ಕೆ ಶೇಕಡಾ ೧ರಷ್ಟು ಮಾತ್ರ ಬಡ್ಡಿ ವಿಧಿಸಲಾಗುತ್ತದೆ.[೯] ಈ ಹಿಂದೆ ಈ ಸಂಸ್ಥೆಗಳು ಅಲ್ಪಾವಧಿ ಸಾಲಗಳಿಗೆ ಶೇಕಡಾ ೧೧.೫ ರಿಂದ ೧೬ ವರೆಗೂ ಬಡ್ಡಿ ವಿಧಿಸುತ್ತಿದ್ದವು. ಹಾಗೂ ಮಧ್ಯಮಾವಧಿ ಸಾಲಗಳಿಗೆ ಶೇಕಡಾ ೧೦ ರಿಂದ ೧೨ರವರೆಗೂ ಬಡ್ಡಿ ದರವಿತ್ತು. ಪ್ರಸ್ತುತ ಶೂನ್ಯ ಬಡ್ಡಿದರದಲ್ಲಿ

ಸಹಕಾರಿ ಸಂಸ್ಥೆಗಳ ಮೂಲಕ ಪೂರೈಸಲ್ಪಡುವ ಸಾಲ ರಾಜಕೀಯ ಪ್ರೇರಿತವೆನ್ನಬಹುದು. ಕೃಷಿ ಕ್ಷೇತ್ರಕ್ಕೆ ಸಾಕಷ್ಟು ಪ್ರಮಾಣದಲ್ಲಿ ಸಾಲ ನೀಡುವ ಉದ್ದೇಶವಿದ್ದರೂ ಸಾಲ ಸೌಲಭ್ಯ ಪಡೆಯುವ ಜನರ ಸಾಮರ್ಥ್ಯ ವೃದ್ಧಿಸುವ ಮತ್ತು ದುರ್ಬಲ ವರ್ಗಗಳ ಸಾಲ ಪಡೆಯುವ ಅರ್ಹತೆಯನ್ನು ಸುಧಾರಿಸದೆ ಅಧಿಕ ಪ್ರಮಾಣದಲ್ಲಿ ಕೃಷಿ ಕ್ಷೇತ್ರಕ್ಕೆ ಶೂನ್ಯ ಬಡ್ಡಿಗೆ ಸಾಲ ನೀಡುವುದರ ಪ್ರಯೋಜನ ಪಡೆಯುವವರು ಪ್ರಬಲ ವರ್ಗಗಳು ಮಾತ್ರ ಎನ್ನಬಹುದು. ೧೯೮೬ರಲ್ಲಿ ೮೭ ಸಾವಿರ ಸಹಕಾರ ಸಂಸ್ಥೆಗಳಿದ್ದು ೪೯೭ ಕೋಟಿಯಷ್ಟು ಸಾಲ ಪೂರೈಸಿದ್ದವು. ಪ್ರಸ್ತುತ ಸಹಕಾರ ಸಂಘಗಳ ಸಂಖ್ಯೆ ೧.೧೦.೦೦೦ ಇದೆ.[೨೦]

ಕೇಂದ್ರ ಸಹಕಾರ ಬ್ಯಾಂಕುಗಳು ಜಿಲ್ಲಾಮಟ್ಟದಲ್ಲಿ ಕಾರ್ಯನಿರ್ವಹಿಸುತ್ತವೆ. ಜಿಲ್ಲಾ ಕೇಂದ್ರಗಳಲ್ಲಿ ಇವುಗಳ ಕಛೇರಿಗಳಿರುತ್ತವೆ. ಪಟ್ಟಣಗಳಲ್ಲಿ ಕೆಲವು ಕಛೇರಿಗಳಿರುತ್ತವೆ. ಇವು ರಾಜ್ಯ ಸಹಕಾರಿ ಬ್ಯಾಂಕುಗಳು ಮತ್ತು ಪ್ರಾಥಮಿಕ ಸಹಕಾರಿ ಸಾಲ ಸಂಸ್ಥೆಗಳ ನಡುವೆ ಸಂಪರ್ಕ ಕೊಂಡಿಯಾಗಿ ಕಾರ್ಯನಿರ್ವಹಿಸುತ್ತವೆ. ಸಹಕಾರ ಸಂಸ್ಥೆಯ ಸಾಲದ ಯಶಸ್ಸು ಈ ಬ್ಯಾಂಕುಗಳ ಹಣಕಾಸು ಸಾಮರ್ಥ್ಯವನ್ನು ಅವಲಂಭಿಸಿವೆ. ಕೇಂದ್ರ ಸಹಕಾರ ಬ್ಯಾಂಕುಗಳು ಸಮತೋಲನ ಕೇಂದ್ರಗಳಾಗಿ ಕಾರ್ಯಾನಿರ್ವಸಿಸುತ್ತವೆ. ಇವು ಪ್ರಾಥಮಿಕ ಸಹಕಾರ ಸಂಸ್ಥೆಗಳ ಬಂಡವಾಳದ ಕೊರತೆಗಳನ್ನು ಸರಿದೂಗಿಸುತ್ತವೆ. ಈ ಬ್ಯಾಂಕುಗಳು ಪ್ರಾಥಮಿಕ ಸಹಕಾರ ಸಂಸ್ಥೆಗಳಿಗೆ ಉತ್ಪಾದನೆ, ಮಾರುಕಟ್ಟೆ ಮತ್ತು ಸಂಸ್ಕರಣ ಚಟುವಟಿಕೆಗಳಿಗೆ ಸಾಲ ನೀಡುತ್ತವೆ. ಈ ಬ್ಯಾಂಕುಗಳು ಬಿತ್ತನೆ ಬೀಜ,ರಸಗೊಬ್ಬರ ಪೂರೈಕೆ, ಕೃಷಿ ಸಲಕರಣೆಗಳನ್ನು ಒದಗಿಸುವ ಕಾರ್ಯವನ್ನು ಸಹ ನಿರ್ವಹಿಸುತ್ತವೆ. ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳ ಕಾರ್ಯ ಚಟುವಟಿಕೆಗಳನ್ನು ಕೇಂದ್ರ ಮಟ್ಟದ ಸಹಕಾರ ಬ್ಯಾಂಕುಗಳು ಮೇಲುಸ್ತುವಾರಿ ಮಾಡುತ್ತವೆ. ಆ ಮೂಲಕ ಪ್ರಾಥಮಿಕ ಸಹಕಾರ ಸಂಸ್ಥೆಗಳ ನಾಯಕತ್ವ ವಹಿಸುತ್ತವೆ. ಎಲ್ಲಾ ಪ್ರಾಥಮಿಕ ಸಹಕಾರ ಸಾಲ ಸಂಸ್ಥೆಗಳು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಸದಸ್ಯ ಪಡೆಯಬಹುದು. ಸದಸ್ಯತ್ವ ಮುಕ್ತವಾಗಿರುತ್ತದೆ. ಆದರೆ ವಯಕ್ತಿಕವಾಗಿ ವ್ಯಕ್ತಿಗಳಿಗೆ ಸದಸ್ಯತ್ವ ನೀಡುವುದಿಲ್ಲ. ಜಿಲ್ಲೆಗೆ ಒಂದು ಕೇಂದ್ರ ಸಹಕಾರ ಬ್ಯಾಂಕು ಇರುತ್ತದೆ. ಈ ಬ್ಯಾಂಕು ಪ್ರಾಥಮಿಕ ಸಹಕಾರ ಸಾಲ ಸಂಸ್ಥೆಗಳ ಆಸ್ತಿ ಪರಿಶೀಲನೆ ನಡೆಸುತ್ತವೆ. ಪ್ರಾಥಮಿಕ ಸಹಕಾರ ಸಾಲ ಸಂಸ್ಥೆಗಳ ಸಾಲ ಪ್ರಸ್ತಾವನೆಗಳನ್ನು ಅನುಮೊದನೆ ಮಾಡುವ ಹಾಗೂ ಸಂಪನ್ಮೂಲ ನೀಡುವ ಹೊಣೆಗಾರಿಕೆ ಸಹ ಹೊಂದಿರುತ್ತವೆ. ೧೯೮೮-೮೯ರ ಅವಧಿಗೆ ಕೇಂದ್ರ ಸಹಕಾರ ಸಂಸ್ಥೆಗಳು ೭೯೦೩ ಕೋಟಿಯಷ್ಟನ್ನು ಸಾಲ ನೀಡಿದ್ದವು. ೨೦೧೦-೧೧ರಲ್ಲಿ ಕರ್ನಾಟಕ ರಾಜ್ಯ ೨೧ ಜಿಲ್ಲೆಗಳಲ್ಲಿ ೪೯೫.೮೬ ಲಕ್ಷದಷ್ಟು ಸಾಲ ನೀಡುವ ಗುರಿಯನ್ನು ಹೊಂದಲಾಗಿತ್ತು. ೪೪೯೨.೨೩ ಲಕ್ಷಗಳಷ್ಟು ಸಾಲವನ್ನು ಕೃಷಿ ಕ್ಷೇತ್ರಕ್ಕೆ ನೀಡಲಾಗಿದೆ. ಅಂದರೆ ಶೇಕಡಾ ೧೦೪ ಸಾಧನೆ ಮಾಡಲಾಗಿದೆ. ಅಂದರೆ ಸಾಲ ನೀಡಿಕೆಯಲ್ಲಿ ಕರ್ನಾಟಕ ರಾಜ್ಯದಲ್ಲಿ ರಾಜ್ಯ ಸಹಕಾರ ಬ್ಯಾಂಕು ಅಥವಾ ಅಪೆಕ್ಸ್ ಬ್ಯಾಂಕು ಗುರಿ ಮೀರಿದ ಸಾಧನೆ ಮಾಡಲಾಗಿದೆ. ಅಪೆಕ್ಸ್ ಸಹಕಾರ ಬ್ಯಾಂಕು ಕೃಷಿ ಮತ್ತು ಕೃಷಿ

ಪೂರಕ ಕ್ಷೇತ್ರಗಳಿಗೆ ಹಣಕಾಸು ಪೂರೈಕೆ ಮಾಡುವುದು ಇದರ ಬಹು ದೊಡ್ಡ ಉದ್ದೇಶ. ರಾಯಚೂರು ಜಿಲ್ಲೆಯಲ್ಲಿ ಒಟ್ಟು ೧೧ ಕೇಂದ್ರ ಸಹಕಾರ ಬ್ಯಾಂಕುಗಳಿವೆ. ೧೧ ಕೇಂದ್ರ ಸಹಕಾರ ಬ್ಯಾಂಕುಗಳು ಜಿಲ್ಲೆಯಾದ್ಯಂತ ೨೦೧೦-೧೧ರ ಅವಧಿಗೆ ೧೪೦೦ ಲಕ್ಷದಷ್ಟು ಸಾಲ ನೀಡುವ ಯೋಜನೆರೂಪಿಸಿದ್ದವು. ೧೦೨೦ರಷ್ಟು ಲಕ್ಷಗಳನ್ನು ಸಾಲ ನೀಡಲಾಗಿದೆ. ಅದೇ ರೀತಿ ೨೦೧೧-೧೨ರ ಅವಧಿಗೆ ೧೧೮೫೦ ಲಕ್ಷಗಳನ್ನು ಸಾಲ ನೀಡುವ ಯೋಜನೆ ರೂಪಿಸಿ ೧೫೩೭೨ ಲಕ್ಷಗಳಷ್ಟು ಸಾಲ ನೀಡಲಾಗಿದೆ. ಅದೇ ರೀತಿ ೨೦೧೨-೧೩ರ ಅವಧಿಯಲ್ಲಿ ೧೧೮೩೨ರಷ್ಟು ಲಕ್ಷಗಳ ಬೆಳೆ ಸಾಲ ನೀಡುವ ಯೋಜನೆರೂಪಿಸಲಾಗಿತ್ತು. ಇದರಲ್ಲಿ ೧೮೨೭೮ ಲಕ್ಷಗಳನ್ನು ಸಾಲದರೂಪದಲ್ಲಿ ನೀಡಲಾಗಿದೆ. ರಾಜ್ಯ ಸಹಕಾರಿ ಬ್ಯಾಂಕುಗಳು ಸಹಕಾರ ಸಾಲ ವ್ಯವಸ್ಥೆಯ ಅಪೆಕ್ಸ್ ಮಟ್ಟದ-ರಾಜ್ಯ ಮಟ್ಟದ ಸಂಸ್ಥೆ. ಈ ಬ್ಯಾಂಕುಗಳು ಕೇಂದ್ರ ಸಹಕಾರ ಬ್ಯಾಕುಗಳು ಮತ್ತು ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾಗಳ ನಡುವೆ ಸಂಪರ್ಕ ಮಾದ್ಯಮವಾಗಿ ಕಾರ್ಯ ನಿರ್ವಸುತ್ತದೆ. ಕೇಂದ್ರ ಸಹಕಾರಿ ಬ್ಯಾಂಕುಗಳ ಬ್ಯಾಂಕ್ ಆಗಿ ರಾಜ್ಯ ಸಹಕಾರ ಬ್ಯಾಂಕು ಕಾರ್ಯನಿರ್ವಹಿಸುತ್ತದೆ. ಈ ಬ್ಯಾಂಕುಗಳು ಸಹಕಾರಿ ಸಾಲ ಸಂಸ್ಥೆಗಳನ್ನು ದೇಶದ ಹಣ ಮಾರುಕಟ್ಟೆಯೊಂದಿಗೆ ಸಂಪರ್ಕ ಕಲ್ಪಿಸುತ್ತವೆ. ಅಪೆಕ್ಸ್ ಸಂಸ್ಥೆಗಳು ಕೇಂದ್ರ ಸಹಕಾರ ಬ್ಯಾಂಕುಗಳಿಗೆ ಅಗತ್ಯವಾದ ಮಾರ್ಗದರ್ಶನ ಮತ್ತು ಮೇಲ್ವಿಚಾರಣೆ ನಡೆಸುತ್ತವೆ. ನೋಂದಾಯಿತ ಸಹಕಾರ ಸಂಸ್ಥೆಗಳ ಸಮತೋಲನ ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತದೆ. ಸದಸ್ಯ ಸಂಸ್ಥೆಗಳಿಗೆ ಸಾಲ, ಓವರ್ ಡ್ರಾಫ್ಟ್, ಮುಂಗಡಗಳ ರೂಪದಲ್ಲಿ ಹಣಕಾಸು ಒದಗಿಸಲು ಅಗತ್ಯವಾದ ಸಂಪನ್ಮೂಲವನ್ನು ಠೇವಣಿಗಳ, ಸಾಲಗಳ, ಅನುದಾನಗಳ, ದಾನಗಳ, ಸಹಾಯಧನಗಳರೂಪದಲ್ಲಿ ಸಂಗ್ರಹಿಸುತ್ತದೆ. ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕುಗಳು ಮತ್ತು ಪ್ರಾಥಮಿಕ ಸಹಕಾರ ಸಂಸ್ಥೆಗಳ ನಡುವೆ ಸಮನ್ವಯ ತರುತ್ತದೆ. ಆ ಮೂಲಕ ಅವುಗಳಿಗೆ ಬೇಕಾದ ಹಣಕಾಸು ನೆರವನ್ನು ನೀಡುತ್ತದೆ. ಪ್ರಾಥಮಿಕ ಸಹಕಾರ ಸಂಸ್ಥೆಗಳು ಮತ್ತು ಜಿಲ್ಲಾ ಕೇಂದ್ರ ಬ್ಯಾಂಕುಗಳ ಕಾರ್ಯಗಳನ್ನು ಪರಿಶೀಲಿಸಿ ಸೂಕ್ತ ಸಲಹೆಗಳನ್ನು ನೀಡುತ್ತವೆ. ಕೇಂದ್ರ ಮತ್ತು ರಾಜ್ಯ ಸಾಲಪತ್ರಗಳನ್ನು ಖರೀದಿಸುವ ಪ್ರಕ್ರಿಯೆಯಲ್ಲಿ ಏಜೆಂಟ್‌ಗಳ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತದೆ. ಬ್ಯಾಂಕಿನ ಅಭಿವೃದ್ಧಿಯ ಸುಗಮ ಕಾರ್ಯಕ್ಕೆ ಅಗತ್ಯವಾದ ಸ್ಥಿರ ಮತ್ತು ಚರಾಸ್ತಿ ಖರೀದಿಸುವ ಕಾರ್ಯ ನಿರ್ವಹಿಸುತ್ತವೆ. ಸಹಕಾರ ಕ್ಷೇತ್ರದ ಬೆಳವಣಿಗೆಗೆ ಸಂಬಂಧಿಸಿದ ಸಂಶೋಧನೆ ಕೈಗೊಳ್ಳುತ್ತವೆ ಮತ್ತು ಸಂಶೋಧನೆಯನ್ನು ಪ್ರೋತ್ಸಾಹಿಸುತ್ತವೆ. ಸಹಕಾರಿ ತತ್ವಕ್ಕೆ ಅನುಗುಣವಾಗಿ ಸದಸ್ಯ ಸಂಸ್ಥೆಗಳ ಕಾರ್‍ಯನಿರ್ವಹಿಸುವಂತೆ ಆಸಕ್ತಿ ಮೂಡಿಸಲು ಪ್ರಯತಿಸುತ್ತದೆ. ಎಲ್ಲಾ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳಿಗೆ ಸದಸ್ಯತ್ವ ಮುಕ್ತವಾಗಿದೆ. ರಾಜ್ಯ ಸರ್ಕಾರಕ್ಕೆ ಸಾಲ ಪತ್ರ ಮತ್ತು ಚೆಕ್‌ಗಳನ್ನು ನೀಡುವ ಮೂಲಕ ನೆರವಾಗುತ್ತದೆ. ರಾಜ್ಯ ಸರ್ಕಾರ ಸಹ ರಾಜ್ಯ ಸಹಕಾರ ಬ್ಯಾಂಕುಗಳ ಷೇರುಗಳನ್ನು ಖರೀದಿಸುತ್ತವೆ. ಅಪೆಕ್ಸ್ ಬ್ಯಾಂಕು ಕೇಂದ್ರ ಸಹಕಾರ ಬ್ಯಾಂಕುಗಳಿಗೆ ಅಲ್ಪಾವಧಿ ಮತ್ತು ಮಧ್ಯಮಾವಧಿ ಸಾಲಗಳನ್ನು ನೀಡುತ್ತದೆ. ಮಧ್ಯಮಾವಧಿ ಸಾಲಗಳಿಗೆ ವಿಧಿಸುವ ಬಡ್ಡಿ ಸ್ವಲ್ಪ ಹೆಚ್ಚಾಗಿರುತ್ತದೆ.

**ಭೂ ಅಭಿವೃದ್ಧಿ ಬ್ಯಾಂಕುಗಳು**

ಭೂ ಅಡಮಾನ ಬ್ಯಾಂಕುಗಳು ಭೂಮಿಯ ಭದ್ರತೆಯ ಆಧಾರದ ಮೇಲೆ ಸಾಲ ನೀಡುತ್ತವೆ. ರಾಜ್ಯ ಸರ್ಕಾರದ ಭರವಸೆಯ ಮೇಲೆ ಅಡಮಾನ ಇಟ್ಟ ಭೂಮಿಯನ್ನು ಬಳಸಿಕೊಂಡು ನಿಧಿ ಸಂಪನ್ಮೂಲ ಸಂಗ್ರಹಿಸುತ್ತದೆ. ಭೂ ಅಡಮಾನ ಬ್ಯಾಂಕುಗಳು ೧೯೪೯ರ ಬ್ಯಾಂಕುಗಳ ನಿಯಂತ್ರಣ ಕಾಯ್ದೆಯ ವ್ಯಾಪ್ತಿಗೆ ಬರುದಿರುವುದರಿಂದ ಈ ಬ್ಯಾಂಕುಗಳು ಠೇವಣಿ ಸಂಗ್ರಹಿಸುವುದಿಲ್ಲ. ಇವು ನಿರ್ಧಿಷ್ಟವಾಗಿ ಬ್ಯಾಂಕುಗಳಲ್ಲದಿದ್ದರೂ ಬ್ಯಾಂಕು ಎಂಬ ಪದ ಬಳಕೆ ಮಾಡಲಾಗಿದೆ. ಈ ಸಂಸ್ಥೆಗಳು ಸಹಕಾರ ಸಂಘಗಳ ಕಾಯ್ದೆಯಡಿ ಕಾನೂನುಬದ್ಧವಾಗಿ ನೊಂದಾಯಿಸಲ್ಪಟ್ಟಿರುತ್ತವೆ ಹಾಗೂ ಸಹಕಾರ ಸಾಲ ಸಂಸ್ಥೆಗಳೆಂದು ಕರೆಯಲ್ಪಡುತ್ತವೆ.[೧೧]

ಐತಿಹಾಸಿಕವಾಗಿ ೧೯೨೦ರಲ್ಲಿ ಪ್ರಥಮ ಭೂ ಅಡಮಾನ ಬ್ಯಾಂಕು ಸಂಯುಕ್ತ ಪಂಜಾಬ್‌ನಲ್ಲಿ ಸ್ಥಾಪನೆಯಾಯಿತು. ಎರಡನೇ ಬ್ಯಾಂಕು ಸಂಯುಕ್ತ ಬೆಂಗಾಲ್‌ನಲ್ಲಿ ೧೯೨೪ರಲ್ಲಿ ಅಸ್ಥಿತ್ವಕ್ಕೆ ಬಂದಿತು. ನಂತರ ಮದ್ರಾಸ್ ಪ್ರೆಸಿಡೆನ್ಸಿನಲ್ಲಿ ೨, ತಮಿಳನಾಡಿನ ಕಾಂಚೀವರಂನಲ್ಲಿ ಒಂದು, ಆಂದ್ರಪ್ರದೇಶ್‌ನಲ್ಲಿ ಒಂದು ಬ್ಯಾಂಕ್ ಅಸ್ಥಿತ್ವಕ್ಕೆ ಬಂದಿತು. ೧೯೨೬ರಲ್ಲಿ ಸಹಕಾರ ಸಂಘಗಳ ನಿಬಂದಕರು ಭೂ ಅಡಮಾನ ಬ್ಯಾಂಕುಗಳನ್ನು ಸಂಘಟಿಸುವ ಠರಾವನ್ನು ಹೊರಡಿಸಿದರು. ಈ ಠರಾವನ್ನು ಕೃಷಿಗೆ ಸಂಬಂಧಿಸಿದ ರಾಯಲ್ ಕಮಿಷನ್ ಮತ್ತು ಭಾರತೀಯ ಕೇಂದ್ರ ಬ್ಯಾಂಕು ಪರಿಶೀಲನಾ ಸಮಿತಿಗಳು ಈ ಠರಾವನ್ನು ಅನುಮೋದಿಸಿದವು. ಭೂ ಅಡಮಾನ ಬ್ಯಾಂಕುಗಳ ಪ್ರಗತಿ ಪ್ರಾರಂಭದಲ್ಲಿ ನಿಧಾನ ಗತಿಯಲ್ಲಿತ್ತು. ಸಂಪನ್ಮೂಲ ಅಥವಾ ನಿಧಿ ಸಂಗ್ರಹದಲ್ಲಿ ಏಕರೂಪತೆ ಇಲ್ಲದಿದ್ದದ್ದು ಕೆಲವು ಸಮಸ್ಯೆಗಳು ಸೃಷ್ಟಿಯಾದವು. ರಾಯಲ್ ಕಮೀಷನ್ ಸಹಾ ನಿಧಿ ಸಂಗ್ರಹದ ಬಗ್ಗೆ ಕೆಲವು ಗಂಭೀರ ಟೀಕೆಗಳನ್ನು ಮಾಡಿತು. ಭೂ ಅಡಮಾನ ಬ್ಯಾಂಕುಗಳು ನೀಡುತ್ತಿದ್ದ ಡಿಬೆಂಚರ್ ಕೇಂದ್ರೀಕರಿಸುವ ಅಗತ್ಯತೆಯ ನಿಟ್ಟಿನಲ್ಲಿ ಮದ್ರಾಸ್ ಸರ್ಕಾರ ಮುಂದಾಳತ್ವ ವಹಿಸಿ ಸಾಲ ಪತ್ರಗಳ ಹಂಚಿಕೆಯನ್ನು ಕೇಂದ್ರೀಕರಿಸಿ ಪ್ರಾಥಮಿಕ ಭೂ ಅಡಮಾನ ಬ್ಯಾಂಕು ಮತ್ತು ಕೇಂದ್ರ ಭೂ ಅಡಮಾನ ಬ್ಯಾಂಕುಗಳ ನಡುವೆ ಸಮನ್ವಯ ತರುವ ಕಾರ್ಯ ಪ್ರಾರಂಭಿಸಿತು. ಇದೇ ಕ್ರಮವನ್ನು ಬಾಂಬೇ ಮತ್ತು ಕೊಚ್ಚಿನ್‌ನಲ್ಲೂ ಕ್ರಮವಾಗಿ ೧೯೩೫–೧೯೩೮ ಅನುಸರಿಸಲಾಯಿತು. ಬಾಂಬೇ, ಮದ್ರಾಸ್ ಮತ್ತು ಮೈಸೂರುಗಳು ಎರಡು ವಿಧದ ಭೂ ಅಭಿವೃದ್ಧಿ ಒಕ್ಕೂಟ ವ್ಯವಸ್ಥೆಯನ್ನು ಜಾರಿಗೆ ತಂದವು.

೧೯೩೦ರ ದಶಕದ ಮುಗ್ಗಟ್ಟಿನ ಅವಧಿಯಲ್ಲಿ ಭೂ ಅಡಮಾನ ಬ್ಯಾಂಕುಗಳ ಸಾಲಗಳಿಗೆ ಬೇಡಿಕೆ ಉತ್ತಮವಾಗಿತ್ತು. ಅನಂತರ ಸಂಭವಿಸಿದ ಎರಡನೇ ಪ್ರಪಂಚ ಯುದ್ದ ನಂತರ ಬೆಲೆ ಹೆಚ್ಚಳ, ಆಹಾರ ಉತ್ಪಾದನೆ ಕುಸಿತ ಇತ್ಯಾದಿಳಿಂದ ಬ್ಯಾಂಕುಗಳ ಸಾಲಗಳಿಗೆ ಬೇಡಿಕೆ ಕುಸಿದು ಇವುಗಳ ಸಾಧನೆ ಕುಸಿಯಿತು. ಈ ಪರಿಸ್ಥಿತಿ ನೀತಿರೂಪಿಸುವವರು ಪರ್ಯಾಯ ಸಂಸ್ಥೆಗಳ ಬಗ್ಗೆ ಯೋಚಿಸುವಂತೆ ಮಾಡಿತು. ಗಾಡ್ಗಿಲ್ (೧೯೪೫) ಸಮಿತಿ ಎಲ್ಲಾ ರೀತಿಯ ಸಾಲಗಳನ್ನು ಕೃಷಿ

ಕ್ಷೇತ್ರಕ್ಕೆ ನೀಡಲು ಅನುಕೂಲವಾಗುವಂತೆ ಸ್ವಾಯುಕ್ತ ಪ್ರಾಂತಿಯ ಕೃಷಿ ಸಾಲ ನಿಗಮವನ್ನು ಸ್ಥಾಪಿಸುವಂತೆ ಸಲಹೆ ನೀಡಿತು. ನಾನಾವತಿ ಗ್ರಾಮೀಣ ಸಾಲ ಪರಿಶೀಲನ ಸಮಿತಿ ಹಾಗೂ ಅಖಿಲ ಭಾರತ ಗ್ರಾಮೀಣ ಸಾಲ ಸಮೀಕ್ಷೆ ಸಮಿತಿ ಭೂ ಅಡಮಾನಗಳ ಬ್ಯಾಂಕುಗಳನ್ನು ಸಂಸ್ಥೆಗಳೆಂದು ಅಭಿಪ್ರಾಯ ಪಟ್ಟು ಅವುಗಳನ್ನು ಬಲಪಡಿಸುವಂತೆ ಸಲಹೆ ನೀಡಿತು. ಈ ಸಮಿತಿ ರಾಜ್ಯಮಟ್ಟದಲ್ಲಿ ಕೇಂದ್ರ ಭೂ ಅಭಿವೃದ್ಧಿ ಬ್ಯಾಂಕು ಮತ್ತು ತಾಲ್ಲೂಕು ಮಟ್ಟದಲ್ಲಿ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು. ಹೀಗೆ ೨ ವಿಧದ ಒಕ್ಕೂಟ ವ್ಯವಸ್ಥೆಯನ್ನುರಚಿಸುವಂತೆ ಸಲಹೆ ನೀಡಿತು. ಆರ್‌ಬಿಐ ೧೯೫೬ರಲ್ಲಿ ಧೀರ್ಘಾವಧಿ ಚಟುವಟಿಕೆಗಳ ದೃಷ್ಠಿಯಿಂದ ರಾಷ್ಟ್ರೀಯ ಕೃಷಿ ಸಾಲ ನಿಧಿಯನ್ನು ಸ್ಥಾಪಿಸಿತು. ಈ ನಿಧಿಯಿಂದ ಸಹಕಾರ ಸಂಘಗಳ ಮೂಲ ಬಂಡವಾಳವನ್ನು ಹೆಚ್ಚಿಸಲು ಅನುಕೂಲವಾಗುವಂತೆ ರಾಜ್ಯಗಳಿಗೆ ಸಾಲ ಮತ್ತು ಮುಂಗಡಗಳನ್ನು ನೀಡಲು ಉದ್ದೇಶಿಸಿತು.[೨]

೧೯೮೮-೮೯ ಜೂನ್ ಅವಧಿಯಲ್ಲಿ ರಾಜ್ಯ ಮಟ್ಟದ ಸಹಕಾರಿ ಸಂಸ್ಥೆಗಳು ೧೦೧೫ ಕೋಟಿಗಳಷ್ಟು ಸಾಲವನ್ನು ನೀಡಿದ್ದವು. ದೀರ್ಘಾವಧಿ ಸಾಲಗಳಿಗೆ ಸಂಬಂಧಿಸಿದಂತೆ ಗ್ರಾಮ ಮಟ್ಟದ ಸಹಕಾರ ಸಾಲ ಸಂಸ್ಥೆಗಳು ದೀರ್ಘಾವಧಿ ಸಾಲ ನೀಡಲು ಸಾಧ್ಯವಿಲ್ಲವಾದ್ದರಿಂದ ಪ್ರತ್ಯೇಕ ಸಂಸ್ಥೆಗಳ ಅಗತ್ಯವಿತ್ತು. ಹೀಗೆ ಭೂ ಅಭಿವೃದ್ಧಿ ಬ್ಯಾಂಕುಗಳು ಕೃಷಿ ಕ್ಷೇತ್ರಕ್ಕೆ ದಿರ್ಘಾವಧಿ ಸಾಲ ನೀಡುವ ಸಂಸ್ಥೆಗಳಾಗಿ ಉದಯಿಸಿದವು. ಹಿಂದೆ ಈ ಬ್ಯಾಂಕಗಳನ್ನು ಭೂ ಮಾರ್ಟ್‌ಗೇಜ್ ಬ್ಯಾಂಕುಗಳೆಂದು ಕರೆಯಾಲಾಗಿತ್ತು. ಭೂಮಿಯನ್ನು ಅಡವಾಗಿಟ್ಟುಕೊಂಡು ಸಾಲಗಳನ್ನು ನೀಡುತ್ತಿದ್ದರಿಂದ ಈ ಹೆಸರು ಬಂದಿತು. ಅಭಿವೃದ್ಧಿ ಮತ್ತು ಬದಲಾವಣೆ ಪ್ರಕ್ರಿಯೆಯಲ್ಲಿ ಮಾರ್ಟ್‌ಗೇಜ್ ಬ್ಯಾಂಕುಗಳನ್ನು ಭೂ ಅಭಿವೃದ್ಧಿ ಬ್ಯಾಂಕುಗಳೆಂದು ಹೆಸರಿಸಲಾಯಿತು. ಭೂ ಅಭಿವೃದ್ಧಿ ಬ್ಯಾಂಕುಗಳು ರೈತರಿಗೆ ನೇರವಾಗಿ ಸಾಲ ಒದಗಿಸುವುವು ಅಥವಾ ತಮ್ಮ ಶಾಖೆಗಳ ಜಾಲದ ಮೂಲಕ ನೀಡುವುವು. ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳನ್ನು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳು ಎನ್ನಲಾಗುತ್ತದೆ. ಈ ಬ್ಯಾಂಕುಗಳು ರೈತರಿಗೆ ದೀರ್ಘಾವಧಿ ಸಾಲಗಳನ್ನು ಒದಗಿಸುತ್ತವೆ. ಈ ಸಂಸ್ಥೆಗಳು ನೀಡುವ ಸಾಲದ ಉದ್ದೇಶಗಳೆಂದರೆ, ಹಳೇ ಸಾಲಗಳ ಮರುಪಾವತಿ, ಭೂಮಿ ಖರೀದಿ ಮತ್ತು ಅಭಿವೃದ್ಧಿ ಹಾಗೂ ಕೃಷಿ ಉತ್ಪಾದನೆಯಲ್ಲಿ ಬಳಕೆಯಾಗುವ ದುಬಾರಿ ಮೌಲ್ಯದ ಯಂತ್ರೋಪಕರಣಗಳ ಖರೀದಿ ಇತ್ಯಾದಿ. ಈ ಬ್ಯಾಂಕುಗಳು ರೈತರ ಹಿತಾಸಕ್ತಿಗಳನ್ನು ಕಾಪಾಡುತ್ತವೆ ಇನ್ನಲಾಗುತ್ತದೆ. ಖಾಸಗಿ ಲೇವಾದೇವಿಗಳಿಂದ ರೈತರನ್ನು ರಕ್ಷಿಸುತ್ತವೆ ಎನ್ನಲಾಗಿತ್ತು. ಆದರೆ ಪ್ರಸ್ತುತ ಈ ಬ್ಯಾಂಕುಗಳು ಅನೇಕ ಸಮಸ್ಯೆಗಳ ಸುಳಿಯಲ್ಲಿ ಸಿಲುಕಿವೆ. ಸಾಲ ಬಾಕಿ ಬೆಟ್ಟದಷ್ಟು ಬೆಳೆದಿದೆ. ಸಾಲ ಮರು ಪಾವತಿಯಾಗದೆ ಈ ಬ್ಯಾಂಕು ದೀವಾಳಿ ಹಂತ ತಲುಪಿವೆ. ಪ್ರಾರಂಭದಲ್ಲಿದ್ದ ಇವರ ಆಕರ್ಷಣೆ ಈಗ ಇಲ್ಲದ್ದಾಗಿದೆ. ಅಸ್ತಿತ್ವವೇ ಸಮಸ್ಯೆಯಾಗಿದೆ. ಪ್ರಾರಂಭದಲ್ಲಿ ಸೃಷ್ಟಿಸಿದ ನಂಬಿಕೆ, ವಿಶ್ವಾಸಗಳನ್ನು ಈ ಬ್ಯಾಂಕುಗಳು ಇಂದು

ಉಳಿಸಿಕೊಂಡಿಲ್ಲ. ದೀರ್ಘಾವಧಿ ಸಾಲಗಳ ಅಗತ್ಯ ಇರುವ ರೈತರು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಸದಸ್ಯತ್ವ ಪಡೆಯಬೇಕು. ಸಹಕಾರ ಸಂಸ್ಥೆಗಳು ಸಹ ಈ ಬ್ಯಾಂಕುಗಳ ಸದಸ್ಯತ್ವ ಪಡೆಯಬಹುದು. ಸರ್ಕಾರ ಮತ್ತು ಇತರೇ ಸಂಸ್ಥೆಗಳ ನೆರವಿನ ನಡುವೆಯೂ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳ ಹಣಕಾಸು ಸ್ಥಿತಿ ಶೋಚನೀಯವಾಗಿದೆ. ೧೯೬೯ರ ಗ್ರಾಮೀಣ ಸಾಲ ಪರಿಶೀಲನೆ ಸಮಿತಿಯು ಸರ್ಕಾರ ಈ ಬ್ಯಾಂಕುಗಳ ಪಾಲು ಬಂಡವಾಳಕ್ಕೆ ಕೊಡುಗೆ ನೀಡಬೇಕೆಂದು ಶಿಫಾರಸ್ಸು ಮಾಡಿತ್ತು. ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳ ಸಾಲ ನೀಡುವ ನಿಯಮ ಸಂಕೀರ್ಣವಾಗಿದೆ. ಈ ಬ್ಯಾಂಕುಗಳ ಸಾಲ ನೀಡುವ ಅವಧಿ ೧೦ ರಿಂದ ೧೫ ವರ್ಷಗಳಷ್ಟಿರುತ್ತದೆ. ಸಾಲ ಪಡೆಯಲು ಅನೇಕ ದಾಖಲಾತಿಗಳನ್ನು ನೀಡಬೇಕಾಗುತ್ತದೆ. ಈ ಬ್ಯಾಂಕಿನ ಅಧಿಕಾರಿಗಳು ತುಂಬಾ ಕಠಿಣ ಮನೋಭಾವ ಹೊಂದಿದ್ದವರಾಗಿದ್ದು ದಾಖಲಾತಿ ಪಡೆಯುವಲ್ಲಿ ಕಠಿಣ ನಿಲುವನ್ನು ಹೊಂದಿರುತ್ತಾರೆ. ಭೂ ಮಾಲೀಕತ್ವ ಅವರ ಹೆಸರಲ್ಲಿರಬೇಕು. ಸಾಲದ ಅರ್ಜಿಯೊಂದಿಗೆ ಲಗತ್ತಿಸಬೇಕಾದ ಮುಖ್ಯ ದಾಖಲೆಗಳು ಮತ್ತು ಅವುಗಳ ವಿವರವನ್ನು ಇಲ್ಲಿ ನೀಡಲಾಗಿದೆ. ಈ ದಾಖಲಾತಿ ಮೂಲಕ ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕುಗಳ ಸಾಲ ಬಿಡುಗಡೆಯ ಪ್ರಕ್ರಿಯೆ, ನಿಯಮಗಳ ಪದ್ಧತಿಗಳ ಬಗ್ಗೆ ತಿಳಿದು ಕೊಳ್ಳಬಹುದು ಹಾಗೆಯೇ ಅದರ ಸಂಕೀರ್ಣತೆ ತಿಳಿದುಬರುತ್ತದೆ. ಈ ಬ್ಯಾಂಕುಗಳು ವಿಧಿಸುವ ಬಡ್ಡಿದರ ರಾಜ್ಯದಿಂದ ರಾಜ್ಯಕ್ಕೆ ಭಿನ್ನವಾಗಿರುತ್ತದೆ. ಈ ಬ್ಯಾಂಕುಗಳ ದೀರ್ಘಾವಧಿ ಸಾಲದ ಅವಧಿ ೨೦ ವರ್ಷಗಳವರೆಗೂ ಹೋಗಬಹುದು. ಬಡ್ಡಿದರ ಶೇಕಡಾ ೧ ರಿಂದ ೨ರವರೆಗೂ ಲಾಭದ ಅಥವಾ ಆಡಳಿತ ನಿರ್ವಹಣೆ ಅಥವಾ ಸೇವೆ ಒದಗಿಸಿದ್ದಕ್ಕೆ ವಿಧಿಸುವ ಖರ್ಚಿನ ರೂಪದಲ್ಲಿ ಇಟ್ಟುಕೊಳ್ಳುತ್ತವೆ. ಈ ಕಾರಣದಿಂದಲೇ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕುಗಳಿಗಿಂತ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳ ಬಡ್ಡಿದರ ಜಾಸ್ತಿ.

ರಾಜ್ಯ ಭೂ ಅಭಿವೃದ್ಧಿ ಬ್ಯಾಂಕು ದೀರ್ಘಾವಧಿ ಸಾಲ ಸಹಕಾರ ವ್ಯವಸ್ಥೆಯಲ್ಲಿ ಅಪೆಕ್ಸ್ ಮಟ್ಟದ ಬ್ಯಾಂಕು ಆಗಿದೆ. ಈ ಅಪೆಕ್ಸ್ ಮಟ್ಟದ ಬ್ಯಾಂಕು ತನ್ನ ಶಾಖೆಗಳು ಹಾಗೂ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳ ಮೂಲಕ ರೈತರಿಗೆ ಸಾಲವನ್ನು ಒದಗಿಸುತ್ತದೆ. ದೀರ್ಘಾವಧಿ ಸಾಲಗಳನ್ನು ಭೂ ಅಭಿವೃದ್ಧಿ ಬ್ಯಾಂಕು ವಯಕ್ತಿಕವಾಗಿ ರೈತರಿಗೆ ಹಾಗೂ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳಿಗೆ ನೀಡುತ್ತದೆ. ಈ ಬ್ಯಾಂಕುಗಳು ಹಣದ ಮಾರುಕಟ್ಟೆಯಲ್ಲಿ ದೀರ್ಘಾವಧಿ ಬಾಂಡುಗಳನ್ನು ಮಾರಾಟ ಮಾಡುತ್ತವೆ. ಈ ಬ್ಯಾಂಕುಗಳು ರಿಸರ್ವ ಬ್ಯಾಂಕ್ ಆಫ್ ಇಂಡಿಯಾ, ಸರ್ಕಾರ ಮತ್ತು ದೀರ್ಘಾವಧಿ ಬ್ಯಾಂಕಿಂಗ್ ಚಟುವಟಿಕೆಗಳ ನಡುವೆ ಸಂಪರ್ಕ ಮಾಧ್ಯಮವಾಗಿ ಕಾರ್ಯನಿರ್ವಹಿಸುತ್ತದೆ. ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳಿಗೆ ಅಗತ್ಯವಾದ ಮಾರ್ಗದರ್ಶನ ನೀಡುತ್ತದೆ ಮತ್ತು ಈ ಬ್ಯಾಂಕುಗಳ ಕಾರ್ಯಾ ಚಟುವಟಿಕೆಗಳ ಮೇಲ್ವಿಚಾರಣೆ ನಡೆಸುತ್ತದೆ. ರಾಜ್ಯ ಭೂ ಅಭಿವೃದ್ಧಿ ಬ್ಯಾಂಕುಗಳು ಕೃಷಿ ಕ್ಷೇತ್ರದಲ್ಲಿ ಗ್ರಾಮೀಣ ಬಂಡವಾಳ ಸಂಚಯನವನ್ನು ಪ್ರೇರೇಪಿಸುತ್ತವೆ ಹಾಗೂ ಗ್ರಾಮೀಣ ಉಳಿತಾಯವನ್ನು ಸಂಗ್ರಹಿಸುತ್ತವೆ. ಕರ್ನಾಟಕದಲ್ಲಿ ೨೦೧೨–

೧೩ರ ಅವಧಿಗೆ ಪ್ರಾಥಮಿಕ ಸಹಕಾರಿ ಕೃಷಿ ಮತ್ತು ಗ್ರಾಮೀಣ ಬ್ಯಾಂಕು ಸಾಲ ಹಂಚಿಕೆ ೨೦೦ ಕೋಟಿಗಳು. ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳ ಸಾಲ ವಸೂಲಾತಿ ಪ್ರಮಾಣ ತುಂಬಾ ಕಡಿಮೆ ಇದೆ. ಹಲವು ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳ ಆರ್ಥಿಕ ಸ್ಥಿತಿ ತುಂಬಾ ಶೋಚನೀಯವಾಗಿದೆ. ಈ ಬ್ಯಾಂಕುಗಳ ಸಾಲ ವಸೂಲಾತಿ ಪ್ರಮಾಣದ ಆಧಾರದ ಮೇಲೆ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕು ೨೦೧೨-೧೩ರ ಸಾಲಿನ ಸಾಲ ಹಂಚಿಕೆಯನ್ನು ನಿಗದಿ ಮಾಡಿದೆ. ಅದರಂತೆ ಶೇಕಡಾ ೭೦ಕ್ಕಿಂತ ಹೆಚ್ಚಿಗೆ ವಸೂಲಾತಿ ಮಾಡಿದ ೨೩ ಜಿಲ್ಲೆಗಳ ೮೨ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳಿಗೆ ೧೧೩ ಕೋಟಿ ನಿಗದಿ ಮಾಡಲಾಗಿದೆ. ಅದೇ ರೀತಿ ಶೇಕಡಾ ೭೦ರಷ್ಟು ವಸೂಲಾತಿ ಸಾಧಿಸದ ೪೬ ಬ್ಯಾಂಕುಗಳಿಗೆ ೪೬ ಕೋಟಿಗಳಷ್ಟು ಸಾಲ ನಿಗದಿಪಡಿಸಲಾಗಿದೆ ಹಾಗೂ ಶೇಕಡಾ ೩೦ಕ್ಕಿಂತ ಕಡಿಮೆ ವಸೂಲಾತಿ ಸಾಧಿಸಿದ ೧೬ ಬ್ಯಾಂಕುಗಳಿಗೆ ಕೇವಲ ೧೫೬ ಲಕ್ಷ ಸಾಲ ನಿಗದಿಯಾಗಿದೆ. ಕರ್ನಾಟಕ ರಾಜ್ಯದಲ್ಲಿ ಒಟ್ಟು ೧೭೫ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳಿಗೆ ೨೦೧೨-೧೩ರ ಅವಧಿಗೆ ಒಟ್ಟು ೨೦೦ ಕೋಟಿ ಸಾಲ ಹಂಚಿಕೆ ನಿಗಧಿಮಾಡಲಾಗಿದೆ.[೧೨] ಕರ್ನಾಟಕ ರಾಜ್ಯ ರಾಯಚೂರು ಜಿಲ್ಲೆಯಲ್ಲಿ ೫ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳಿವೆ. ೨೦೧೦-೧೧ರ ಅವಧಿಯ ವಾರ್ಷಿಕ ಸಾಲ ಯೋಜನೆಯ ಪ್ರಕಾರ ೩೭೭.೩೬ ಲಕ್ಷಗಳಷ್ಟು ಕೃಷಿ ಸಾಲ ನೀಡುವ ಯೋಜನೆರೂಪಿಸಲಾಗಿತ್ತು. ಆದರೆ ವಿತರಿಸಿರುವ ಸಾಲ ಕೇವಲ ೧.೧೩ ಲಕ್ಷ ಮಾತ್ರ. ಅದೇ ರೀತಿ ೨೦೧೧-೧೨ರ ಅವಧಿಯಲ್ಲಿ ೮೭.೮೦ ಲಕ್ಷದಷ್ಟು ಯೋಜನೆರೂಪಿಸಿ ಕೇವಲ ೨೭.೯೮ ಲಕ್ಷ ಸಾಲ ನೀಡಲಾಗಿದೆ. ಅದೇ ರೀತಿ ೨೦೧೨-೧೩ರಲ್ಲಿ ೨೫೬ ಲಕ್ಷ ಯೋಜನೆ ರೂಪಿಸಿ ೧೫೯.೯೪ ಲಕ್ಷ ಮಾತ್ರ ವಿತರಿಸಲಾಗಿದೆ.[೧೪]

ದೇವದುರ್ಗ ತಾಲ್ಲೂಕಿನ ಭೂ ಅಭಿವೃದ್ಧಿ ಬ್ಯಾಂಕು ತಾಲ್ಲೂಕು ಕೇಂದ್ರದಲ್ಲಿ ಕಛೇರಿ ಹೊಂದಿದೆ. ಕಳೆದ ೨೦ ವರ್ಷಗಳಿಂದ ಈ ತಾಲ್ಲೂಕಿನಲ್ಲಿ ಕೃಷಿ ಮತ್ತು ಕೃಷಿಯೇತರ ಕ್ಷೇತ್ರಗಳಿಗೆ ಸುಮಾರು ೨೨೧೪ ರೈತರಿಗೆ ೫ ರಿಂದ ೬ ಕೋಟಿ ಸಾಲಗಳನ್ನು ನೀಡಿದೆ. ಇದರಲ್ಲಿ ಕೃಷಿ ಕ್ಷೇತ್ರಕ್ಕೆ ನೀಡರುವ ಸಾಳಗಳೇ ಹೆಚ್ಚು. ಕೃಷಿಯಲ್ಲಿ ಪಂಪ್ ಸೆಟ್, ತೋಟಗಾರಿಕೆ, ರೇಷ್ಮೆ ಸಲಕರಣೆ ಖರೀದಿ, ಹೈನುಗಾರಿಕೆ, ಬಾವಿ ತೋಡುವ, ಬಾವಿಯ ಆಳ ಹೆಚ್ಚಿಸುವ, ಕೊಳವೆಬಾವಿ, ಟ್ರಾಕ್ಟರ್ ಖರೀದಿ ಇತ್ಯಾದಿಗಳಿಗೆ ಸಾಲ ನೀಡಲಾಗಿದೆ. ಸಣ್ಣ, ದೊಡ್ಡ ರೈತರು ಹೆಚ್ಚಾಗಿ ಸಾಲ ಪಡೆದಿದ್ದಾರೆ. ದೊಡ್ಡ ರೈತರಲ್ಲಿ ಬಹುತೇಕರು ಪ್ರಬಲ ಲಿಂಗಾಯತ ಜನಾಂಗಕ್ಕೆ ಸೇರಿದ್ದಾರೆ. ೨೦೧೧, ೨೦೧೨ ಮತ್ತು ೨೦೧೩ ಮೂರು ವರ್ಷಗಳ ಕಾಲ ಮಳೆಯಾಗದೆ ಬರಗಾಲದ ಪರಿಸ್ಥಿತಿ ಇದ್ದು ನೀರಿನ ಮೂಲಗಳು ಬತ್ತಿ ಹೋಗಿರುವುದರಿಂದ ನೀರಾವರಿ ಸೌಲಭ್ಯಗಿಗೆ ಪಡೆದ ಸಾಲಗಳನ್ನು ಜನರು ತೀರಿಸಲಾಗಿಲ್ಲ. ಇದರೊಂದಿಗೆ ಸಾಲ ಮನ್ನಾ ಆಗುವುದೆಂದು ಸಾಲಗಳನ್ನು ಜನರು ಹಿಂದಿರುಗಿಸಿಲ್ಲ. ಹಾಗಾಗಿ ಭೂ ಅಭಿವೃದ್ಧಿ ಬ್ಯಾಂಕಿನ ಸಾಲ ವಸೂಲಾತಿ ಪ್ರಮಾಣ ಕೇವಲ ಶೇಕಡಾ ೬ರಷ್ಟಿದೆ. ಆದರೆ ಬ್ಯಾಂಕಿನ ಅಧಿಕಾರಿಗಳು ಸಾಲ ಮರುಪಾವತಿಯಾಗದಿದ್ದರೆ ಸಾಲ ಪಡೆಯಲು ನೀಡಿದ

ಭೂಮಿ ಇತರೇ ಆಧಾರಗಳನ್ನು ಸಂಸ್ಥೆಯ ಆಸ್ತಿಗಳೆಂದು ಪರಿಗಣಿಸಲಾಗುತ್ತದೆ ಎನ್ನುತ್ತಾರೆ. ಆದರೆ ಪ್ರಸ್ತುತ ರಾಜಕೀಯ ಪರಿಸ್ಥಿತಿಯಲ್ಲಿ ಸಾಲ ಸುಸ್ತಿದಾರರ ವಿರುದ್ಧ ಯಾವುದೆ ಕ್ರಮ ಕೈಗೊಳ್ಳುವುದು ಕಷ್ಟ. ರಾಯಚೂರು ಜಿಲ್ಲೆಯ ಇನ್ನೊಂದು ತಾಲ್ಲೂಕು ಸಿಂಧನೂರಿನಲ್ಲಿ ಪ್ರಾಥಮಿಕ ಸಹಕಾರ ಕೃಷಿ ಗ್ರಾಮೀಣ ಅಭಿವೃದ್ಧಿ ಬ್ಯಾಂಕು ವಿವಿಧ ಕೃಷಿಯೇತರ ಯೋಜನೆಗಳಿಗೆ ೨೦೧೨-೧೩ರ ಅವಧಿಯಲ್ಲಿ ೩೦೦ ರೈತರಿಗೆ ೧ ಕೋಟಿ ೬೫ ಲಕ್ಷ ಸಾಲ ನೀಡಲಾಗಿದೆ. ಈ ಬ್ಯಾಂಕಿನ ಸಾಲ ವಸೂಲಾತಿ ಪ್ರಮಾಣ ಶೇಕಡಾ ೫ಕ್ಕಿಂತ ಕಡಿಮೆಯಿದೆ. ಈ ಬ್ಯಾಂಕಿನ ವ್ಯವಸ್ಥಾಪಕರೊಂದಿಗೆ ನಡೆಸಿದ ಸಂದರ್ಶನ ಪ್ರಕಾರ ಸಾಲ ಪಡೆದ ರೈತರು ಸಾಲ ಮರುಪಾವತಿಸದೇ ಇರಲು ಮುಖ್ಯ ಕಾರಣವೆಂದರೆ ಸಾಲ ಮನ್ನಾ ಯೋಜನೆ. ಸರ್ಕಾರ ಸಹಕಾರ ಸಂಸ್ಥೆಗಳಲ್ಲಿ ರೈತರು ಪಡೆದ ಅಲ್ಪಾವಧಿ ಸಾಲಗಳಲ್ಲಿ ಸುಮಾರು ೨೫೦೦೦ರೂ.ವರೆಗೂ ಮನ್ನಾ ಮಾಡಿತು. ಸಾಲ ಮನ್ನಾ ರಾಜಕೀಯ ಪ್ರೇರಿತವಾಗಿರಬಹುದು. ಭೂ ಅಭಿವೃದ್ಧಿ ಬ್ಯಾಂಕುಗಳಿಂದ ಪಡೆದ ಸಾಲವನ್ನು ಸಹ ಸರ್ಕಾರ ಮನ್ನಾ ಮಾಡಬಹುದು ಎಂದುಕೊಂಡು ಭೂ ಅಭಿವೃದ್ಧಿ ಬ್ಯಾಂಕಿನ ರೈತರು ಮರುಪಾವತಿ ಮಾಡುತ್ತಿಲ್ಲ. ಇದರಿಂದ ಈ ಬ್ಯಾಂಕುಗಳ ಸಾಲ ವಸುಲಾತಿ ತುಂಬಾ ಕಡಿಮೆ ಇದೆ.[೧೫]

ರಾಯಚೂರು ಜಿಲ್ಲೆ ಕ್ರಾಸ್‌ಕಾರ್ಡ್ ಪ್ರಕಾರ ಜಲ್ಲೆಯಾದ್ಯಂತ ೨೦೧೨-೧೩ರ ಹೊತ್ತಿಗೆ ೨೯೪೧೬ ಸದಸ್ಯರಿದ್ದಾರೆ. ಕ್ರಾಸ್‌ಕಾರ್ಡ್‌ನ ಸದಸ್ಯತ್ವ ಮುಕ್ತವಾಗಿದ್ದು ಎಲ್ಲಾ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು ಸದಸ್ಯರಾಗಿರುತ್ತಾರೆ. ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಘಗಳು ಸದಸ್ಯರಾಗಬಹುದು. ವೈಯಕ್ತಿಕವಾಗಿ ಜನರು ಸದಸ್ಯರಾಗಬಹುದು. ಮೇಲೆ ತಿಳಿಸಿದ ೨೯೪೬೧ ಸದಸ್ಯರು ಭೂ ದಾಖಲಾತಿಗಳನ್ನು ತಮ್ಮ ಹೆಸರಲ್ಲಿ ಹೊಂದಿದ್ದು ದೀರ್ಘಾವಧಿ ಸಾಲ ಪಡೆಯುವ ಆಶಯದಿಂದ ಸದಸ್ಯತ್ವ ಪಡೆದಿದ್ದಾರೆ. ರಾಯಚೂರು ಜಿಲ್ಲೆಯ ಐದು ತಾಲ್ಲೂಕುಗಳಿಂದ ೧೬೨೧ ಲಕ್ಷಗಳ ಸಾಲ ನೀಡಲಾಗಿದೆ. ೨೦೧೨-೧೩ರಲ್ಲಿ ೧೪೯ ಲಕ್ಷಗಳ ಸಾಲ ವಿತರಣೆ ಮಾಡಲಾಗಿದೆ. ಕ್ಷೇತ್ರಾಧ್ಯಯನ ನಡೆಸಿದ ತಾಲ್ಲೂಕುಗಳಾದ ಸಿಂಧನೂರು ಮತ್ತು ದೇವದುರ್ಗಗಳಲ್ಲಿ ಕ್ರಮವಾಗಿ ೨೩೧ ಲಕ್ಷಗಳು ಹಾಗೂ ೩೭೩ ಲಕ್ಷಗಳನ್ನು ನೀಡಲಾಗಿದ್ದು ೨೦೧೨-೧೩ರ ಅವಧಿಯಲ್ಲಿ ಕ್ರಮವಾಗಿ ೪೬ ಲಕ್ಷ ಮತ್ತು ೪೮ ಲಕ್ಷ ಸಾಲ ವಿತರಣೆ ಮಾಡಲಾಗಿದೆ ಆದರೆ ಇಲ್ಲಿವರೆಗೂ ರಾಯಚೂರು ಜಿಲ್ಲೆಯಲ್ಲಿ ೭೮೬೧ ಸಾಲ ಖಾತೆಗಳಿಂದ ೧೪೯೭ ಲಕ್ಷಗಳು ಸಾಲಬಾಕಿಯಿದೆ.[೧೬]

ಭೂ ಅಭಿವೃದ್ಧಿ ಬ್ಯಾಂಕುಗಳಲ್ಲಿ ಲಭ್ಯವಿರುವ ಕಾರ್ಯಕ್ರಮಗಳು ಅಥವಾ ಸಾಲ ಯೋಜನೆಗಳೆಂದರೆ, ಈ ಯೋಜನೆ ಕೃಷಿ ಮತ್ತು ಕೃಷಿ ಪೂರಕವಾಗಿದ್ದು ಕೃಷಿಯೇತರ ಯೋಜನೆಗಳು ಇವೆ ಆದರೆ ಕೃಷಿ ಆಧಾರಿತ ಯೋಜನಾ ಕಾರ್ಯಕ್ರಮಗಳೇ ಹೆಚ್ಚಾಗಿವೆ. ಕೃಷಿ ಯೋಜನೆಯ ಕಾರ್ಯಕ್ರಮದಲ್ಲಿ ಭೂಮಿಯನ್ನು ಆಧಾರವಗಿಟ್ಟುಕೊಂಡು ಸಾಲ ನೀಡುತ್ತದೆ. ಕೃಷಿಯೇತರ ಕಾರ್ಯಕ್ರಮದಲ್ಲಿ ಸಾಲ ಸೌಲಭ್ಯ ಹಂಚಿಕೆ ಮಾಡುವಾಗ ಮನೆ, ವಾಣಿಜ್ಯ ಕಟ್ಟಡದಂತಹ ಸ್ಥಿರಾಸ್ಥಿಯ ಆಧಾರದ ಮೇಲೆ ನೀಡಲಾಗುತ್ತದೆ. ಕೃಷಿ ಕ್ಷೇತ್ರದ ಕಾರ್ಯಕ್ರಮಗಳೆಂದರೆ ಬಾವಿಯೋಜನೆ,

ಕೊಳವೆಬಾವಿಯೋಜನೆ, ಪಂಪ್ ಸೆಟ್‌ಯೋಜನೆ, ಏತ ನೀರಾವರಿಯೋಜನೆ, ಕೃಷಿ ಯಾಂತ್ರೀಕರಣ, ಟ್ರಾಕ್ಟರ್ ಮತ್ತು ಪವರ್ ಟಿಲ್ಲರ್ ಯೋಜನೆ, ಭೂ ಅಭಿವೃದ್ಧಿ ಯೋಜನೆ, ಜಮೀನು ಖರೀದಿ ಯೋಜನೆ, ರೇಷ್ಮೆ ಯೋಜನೆ, ತೋಟಗಾರಿಕೆ, ಹೈನುಗಾರಿಕೆ, ಕುರಿ ಸಾಕಾಣಿಕೆ, ಹಂದಿ ಸಾಕಾಣಿಕೆ, ಸೀಗಡಿ ಕೃಷಿ, ಕೋಳಿ ಸಾಗಾಣಿಕೆ, ಮೊಟ್ಟೆ ಮತ್ತು ಮಾಂಸ, ಎತ್ತು ಮತ್ತು ಬಂಡಿ ಯೋಜನೆ, ಮೀನುಗಾರಿಕೆ (ಒಳನಾಡು) ಇತ್ಯಾದಿ. ಕೃಷಿಯೇತರ ಕಾರ್ಯಕ್ರಮದಡಿ ದ್ವಿಚಕ್ರ ವಾಹನ ಖರೀದಿ, ಗ್ರಾಮೀಣ ಗೃಹ ನಿರ್ಮಾಣ ಯೋಜನೆ, ಸಣ್ಣ ಸಾರಿಗೆ ವಾಹನ ಯೋಜನೆ ಇತ್ಯಾದಿ. ಭೂಮಿ ಇಲ್ಲದವರಿಗೆ ಈ ಬ್ಯಾಂಕುಗಳು ಸಾಲ ನೀಡುವುದೇ ಇಲ್ಲ. ಈ ನಿಟ್ಟಿನಲ್ಲಿ ಭೂ ಅಭಿವೃದ್ಧಿ ಬ್ಯಾಂಕುಗಳ ಕಠಿಣ ನಿಲುವನ್ನು ಹೊಂದಿವೆ. ಭೂ ಅಭಿವೃದ್ಧಿ ಬ್ಯಾಂಕುಗಳ ಸಾಲ ಸೌಲಭ್ಯ ಯೋಜನೆ ನಿಯಮ ಕಠಿಣವಾಗಿರುತ್ತದೆ. ದೀರ್ಘಾವಧಿ ಸಾಲ ಪಡೆಯಲು ಇಚ್ಛಿಸುವ ರೈತರು ಭೂ ದಾಖಲಾತಿಗಳನ್ನು ಕಡ್ಡಾಯವಾಗಿ ನೀಡಬೇಕು. ಈ ಬ್ಯಾಂಕುಗಳ ಸಾಲ ನೀಡುವ ನಿಯಮ ಪದ್ಧತಿಯಲ್ಲಿ ಮುಖ್ಯ ಅಂಶ ಫಲಾನುಭವಿಗಳ ಆಯ್ಕೆ. ಫಲಾನುಭವಿ ಮತ್ತು ಸಾಲ ಪ್ರಸ್ತಾವನೆಯ ಯೋಜನೆಯನ್ನು ಎಚ್ಚರಿಕೆಯಿಂದ ಮಾಡಲಾಗುತ್ತದೆ. ಫಲಾನುಭವಿಯ ಆರ್ಥಿಕ ಸದೃಢತೆ, ಕುಟುಂಬದ ಗಾತ್ರ, ಅವರ ಜವಾಬ್ದಾರಿ, ಉದ್ದೇಶಿತ ಸಾಲ ಯೋಜನೆಯಿಂದ ನಿರೀಕ್ಷಿಸುವ ಆದಾಯ ಇತರೇ ಆದಾಯ(ಸಂಬಳ, ಬಾಡಿಗೆ, ವ್ಯವಹಾರ ಹಾಗೂ ಇತರೇ ಜಮೀನುಗಳಿದ್ದಲ್ಲಿ ಅವುಗಳಿಂದ ಬರುವ ಆದಾಯ, ಉಪಕಸುಬುಗಳ ಆದಾಯ)ಗಳನ್ನು ಗಮನದಲ್ಲಿಟ್ಟುಕೊಂಡು ಅರ್ಜಿದಾರರಿಂದ ದಾಖಲೆಗಳನ್ನು ಪಡೆಯಲಾಗುತ್ತದೆ. ಗೃಹ ನಿರ್ಮಾಣ ಯೋಜನೆ ಹೊರತುಪಡಿಸಿ ಉಳಿದೆಲ್ಲಾ ಯೋಜನೆಗಳಲ್ಲಿ ಪ್ರಸ್ತುತ ಯೋಜನೆಯಿಂದ ಲಭ್ಯವಾಗುವ ಆದಾಯದಿಂದಲೇ ಸಾಲ ಮರುಪಾವತಿಯಾಗುವಂತಿದ್ದಲ್ಲಿ ಮಾತ್ರ ಸಾಲ ಮಂಜೂರು ಮಾಡಲಾಗುತ್ತದೆ. ಈ ಬ್ಯಾಂಕುಗಳು ಸಾಲ ಪಡೆಯುವವರ ಮಾಹಿತಿ ಪುಸ್ತಕವನ್ನು ನಿರ್ವಹಿಸುತ್ತಾರೆ. ಸಾಲಗಾರರ ಮಾಹಿತಿಯನ್ನು ನೊಂದಣಿ ಪುಸ್ತಕದಲ್ಲಿ ಕಡ್ಡಾಯವಾಗಿ ದಾಖಲಿಸುತ್ತಾರೆ. ಈ ಮಾಹಿತಿಯನ್ನು ಜಿಲ್ಲಾ ವ್ಯವಸ್ಥಾಪಕರು, ಅಭಿವೃದ್ಧಿ ಅಧಿಕಾರಿ, ಬ್ಯಾಂಕಿನ ತಾಂತ್ರಿಕ ಅಧಿಕಾರಿ ಪರಿಶೀಲಿಸಿ, ಪ್ರಸ್ತಾವನೆಯನ್ನು ಕೇಂದ್ರ ಕಛೇರಿಯ ಅನುಮೋದನೆಗೆ ಮಂಜೂರಾತಿಗೆ ಕಳುಹಿಸಲಾಗುತ್ತದೆ.[೨] ಗ್ರಾಮೀಣ ಪ್ರದೇಶದ ಕೃಷಿ ಕ್ಷೇತ್ರಕ್ಕೆ ಸಾಲ ಸೌಲಭ್ಯ ಪೂರೈಸುವಲ್ಲಿ ಸಹಕಾರ ವಲಯ ಪ್ರಮುಖ ಪಾತ್ರವಹಿಸಿದರೂ ಈ ವಲಯ ಹಲವು ಸಮಸ್ಯೆಗಳು ಮತ್ತು ಮಿತಿಗಳಿಂದ ಕೂಡಿದೆ. ಈ ಮಿತಿಗಳು ಇಲ್ಲಿ ಸಂಕ್ಷಿಪ್ತವಾಗಿ ಚರ್ಚಿಸಲಾಗಿದೆ. ದೇಶದಾದ್ಯಂತ ಸಹಕಾರ ವಲಯ ಒಂದೇ ರೀತಿಯ ಸಮತೋಲನ ಬೆಳವಣಿಗೆ ಹೊಂದಲಿಲ್ಲ. ಇದರಿಂದ ಸಾಲ ಪೂರೈಕೆ ಸಹ ಸಮರ್ಪಕವಾಗಿಲ್ಲ. ಈ ರೀತಿಯ ಅಸಮತೋಲನ ಬೆಳವಣಿಗೆಯಿಂದ ಸಹಕಾರ ಸಂಸ್ಥೆಗಳು ನಬಾರ್ಡ್ ಹಾಗೂ ಇತರೆ ರಾಷ್ಟ್ರ ಮಟ್ಟದ ಸಂಸ್ಥೆಗಳು ಅನುಮೋದಿಸಿದ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಅಗತ್ಯವಾದ ಸಾಲ ಸೌಲಭ್ಯಗಳನ್ನು ಪೂರೈಸುವ ಸ್ಥಿತಿಯಲ್ಲಿರಲಿಲ್ಲ. ಅನೇಕ ಪ್ರಾಥಮಿಕ ಸಹಕಾರ ಸಾಲ ಸಂಘಗಳು ಮತ್ತು ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳಲ್ಲಿ ಸಾಲ ಪೂರೈಕೆ ಚಟುವಟಿಗಳು ಮತ್ತು ವ್ಯವಹಾರ ಚಟುವಟಿಗಳು

ಸಮರ್ಥವಾಗಿ ನಡೆಯದೆ ಈ ಸಂಸ್ಥೆಗಳು ನಷ್ಟದಲ್ಲಿದ್ದವು. ಈ ಸಂಸ್ಥೆಗಳ ಹಣಕಾಸು ಬೆಳವಣಿಗೆಗಳು ತುಂಬಾ ಕೆಳಮಟ್ಟದಲ್ಲಿದ್ದವು. ಸಹಕಾರಿ ಸಂಸ್ಥೆಗಳ ನಿಯಮಗಳ ಮತ್ತು ಸಾಲ ನೀಡುವ ವಿಧಾನಗಳು ಸಂಕೀರ್ಣವಾಗಿವೆ.[೮] ಸಾಲ ನೀತಿ ಪ್ರಕಾರ ವಾಣಿಜ್ಯ ಬ್ಯಾಂಕುಗಳು ಒಂದು ಲಕ್ಷದ ವರೆಗೂ ಯಾವುದೇ ಭದ್ರತೆಗಳನ್ನು ಪಡೆಯದೆ ಸಾಲ ಪೂರೈಸಬೇಕೆಂದು ಮಾರ್ಗದರ್ಶನವಿದ್ದರೂ ಯಾವುದೇ ಹಣಕಾಸು ಸಂಸ್ಥೆಗಳು ಈ ನಿಯಮವನ್ನು ಪಾಲಿಸುತ್ತಿಲ್ಲ. ಪ್ರಾಥಮಿಕ ಸಹಕಾರ ಸಾಲ ಸಂಸ್ಥೆಗಳು ಭೂಮಿ ಭದ್ರತೆ ಮೇಲೆ ಸಾಲ ಪೂರೈಸುತ್ತದೆ. ಭೂಮಿಯನ್ನು ಭದ್ರತೆಯಾಗಿ ಪಡೆಯುವ ಪ್ರಕ್ರಿಯೆ ತುಂಬಾ ಜಟಿಲವಾಗಿದೆ. ಈ ನಿಯಮ ದೊಡ್ಡ ರೈತ, ಸಣ್ಣ ಮತ್ತು ಅತೀ ಸಣ್ಣ ಎಲ್ಲಾ ರೈತರಿಗೂ ಅನ್ವಯಿಸುತ್ತದೆ. ಸಾಲ ಪಡೆಯಲಿಚ್ಚಿಸುವ ರೈತರು ಭೂಮಿಯನ್ನು ತಾಲ್ಲೂಕು ತಹಸಿಲ್ದಾರ್ ಕಛೇರಿಯಲ್ಲಿ ಬ್ಯಾಂಕಿನ ಹೆಸರಿಗೆ ವತ್ತೆ ಹಿಡಬೇಕಾಗುತ್ತದೆ. ಸಾಲ ಪಡೆದ ರೈತರು ಸಾಲ ಹಿಂತಿರುಗಿಸಲು ವಿಫಲವಾದರೆ ಸಾಲ ನೀಡಿದ ಹಣಕಾಸು ಸಂಸ್ಥೆ ವತ್ತೆ ಇಟ್ಟ ಜಮೀನನ್ನು ಮಟ್ಟುಗೋಲು ಹಾಕಿಕೊಳ್ಳಬಹುದು. ಬ್ಯಾಂಕಿನ ಆಸ್ತಿಯಾಗಿ ಪರಿಗಣಿಸಲು ಅನುಕೂಲ ವಾಗುವ ರೀತಿಯಲ್ಲಿ ಕಾನೂನು ಬದ್ಧ ಕ್ರಮಕೈಗೊಳ್ಳಲು ಪರಿಗಣಿಸುವ ರೀತಿಯಲ್ಲಿ ಭೂ ದಾಖಲೆಗಳನ್ನು ಪಡೆಯುತ್ತಾರೆ. ಪ್ರಾಥಮಿಕ ಸಹಕಾರ ಸಾಲ ಸಂಸ್ಥೆಗಳು ಸುರಕ್ಷತೆಯ ದೃಷ್ಠಿಯಿಂದ ಈ ಕ್ರಮಕೈಗೊಳ್ಳುತ್ತವೆ ಇನ್ನುತ್ತಾರೆ ಈ ಸಂಸ್ಥೆಗಳ ಅಧಿಕಾರಿಗಳು. ಭೂ ಅಭಿವೃದ್ಧಿ ಬ್ಯಾಂಕುಗಳು ಭೂಮಿಯನ್ನು ಭದ್ರತೆಯಾಗಿ ಪಡೆಯುವ ಬೇರೆ ಬ್ಯಾಂಕುಗಳಿಗಿಂತ ಕಠಿಣವಾಗಿದೆ. ಈ ಪ್ರಕ್ರಿಯೆಯಲ್ಲಿ ಯಾವ ಸಡಿಲಿಕೆಯೂ ಇರುವುದಿಲ್ಲ. ಭೂ ಅಭಿವೃದ್ಧಿ ಬ್ಯಾಂಕುಗಳು ಶೋಚನೀಯ ಸ್ಥಿತಿಗೆ ಕಾರಣವಾಗಿರುವ ಅಂಶಗಳಲ್ಲಿ ಮೇಲೆ ತಿಳಿಸದ ಭೂ ಭದ್ರತೆ ನಿಯಮದ ಸಂಕೀರ್ಣತೆಯು ಒಂದು ಕಾರಣ. ಹೀಗೆ ಸಹಕಾರಿ ಸಂಸ್ಥೆಗಳ ಸಾಲ ಪೂರೈಕೆ ನಿಯಮಗಳ ಸಂಕೀರ್ಣತೆ, ಸಾಲ ಮಂಜೂರಾತಿ ವಿಳಂಬದಿಂದ ರೈತರು ನಿಗದಿತ ಕಾಲಕ್ಕೆ ಸಾಲ ಪಡೆಯಲು ಸಾಧ್ಯವಾಗುವುದಿಲ್ಲ. ಇವುಗಳ ಸದಸ್ಯತ್ವ ನೀತಿ ಮತ್ತು ಸಾಲ ಮರುಪಾವತಿ ನಿಯಮಗಳು ಪ್ರಶ್ನಾರ್ಹವಾಗಿವೆ. ಮೇಲೆ ತಿಳಿಸಿದ ಹಾಗೆ ಸಾಲ ಭದ್ರತೆ ನಿಯಮ ಸಾಂಪ್ರದಾಯಿಕವಾಗಿದ್ದು ಯಾವುದೇ ಬದಲಾಣೆಗೆ ಒಳಗಾಗಿಲ್ಲ. ಇದರಿಂದ ನಿಗದಿತ ಕಾಲ ಮತ್ತು ನಿಗದಿತ ಪ್ರಮಾಣದಲ್ಲಿ ಗ್ರಾಮೀಣ ಪ್ರದೇಶದ ಕೃಷಿ ಕೃಷಿಯೇತರ ಕ್ಷೇತ್ರಕ್ಕೆ ಹಣಕಾಸು ಪೂರೈಕೆಯಾಗುತಿಲ್ಲ. ಸಹಕಾರಿ ಸಂಸ್ಥೆಗಳ ಸಾಲ ಬಾಕಿ ಪ್ರಮಾಣ ಹೆಚ್ಚಿನ ಗಂಭೀರ ಸ್ಥಿತಿಯನ್ನು ತಲುಪಿ ಸಾಲ ಬೆಳವಣಿಗೆ ಮತ್ತು ಸಹಕಾರ ವಲಯದ ಬೆಳವಣಿಗೆಯನ್ನು ಕುಂಠಿತಗೊಳಿಸಿದೆ. ಅಸಮರ್ಪಕ ಮೇಲ್ವಿಚಾರಣೆ, ಸಾಲ ನೀಡಿಕೆಯ ಸಂಕೀರ್ಣತೆ, ರಾಜಕೀಯ ಪ್ರಭಾವ, ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಸಾಲ ಮನ್ನಾ ಯೋಜನೆಗಳು ಮತ್ತು ಚುನಾವಣಾ ಪೂರ್ವ ಘೋಷಣೆಗಳು, ಸುಸ್ತಿದಾರರ ವಿರುದ್ದ ಕಾನೂನು ಕ್ರಮಕೈಗೊಳ್ಳುವಲ್ಲಿ ವಿಳಂಬ, ಅಗಾಧ ಸಾಲ-ಬಾಕಿಗಳು ಹೀಗೆ ಸಹಕಾರ ಸಂಸ್ಥೆಗಳು ಮತ್ತು ಅಭಿವೃದ್ಧಿ ಬ್ಯಾಂಕುಗಳು ಅನೇಕ ಸಮಸ್ಯಗಳ ಸುಳಿಯಲ್ಲಿ ಸಿಲುಕಿವೆ. ಇವುಗಳೊಂದಿಗೆ ನುರಿತ ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಬೇಕಾದ ಸಿಬ್ಬಂದಿಗಳ ಕೊರತೆ ಹಾಗೂ ಈ ಸಂಸ್ಥೆಗಳ ಸಂಪನ್ಮೂಲದ ಸಮಸ್ಯೆಗಳಿಂದ ಕೂಡಿವೆ.

**ವಾಣಿಜ್ಯ ಬ್ಯಾಂಕುಗಳು**

೨೦ನೇ ಶತಮಾನದ ಆರಂಭದ ದಶಕದಲ್ಲಿ ವಾಣಿಜ್ಯ ಬ್ಯಾಂಕುಗಳು ತಮ್ಮ ವ್ಯವಹಾರ ಪ್ರಾರಂಭಿಸಿದವು. ಆದರೆ ಕೃಷಿ ಚಟುವಟಿಕೆಗಳಿಗೆ ಹಣಕಾಸು ಪೂರೈಸುತ್ತಿರಲ್ಲಿಲ್ಲ. ವಾಣಿಜ್ಯ ವ್ಯವಹಾರಗಳಿಗೆ ಹಣ ಒದಗಿಸುತ್ತಿದ್ದವು. ಸಾಮಾನ್ಯವಾಗಿ ಕೃಷಿ ಸಾಲ ಪೂರೈಕೆಯಿಂದ ದೂರ ಉಳಿದಿದ್ದವು. ೧೯೫೪ರ ಕೃಷಿ ಹಣಕಾಸು ಉಪಸಮಿತಿ ೧೯೫೪ರ ಅಖಿಲ ಭಾರತ ಗ್ರಾಮೀಣ ಸಾಲ ಸಮೀಕ್ಷೆ ಸಮಿತಿಗಳು ಸಹ ವಾಣಿಜ್ಯ ಬ್ಯಾಂಕುಗಳು ಕೃಷಿ ವಲಯಕ್ಕೆ ಹಣಕಾಸು ಪೂರೈಸದೇ ನಿರ್ಲಕ್ಷಿಸಿದ್ದನ್ನು ಗುರುತಿಸಿ ತಮ್ಮ ವರದಿಗಳಲ್ಲಿ ಚರ್ಚಿಸಿದ್ದಾರೆ.[೧೯] ೧೯೫೧–೫೨ರ ಕೃಷಿ ಕ್ಷೇತ್ರಕ್ಕೆ ವಿತರಣೆಯಾದ ಒಟ್ಟು ಸಾಲಗಳಲ್ಲಿ ವಾಣಿಜ್ಯ ಬ್ಯಾಂಕುಗಳು ಶೇಕಡಾ ೦.೯ಷ್ಟನ್ನು ಮಾತ್ರ ಪೂರೈಸಿದ್ದವು. ಅಖಿಲ ಭಾರತ ಗ್ರಾಮೀಣ ಸಾಲ ಮತ್ತು ಹೂಡಿಕೆ ಸಮೀಕ್ಷೆಯಲ್ಲಿ ತಿಳಿಸಿರುವಂತೆ ವಾಣಿಜ್ಯ ಬ್ಯಾಂಕುಗಳು ಸಾಲ ನೀಡಿಕೆ ಪ್ರಮಾಣ ೧೯೫೯–೬೦ರಲ್ಲಿ ೦.೬೧ಕ್ಕೆ ಕುಸಿದಿತ್ತು. ೧೯೬೧–೬೨ರಲ್ಲಿ ಕೃಷಿಗೆ ವಾಣಿಜ್ಯ ಬ್ಯಾಂಕುಗಳು ಪೂರೈಸಿದ ಸಾಲದ ಪ್ರಮಾಣ ಶೇಕಡಾ ೨.೫ರಷ್ಟಿತ್ತು. ಸ್ವಾತಂತ್ರ ಬಂದ ಮೊದಲ ಹದಿನೈದು ವರ್ಷಗಳಲ್ಲಿ ಸರ್ಕಾರಕ್ಕಾಗಲಿ ಮತ್ತು ಯೋಜನಾ ಆಯೋಗಕ್ಕಾಗಲಿ ವಾಣಿಜ್ಯ ಬ್ಯಾಂಕುಗಳು ಕೃಷಿ ಸಾಲ ನೀಡಿಕೆ ಕ್ಷೇತ್ರ ಆ ಮೂಲಕ ಗ್ರಾಮೀಣ ಸಾಲ ವ್ಯವಸ್ಥೆಗೆ ಪ್ರವೇಶಿಸುವುದರ ಬಗ್ಗೆ ಒಲವು ಇರಲಿಲ್ಲ. ೧೯೫೦ ಬ್ಯಾಂಕು ಪರಿಶೀಲನ ಸಮಿತಿ, ೧೯೫೪ ಗ್ರಾಮೀಣ ಸಾಲ ಸಮೀಕ್ಷೆ ಸಮಿತಿಗಳು ವಾಣಿಜ್ಯ ಬ್ಯಾಂಕುಗಳು ಕೃಷಿ ಕ್ಷೇತ್ರಕ್ಕೆ ಹಣಕಾಸು ಪೂರೈಸುವುದರ ಪರವಾಗಿರಲಿಲ್ಲ. ಪಂಚವಾರ್ಷಿಕ ಯೋಜನಾ ಅವಧಿಯಲ್ಲಿ ವಿಶೇಷವಾಗಿ ೧೯೬೦ರ ನಂತರದ ಕಾಲದಲ್ಲಿ ಗ್ರಾಮೀಣ ಪ್ರದೇಶದಲ್ಲಿ ಅನೇಕ ಬದಲಾವಣೆಗಳು ಸಂಭವಿಸಿದವು. ಯೋಜನಾ ಅವಧಿಯ ಎರಡು ದಶಕಗಳ ನಂತರ ಗ್ರಾಮೀಣ ಭಾಗದಲ್ಲಿ ಠೇವಣಿ ಸಂಗ್ರಹವನ್ನು ಪ್ರಾಂಭಿಸಿದವು. ಕೃಷಿ ಸಾಲ ಸಾಂಸ್ಥಿಕ ಸೌಲಭ್ಯಗಳಿಗೆ ಅಥವಾ ವ್ಯವಸ್ಥೆಗಳಿಗೆ ಸಂಬಂಧಿಸಿದ ಅನೌಪಚಾರಿಕ ಸಮಿತಿಯೊಂದು ವಾಣಿಜ್ಯ ಬ್ಯಾಂಕುಗಳು ಠೇವಣಿ ಹಣವನ್ನು ಗ್ರಾಮೀಣ ಪ್ರದೇಶದ ಅಭಿವೃದ್ಧಿ ಕಾರ್ಯಗಳಿಗೆ ಬಳಸಿಕೊಳ್ಳಬಹುದೆಂದು ಅಭಿಪ್ರಾಯ ಪಟ್ಟಿತು. ನಾಲ್ಕನೇ ಪಂಚವಾರ್ಷಿಕ ಯೋಜನೆಯ ಕರಡು ಪ್ರತಿಯಲ್ಲಿ (೧೯೬೯–೭೪) ಕೃಷಿ ಕ್ಷೇತ್ರಕ್ಕೆ ಸಾಲ ನೀಡುವಲ್ಲಿ ವಾಣಿಜ್ಯ ಬ್ಯಾಂಕುಗಳ ಪಾತ್ರವನ್ನು ಚರ್ಚಿಸಲಾಯಿತು.[೨೦]

ಗ್ರಾಮೀಣ ಆರ್ಥಿಕತೆಯ ಸಾಲ ನೀಡಿಕೆ ಕ್ಷೇತ್ರದಲ್ಲಿ ಸಾಕಷ್ಟು ಅಂತರ ಇದೆ ಎಂದು ರಾಷ್ಟ್ರೀಯ ಸಾಲ ಪರಿಷತ್ತು ಅಭಿಪ್ರಾಯ ಪಟ್ಟಿತು. ಗ್ರಾಮೀಣ ಆರ್ಥಿಕತೆಯ ಹೆಚ್ಚುತ್ತಿರುವ ಸಾಲ ಬೇಡಿಕೆಯ ಅಗತ್ಯಗಳನ್ನು ಪೂರೈಸಲು ಬಹುಸಂಸ್ಥೆ ವಿಧಾನವನ್ನು ಶಿಫಾರಸ್ಸು ಮಾಡಿತು. ೧೯೬೯ರ ಅಖಿಲ ಭಾರತ ಸಾಲ ಪರಿಶೀಲನಾ ಸಮಿತಿಯು ಸಾಲ ನೀಡಿಕೆ ಅಂತರವನ್ನು ಗುರ್ತಿಸಿತು. ಈ ಸಮಿತಿ ಪ್ರಕಾರ ಸಹಕಾರ ಸಂಸ್ಥೆಗಳು ಅಲ್ಪಾವಧಿ, ಮಧ್ಯಾವಧಿ ಮತ್ತು ಧೀರ್ಘಾವಧಿ ಸಾಲಗಳನ್ನು ಬೇಡಿಕೆಗನುಗುಣವಾಗಿ ಪೂರೈಸುವುದು ಸಾಧ್ಯವಿಲ್ಲವೆಂದೂ ಈ ಅಂತರವನ್ನು ವಾಣಿಜ್ಯ ಬ್ಯಾಂಕುಗಳು ನಿರ್ವಹಣೆ ಮಾಡುವ ಸಾಮರ್ಥ್ಯವಿದೆ ಎಂದು ನಿರೀಕ್ಷಿಸಲಾಯಿತು. ಇದೇ ರೀತಿಯ ಅಭಿಪ್ರಾಯವನ್ನು

ತಜ್ಞರ ತಂಡದ ಮುಖ್ಯಸ್ಥರಾದ ಆರ್.ಕೆ. ತಳವಾರರು ವ್ಯಕ್ತಪಡಿಸಿದರು. ಹೀಗೆ ಗ್ರಾಮೀಣ ಹಣಕಾಸು ವ್ಯವಸ್ಥೆಗೆ ದೊಡ್ಡ ಮಟ್ಟದಲ್ಲಿ ಪ್ರವೇಶಿಸುವಂತ ವೇದಿಕೆ ವಾತಾವರಣ ವಾಣಿಜ್ಯ ಬ್ಯಾಂಕುಗಳಿಗೆ ಸೃಷ್ಟಿಯಾಯಿತು. ಕೃಷಿ ಸಾಲ ಕ್ಷೇತ್ರಕ್ಕೆ ವಾಣಿಜ್ಯ ಬ್ಯಾಂಕುಗಳು ಪ್ರವೇಶಕ್ಕೆ ಸಂಭಂಧಿಸಿದಂತೆ ಸರ್ಕಾರ ಸಾಮಾಜಿಕ ನಿಯಂತ್ರಣ ವ್ಯವಸ್ಥೆಯನ್ನು ೧೯೬೭ರಲ್ಲಿ ಜಾರಿಗೆ ತಂದಿತು. ಆದರೆ ಈ ವ್ಯವಸ್ಥೆ ವಿಧಾನ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಲಿಲ್ಲ. ೧೯೬೦ರ ನಂತರದ ಕಾಲಾವಧಿಯಲ್ಲಿ ಹೆಚ್ಚುತ್ತಿರುವ ಜನಸಂಖ್ಯೆಗೆ ಆಹಾರವನ್ನು ಪೂರೈಸುವ ಆಶಯದಿಂದ ಆಹಾರ ಪದಾರ್ಥ ಉತ್ಪಾದನೆಗೆ ಆಧ್ಯತೆ, ಪ್ರೋತ್ಸಾಹ ನೀಡಲಾಯಿತು. ಕೃಷಿ ಕ್ಷೇತ್ರಲ್ಲಿ ಇದಕ್ಕಾಗಿ ಹಸಿರು ಕ್ರಾಂತಿಯನ್ನು ಪ್ರಾಂಭಿಸಲಾಯಿತು. ಕೃಷಿ ಆಹಾರೋತ್ಪಾದನೆಯನ್ನು ತೀವ್ರಗೊಳಿಸಲು ಹೊಸ ಉತ್ಪಾದನಾ ವಿಧಾನವನ್ನು ಅನುಸರಿಸಲಾಯಿತು. ಆಧುನಿಕ ಯಾಂತ್ರೀಕರಣ ಬಳಕೆಯನ್ನು ಹೆಚ್ಚಿಸಲಾಯಿತು. ಈ ಪ್ರಯತ್ನಗಳಿಂದ ಕೃಷಿ ಕ್ಷೇತ್ರದಲ್ಲಿ ಸಾಲ ಬೇಡಿಕೆಯು ಅಧಿಕಗೊಂಡಿತು. ಹೀಗೆ ಅಧಿಕಗೊಂಡ ಸಾಲ ಬೇಡಿಕೆಯನ್ನು ಪೂರೈಸುವ ಹಣಕಾಸು ಸಾಮರ್ಥ್ಯ ವಾಣಿಜ್ಯ ಬ್ಯಾಂಕುಗಳಿಗಿತ್ತು. ಇದನ್ನು ಮನಗೊಂಡ ಸರ್ಕಾರ ೧೯೬೯ ಜುಲೈನಲ್ಲಿ ಹದಿನಾಲ್ಕು ಪ್ರಮುಖ ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಣಗೊಳಿಸಲಾಯಿತು. ಅದೇ ರೀತಿ ಎರಡನೇ ಹಂತದ ರಾಷ್ಟ್ರೀಕರಣ ಏಪ್ರಿಲ್ ೧೯೮೦ರಲ್ಲಿ ನೆಡೆಯಿತು. ಈ ಹಂತದಲ್ಲಿ ಆರು ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಣಗೊಳಿಸಲಾಯಿತು. ಗ್ರಾಮೀಣ ಹಣಕಾಸು ವ್ಯವಸ್ಥೆಯಡಿ ವಿಶೇಷವಾಗಿ ಕೃಷಿ ಮತ್ತು ಕೃಷಿ ಪೂರಕ ಚಟುವಟಿಕೆಗಳ ಸಾಲ ಅಗತ್ಯ ಪೂರೈಸಲು ರಾಷ್ಟ್ರೀಕರಣದ ನಂತರ ಕೃಷಿ ಅಭಿವೃದ್ಧಿ ಶಾಖೆಗಳನ್ನು ಸ್ಥಾಪಿಸಲಾಯಿತು. ಇತರೆ ಕೆಲವು ವಾಣಿಜ್ಯ ಬ್ಯಾಂಕುಗಳು ಇದಕ್ಕೆ ಪೂರಕವಾದ ಶಾಖೆಗಳನ್ನು ತೆರೆಯಲು ಪ್ರಾರಂಭಿಸಿತು. ಅವುಗಳೆಂದರೆ ಗ್ರಾಮ ವಿಕಾಸ ಕೇಂದ್ರಗಳು, ಗ್ರಾಮೀಣ ಸೇವಾ ಕೇಂದ್ರಗಳು ಇತ್ಯಾದಿ. ೧೯೬೯ರಲ್ಲಿ ರಾಷ್ಟ್ರೀಯ ಸಾಲ ಪರಿಷತ್ತು ನೇಮಿಸಿದ ಅಧ್ಯಯನ ತಂಡದ ಶಿಫಾರಸ್ಸಿನ ಮೇರೆಗೆ ೧೯೬೯ರ ಅಂತ್ಯಕ್ಕೆ ಲೀಡ್ ಬ್ಯಾಂಕ್ ಯೋಜನೆ ಪ್ರಾರಂಭಗೊಂಡಿತು. ಅಧ್ಯಯನ ತಂಡದ ಅಧ್ಯಕ್ಷತೆಯನ್ನು ಪ್ರೋ.ಡಿ.ಆರ್ ಗಾಡ್ಗಿಲ್ ವಹಿಸಿದರು. ಆರ್.ಬಿ.ಐ. ನೆಮಿಸಿದ ಬ್ಯಾಂಕುಗಳ ಸಮಿತಿಯು ಲೀಡ್ ಬ್ಯಾಂಕ್ ಯೋಜನೆಯ ಪರಿಕಲ್ಪನೆಯನ್ನು ಶಿಫಾರಸ್ಸು ಮಾಡಿತು. ಇದರ ಅಧ್ಯಕ್ಷತೆ ವಹಿಸಿದ್ದವರು ಎಫ್.ಕೆ.ಎಫ್ ನಾರಿಮನ್. ಈ ಯೋಜನೆ ರಾಷ್ಟ್ರದಾದ್ಯಂತ ಜಾರಿಗೊಂಡು ಈ ಯೋಜನೆಯಡಿ ಎಲ್ಲಾ ಜಿಲ್ಲೆಗಳನ್ನು ವಾಣಿಜ್ಯ ಬ್ಯಾಂಕುಗಳಿಗೆ ಹಂಚಿಕೆ ಮಾಡಲಾಯಿತು. ಈ ಯೋಜನೆಯಡಿ ತಮಗೆ ಹಂಚಿಕೆಯಾದ ಜಿಲ್ಲೆಗಳ ಸಾಲ ಕ್ರಿಯಾ ಯೋಜನೆಯನ್ನು ಸಿದ್ದಪಡಿಸುವ ಜವಾಬ್ದಾರಿ ವಾಣಿಜ್ಯ ಬ್ಯಾಂಕುಗಳಿಗೆ ವಹಿಸಲಾಯಿತು. ಪ್ರಥಮ ಹಂತದ ಜಿಲ್ಲಾ ಸಾಲಕ್ರಿಯಾ ಯೋಜನೆ ೧೯೭೪ರಲ್ಲಿ ಪ್ರಾರಂಭವಾಯಿತು. ಈ ಪ್ರಯತ್ನಕ್ಕೆ ಪೂರಕವಾಗಿ ೧೯೭೦-೭೧ರಲ್ಲಿ ವಾಣಿಜ್ಯ ಬ್ಯಾಂಕುಗಳು ತಮ್ಮ ಸಾಲ ಸೌಲಭ್ಯ ವ್ಯವಹಾರಗಳನ್ನು ಭದ್ರ ಹಾಗೂ ವೈಜ್ಞಾನಿಕ ನೆಲೆಗಟ್ಟಿನ ಮೇಲೆ ಜಾರಿಗೆ ತರುವ ಆಲೋಚನೆಯಿಂದ ಗ್ರಾಮ ದತ್ತು ಯೋಜನೆಯನ್ನು ಅನುಷ್ಠಾನಗೊಳಿಸಿದವು.

ಹೀಗೆ ವಾಣಿಜ್ಯ ಬ್ಯಾಂಕುಗಳು ಕೃಷಿ ಮತ್ತು ಕೃಷಿಯೇತರ ಗ್ರಾಮೀಣ ಉದ್ಯಮ ವ್ಯಹಾರಗಳಿಗೆ ಹಣಕಾಸು ಪೂರೈಸಲು ಹಲವು ವಿಧಾನಗಳನ್ನು ಅನುಸರಿಸಿದವು. ಹಲವು ಯೋಜನೆಗಳನ್ನು ಜಾರಿಗೆ ತಂದವು. ರಾಷ್ಟ್ರೀಕರಣ ಪ್ರಕ್ರಿಯಗೆ ಮುಂಚೆ ವಾಣಿಜ್ಯ ಬ್ಯಾಂಕುಗಳು ಶೇಕಡಾ ೫.೨ರಷ್ಟು ನೇರ ಮತ್ತು ಪರೋಕ್ಷ ಮುಂಗಡಗಳನ್ನು ಕೃಷಿಗೆ ಪೂರೈಸಿದ್ದವು. ೧೯೮೨ (ನಬಾರ್ಡ್ ಸ್ಥಾಪನೆಗೆ ಮುಂಚೆ)ರ ಹೊತ್ತಿಗೆ ವಾಣಿಜ್ಯ ಬ್ಯಾಂಕುಗಳು ಕೃಷಿಗೆ ಪೂರೈಸಿದ್ದ ಮುಂಗಡ ಹಣಕಾಸು ೩೮೩೧ ಕೋಟಿಗೆ ಹೆಚ್ಚಿತು. ಮುಂದೆ ಇದು ೫೧೦೪ ಕೋಟಿಗೆ ತಲುಪಿತು. ಅವುಗಳ ಒಟ್ಟು ಸಾಲ ನೀಡಿಕೆಯಲ್ಲಿ ಶೇಕಡಾ ೧೭.೨ನ್ನು ಪೂರೈಸಲಾಗಿತ್ತು. ಪ್ರತಿ ವರ್ಷ ಗ್ರಾಮೀಣ ಹಣಕಾಸು ವ್ಯವಸ್ಥೆಯಲ್ಲಿ ಕೃಷಿಗೆ ಪೂರೈಕೆಯಾಗುವ ಒಟ್ಟು ಹಣಕಾಸಿನಲ್ಲಿ ವಾಣಿಜ್ಯ ಬ್ಯಾಂಕುಗಳ ಪಾಲು ಹೆಚ್ಚಾದರೂ ವಾಣಿಜ್ಯ ಬ್ಯಾಂಕುಗಳ ಸಾಲ ನೀಡಿಕೆ ಕಾರ್ಯಗಳಲ್ಲಿ ಅನೇಕ ದೋಷಗಳಿದ್ದವು. ಸಾಲ ಪೂರೈಕೆಯ ಮೂಲಕ ಗ್ರಾಮೀಣ ಅಭಿವೃದ್ಧಿ ಮತ್ತು ಕೃಷಿ ಕ್ಷೇತ್ರದ ಉತ್ತೇಜನಗೆ ಅನುಷ್ಠಾನಗೊಂಡ ಯೋಜನೆಗಳನ್ನು ಎಲ್ಲಾ ವಾಣಿಜ್ಯ ಬ್ಯಾಂಕುಗಳು ಜಾರಿಗೆ ತರಲ್ಲಿಲ್ಲ. ಕೆಲವು ಬ್ಯಾಂಕುಗಳು ಕೃಷಿ ಸಾಲ ನೀಡಿಕೆಗೆ ಕಡಿಮೆ ಆಧ್ಯತೆ ನೀಡಿದವು. ಕೃಷಿ ಕ್ಷೇತ್ರಕ್ಕೆ ಪೂರೈಯಾದ ಸಾಲ ಪ್ರಮಾಣಗಳಲ್ಲಿ ದೊಡ್ಡ ಮತ್ತು ಮದ್ಯಮ ರೈತರಿಗೆ ಹೆಚ್ಚಿನ ಸಾಲ ಹಂಚಿಕೆಯಾಗಿದ್ದವು. ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಕಡಿಮೆ ಸಾಲ ಹಂಚಿಕೆಯಾಗಿದ್ದವು. ವಾಣಿಜ್ಯ ಬ್ಯಾಂಕುಗಳು ಸಾಲ ನೀಡುವಾಗ ಹಳೆಯ ಅಥಾವ ಸಾಂಪ್ರದಾಯಿಕ ವಿಧಾನವನ್ನು ಅನುಸರಿಸಿದವು. ಅಂದರೆ ಭೂಮಿಯನ್ನು ಭದ್ರತೆಯಾಗಿಟ್ಟುಕೊಂಡು ಸಾಲ ನೀಡಿದ್ದವು. ಗ್ರಾಮೀಣರಂಗದಲ್ಲಿ ಹಲವು ವಾಣಿಜ್ಯ ಬ್ಯಾಂಕುಗಳು ದೇಶದಾದ್ಯಂತ ಕೃಷಿಯಲ್ಲಿ ಸಾಲ ಸೌಲಭ್ಯಗಳನ್ನು ಅಗತ್ಯವಿರುವ ರೈತರಿಗೆ ಒದಗಿಸಲಿಲ್ಲ. ಗ್ರಾಮೀಣ ಪ್ರದೇಶದಲ್ಲಿ ಕೃಷಿಗೆ ಹೆಚ್ಚಿದ ಸಾಲ ಬೇಡಿಕೆಯನ್ನ ಸಹಕಾರ ಬ್ಯಾಂಕುಗಳು ಪೂರೈಸಲಾಗದೆ ಸಾಲ ನೀಡಿಕೆಯಲ್ಲಿ ಸೃಷ್ಟಿಯಾಗಿದ್ದ ಅಂತರವನ್ನ ವಾಣಿಜ್ಯ ಬ್ಯಾಂಕುಗಳು ತುಂಬುವಲ್ಲಿ ವಿಫಲವಾದವು. ಗ್ರಾಮೀಣ ಪ್ರದೇಶಗಳಲ್ಲಿ ಸಾಗುವಳಿದಾರರು ತಮ್ಮ ಸಾಲದ ಅವಶ್ಯಕತೆಗಳಿಗಾಗಿ ಇಂದಿಗೂ ಲೇವಾದೇವಿಗಾರರನ್ನು ಅವಲಂಬಿಸುವಂತಾಗಿದೆ.[೨೧] ಕಳೆದ ಮೂರು ವರ್ಷಗಳ ಅವಧಿಯಲ್ಲಿ (೨೦೧೩,೨೦೧೨,೨೦೧೧) ಗ್ರಾಮೀಣ ಅರೆ ನಗರ, ನಗರ ಮೆಟ್ರೋ ಪಾಲಿಟಿಕ್ ಸಿಟಿ ಸೇರಿದಂತೆ ಒಟ್ಟು ೧೦೦೨೭೭ ಷೆಡ್ಯೂಲ್ ವಾಣಿಜ್ಯ ಬ್ಯಾಂಕುಗಳು ಹಣಕಾಸು ಸೇವೆ ಒದಗಿಸುವ ಕಾರ್ಯಕ್ರಮದಲ್ಲಿ ನಿರತವಾಗಿದೆ. ಇವುಗಳಲ್ಲಿ ೨೦೧೨ ಡಿಸೆಂಬರ್ ೩೧ಕ್ಕೆ ೩೯೯೭೭ ಷೆಡ್ಯೂಲ್ ವಾಣಿಜ್ಯ ಬ್ಯಾಂಕುಗಳ ಶಾಖೆಗಳಿದ್ದವು. ೨೦೧೧-೧೨ಕ್ಕೆ ೨೦೫೧ ಹೊಸ ಶಾಖೆಗಳನ್ನು ವಾಣಿಜ್ಯ ಬ್ಯಾಂಕುಗಳು ಗ್ರಾಮೀಣ ಪ್ರದೇಶದಲ್ಲಿ ಪ್ರರಂಭಿಸಲಾಗಿದೆ. ಅಂದೆರೆ ಮಾರ್ಚ್ ೨೦೧೨ಕ್ಕೆ ೩೮೬೭೧ ಹಾಗೂ ಡಿಸೆಂಬರ್ ೨೦೧೨ಕ್ಕೆ ೩೯೯೭೭ ಶಾಖೆಗಳು ಕಾರ್ಯನಿರ್ವಹಿಸಿದವು. ಶಾಖೆಗಳ ವಿಸ್ತರಣೆ ಕಡಿತಗೊಂಡಿದ್ದು ಕಳೆದ ಮೂರು ನಾಲ್ಕು ವರ್ಷಗಳಲ್ಲಿ ಹೆಚ್ಚಾಗಿದೆ. ಆರ್‌ಬಿಐ ಫೈನಾಶಿಯಲ್ ಇನ್‌ಕ್ಲೂಷನ್ ಪ್ರಕ್ರಿಯೆಯಡಿ ಈ ರೀತಿ ಶಾಖೆ ವಿಸ್ತರಣೆಯಾಗಿದೆ. ರಾಷ್ಟ್ರಾದಾದ್ಯಂತ ಸಂಘಟಿತ ಹಣಕಾಸು ವ್ಯವಸ್ಥೆಯಡಿ ಹಣಕಾಸು ಸೇವೆಗಳಿಂದ ವಂಚಿತರಾಗಿದ್ದ ಜನತೆಯನ್ನು ಈ ವ್ಯವಸ್ಥೆಯಡಿ ತರುವ ನಿರ್ಧಾರದಿಂದ

ಶಾಖೆಗಳು ವಿಸ್ತರಣೆಗೊಂಡಿವೆ. ಈ ರೀತಿ ವಿಸ್ತರಣೆಯಿಂದ ಸಾಲ ಸೌಲಭ್ಯ ನೀಡುವ ಪ್ರಕ್ರಿಯೆಗೆ ಪ್ರೇರಣೆ ದೊರೆತು ಸಾಕಷ್ಟು ಪ್ರಮಾಣದಲ್ಲಿ ಸಾಲ ನೀಡಲಾಗುತ್ತದೆ ಎಂಬ ನಂಬಿಕೆ ಇದೆ. ಆದರೆ ವಾಸ್ತವವಾಗಿ ಯಾರಿಗೆ, ಯಾವ ನಗರಕ್ಕೆ, ಯಾವ ಕ್ಷೇತ್ರಕ್ಕೆ ವಿಸ್ತರಣೆಯಾಗಿದೆ ಎಂಬುದಕ್ಕೆ ಆಧಾರಗಳಿಲ್ಲ. ಈ ಹಿಂದೆ ಸಹ ರಾಷ್ಟ್ರೀಕರಣದ ನಂತರ ಸಹ ಬ್ಯಾಂಕುಗಳ ಶಾಖೆಗಳ ವಿಸ್ತರಣೆಗೆ ಸಾಲ ನೀತಿ ಮತ್ತು ಯೋಜನೆರೂಪಿಸುವ ಅಪೆಕ್ಸ್ ಸಂಸ್ಥೆಗಳಿಂದ ಪ್ರೋತ್ಸಾಹ ದೊರೆತು ಶಾಖೆಗಳು ವಿಸ್ತರಣೆಗೊಂಡಿದ್ದವು. ಕೃಷಿ ಮತ್ತು ಕೃಷಿಯೇತರ ಕ್ಷೇತ್ರಕ್ಕೆ ಪೂರೈಕೆಯಾದ ಸಾಲ ಪ್ರಮಾಣ ಸಹ ಹೆಚ್ಚಾಗಿತ್ತು. ಇದರಿಂದ ಗ್ರಾಮೀಣ ಪ್ರದೇಶ ಅಭಿವೃದ್ಧಿ ಪ್ರಕ್ರಿಯೆ ತೀವ್ರಗೊಂಡಿತ್ತು ಎಂದು ವಾದಿಸಲಾಗಿತ್ತು. ಆದರೆ ಆವರೆಗೂ ಸಾಲ ಸೌಲಭ್ಯಗಳಿಂದ ದೂರ ಉಳಿದ ವಂಚಿತ ವರ್ಗಗಳ ಜನತೆಗೆ ಸಾಲ ಸೌಲಭ್ಯಗಳು ದೊರೆತಿರಲಿಲ್ಲ ಎಂಬುದು ಶಾಖೆಗಳ ವಿಸ್ತರಣೆ ನಂತರ ನಡೆದ ಅಧ್ಯಯನಗಳಿಂದ ವ್ಯಕ್ತವಾಗಿದೆ. ಈ ರೀತಿ ಸಾಲ ಸೌಲಭ್ಯ ಪ್ರಯೋಜನ ಪಡೆಯದೇ ಇದ್ದದಕ್ಕೆ ಕಾರಣ ವಂಚಿತರಿಗೆ ಸಾಲ ದೊರೆಯಲು ಪೂರಕವಾಗುವ ನಿಯಮಗಳಲ್ಲಿ ಯಾವುದೇ ಮೂಲಭೂತ ಬದಲಾವಣೆಗಳಾಗಿರಲಿಲ್ಲ. ಷೆಡ್ಯೂಲ್ ವಾಣಿಜ್ಯ ಬ್ಯಾಂಕುಗಳ ಶಾಖೆಗಳು ವಿಸ್ತರಣೆಗೊಂಡು ದುರ್ಬಲರಿಗೆ ಸಾಲ ಸೌಲಭ್ಯಗಳು ವಿಸ್ತರಣೆಗೊಂಡಿರಲಿಲ್ಲ. ಆರ್‌ಬಿಐ ವಾರ್ಷಿಕ ಹಣಕಾಸು ನೀತಿಯ ಪ್ರಕಾರ ವಾಣಿಜ್ಯ ಬ್ಯಾಂಕುಗಳು ಕೃಷಿಗೆ ನೀಡುವ ಒಂದು ಲಕ್ಷದ ವರೆಗಿನ ಸಾಲಕ್ಕೆ ಯಾವುದೇ ಭದ್ರತೆ ಅಗತ್ಯವಿಲ್ಲ.[೨೨] ಆದರೆ ವಾಣಿಜ್ಯ ಬ್ಯಾಂಕುಗಳು ಈ ನಿಯಮ ಪಾಲಿಸುವುದು ಕಂಡುಬರುತ್ತಿಲ್ಲ. ಈ ಹಿನ್ನೆಲೆಯಲ್ಲಿ ಕಳೆದ ಮೂರು ನಾಲ್ಕು ವರ್ಷಗಳ ಷೆಡ್ಯೂಲ್ ಬ್ಯಾಂಕುಗಳ ಶಾಖೆ ವಿಸ್ತರಣೆ ಪ್ರಕ್ರಿಯೆಯಿಂದ ಸಾಲ ಸೌಲಭ್ಯ ವಂಚಿತ ವರ್ಗಗಳಿಗೆ ಯಾವುದೇ ಪ್ರಯೋಜನ ಆಗಿಲ್ಲ. ಈ ಪ್ರಯತ್ನದಿಂದ ಶ್ರೀಮಂತರು ಆಸ್ತಿ ಮತ್ತು ಅಧಿಕಾರವುಳ್ಳ ವರ್ಗಗಳೇ ಅಧಿಕ ಸಾಲಗಳನ್ನು ಪಡೆದರು. ಶಾಖೆ ವಿಸ್ತರಣೆಯ ಲಾಭ ಸಹ ಪಡೆದರು. ಗ್ರಾಮೀಣ ಪ್ರದೇಶಗಳಲ್ಲಿ ಕಾರ್ಯ ನಿರ್ವಹಿಸುವ ವಾಣಿಜ್ಯ ಬ್ಯಾಂಕುಗಳ ಶಾಖೆಗಳು ನುರಿತ, ದಕ್ಷ ಸಿಬ್ಬಂದಿಗಳು ಅಧಿಕಾರಿಗಳನ್ನು ಹೊಂದಿಲ್ಲ. ಇದ್ದರೂ ಇವರಿಗೆ ಪ್ರೇರಣೆಯ ಕೊರತೆ ಇದೆ. ಹಾಗೆಯೇ ಇವರ ಬದಲಾಗದ ತಮ್ಮ ಸಾಂಪ್ರದಾಯಿಕ ಮನೋಭಾವದಿಂದ ಸಣ್ಣ ಅತೀ ಸಣ್ಣ ಕೃಷಿ ಕಾರ್ಮಿಕ ವರ್ಗಗಳು ಉತ್ಪಾದಕ ಉದ್ದೇಶಗಳಿಗೆ ಸಾಲ ಪಡೆಯಲು ಸಾಧ್ಯವಾಗದ ಸ್ಥಿತಿ ನಿರ್ಮಾಣವಾಗಿದೆ. ಬಹುತೇಕ ವಾಣಿಜ್ಯ ಬ್ಯಾಂಕುಗಳು ಮತ್ತು ಶಾಖೆಗಳು ಠೇವಣಿ ಸಂಗ್ರಹಿಸುವ ಕೇಂದ್ರಗಳಾಗಿವೆ ಹಾಗೂ ವುಳ್ಳವರ ಹಿತಕಾಯುವ ಸಂಸ್ಥೆಗಳಾಗಿವೆ. ಗ್ರಾಮೀಣ ಪ್ರದೇಶಗಳಲ್ಲಿ ಹಣಕಾಸು ಅಗತ್ಯವಿರುವ ದುರ್ಬಲ ವರ್ಗಗಳಿಗೆ ಸಾಲ ನೀಡುವಲ್ಲಿ ನಿರ್ಲಕ್ಷತೆ ವಹಿಸುತ್ತವೆ.

**ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು**

ಗ್ರಾಮೀಣ ಸಮುದಾಯ ವಿಶೇಷವಾಗಿ ದುರ್ಬಲ ವರ್ಗಗಳ ಸಂಘಟಿತ ಹಣಕಾಸು ಪೂರೈಕೆಯನ್ನು ಪರಿಶೀಲಿಸಲು ೧೯೭೫ರಲ್ಲಿ ಭಾರತ ಸರ್ಕಾರ ಎಮ್. ನರಸಿಂಹಮ್ ಅಧ್ಯಕ್ಷತೆಯಲ್ಲಿ ವರ್ಕಿಂಗ್ ಗ್ರೂಪ್‌ನ್ನು ನೇಮಿಸಿತು. ಈ ಸಮಿತಿಯು ರಾಜ್ಯ ಸರ್ಕಾರ ಪ್ರಾಯೋಜಿತ, ಪ್ರಾದೇಶಿಕ ಆಧಾರದ ಮತ್ತು ಗ್ರಾಮೀಣ ಮನೋಭಾವದ ಬ್ಯಾಂಕುಗಳ ಸ್ಥಾಪನೆಗೆ ಶಿಫಾರಸ್ಸು ಮಾಡಿತು. ಈ ಬ್ಯಾಂಕುಗಳನ್ನು

ಪ್ರಾದೇಶಿಕ ಗ್ರಾಮೀಣ ಎಂದು ಕರೆಯಲಾಗುತ್ತದೆ. ವರ್ಕಿಂಗ್ ಗ್ರೂಪ್‌ನ ಶಿಫಾರಸ್ಸಿನ ಹಿನ್ನಲೆಯಲ್ಲಿ ಭಾರತ ಸರ್ಕಾರ ಸೆಪ್ಟಂಬರ್ ೧೯೭೫ರಂದು ಪ್ರಾದೇಶಿಕ ಗ್ರಾಮೀಣ ಬ್ಯಾಂಕಗಳ ಸುಗ್ರೀವಾಜ್ಞೆ ಹೊರಡಿಸಿತು. ೧೯೭೫ ಅಕ್ಟೋಬರ್‌ನಲ್ಲಿ ಐದು ಪ್ರಾದೇಶಿಕ ಗ್ರಾಮೀಣ ಬ್ಯಾಂಕಗಳನ್ನು ಸ್ಥಾಪಿಸಲಾಯಿತು. ಮುಂದೆ ಪ್ರಾದೇಶಿಕ ಗ್ರಾಮೀಣ ಬ್ಯಾಂಕಗಳ ಸ್ಥಾಪನೆಗೆ ಸರ್ಕಾರ ಹೊರಡಿಸಿದ್ದ ಸುಗ್ರೀವಾಜ್ಞೆಯನ್ನು ರೀಜಿನಲ್‌ರೂರಲ್ ಬ್ಯಾಂಕು(ಆರ್‌ಆರ್‌ಬಿ) ಕಾಯಿದೆಯಾಗಿ ಬದಲಾವಣೆಗೊಂಡಿತು. ಸಾಮನ್ಯವಾಗಿ ಷೆಡ್ಯೂಲ್ ವಾಣಿಜ್ಯ ಬ್ಯಾಂಕುಗಳು ಆರ್‌ಆರ್‌ಬಿಗಳ ಪ್ರಾಯೋಜಕತ್ವವಹಿಸುತ್ತವೆ. ಕೆಲವು ಖಾಸಗೀ ಬ್ಯಾಂಕುಗಳು ಸಹ ಗ್ರಾಮೀಣ ಬ್ಯಾಂಕುಗಳ ಪ್ರಾಯೋಜಕತ್ವವಹಿಸಿವೆ. ಆರ್‌ಬಿಐ ಅನುಮತಿಯೊಂದಿಗೆ ರಾಜ್ಯ ಸಹಕಾರ ಬ್ಯಾಂಕುಗಳು ಸಹ ಪ್ರಾಯೋಜಕತ್ವ ವಹಿಸಲು ಅವಕಾಶ ಮಾಡಿಕೊಡಲಾಗಿದೆ. ಸಾಲ ಸೌಲಭ್ಯ ವಿತರಣೆ ಮತ್ತು ಇತರೆ ಕೆಲವು ಸೌಲಭ್ಯಗಳ ಮೂಲಕ ಗ್ರಾಮೀಣ ಆರ್ಥಿಕತೆಯನ್ನು ಅಭಿವೃದ್ಧಿ ಪಡೆಸುವ ಮಹತ್ವದ ಉದ್ದೇಶದಿಂದ ಪ್ರಾದೇಶಿಕ ಗ್ರಾಮೀಣ ಬ್ಯಾಂಕಗಳನ್ನು ಸ್ಥಾಪಿಸಲಾಗಿದೆ. ವಿಶೇಷವಾಗಿ ಸಣ್ಣ ಅತೀಸಣ್ಣ ರೈತರು, ಕೃಷಿ ಕಾರ್ಮಿಕರು, ಕರಕುಶಲ ಕರ್ಮಿಗಳು, ಸಣ್ಣ ವ್ಯಾಪಾರಸ್ಥರು ಮತ್ತು ಸಣ್ಣ ಉದ್ಯಮಗಳನ್ನು ಕೈಗೊಂಡಿರುವವರಿಗೆ ಸಾಲ ಸೌಲಭ್ಯಗಳನ್ನು ಪೂರೈಸಿ ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸುವುದು ಇದರ ಉದ್ದೇಶ. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಕೃಷಿ ಮತ್ತು ಕೃಷಿಯೇತರ ಉದ್ಯಮ ಚಟುವಟಿಕೆಗಳಿಗೆ ಸಾಲ ನೀಡುತ್ತಿದ್ದರೂ ಬಹುತೇಕ ಸಾಲ ಸೌಲಭ್ಯಗಳನ್ನು ದೊಡ್ಡ ಮತ್ತು ಶ್ರೀಮಂತ ರೈತರಿಗೆ ನೀಡುತ್ತಿವೆ. ವಾಣಿಜ್ಯಬ್ಯಾಂಕುಗಳಂತೆ ಈ ಬ್ಯಾಂಕುಗಳು ದುರ್ಬಲ ವರ್ಗಗಳ ಹಣಕಾಸು ಬೇಡಿಕೆಗಳನ್ನು ನಿರ್ಲಕ್ಷಿಸಿ ಬಲಾಢ್ಯರ ಹಣಕಾಸು ಅಗತ್ಯಗಳನ್ನು ಪೂರೈಸುತ್ತಿವೆ. ಈ ಬ್ಯಾಂಕುಗಳು ಸಾಲ ಸೌಲಭ್ಯ ನೀಡುವಾಗ ಭೂಮಿ ಇತರೆ ಸ್ಥಿರಾಸ್ಥಿಯನ್ನು ಭದ್ರತೆಯಾಗಿಟ್ಟುಕೊಳ್ಳುತ್ತವೆ. ಯಾವುದೇ ಭದ್ರತೆ ನೀಡಲು ಸಾಧ್ಯವಾಗದ ಕೃಷಿ ಕಾರ್ಮಿಕರು, ಭೂರಹಿತ ಕಾರ್ಮಿಕರು ಅನೇಕ ಕಾರಣಗಳಿಗಾಗಿ ತಮ್ಮ ವೈಯಕ್ತಿಕ ಹೆಸರುಗಳಲ್ಲಿ ಭೂ ದಾಖಲೆಗಳಿಲ್ಲದ ಸಣ್ಣ ಮತ್ತು ಅತೀ ಸಣ್ಣ ಹಿಡುವಳಿದಾರರಿಗೆ ಈ ಬ್ಯಾಂಕುಗಳು ಸಾಲ ನೀಡುತ್ತಿಲ್ಲ. ಪ್ರಾದೇಶಿಕ ಬ್ಯಾಂಕಗಳು ಸ್ಥಳೀಯ ಭಾವನೆಯ ಅಗತ್ಯಗಳಿಗೆ ಪೂರಕವಾಗಿ ಹಾಗೂ ಕಡಿಮೆ ವೆಚ್ಚದಲ್ಲಿ ಕಾರ್ಯನಿರ್ವಸುವ ಹಾಗೂ ವಾಣಿಜ್ಯ ಬ್ಯಾಂಕುಗಳ ರೀತಿ ವ್ಯವಸ್ಥಾಪಕ ಸ್ಪರ್ಧಾತ್ಮಕತೆ ರೂಪಿಸಿಕೊಂಡು ವ್ಯವಹರಿಸುತ್ತವೆಂದು ನಿರೀಕ್ಷಿಸಲಾಗಿದೆ. ದಂತವಾಲ ಸಮಿತಿಯು ಯಾವ ಗ್ರಾಮೀಣ ಪ್ರದೇಶದಲ್ಲಿ ಸ್ಥಳೀಯರಿಗೆ ಸಾಲ ಸೌಲಭ್ಯಗಳು ಸಾಕಷ್ಟು ಪ್ರಮಾಣದಲ್ಲಿ ದೊರೆಯುವುದಿಲ್ಲವೋ ಅಂದರೆ ವಾಣಿಜ್ಯ ಬ್ಯಾಂಕುಗಳು ಮತ್ತು ಸಹಕಾರ ಸಂಸ್ಥೆ ಕಾರ್ಯ ನಿರ್ವಹಿಸುತ್ತಿಲ್ಲವೋ ಅಥವಾ ಈ ಸಂಸ್ಥೆಗಳು ಕಾರ್ಯ ನಿರ್ವಹಿಸುತಿದ್ದೂ ಸಾಲಗಳು ಅಗತ್ಯ ಪ್ರಮಾಣದಲ್ಲಿ ದೊರೆಯುತ್ತಿಲ್ಲವೋ ಹಾಗೂ ಸಾಲ ಸೌಲಭ್ಯದ ಅಂತರ ಹೆಚ್ಚಾಗಿರುವ ಪ್ರದೇಶಗಳಲ್ಲಿ ಹಾಗೂ ದುರ್ಬಲ ವರ್ಗಗಳ ಜನಸಂಖ್ಯೆ ಎಲ್ಲಿ ಅಧಿಕವಾಗಿದೆಯೊ ಹಾಗೂ ಕೃಷಿ ಅಭಿವೃದ್ಧಿಯ ಅವಕಾಶಗಳನ್ನು ಪ್ರೋತ್ಸಾಹಿಸಬಹುದೋ ಅಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸಬೇಕು ಎಂದು ಸಲಹೆ ನೀಡಿತು.[೨೨] ೧೯೪೯ರ ಬ್ಯಾಂಕಿಂಗ್ ರೆಗ್ಯೂಲೆಷನ್ ಕಾಯಿದೆಯ ೫ನೇ ಸೆಕ್ಸೆನ್

ಅಡಿ ಪ್ರಾದೇಶಿಕ ಗ್ರಾಮೀಣಗಳು ಎಲ್ಲಾ ರೀತಿಯ ಬ್ಯಾಂಕಿಂಗ್ ಚಟುವಟಿಕೆಗಳನ್ನು ನಡೆಸಲು ಅವಕಾಶವಿದೆ. ಹಾಗೆಯೇ ಇದೇ ಸೆಕ್ಷನ್ ೬೦ರ ಪ್ರಕಾರ ಒಂದು ಅಥವಾ ಹೆಚ್ಚಿನ ರೀತಿಯ ವ್ಯವಹಾರಗಳನ್ನು ನಡೆಸಬಹುದು. ಭಾರತ ಸರ್ಕಾರದ ಪ್ರಕಾರ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಸಾಲ ನೀಡುವ ವ್ಯಾಪ್ತಿಯನ್ನು ನಿರ್ಧಿಷ್ಟ ಪಡಿಸಿದ್ದು ದುರ್ಬಲ ವರ್ಗಗಳು ಕೈಗೊಳ್ಳುವ ಕೃಷಿ, ವ್ಯಾಪಾರ, ಉದ್ಯಮ ಹಾಗೂ ಇತರೆ ಉತ್ಪಾದನೆ ಆಧಾರಿತ ಉದ್ದೇಶಗಳಿಗೆ ಸಾಲ ಸೌಲಭ್ಯಗಳನ್ನು ಒದಗಿಸಬೇಕಾಗುತ್ತದೆ. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ನೇರವಾಗಿ ಸಾಲ ನೀಡುತ್ತವೆ ಹಾಗೂ ಪ್ರಾಥಮಿಕ ಕೃಷಿ ಸಾಲ ಸಂಸ್ಥೆಗಳ ಮೂಲಕವೂ ಸಾಲ ನೀಡುತ್ತವೆ. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಕಾರ್ಯ ವ್ಯಾಪ್ತಿ ಸಾಮಾನ್ಯವಾಗಿ ಒಂದು ಅಥವಾ ಎರಡು ಕಂದಾಯ ಜಿಲ್ಲೆಗಳಿಗೆ ಸೀಮಿತಗೊಂಡಿರುತ್ತವೆ. ಬ್ಯಾಂಕುಗಳಿಲ್ಲದ ಬ್ಯಾಂಕು ಸೌಲಭ್ಯಗಳು ಇಲ್ಲದ ಪ್ರದೇಶಗಳು ಹಾಗೂ ವಾಣಿಜ್ಯ ಬ್ಯಾಂಕುಗಳು ಮತ್ತು ಸಹಕಾರ ಬ್ಯಾಂಕುಗಳು ದುರ್ಬಲ ವರ್ಗಗಳಿಗೆ ಸಾಲ ಸೌಲಭ್ಯ ನೀಡಲು ಸಾಧ್ಯವಾಗದೆ ಸಾಲದ ಅಂತರ ಹೆಚ್ಚಿರುವ ಅಥವಾ ಸಾಲ ಸೌಲಭ್ಯಗಳನ್ನು ದುರ್ಬಲ ವರ್ಗಗಳಿಗೆ ನೀಡದೆ ನಿರ್ಲಕ್ಷಿಸಿರುವ ಪ್ರದೇಶಗಳಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ತಮ್ಮ ಶಾಖೆಗಳನ್ನು ಪ್ರಾರಂಭಿಸುತ್ತವೆ. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಕಾರ್ಯನಿರ್ವಹಿಸುತ್ತಿರುವ ತಮ್ಮ ಪ್ರದೇಶಗಳಲ್ಲಿ ಕನಿಷ್ಟ ಐದು ಪ್ರಾಥಮಿಕ ಕೃಷಿ ಸಾಲ ಸಹಕಾರ ಸಂಸ್ಥೆಗಳಿಗೆ ಹಣಕಾಸು ಪೂರೈಸಲು ಸಾಧ್ಯವಾಗುವಂತಿರಬೇಕು. ೧೯೮೧ ಡಿಸೆಂಬರ್ ೧೯ ರಾಜ್ಯಗಳಲ್ಲಿ ೧೮೨ ಜಿಲ್ಲೆಗಳು ೧೦೭ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ಕಾರ್ಯ ನಿರ್ವಹಿಸಿವೆ. ೪೭೯೫ ಶಾಖೆಗಳನ್ನು ಈ ಬ್ಯಾಂಕುಗಳು ಹೊಂದಿದ್ದವು. ಡಿಸೆಂಬರ್ ೨೦೧೨ಕ್ಕೆ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಶಾಖೆ ೧೨೪೫೧ ಕ್ಕೆ ಬೆಳೆದಿತ್ತು.[೨೪] ೨೦೧೧-೧೨ರ ಆರ್‌ಬಿಐ ವರದಿ ಪ್ರಕಾರ ೧೬೭೪೧ ಶಾಖೆಗಳಿದ್ದವು. ಕೃಷಿ ಕ್ಷೇತ್ರಕ್ಕೆ ಕೇಂದ್ರ ಬಜೆಟ್‌ನಲ್ಲಿ ನಿಗದಿಪಡಿಸಿದ ಕೃಷಿ ಸಾಲದ ಪೂರೈಕೆಯಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಗುರಿ ಮತ್ತು ಸಾಧನೆಯನ್ನು ಕೆಳಗಿನ ಟೇಬಲ್‌ನಲ್ಲಿ ನೀಡಲಾಗಿದೆ. ವಾಣಿಜ್ಯ ಬ್ಯಾಂಕುಗಳು, ಸಹಕಾರ ಬ್ಯಾಂಕುಗಳು ಮತ್ತು ೨೦೦೪-೦೫ ರಿಂದ ೨೦೦೭-೦೮ರವರೆಗೂ ಗುರಿ ಮೀರಿದ ಸಾಧನೆಯನ್ನು ಪ್ರಾದೇಶಿಕ ಬ್ಯಾಂಕುಗಳು ಮಾಡಿದ್ದವು. ಶೇಕಡಾ ೧೦೦ಕ್ಕಿಂತ ಹೆಚ್ಚಿಗೆ ಸಾಧನೆ ಮಾಡಿದ್ದವು. ಆದರೆ ೨೦೦೮ರಲ್ಲಿ ಮಾತ್ರ ಗುರಿಗಿಂತ ಕಡಿಮೆ ಸಾಧನೆ ಮಾಡಿದ್ದವು. ೩೦೦೦೦ ಕೋಟಿ ಸಾಲ ವಿತರಣೆ ಗುರಿ ಇಟ್ಟುಗೊಂಡು ೨೬೭೨೪ ಕೋಟಿಯನ್ನು ಕೃಷಿಗೆ ಪೂರೈಸಲಾಗಿತ್ತು. ರಾಯಚೂರು ಜಿಲ್ಲೆ ವ್ಯಾಪ್ತಿಯಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ವಿತರಿಸಿದ ಸಾಲದ ವಿವರಗಳು ೨೦೧೦-೧೧ರ ಜಿಲ್ಲಾ ಸಾಲ ಯೋಜನೆ ಪ್ರಕಾರ ಒಟ್ಟು ೫೪ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ೩೮೮೬೦ ಲಕ್ಷ ಬೆಳೆ ಸಾಲ ನೀಡುವ ಗುರಿರೂಪಿಸಿ ೨೭೯೮ ಲಕ್ಷ ಸಾಲವನ್ನು ವಿತರಿಸಲಾಗಿತ್ತು. ಅದೇ ರೀತಿ ೨೦೧೧-೧೨ ವಾರ್ಷಿಕ ಸಾಲ ಯೋಜನೆ ಪ್ರಕಾರ ೫೩ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ೪೧೫೦೦ ಲಕ್ಷ ಗುರಿಯಲ್ಲಿ ೧೪೦೩೦ ಲಕ್ಷ ಸಾಲ ವಿತರಿಸಲಾಗಿತು. ಅದೇ ರೀತಿ ೨೦೧೨-೧೩ರ ವಾರ್ಷಿಕ ಸಾಲ ಯೋಜನೆ ಪ್ರಕಾರ ೫೯

ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ೩೨೪೫೧ ಲಕ್ಷ ಸಾಲ ವಿತರಣೆ ಗುರಿಯಲ್ಲಿ ೯೧೮ ಲಕ್ಷವನ್ನು ಬೆಳೆ ಸಾಲ ನೀಡಲಾಗಿತ್ತು. ಒಟ್ಟು ಮೂರು ವರ್ಷಗಳಲ್ಲಿ ೧೧೨೮೨೨ ಲಕ್ಷ ಬೆಳೆ ಸಾಲ ಗುರಿಯನ್ನು ವಾರ್ಷಿಕ ಸಾಲ ಯೋಜನೆಯಲ್ಲಿ ರೂಪಿಸಲಾಗಿತ್ತು. ಆದರೆ ವಿತರಣೆಯಾಗಿದ್ದ ೪೨೩೦೮ ಲಕ್ಷಗಳು ಮಾತ್ರ ಈ ಸಾಲಗಳನ್ನು ಪಡೆದವರು ಯಾರು ಎಂಬುದರ ಬಗ್ಗೆ ಮಾಹಿತಿ ಇಲ್ಲ. ಆದರೆ ಗ್ರಾಮೀಣ ಬ್ಯಾಂಕು ದೇವದುರ್ಗ ವ್ಯವಸ್ಥಾಪಕರೊಂದಿಗೆ ನಡೆಸದ ಸಂದರ್ಶನದ ಪ್ರಕಾರ ೨೦೧೧-೧೨ರಲ್ಲಿ ೧೧ ಕೋಟಿ ಕೃಷಿ ಸಾಲ ನೀಡಲಾಗಿತ್ತು. ಇದರಲ್ಲಿ ಟ್ರಾಕ್ಟರ್ ಸಾಲ ಸಹ ಇತ್ತು. ಕೃಷಿಗೆ ನೀಡಿದ ಎಲ್ಲಾ ಸಾಲಗಳನ್ನು ಭೂಮಿ ಆಧಾರವಾಗಿಟ್ಟು ಕೊಂಡು ಸಾಲ ನೀಡಲಾಗಿತ್ತು. ಇವರ ಪ್ರಕಾರ ದೊಡ್ಡ ರೈತರು, ಸಣ್ಣ ಹಿಡುವಳಿದಾರರು, ಅತೀ ಸಣ್ಣ ಹಿಡುವಳಿದಾರರೂ ಸಹ ಸಾಲ ಪಡೆದಿದ್ದರು. ಇವರೆಲ್ಲಾ ಭೂಮಿಯನ್ನು ಆಧಾರವಾಗಿ ನೀಡಿದ್ದರು. ವ್ಯವಸ್ಥಾಪಕರ ಪ್ರಕಾರ ಭೂ ಭದ್ರತೆ ನೀಡದೆ ಬ್ಯಾಂಕು ಸಾಲ ಸೌಲಭ್ಯ ನೀಡುವುದೇ ಇಲ್ಲ. ಭೂಮಿಯನ್ನು ಆಧಾರವಾಗಿ ನೀಡದ ಯಾವುದೇ ಸಣ್ಣ, ಅತೀ ಸಣ್ಣ ರೈತ, ಕೃಷಿ ಕಾರ್ಮಿಕರಿಗೆ ಸಾಲ ಸೌಲಭ್ಯ ನೀಡಿರಲಿಲ್ಲ. ಆ ಮೂಲಕ ಗ್ರಾಮೀಣ ಬ್ಯಾಂಕುಗಳು ನಿರೀಕ್ಷೆಗಳನ್ನು ಈಡೇರಿಸುವಲ್ಲಿ ವಿಫಲವಾದವು. ಉದ್ದೇಶಗಳಿಗೆ ಅನುಗುಣವಾಗಿ ಕಾರ್ಯ ನಿರ್ವಹಿಸುತಿಲ್ಲ. ೧೯೮೧ರ ಅವಧಿಯಲ್ಲಿ ಕೃಷಿ ಕ್ಷೇತ್ರಕ್ಕೆ ಪೂರೈಕೆಯಾದ ಮುಂಗಡ ಹಣಕಾಸಿನಲ್ಲಿ ಆರ್‌ಆರ್‌ಬಿಗಳು ವಿತರಿಸಿದ ಸಾಲದ ಪ್ರಮಾಣ ಕೇವಲ ಶೇಕಡಾ ೩.೯ರಷ್ಟಿತ್ತು. ೨೦೧೧-೧೨ರಲ್ಲಿ ಇದು ಶೇಕಡಾ ೧೧ರಷ್ಟಾಯಿತು. ಈ ಅತೃಪ್ತಿಕರ ಸಾಧನೆಗೆ ಅನೇಕ ಕಾರಣಗಳಿದ್ದವು. ಈ ಬ್ಯಾಂಕುಗಳ ಸಿಬ್ಬಂದಿಗೆ ಪ್ರೇರಣೆ ಮತ್ತು ತರಬೇತಿಯ ಕೊರತೆ, ಗುಣಮಟ್ಟದ ಸೇವೆ ನೀಡುವಲ್ಲಿ ಸಿಬ್ಬಂದಿಯ ವಿಫಲತೆ, ವ್ಯವಸ್ಥಾಪಕ ಅದಕ್ಷತೆ, ದುರ್ಬಲ ಸಾಲ ವಸೂಲಾತಿ ಇತ್ಯಾದಿ. ಈ ಬ್ಯಾಂಕುಗಳ ಸೇವೆ, ಅಸ್ತಿತ್ವ, ಲಾಭದಾಯಕ ರೀತಿಯಲ್ಲಿ ಕಾರ್ಯ ನಿರ್ವಹಿಸುವಿಕೆ ಮತ್ತು ಈ ಬ್ಯಾಂಕುಗಳ ಮಹತ್ವ ಇಲ್ಲವೂ ಪ್ರಶ್ನಿಸಲ್ಪಟ್ಟವು. ಈ ಸಂಸ್ಥೆಗಳ ಸೀಮಿತ ಬಂಡವಾಳ ಮತ್ತು ಸಂಪನ್ಮೂಲಗಳು, ಸೀಮಿತ ಕಾರ್ಯ ಕ್ಷೇತ್ರ ಇತ್ಯಾದಿಗಳಿಂದ ಕೃಷಿ ವಲಯದ ಹಣಕಾಸು ಅಗತ್ಯಗಳನ್ನು ಪೂರೈಸಲು ಈ ಸಂಸ್ಥೆಗಳು ಸಮರ್ಥವಾಗಿಲ್ಲ. ಭಾತರ ಸರ್ಕಾರ ಕೋರಿಕೆ ಮೇರೆಗೆ ಆರ್‌ಬಿಐ ಕೃಷಿ ಸಾಲ ಪರಿಶೀಲನ ಸಮಿತಿಯನ್ನುರಚಿಸಿತು. ಈ ಸಮಿತಿಯ ಅಧ್ಯಕ್ಷತೆಯನ್ನು ಎ. ಎಮ್. ಕುಸ್ರೊ ವಹಿಸಿದರು. ಭಾರತ ಗ್ರಾಮೀಣ ಹಣಕಾಸು ವ್ಯವಸ್ಥೆಯನ್ನು ಪರಿಶೀಲಿಸಿ ಸೂಕ್ಷ್ಮ ಸಲಹೆ ನೀಡುವ ಜವಾಬ್ದಾರಿ ಈ ಸಮಿತಿಗಿತ್ತು. ಈ ಸಮಿತಿ ೧೯೮೯ ಆಗಸ್ಟ್‌ನಲ್ಲಿ ಆರ್‌ಬಿಐಗೆ ತನ್ನ ವರದಿ ಸಲ್ಲಿಸಿತು. ಈ ಗ್ರಾಮೀಣ ಬ್ಯಾಂಕುಗಳ ಆರ್ಥಿಕ ಅಸಮರ್ಥನೆ ಮತ್ತು ಸಮರ್ಥ ಕಾರ್ಯ ನಿರ್ವಹಣೆಯ ದೌರ್ಬಲ್ಯಗಳನ್ನು ವಿಶೇಷವಾಗಿ ಗುರ್ತಿಸಿತು. ಹಾಗೆಯೇ ಗ್ರಾಮೀಣ ಸಾಲ ವ್ಯವಸ್ಥೆಯಲ್ಲಿ ಈ ಸಂಸ್ಥೆಗಳು ಮಹತ್ವದ ಸ್ಥಾನವಹಿಸದ ಕಾರಣ ಇವುಗಳನ್ನು ಪ್ರಾಯೋಜಿತ ಸಂಸ್ಥೆಗಳೊಂದಿಗೆ ವಿಲೀನಗೊಳಿಸುವಂತೆ ಶಿಫಾರಸ್ಸು ಮಾಡಿತು.[೨೫]

**ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ**

ಇದು ವಾಣಿಜ್ಯ ಬ್ಯಾಂಕುಗಳಲ್ಲಿ ಅತ್ಯಂತ ದೊಡ್ಡದು. ೧೯೨೧ರಲ್ಲಿ ಸ್ಥಾಪನೆಯಾದ ಇಂಪಿರಿಯಲ್ ಬ್ಯಾಂಕ್ ಆಫ್ ಇಂಡಿಯಾದ ಸಂಪೂರ್ಣ ಆಸ್ತಿ ಮತ್ತು ಹೊಣೆಗಾರಿಕೆಗಳನ್ನು ತನ್ನ ವಶಕ್ಕೆ ತೆಗೆದುಕೊಡ ಎಸ್‌ಬಿಐ ೧೯೫೫ರಲ್ಲಿ ಸ್ಥಾಪನೆಯಾಯಿತು. ಇತರೆ ವಾಣಿಜ್ಯ ಬ್ಯಾಂಕುಗಳು ೧೯೬೮ರಲ್ಲಿ ಗ್ರಾಮೀಣ ಹಣಕಾಸು ಮತ್ತು ಕೃಷಿ ಕ್ಷೇತಕ್ಕೆ ಪ್ರವೇಶಿಸುವ ಮುನ್ನವೆ ಎಸ್‌ಬಿಐ ಈ ಕ್ಷೇತ್ರವನ್ನು ಪ್ರವೇಶಿಸಿತು. ಎಸ್‌ಬಿಐ ರೈತರಿಗೆ ಕೃಷಿಯ ಎಲ್ಲಾ ಚಟುವಟಿಕೆಗಳಿಗೆ ನೇರ ಮುಂಗಡಗಳನ್ನು ನೀಡುತ್ತದೆ. ತಾನು ನೀಡುವ ಆರ್ಥಿಕ ಸಹಕಾರದಿಂದ ಕೃಷಿ ಉತ್ಪಾದನೆ ಹೆಚ್ಚಾಗಬೇಕು ಎಂಬುದು ಎಸ್‌ಬಿಐನ ದೃಷ್ಟಿಕೋನ. ಎಸ್‌ಬಿಐ ಅನೇಕ ಕೃಷಿ ಪೂರಕ ಉದ್ಯಮ ಚಹುವಟಿಕೆಗಳಾದ ಪಶು ಸಂಗೋಪನೆ, ಡೈರಿ ಉದ್ಯಮ, ಹಂದಿ ಸಾಕಾಣಿಕೆ, ಕೋಳಿ ಸಾಕಾಣಿಕೆ, ತೋಟಗಾರಿಕೆ ಮತ್ತು ಹಣ್ಣು ಕೃಷಿಗೆ ಹಣಕಾಸನ್ನು ಪೂರೈಸುತ್ತದೆ. ಎಸ್‌ಬಿಐ ಕೃಷಿ ಆಧಾರಿತ ಕೈಗಾರಿಕೆ ನಿಗಮಗಳಿಗೆ ಟ್ರಾಕ್ಟರ್, ಪವರ್ ಟಿಲ್ಲರ್, ಪಂಪ್ ಸೆಟ್ ಇತ್ಯಾದಿಗಳನ್ನು ಖರೀದಿಸಲು ಹಣಕಾಸು ಒದಗಿಸುತ್ತದೆ. ಕೃಷಿಗೆ ಅಗತ್ಯವಾದ ಸಲಕರಣೆಗಳನ್ನು ಖರೀದಿಸಲು, ಕೃಷಿ ಉತ್ಪನ್ನಗಳನ್ನು ದಾಸ್ತಾನು ಮಾಡಲು, ಕೃಷಿ ಹೂಡುವಳಿಗಳಾದರಸಗೊಬ್ಬರ, ಕ್ರಿಮಿನಾಶಕಗಳು ಹಾಗೂ ಬಿತ್ತನೆ ಬೀಜಗಳನ್ನು ವಿತರಿಸಲು ಸಹ ಎಸ್‌ಬಿಐ ಹಣಕಾಸನ್ನು ಒದಗಿಸುತ್ತದೆ. ಎಸ್‌ಬಿಐ ಕೃಷಿ ಸಾಲ ಘಟಕಗಳನ್ನು ಸ್ಥಾಪಿಸಿದೆ. ಈ ಘಟಕಗಳ ಜವಾಬ್ದಾರಿಯನ್ನು ನಿರ್ವಹಿಸಲು ಅಧಿಕಾರಗಳನ್ನು ನಿಯೋಜಿಸಿದೆ. ಈ ಅಧಿಕಾರಿಗಳು ಈ ಘಟಕದ ಕೃಷಿ ಹಣಕಾಸು ಕಾರ್ಯಗಳನ್ನು ಸಂಘಟಿಸುವ ಜವಾಬ್ದಾರಿ ಹೊಂದಿರುತ್ತಾರೆ. ಕೃಷಿ ಕ್ಷೇತ್ರ ಅನೇಕ ಯೋಜನೆಗಳನ್ನು ಎಸ್‌ಬಿಐ ಜಾರಿಗೊಳಿಸುತ್ತದೆ. ಕೃಷಿ ಸಾಲ, ಕೃಷಿ ತರಬೇತಿ ಇತ್ಯಾದಿಗಳು. ಈ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಎಸ್‌ಬಿಐ ಸರ್ಕಾರದ ಇಲಾಖೆ, ಕೃಷಿ ವಿಶ್ವವಿದ್ಯಾಲಯಗಳು ಹಾಗೂ ಆರ್‌ಬಿಐನ ಕೃಷಿ ತರಬೇತಿ ಘಟಕಗಳೊಂದಿಗೆ ಸಂಯೋಜನೆ ಮಾಡಿಕೊಂಡು ಕಾರ್ಯರೂಪಕ್ಕೆ ತರುತ್ತಿದೆ. ೧೯೬೯ರಲ್ಲಿ ಎಸ್‌ಬಿಐ ಸಣ್ಣ ರೈತರ ಯೋಜನೆಯನ್ನು ಜಾರಿಗೆ ತಂದಿತು. ಸಣ್ಣ ರೈತರ ಲಾಭದಾಯಕ ವ್ಯವಹಾರವನ್ನು ಗುರುತಿಸಿ ಅದಕ್ಕೆ ಅಗತ್ಯವಾದ ಸಾಲದ ನೆರವನ್ನು ನೀಡಲು ಎಸ್‌ಬಿಐ ಈ ಯೋಜನೆಯನ್ನು ಜಾರಿಗೆತಂದಿತು. ಗುಂಪು ಸಾಲಗಳ ಆಧಾರದಮೇಲೆ ಈ ಯೋಜನೆಯಡಿ ಸಾಲಗಳನ್ನು ಮಂಜೂರುಮಾಡಲಾಗುತ್ತದೆ. ಸಾಲ ಪಡೆಯಲು ಇಚ್ಚಿಸುವ ರೈತರು ಗುಂಪುಗಳನ್ನುರಚಿಸಿಕೊಂಡು ಗುಂಪಿನಡಿ ವೈಯಕ್ತಿಕ ಸಾಲಗಳನ್ನು ಪಡೆಯಬಹುದು. ಇಂತಹ ಗುಂಪುಗಳ ಎಲ್ಲಾ ರೈತರು ಸಣ್ಣ ರೈತರ ಯೋಜನೆಯಡಿ ಸಾಲ ಪಡೆಯಲು ಅವಕಾಶ ನೀಡುವುದರಿಂದ ಸಾಲದ ಭರವಸೆಯಿರುತ್ತದೆ. ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಬ್ಯಾಂಕು ಗ್ರಾಮಗಳನ್ನು ದತ್ತು ತೆಗೆದುಕೊಳ್ಳುತ್ತದೆ. ದತ್ತು ಕಾರ್ಯಕ್ರಮದಡಿ ಕೃಷಿ ಅಭಿವೃದ್ಧಿಗೆ ಅಗತ್ಯವಿರುವ ಎಲ್ಲಾ ಸಾಲಗಳನ್ನು ರೈತರಿಗೆ ನೀಡಲಾಗುತ್ತದೆ. ಅದೇರೀತಿ 'ಕೃಷಿ ಪದವೀಧರ ಯೋಜನೆ' ಯನ್ನು ಅನುಷ್ಠಾನಕ್ಕೆ ತಂದಿತು. ಈ ಯೋಜನೆಯ ಬಹುಮುಖ್ಯ ಉದ್ದೇಶ ತಾಂತ್ರಿಕ ಮತ್ತು ಶೈಕ್ಷಣಿಕವಾಗಿ ಅರ್ಹ ಪದವಿಧರರು ಡೈರಿ ವಿಜ್ಞಾನ, ಕೃಷಿ ಇಂಜಿನಿಯರ್

ಇತ್ಯಾದಿ ಕೃಷಿ ಅಭಿವೃದ್ಧಿ ಚಟುವಟಿಕೆ, ಯೋಜನೆಗಳನ್ನುರೂಪಿಸಿ ಹಣಕಾಸು ಸಮಸ್ಯೆಯಿರುವವರಿಗೆ ಸಾಲ ಸೌಲಭ್ಯ ಒದಗಿಸಿ ಪ್ರೋತ್ಸಾಹಿಸುವುದಾಗಿದೆ. ಅದೇ ರೀತಿ ಜಮೀನ್ದಾರರು ಕೃಷಿ ಅಭಿವೃದ್ಧಿಗೆ ಭೂಮಿ ಖರೀದಿಮಾಡಲು ಸಹ ಎಸ್‌ಬಿಐ ಹಣಕಾಸು ಒದಗಿಸುತ್ತದೆ. ೧೯೭೧ರಲ್ಲಿ ಎಸ್‌ಬಿಐ ಕೃಷಿ ವಲಯಕ್ಕೆ ಹಣಕಾಸು ಪೂರೈಸಲು ತನ್ನ ಕಾರ್ಯತಂತ್ರ ಮತ್ತು ಉದ್ದೇಶವನ್ನು ಪರಿಶೀಲನೆಗೆ ಒಳಪಡಿಸಿತು. ತನ್ನ ಬ್ಯಾಂಕಿನ ವ್ಯವಹಾರದ ಆರೋಗ್ಯಕರ ಬೆಳವಣಿಗೆ ದೃಷ್ಟಿಯಿಂದ ಎಸ್‌ಬಿಐ ಈ ಪರಿಶೀಲನೆಯನ್ನು ಕೈಗೊಂಡಿತು. ಹಾಗೂ ಈ ಪರಿಶೀಲನೆ ನಂತರ ತನ್ನ ಹಣಕಾಸು ಒದಗಿಸುವಿಕೆಯನ್ನು ನಿರ್ಧಿಷ್ಟ ಪ್ರದೇಶಕ್ಕೆ ಕೇಂದ್ರೀಕರಿಸಲು ನಿರ್ದರಿಸಿತು. ಹಿಂದುಳಿದ ವರ್ಗಗಳು ಹೆಚ್ಚಾಗಿರುವ ಹಾಗೂ ಸರ್ಕಾರದ ವಿಶೇಷ ಯೋಜನೆಗಳು ಜಾರಿ ಯಾಗುತ್ತಿರುವ ಪ್ರದೇಶವನ್ನು ಆಯ್ಕೆ ಮಾಡಿಕೊಂಡು ಈ ಪ್ರದೇಶದ ಆರ್ಥಿಕತೆಯ ಕೃಷಿ ಮತ್ತು ಕೃಷಿಯೇತರ ಚಟುಚಟಿಕೆಗಳಿಗೆ ಅಗತ್ಯ ಹಣಕಾಸನ್ನು ಒದಗಿಸುವ ಉದ್ದೇಶವನ್ನು ಬ್ಯಾಂಕುಹೊಂದಿತ್ತು. ಈ ಪ್ರದೇಶಗಳಲ್ಲಿ ಕೃಷಿ ಅಭಿವೃದ್ಧಿ ಶಾಖೆಗಳನ್ನು ತರೆದು ಅವುಗಳಿಗೆ ಅಗತ್ಯವಾದ ತಾಂತ್ರಕ ನೆರೆವು ಮತ್ತು ಸಿಬ್ಬಂದಿಯನ್ನು ನೀಡಲಾಗುತ್ತದೆ. ಇಂತಹ ಪ್ರದೇಶಗಳನ್ನು ಗುರುತಿಸುವಾಗ ಬ್ಯಾಂಕು ಸರ್ಕಾರದೊಂದಿಗೆ ಸೂಕ್ತ ಚರ್ಚೆಗಳನ್ನು ನಡೆಸುತ್ತದೆ.

ಗ್ರಾಮೀಣ ಭಾರತದಲ್ಲಿ ಎಸ್‌ಬಿಐ ಕೃಷಿ ಅಭಿವೃದ್ಧಿಗೆ ಸಾಕಷ್ಟು ಸಾಲ ಪೂರೈಸಿ ಹೆಚ್ಚಿನ ಸಾಧನೆ ಮಾಡಿದೆ. ದೇಶದಾದ್ಯಂತ ೧೯೮೪ರ ಅವಧಿಗೆ ೪೩೧ ಕೃಷಿ ಅಭಿವೃದ್ಧಿ ಶಾಖೆಗಳನ್ನು ಎಸ್‌ಬಿಐ ತೆರೆದಿದೆ. ೪೨ ಲಕ್ಷ ರೈತರು ಈ ಶಾಖೆಗಳಿಂದ ಪ್ರಯೋಜನ ಪಡೆದಿದ್ದಾರೆ. ಆದರೆ ಎಸ್‌ಬಿಐ ಒಂದು ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕಾಗಿ ಆರ್‌ಬಿಐ ನ ನಿಯಮಗಳಿಗೆ ಒಳಪಟ್ಟು ಕಾರ್ಯನಿರ್ವಹಿಸುತ್ತದೆ. ಈ ಬ್ಯಾಂಕು ಸಾಲಗಳನ್ನು ನೀಡುವಾಗ ಸಾಲಕ್ಕೆ ಸ್ತಿರಾಸ್ತಿ ಚರಾಸ್ತಿ ಭದ್ರತೆಯನ್ನು ಆಧಾರವಾಗಿ ಪಡೆದ ಸಾಲ ಸೌಲಭ್ಯನೀಡುತ್ತದೆ. ಇದನ್ನು ಅವಲೋಕಿಸಿದರೆ ಆರ್ಥಿಕವಾಗಿ ಸದೃಡ ಮತ್ತು ಸಮರ್ಥವಾಗಿದ್ದು ಭದ್ರತೆ ನೀಡುವ ಸಾಮರ್ಥ್ಯವಿರುವ ದೊಡ್ಡ ಶ್ರೀಮಂತ ರೈತರು ಮಾತ್ರ ಸಾಲ ಪಡೆದಿದ್ದಾರೆ ಇನ್ನಬಹುದು. ಸಾಲ ಭದ್ರತೆ ನೀಡಲು ಸಾಧ್ಯವಾಗದ ಹಾಗೂ ಪಡೆದ ಸಾಲವನ್ನು ಹಿಂದಿರುಗಿಸುವ ಆದಾಯ ಮೂಲಗಳಿಲ್ಲದ ಆರ್ಥಿಕವಾಗಿ ಸಮರ್ಥರಲ್ಲದ ಸಣ್ಣ ಅತೀ ಸಣ್ಣ ರೈತರು, ಕೃಷಿ ಕಾರ್ಮಿಕರು ಎಸ್‌ಬಿಐ ನ ಯಾವುದೇ ವಿಶೇಷ ಕೃಷಿಯೋಜನೆಗಳ ಪ್ರಯೋಜನ ಪಡೆಯಲಾಗಲ್ಲ. ಮಾರುಕಟ್ಟೆ ಬೆಲೆಗಳು ಅನಿಶ್ಚಿತತೆ, ನೀರಾವರಿ ಸೌಲಭ್ಯಗಳ ಕೊರತೆ, ಆಧುನಿಕ ತಂತ್ರಜ್ಞಾನ ಬೇಸಾಯ ಕ್ರಮ ಅಳವಡಿಸಿ ಹೆಚ್ಚು ಉತ್ಪನ್ನ ಪಡೆಯುವ ಅವಕಾಶಗಳ ಕೊರತೆಗಳಿಂದ ಸಣ್ಣ ಅತೀ ಸಣ್ಣ ರೈತರು ತುಂಡು ಹಿಡುವಳಿಗಳನ್ನು ಹೊಂದಿದ್ದರೂ ಅವುಗಳನ್ನು ಬ್ಯಾಂಕಿಗೆ ಭದ್ರತೆಯಾಗಿ ನೀಡಿ ಸಾಲ ಸೌಲಭ್ಯ ಯೋಜನೆಗಳ ಲಾಭ ಪಡೆಯಲು ಸಾಧ್ಯವಾಗಿಲ್ಲ. ಎಸ್‌ಬಿಐ ನಿಂದ ೪೨ ಲಕ್ಷಕ್ಕೂ ಹೆಚ್ಚು ರೈತರು ಈ ಬ್ಯಾಂಕಿನ ಸಾಲ ಯೋಜನೆಗಳ ಪ್ರಯೋಜನ ಪಡೆದಿದ್ದಾರೆ ಎಂದರೆ ಯಾವ ರೈತರು? ಎಂಬ ಮೂಲಭೂತ ಸಮಸ್ಯೆ ಎದುರಾಗುತ್ತದೆ. ಪ್ರಸ್ತತ ಈ ಅಧ್ಯಯನದ ಮುಖ್ಯ ಆಶಯವು ಅದೆ. ಸಾಲ ಸೌಲಭ್ಯಗಳು ಮತ್ತು ಇದಕ್ಕೆ ಸಂಬಂಧಿಸಿದ

ಸರ್ಕಾರದ ಅನೇಕ ಯೋಜನೆಗಳ ಅನುಕೂಲವನ್ನು ಸಮಾಜದ ಯಾವ ರೈತರು ಪಡೆಯುತ್ತಾರೆ? ಅವರು ಸಣ್ಣ, ಅತೀ ಸಣ್ಣ ಅಥವಾ ದೊಡ್ಡ-ಶ್ರೀಮಂತ ರೈತರೆ? ಅವರು ಯಾವ ಜಾತಿಗೆ ಸೇರಿದವರು? ಸಾಲ ಸೌಲಭ್ಯ ಪಡೆಯಲು ಕಾರಣವಾಗದ ಅಂಶಗಳೇನು? ಪಡೆಯಲು ಸಾಧ್ಯವಾಗದ ರೈತರು ಸ್ಥಿತಿ ಹಿನ್ನೆಲೆಗಳೇನು? ಅದಕ್ಕೆ ಪರಿಹಾರಗಳೇನು? ಈ ರೀತಿಯ ತಾರತಮ್ಯಕ್ಕೆ ಕಾರಣಗಳೇನು? ಇದಕ್ಕೆ ಸಂಬಂಧಿಸಿದ ರಾಜಕೀಯ ಆರ್ಥಿಕತೆ ಏನು? ಎಂಬುದನ್ನು ಚರ್ಚಿಸುವುದೇ ಆಗಿದೆ. ಎಸ್‌ಬಿಐ ನ ಕೃಷಿ ಅಭಿವೃದ್ಧಿ ಶಾಖೆಗಳು, ನಿರ್ಧಿಷ್ಟ ಪ್ರದೇಶದ ಆಯ್ಕೆ, ದತ್ತು ಗ್ರಾಮಗಳ ಆಯ್ಕೆ ಹೀಗೆ ಅನೇಕ ಯೋಜನೆಗಳ ಮೂಲಕ ಗ್ರಾಮೀಣ ಹಣಕಾಸು ವ್ಯವಸ್ಥೆಯಲ್ಲಿ ಕೃಷಿಗೆ ವಿಶೇಷವಾಗಿ ಅಪಾರ ಪ್ರಮಾಣದ ಸಂಪನ್ಮೂಲಗಳನ್ನು ಸಾಲ ಮುಂಗಡಗಳನ್ನು ಪೂರೈಸಿ ದೇಶದ ಆರ್ಥಿಕತೆ ಸುಧಾರಣೆಯಲ್ಲಿ ಕೊಡುಗೆ ನೀಡುತ್ತಿದೆ ಎನ್ನಲಾಗಿದೆ. ಎಸ್‌ಬಿಐ ನ ಎಲ್ಲಾ ಸಾಲ ಮತ್ತು ಅದರ ಪೂರಕ ಯೋಜನೆಗಳ ಲಾಭ ಗ್ರಾಮೀಣ ವುಳ್ಳವರ ಶ್ರೀಮಂತ ರೈತರ ಪಾಲಾಗಿದೆ ಎನ್ನಬಹುದು.

**ಇತರೆ ಸಂಸ್ಥೆಗಳು**

**ಕೃಷಿ ಹಣಕಾಸು ನಿಗಮ ನಿಯಮಿತ (ಎಎಫ್‌ಸಿ)**

೧೯೬೨ರ ಅವಧಿಯಲ್ಲಿ ಭಾರತೀಯ ಬ್ಯಾಂಕಿಂಗ್ ಸಂಸ್ಥೆಯು ಈ ಕೃಷಿ ಹಣಕಾಸು ನಿಗಮ ನಿಯಮಿತವನ್ನು ಪ್ರಾರಂಬಿಸಿತು. ಕೃಷಿ ಯೋಜನೆಗಳಿಗೆ ಬೇಕಾದ ಹಣಕಾಸನ್ನು ಪೂರೈಸಲು ಅನುಕೂಲವಾಗುಂತೆ ವಾಣಿಜ್ಯ ಬ್ಯಾಂಕುಗಳಿಗೆ ಸಹಾಯಮಾಡುವುದು ಹಾಗೂ ಕೃಷಿ ಕ್ಷೇತ್ರದ ಅಭಿವೃದ್ಧಿಯಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುವ ಉದ್ದೇಶದಿಂದ ಈ ನಿಗಮವನ್ನು ಸ್ಥಾಪಿಸಲಾಯಿತು. ೧೯೬೮ರಲ್ಲಿ ೧೯೫೬ರ ಭಾರತೀಯ ಕಂಪನಿಗಳ ಕಾಯಿದೆಯಡಿ ಈ ನಿಗಮವನ್ನು ತರಲಾಯಿತು. ಕೃಷಿ ಕ್ಷೇತ್ರದ ಹಲವು ಚಟುವಟಿಕೆಗಳಿಗೆ ಹಣಕಾಸು ಪೂರೈಸುವುದು ಈ ನಿಗಮದ ಬಹುಮುಖ್ಯ ಕಾರ್ಯವಾಗಿತ್ತು. ಕೃಷಿ ಉತ್ಪಾದನೆ, ಮಾರುಕಟ್ಟೆ, ಸಾರಿಗೆ ಮತ್ತು ಕೃಷಿ ಉತ್ಪನ್ನ ಸಂಗ್ರಹ, ಕೃಷಿ ಯಾಂತ್ರೀಕರಣ, ಪ್ರಾಣಿ ಸಾಕಾಣಿಕೆ, ಅರಣ್ಯ ಇತರೇ ಕೃಷಿ ಉತ್ಪಾದನೆ ಮತ್ತು ಕೃಷಿ ಚಟುವಟಿಕೆಗಳಿಗೆ ಹಣಕಾಸು ಒದಗಿಸುತ್ತಿತ್ತು ಈ ನಿಗಮ. ಆದರೆ ೧೯೭೧ರ ರಾಷ್ಟ್ರೀಯ ಕೃಷಿ ಆಯೋಗ ತನ್ನ ಮದ್ಯಂತರ ವರದಿ ಕೃಷಿ ಹಣಕಾಸು ನಿಗಮದ ಪ್ರತ್ಯೇಕ ಅಸ್ತಿತ್ವವನ್ನು ಪ್ರಶ್ನಿಸಿ ಭಾರತದ ಕೃಷಿ ಅಭಿವೃದ್ಧಿ ಸಂಸ್ಥೆಯೊಂದಿಗೆ ವಿಲೀನಗೊಳಿಸುವಂತೆ ಸಲಹೆನೀಡಿತು.

**ಕೃಷಿ ಪನರ್ ಹಣಕಾಸು ಮತ್ತು ಅಭಿವೃದ್ಧಿ ನಿಗಮ (ಎಆರ್‌ಡಿಸಿ)**

ಈ ನಿಗಮ ೧೯೬೩ರ ಕಾಯ್ದೆ ಪ್ರಕಾರ ೧೯೬೩ರಲ್ಲಿ ಸ್ಥಾಪನೆಯಾಯಿತು. ಈ ನಿಗಮ ಪುನರ್ ಹಣಕಾಸು ಒದಗಿಸುವ ಸಂಸ್ಥೆಗಿಂತ ಕೃಷಿ ಅಭಿವೃದ್ಧಿ ಬ್ಯಾಂಕ್ ಆಗಿ ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸಿತು. ಈ ನಿಗಮ ದೀರ್ಘಾವಧಿ ಕೃಷಿ ಹಣಕಾಸು ಕ್ಷೇತ್ರದಲ್ಲಿ ಅಪೆಕ್ಸ್ ಅತ್ಯುನ್ನತ ಬ್ಯಾಂಕಾಗಿ ಕಾರ್ಯನಿರ್ವಹಿಸಿತು. ಕೃಷಿ ಕ್ಷೇತ್ರದ ಉತ್ಪಾದನೆ ಮತ್ತು ಕೃಷಿ ಬೆಳವಣಿಗೆಗೆ ನೆರವಾಗುವಂತೆ ದೀರ್ಘಾವಧಿ ಮತ್ತು ಮಧ್ಯಮಾವಧಿ ಅಭಿವೃದ್ಧಿ ಯೋಜನೆಗಳಿಗೆ ಹಣಕಾಸು ಪೂರೈಸಿತು. ಪಂಚವಾರ್ಷಿಕ

ಯೋಜನೆಗಳಲ್ಲಿ ನಿಗದಿಗೊಳಿಸಿದ್ದ ಗುರಿಗಳನ್ನು ಸಾಧಿಸಲು ಅನುಕೂಲ ವಾಗುವಂತೆ ಉತ್ಪಾದಕ ಉದ್ದೇಶಗಳಿಗೆ ಸಾಲ ಒದಗಿಸುತ್ತಾ ಅಭಿವೃದ್ಧಿಯ ಬ್ಯಾಂಕಾಗಿ ಪರಿಣಾಮ ಕಾರಿಯಾಗಿ ಕಾರ್ಯನಿರ್ವಹಿಸುವುದು ಈ ನಿಗಮದ ಮುಖ್ಯ ಉದ್ದೇಶವಾಗಿತ್ತು. ಸದಸ್ಯ ಬ್ಯಾಂಕುಗಳ ಸಬಲೀಕರಣಗೊಳಿಸುವುದು, ಬಲವರ್ಧನೆಗೊಳಿಸುವುದು, ಸಣ್ಣ ರೈತರಿಗೆ ಹೆಚ್ಚಿನ ಪ್ರಮಾಣದಲ್ಲಿ ಸಾಲ ಸೌಲಭ್ಯದ ನೆರವು ನೀಡುವುದಕ್ಕೆ ಆದ್ಯತೆನೀಡಿತು. ೧೯೬೬-೬೭ರ ಅವಧಿಯಲ್ಲಿ ೧೫೨ ಕೋಟಿ ಹಣಕಾಸು ನೆರವನ್ನು ಒದಗಿಸಿತ್ತು.

**ಭಾರತೀಯ ರಿಸರ್ವ್ ಬ್ಯಾಂಕು**

೧೯೩೪ರ ಆರ್‌ಬಿಐ ಕಾಯ್ದೆಯಡಿ ೧೯೩೫ ಏಪ್ರಿಲ್‌ನಲ್ಲಿ ಆರ್‌ಬಿಐ ಸ್ಥಾಪನೆಯಾಯಿತು. ೧೯೩೫ರಲ್ಲಿ ರಾಷ್ಟ್ರೀಕರಣಗೊಂಡಿತು. ೧೯೪೯ರ ಆರ್‌ಬಿಐ ಕಾಯ್ದೆ ಪ್ರಕಾರ ತನ್ನ ಮಿತಿಯೊಳಗೆ ಕೃಷಿಗೆ ಸಂಪನ್ಮೂಲಗಳನ್ನು ಪೂರೈಸುವ ಜವಾಬ್ದಾರಿ ಆರ್‌ಬಿಐಗೆ ಇತ್ತು. ಆರ್‌ಬಿಐನ ನೆರವು ರೈತರಿಗೆ ಪರೋಕ್ಷವಾಗಿ ದೊರೆಯುತ್ತಿತ್ತು. ಗ್ರಾಮೀಣ ಸಾಲಗಳ ಜವಾಬ್ದಾರಿಗಳನ್ನು ವಹಿಸಿಕೊಳ್ಳಲು ಪ್ರತ್ಯೇಕ ಕೃಷಿ ಇಲಾಖೆ ಪ್ರತ್ಯೇಕ ಘಟಕವನ್ನು ಸ್ಥಾಪಿಸಿದೆ. ದೇಶದ ಅತ್ಯುನ್ನತ ಹಣಕಾಸು ಸಂಸ್ಥೆಯಾದ ಇದು ಗ್ರಾಮೀಣ ಹಣಕಾಸು ವ್ಯವಸ್ಥೆಗೆ ಸಂಬಂದಿಸಿದ ನೀತಿಗಳನ್ನುರಚಿಸುತ್ತದೆ ತನ್ನ ಹಣಕಾಸು ಕಾರ್ಯಗಳ ಮೂಲಕ ದೇಶದ ಆರ್ಥಿಕ ಅಭಿವೃದ್ಧಿಯಲ್ಲಿ ತನ್ನದೆ ಪಾತ್ರ ವಹಿಸುತ್ತದೆ. ಮುಂದೆ ಕೃಷಿ ಸಾಲ ಮತ್ತು ಗ್ರಾಮೀಣ ಹಣಕಾಸು ವಲಯಕ್ಕೆ ಸಂಬಂಧಿಸಿದ ಎಲ್ಲಾ ಸಂಸ್ಥೆಗಳನ್ನು ವಿಲೀನಗೊಳಿಸಿ ೧೯೮೨ರಲ್ಲಿ ನಬಾರ್ಡ್‌ನ್ನು ಸ್ಥಾಪಿಸಲಾಯಿತು. ನಬಾರ್ಡ್ ಒಂದು ರಾಷ್ಟ್ರ ಮಟ್ಟದ ಅಪೆಕ್ಸ್ ಸಂಸ್ಥೆಯಾಗಿ ಆರ್‌ಬಿಐ ನ ಗ್ರಾಮೀಣ ಹಣಕಾಸಿಗೆ ಸಂಬಂಧಿಸಿದ ಹಣಕಾಸು ನೀತಿಗಳನ್ನು ಜಾರಿಗೊಳಿಸಿತ್ತದೆ. ಪ್ರಸ್ತುತ ನಬಾರ್ಡ್ ಗ್ರಾಮೀಣ ಹಣಕಾಸಿನ ಮೇಲುಸ್ತುವಾರಿ ಸಂಸ್ಥೆಯಾಗಿ ಕಾರ್ಯನಿರ್ವಹಿಸುತ್ತಿದೆ. ಆರ್‌ಬಿಐ ಗ್ರಾಮೀಣ ಸಾಲ ಪೂರೈಕೆ ವ್ಯವಸ್ಥೆಯನ್ನು ಸುಧಾರಿಸಲು ಅನೇಕ ಕ್ರಮಗಳನ್ನು ಕೈಗೊಂಡಿದೆ. ಈ ವ್ಯವಸ್ಥೆಯಡಿ ಕಾರ್ಯನಿರ್ವಹಿಸುವ ಹಣಕಾಸು ಸಂಸ್ಥೆಗಳ ಸಮಸ್ಯೆಗಳನ್ನು ಸರಿಪಡಿಸಿ ಇಡೀ ವ್ಯವಸ್ಥೆಯನ್ನು ಸಧೃಡಗೊಳಿಸಿ ಗ್ರಾಮೀಣ ಸಾಲಗಳು ಸರಿಯಾಗಿ ಪೂರೈಕೆಯಾಗಲು ವ್ಯವಸ್ಥೆರೂಪಿಸುತ್ತದೆ. ಆ ಮೂಲಕ ದೇಶದ ಗ್ರಾಮೀಣ ಪ್ರದೇಶದ ಸಮಗ್ರ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸಿದೆ. ಕೃಷಿ ಕ್ಷೇತ್ರಕ್ಕೆ ಸರಿಯಾದ ಸಮಯಕ್ಕೆ ಸಾಕಷ್ಟು ಪ್ರಮಾಣದಲ್ಲಿ ಸಾಲ ಸೌಲಭ್ಯಗಳು ದೊರೆಯುವಂತೆ ಮಾಡಲು ಆರ್‌ಬಿಐ ಸಹಕಾರ ಸಂಸ್ಥೆಗಳಿಗೆ ಸಾಕಷ್ಟು ನೆರವನ್ನು ನೀಡಿದೆ. ಸಣ್ಣ ಮತ್ತು ಆರ್ಥಿಕವಾಗಿ ದುರ್ಬಲವಾಗಿರುವ ರೈತರ ಸಾಲ ಅಗತ್ಯಗಳನ್ನು ಪೂರೈಸಲು ಬ್ಯಾಂಕು ಹಲವು ಕ್ರಮಕೈಗೊಂಡಿದೆ. ಕೃಷಿ ಕ್ಷೇತ್ರದ ಸಾಲದ ಅಗತ್ಯ ಮತ್ತು ಗ್ರಾಮೀಣ ಸಾಲ ಪೂರೈಕೆಯನ್ನು ನಿರ್ವಹಿಸಲು ಆರ್‌ಬಿಐ ಎರಡು ನಿಧಿಗಳನ್ನು ಸ್ಥಾಪಿಸುತ್ತದೆ.[೨೨] ಈ ನಿಗಮಗಳನ್ನು ೧೯೫೪ರ ಗ್ರಾಮೀಣ ಸಾಲ ಸಮೀಕ್ಷೆ ಸಮಿತಿ ಶಿಫಾರಸ್ಸಿನ ಮೇಲೆ ಸ್ಥಾಪಿಸಲಾಗಿದೆ. ದೀರ್ಘಾವಧಿ ವ್ಯವಹಾರಗಳಿಗೆ ರಾಷ್ಟ್ರೀಯ ಕೃಷಿ ಸಾಲ ನಿಧಿಯನ್ನು ಸ್ಥಾಪಿಸಿ ಮುಂದೆ ಇದನ್ನು ರಾಷ್ಟ್ರೀಯ ಗ್ರಾಮೀಣ ಸಾಲ ನಿಧಿಯಾಗಿ ಮರು ಹೆಸರಿಸಿ ಇದನ್ನು ನಬಾರ್ಡ್‌ಗೆ ವರ್ಗಾಹಿಸಲಾಯಿತು.

ಕೃಷಿಯ ಮುಂಗಡಗಳನ್ನು ನೀಡಲು ವಾಣಿಜ್ಯ ಬ್ಯಾಂಕುಗಳಿಗೆ ಆರ್.ಬಿ.ಐ ಯಾವುದೇ ಹಣಕಾಸು ನೀಡಲಿಲ್ಲ. ಆದರೆ "ಸಣ್ಣ ರೈತರ ಕಿಟಕಿ" (ಸ್ಮಾಲ್ ಫಾರ್ಮ್‌ರ್ಸ್ ವಿಂಡೋ) ೧೯೭೭ರಲ್ಲಿ ಅನುಷ್ಠಾನಕ್ಕೆ ತಂದ ಈ ಯೋಜನೆಯಡಿ ವಯಕ್ತಿಕ ನೇರ ಸಾಲಗಳನ್ನು ಸಣ್ಣ ರೈತರಿಗೆ ಅಲ್ಪಾವಧಿ ಮದ್ಯಮಾವಧಿ ಹಾಗೂ ದೀರ್ಘಾವಧಿಗಳನ್ನು ನೀಡಲು ಅವಕಾಶ ಮಾಡಿಕೊಡಲಾಯಿತು. ಆದರೆ ಈ ಯೋಜನೆಯನ್ನು ಆರ್.ಬಿ.ಐ ೧೯೮೬ರಲ್ಲಿ ನಿಲ್ಲಸಿತು. ಗ್ರಾಮೀಣ ಸಾಲ ಪೂರೈಕೆಯ ಪ್ರಮುಖ ಹಣಕಾಸು ಸಂಸ್ಥೆಗಳಾದ ಸಹಕಾರ ಸಂಘಗಳು, ವಾಣಿಜ್ಯ ಬ್ಯಾಂಕುಗಳಿಗೆ ಹಣಕಾಸು ಒದಗಿಸುವಂತೆ ಆರ್.ಬಿ.ಐ ಗ್ರಾಮೀಣ ಬ್ಯಾಂಕುಗಳಿಗೂ ಹಣಕಾಸನ್ನು ಪೂರೈಸುತ್ತಿತ್ತು. ಆರ್.ಬಿ.ಐ ತನ್ನ ಅಭಿವೃದ್ಧಿ ಅಥವಾ ಪ್ರೋತ್ಸಾಹಕ ಕಾರ್ಯಗಳಡಿ ಸಹಕಾರಿ ಸಂಘಗಳ ಮೂಲ ವ್ಯವಸ್ಥೆಯಲ್ಲಿನ ದೌರ್ಬಲ್ಯಗಳನ್ನು ಗುರುತಿಸಿ ಸಿರಿಪಡಿಸಲು ಹಲವು ಕ್ರಮಗಳನ್ನು ಕೈಗೊಂಡಿದೆ. ರಾಜ್ಯ, ಜಿಲ್ಲಾ ಸಹಕಾರ ಸಂಘಗಳ ಬ್ಯಾಂಕುಗಳನ್ನು ಮರುಸಂಘಟಿಸುವುದು, ಆರ್ಥಿಕ ಮತ್ತು ಆಡಳಿತಾತ್ಮಕವಾಗಿ ದುರ್ಬಲವಾಗುವ ಜಿಲ್ಲಾ ಸಹಕಾರಿ ಬ್ಯಾಂಕುಗಳ ಪುನರ್ವಸತಿ, ಪ್ರಾಥಮಿಕ ಕೃಷಿ ಸಹಕಾರ ಸಂಘಗಳ ಸಬಲೀಕರಣ ಹಾಗೂ ಈ ಬ್ಯಾಂಕು ಸಂಘಗಳ ಸಿಬ್ಬಂದಿಗೆ ಅಗತ್ಯ ತರಬೇತಿ ನೀಡುವುದು ಇತ್ಯಾದಿ. ಸಹಕಾರ ಸಂಸ್ಥೆಗಳ ಸಾಲ ನೀತಿಗಳ ಪರಿಷ್ಕರಣೆ ಮಾಡಲು ಆರ್.ಬಿ.ಐ ಕೆಲವು ಕ್ರಮಗಳನ್ನು ಕೈಗೊಂಡಿತು. ಉದಾಹರಣೆಗೆ ಬೆಳೆಸಾಲ ಯೋಜನೆಗಳ ಅನುಷ್ಠಾನ, ಅಲ್ಪಾವಧಿ ಸಾಲಗಳನ್ನು ಮದ್ಯಮಾವಧಿ ಸಾಲಗಳಾಗಿ ಪರಿವರ್ತನೆ, ದೀರ್ಘಾವಧಿ ಸಾಲಗಳಾಗಿ ಆರ್.ಬಿ.ಐ ಭೂ ಅಭಿವೃದ್ಧಿ ಬ್ಯಾಂಕುಗಳ ಸಾಲ ನೀತಿಗಳನ್ನು ಪರಿಷ್ಕರಿಸಿತು. ಸಹಕಾರಿ ಸಂಸ್ಥೆಗಳ ಅಗಾಧವಾದ ಸಾಲ ಬಾಕಿಯನ್ನು ನಿಯಂತ್ರಿಸಲು ಆರ್.ಬಿ.ಐ ಬ್ಯಾಂಕುಗಳು ನೀಡುವ ಮುಂಗಡಗಳನ್ನು ನಿಯಂತ್ರಿಸಲು ಕೆಲವು ನಿಭಂದನೆಗಳನ್ನು ಜಾರಿಗೆ ತಂದಿತು.[೨೬]

ವಾಣಿಜ್ಯ ಬ್ಯಾಂಕುಗಳು ಆದ್ಯತೆಯ ಮೇರೆಗೆ ಸಣ್ಣ ಸಾಲಗಳು ಅಗತ್ಯವಿರುವವರಿಗೆ ಸಾಲ ನೀಡಲು ಅನುಕೂಲವಾಗುವಂತೆ ಆರ್.ಬಿ.ಐ ಸಾಲ ಖಾತರಿ ಯೋಜನೆಯನ್ನು ಜಾರಿಗೆ ತಂದಿತು. ಸಾಲ ಖಾತರಿ ನಿಗಮವೆಂದು ಸಹ ಇದನ್ನು ಕರೆಯಲಾಗುತ್ತದೆ. ಆದ್ಯತಾ ವಲಯಗಳ ಸಣ್ಣ ಸಾಲಗಳನ್ನು ನೀಡುವಾಗ ಎದುರಾಗುವ ಸಮಸ್ಯೆ ಎದುರಿಸಲು ಅನುಕೂಲವಾಗುವಂತೆ ಈ ನಿಗಮವನ್ನು ಜಾರಿಗೆತಂದಿತು. ನಿಗಮದ ಷೇರುಗಳಲ್ಲಿ ಪ್ರಮುಖ ಪಾತ್ರವನ್ನು ಆರ್.ಬಿ.ಐ ವಹಿಸುತ್ತದೆ. ಸಾರಿಗೆ ನಡೆಸುತ್ತಿರುವವರಿಗೆ ವಯಕ್ತಿಕ ಸಾಲಗಳನ್ನು ವಾಣಿಜ್ಯ ಬ್ಯಾಂಕುಗಳು ನೀಡುವಂತೆ ನಿಗಮ ನೆರವಾಗುತ್ತದೆ.ರಸಗೊಬ್ಬರ ವ್ಯಾಪಾರ, ವೃತ್ತಿಪರರು, ಸ್ವ ಉದ್ಯೊಗಿಗಳನ್ನು ನಡೆಸಿತ್ತಿರುವವರು, ಸಾಗುವಳಿ ನಿರತ ರೈತರು, ಕೃಷಿ ಪೂರಕ ಚಟುವಟಿಕೆಗಳು ಇತ್ಯಾದಿಗಳಿಗೆ ಸಾಲಗಳನ್ನು ನೀಡಲು ವಾಣಿಜ್ಯ ಬ್ಯಾಂಕುಗಳಿಗೆ ಸಾಲ ಖಾತರಿ ನಿಗಮ ನೆರವು ನೀಡುತ್ತದೆ. ೧೯೮೫ರ ಅವಧಿಯಲ್ಲಿ ಆರ್.ಬಿ.ಐ ಸಾಲ ಒಪ್ಪಿಗೆ ಯೋಜನೆಯನ್ನು ಜಾರಿಗೆತಂದಿತು. ಇವರ ಪ್ರಕಾರ ಒಂದು ನಿರ್ಧಿಷ್ಟ ಮಿತಿಗಿಂತ ಹೆಚ್ಚು ಸಾಲಗಳನ್ನು ನಿರ್ಧಿಷ್ಟ ವ್ಯಕ್ತಿ ಅಥವಾ ಘಟಕಕ್ಕೆ ನೀಡುವುದಕ್ಕಿಂತ ಮುಂಚೆ

ಬ್ಯಾಂಕುಗಳು ಆರ್.ಬಿ.ಐ ನ ಒಪ್ಪಿಗೆಪಡೆಯಬೇಕು. ಸಾಲ ನೀಡುವ ಬ್ಯಾಂಕಿನ ಪ್ರಕ್ರಿಯೆಯನ್ನು ನಿಯಂತ್ರಿಸುವ ಉದ್ದೇಶದಿಂದ ಇದನ್ನು ಮಾಡಲಾಯಿತು. ಮೇಲಿನ ಚರ್ಚೆಯಿಂದ ತಿಳಿದುಬರುವಂತೆ ಆರ್.ಬಿ.ಐ ಗ್ರಾಮೀಣ ಸಾಲ ವ್ಯವಸ್ಥೆಯನ್ನು ಸುಧಾರಿಸುವ, ನಿಯಂತ್ರಿಸುವ ಬಲಪಡಿಸುವ ಪ್ರಮುಖ ಅತ್ಯುನ್ನತ ಸಂಸ್ಥೆಯಾಗಿ ಕಾರ್ಯನಿರ್ವಹಿಸುವುದನ್ನು ಕಾಣಬಹುದು. ಗ್ರಾಮೀಣ ಸಾಲವ್ಯವಸ್ಥೆಯ ನೀತಿಗಳನ್ನುರೂಪಿಸಿ ಅನುಷ್ಠಾನಗೊಳಿಸುವ ಹೊಣೆಯನ್ನು ಆರ್.ಬಿ.ಐ ಹೊತ್ತಿದೆ. ಆರ್.ಬಿ.ಐ ಹಣಕಾಸು ಮತ್ತು ಪ್ರೋತ್ಸಾಹಿತ ಕಾರ್ಯಗಳ ಮೂಲಕ ಭಾರತದ ಸಾಂಸ್ಥಿಕ ಸಾಲ ವ್ಯವಸ್ಥೆಗೆ ಬದ್ರ ಅಡಿಪಾಯಹಾಕಿತು. ಈ ಮೂಲಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿಗೆ ಅಗತ್ಯವಾಗಿ ಸಾಲಗಳು ನಿಗದಿತ ಅವಧಿಯಲ್ಲಿ ದೊರೆಯುವಂತೆ ವ್ಯವಸ್ಥೆಯನ್ನು ಕಟ್ಟಲು ಆರ್.ಬಿ.ಐ ಪ್ರಯತ್ನಿಸುತ್ತದೆ.[೨೮] ಆರ್.ಬಿ.ಐ ನಬಾರ್ಡ ಸ್ಥಾಪನೆಯಾಗುವವರೆಗೂ ಗ್ರಾಮೀಣ ಹಣಕಾಸು ವ್ಯವಸ್ಥೆಯಲ್ಲಿ ಕ್ರಿಯಾಶೀಲ ನಾಯಕನ ಪಾತ್ರವಹಿಸಿದೆ. ಸಾಮನ್ಯವಾಗಿ ಗ್ರಾಮೀಣ ಆರ್ಥಿಕತೆ ಅಭಿವೃದ್ಧಿ ಹಾಗೂ ನಿರ್ಧಿಷ್ಟವಾಗಿ ಕೃಷಿಯ ಅಭಿವೃದ್ಧಿಗೆ ಅಗತ್ಯವಾದ ರಾಷ್ಟ್ರೀಯ ಸಾಲ ನೀತಿಗಳನ್ನು ಜಾರಿಗೆ ತರುವಲ್ಲಿ ಆರ್.ಬಿ.ಐ ಎಲ್ಲಾ ರೀತಿಯಲ್ಲೂ ಪ್ರಯತ್ನಿಸಿದೆ ಎನ್ನಲಾಗುತ್ತದೆ. ಗ್ರಾಮೀಣ ಆರ್ಥಿಕ ಚಟುವಟಿಕೆಗಳಿಗೆ ಸಂಘಟಿತ ಸಾಲಗಳು ದೊರೆಯುವಂತೆ ಕಾರ್ಯ ನಿರ್ವಹಿ ಸುವಲ್ಲಿ ಆರ್.ಬಿ.ಐ ಪ್ರಮುಖ ಪಾತ್ರವಹಿಸಿದರೂ, ಸಾಲ ನಿಯಂತ್ರಣ ಹಾಗೂ ಕೇಂದ್ರ ಬ್ಯಾಂಕಾಗಿ ಇತರೆ ಅನೇಕ ಕಾರ್ಯಗಳನ್ನು ನಿರ್ವಹಿಸಬೇಕಾದ ಒತ್ತಡದಿಂದ ಗ್ರಾಮೀಣ ವಲಯಕ್ಕೆ ಅಗತ್ಯವಾದ ಹಣಕಾಸನ್ನು ಸರಿಯಾಗಿ ಪೂರೈಸುವಲ್ಲಿ ಪೂರ್ಣ ಪ್ರಮಾಣದ ಗಮನಹರಿಸಲಾಗಲಿಲ್ಲ. ಈ ಹಿನ್ನೆಲೆಯಲ್ಲಿ ೧೯೮೨ರಲ್ಲಿ ರಾಷ್ಟ್ರೀಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಾದ ನಬಾರ್ಡ್‌ನ್ನು ಸ್ಥಾಪಿಸಲಾಯಿತು.

**ನಬಾರ್ಡ್**

೧೯೮೨ರಿಂದ ದೇಶದ ಗ್ರಾಮೀಣ ಹಣಕಾಸು ಮತ್ತು ಕೃಷಿ ಕ್ಷೇತ್ರದ ರಾಷ್ಟ್ರಮಟ್ಟದ ಪುನರ್ ಹಣಕಾಸು ಸಂಸ್ಥೆಯಾಗಿ ನಬಾರ್ಡ್ ಕಾರ್ಯನಿರ್ವಹಿಸುತ್ತಿದೆ. ರಾಜ್ಯ ಸಹಕಾರ ಬ್ಯಾಂಕು ಮತ್ತು ಗ್ರಾಮೀಣ ಅಭಿವೃದ್ಧಿಗಳಿಗೆ ಸಂಬಂಧಿಸಿದ ಹಣಕಾಸು ಒದಗಿಸುವ ಆರ್.ಬಿ.ಐ ಕಾರ್ಯಗಳನ್ನು ನಬಾರ್ಡ್ ನಿರ್ವಹಿಸುತ್ತದೆ. ಕೃಷಿ ಪನರ್ ಹಣಕಾಸು ಮತ್ತು ಅಭಿವೃದ್ಧಿ ನಿಗಮ (ಎ.ಆರ್.ಡಿ.ಸಿ)ಯ ಕಾರ್ಯಗಳನ್ನು ಇದೇ ನಿರ್ವಹಿಸುತ್ತದೆ. ಕೃಷಿ ಕ್ಷೇತ್ರದ ಉತ್ಪಾದನೆ ಮತ್ತು ಹೂಡಿಕೆಗೆ ಸಂಬಂಧಿಸಿದ ಸಾಲಗಳನ್ನು ನಬಾರ್ಡ್ ಪೂರೈಸುತ್ತದೆ. ಅದೇ ರೀತಿ ಸಣ್ಣ ಕೈಗಾರಿಕೆಗಳು, ಕರಕುಶಲಕರ್ಮಿಗಳು, ಗುಡಿ ಕೈಗಾರಿಕೆಗಳು ಹಾಗೂ ಇತರೇ ಪೂರಕ ಆರ್ಥಿಕ ಚಟುವಟಿಕೆಗಳಿಗೂ ಸಾಲಗಳನ್ನು ಪೂರೈಸುತ್ತದೆ. ನಬಾರ್ಡ್, ಆರ್.ಬಿ.ಐ.ನ ಶೇಕಡಾ ೫೦ರಷ್ಟು ಷೇರುಗಳನ್ನು ಹೊಂದಿವೆ. ಆರ್.ಬಿ.ಐ.ನ ಅಧಿಕಾರಿಗಳು ನಬಾರ್ಡ್‌ನ ಡೈರೆಕ್ಟರ್‌ಗಳಾಗಿ ಕಾರ್ಯ ನಿರ್ವಹಿಸುತ್ತಾರೆ. ಹೀಗೆ ನಬಾರ್ಡ್ ಗ್ರಾಮೀಣ ಹಣಕಾಸು ವ್ಯವಸ್ಥೆಯ ಮೇಲ್ವಿಚಾರಕ ಬ್ಯಾಂಕಾಗಿ ಕಾರ್ಯ ನಿರ್ವಹಿಸುತ್ತದೆ. (ಸಂಘಟಿತ ಸಾಲ ವ್ಯವಸ್ಥೆ ಪಟ್ಟಿ ಗಮನಿಸಿ, ಪುಟ.೧೬೬)

## ಸಂಘಟಿತ ಸಾಲ ವ್ಯವಸ್ಥೆ




ಮೂಲ: ಡಾ. ರಾಕೇಶ್ ಮೋಹನ್ (2004). *ಅಗ್ರಿಕಲ್ಚರ್ ಕ್ರೆಡಿಟ್ ಇನ್ ಇಂಡಿಯಾ; ಸ್ಟೇಟಸ್, ಇಷ್ಯೂಸ್ ಅಂಡ್ ಫ್ಯೂಚರ್ ಅಜೆಂಡಾ*, ರಿಸರ್ವಬ್ಯಾಂಕ್ ಆಫ್ ಇಂಡಿಯಾ ಬುಲೆಟಿನ್, ನವೆಂಬರ್ 2004, ಪು.993-997

ಭಾಗ-೨

## ಗ್ರಾಮೀಣ ಹಣಕಾಸು ಕಾರ್ಯಕ್ರಮಗಳು ಮತ್ತು ನೀತಿಗಳ ಅನುಷ್ಠಾನ

ಗ್ರಾಮೀಣ ಹಣಕಾಸು ವ್ಯವಸ್ಥೆಯು ಸಂಘಟಿತ ಮತ್ತು ಅಸಂಘಟಿತ ಎಂಬ ಎರಡು ವಲಯಗಳಿಂದ ಕೂಡಿದೆ. ಈ ವ್ಯವಸ್ಥೆಗೆ ಸಂಬಂಧಿಸಿದ ಸಾಲ ನೀತಿ ನಿಯಮಗಳನ್ನು ಮತ್ತು ಕಾರ್ಯಕ್ರಮಗಳನ್ನು ಕೇಂದ್ರ ಮಟ್ಟದಲ್ಲಿ ಕೇಂದ್ರ ಸರ್ಕಾರ, ಭಾರತೀಯ ರಿಸರ್ವ್ ಬ್ಯಾಂಕ್ ಮತ್ತು ಹಣಕಾಸು ಸಚಿವಾಲಯಗಳುರೂಪಿಸುತ್ತವೆ. ಸಾಲ ನೀತಿ ಮತ್ತು ಕಾರ್ಯಕ್ರಮಗಳ ಅನುಷ್ಠಾನ ವಿಧಾನಗಳನ್ನು ಸಹ ಇವೇ ನಿರ್ಧರಿಸುತ್ತವೆ. ಇವುಗಳನ್ನು ಸಾರ್ವಜನಿಕ ಮತ್ತು ಖಾಸಗೀ ಹಣಕಾಸು ಸಂಸ್ಥೆಗಳು ಅಥವಾ ಬ್ಯಾಂಕುಗಳು ಜಾರಿಗೊಳಿಸುತ್ತವೆ. ಈ ಅಧ್ಯಾಯದಲ್ಲಿ ಗ್ರಾಮೀಣ ಸಂಘಟಿತ ಹಣಕಾಸು ಮೂಲದಲ್ಲಿ ಬರುವ ಸಾರ್ವಜನಿಕ ಬ್ಯಾಂಕುಗಳಾದ ಸಹಕಾರ ಸಾಲ ಸಂಸ್ಥೆಗಳು, ಗ್ರಾಮೀಣ ಬ್ಯಾಂಕುಗಳು ಮತ್ತು ವಾಣಿಜ್ಯ ಬ್ಯಾಂಕುಗಳು ಅನುಷ್ಠಾನಗೊಳಿಸುವ ಕೃಷಿ ಸಾಲ ನೀತಿ ಮತ್ತು ಕಾರ್ಯಕ್ರಮಗಳು ಹಾಗೂ ಅವುಗಳು ಜಾರಿಗೆ ಬರುವ ವಿಧಾನವನ್ನು ಚರ್ಚಿಸಲಾಗಿದೆ. ಪೂರೈಕೆದಾರರು ಮತ್ತು ಬಳಕೆದಾರರ ನಡುವೆ ಸಂಪರ್ಕಕೊಂಡಿಯಾಗಿ ಕಾರ್ಯನಿರ್ವಹಿಸುವ ಸಂಘಟಿತ ಹಣಕಾಸು ಮೂಲ ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳಿಗೆ ಅಪಾರ ಪ್ರಮಾಣದ ಸಾಲ ಪೂರೈಸುತ್ತವೆ. ಸಂಘಟಿತ ಸಾಲ ವ್ಯವಸ್ಥೆಯಲ್ಲಿ ಹಲವು ರೀತಿಯ ವ್ಯವಹಾರಗಳು ನಡೆಯುತ್ತವೆ. ಠೇವಣಿ ಸಂಗ್ರಹ, ಉಳಿತಾಯ, ಬಾಂಡ್ ಮತ್ತು ಸಾಲ ಪತ್ರಗಳ ಮಾರಾಟ, ಸರ್ಕಾರಿ ಕೃಷಿ ಸಾಲ ಯೋಜನೆಗಳ ಅನುಷ್ಠಾನ ಆ ಮೂಲಕ ಗ್ರಾಮೀಣ ಅಭಿವೃದ್ಧಿಯ ಪ್ರೋತ್ಸಾಹ ಇತ್ಯಾದಿ. ಆದರೆ ಪ್ರಸ್ತುತ ಈ ವಲಯದ ಸಾರ್ವಜನಿಕ ಬ್ಯಾಂಕುಗಳು ಸರ್ಕಾರ ಮತ್ತು ಮೇಲ್ಮಟ್ಟದ ಬ್ಯಾಂಕುಗಳ ಸಾಲ ನೀತಿ ಮತ್ತು ನಿಯಮಗಳಿಗೆ ಅನುಗುಣವಾಗಿ ಹಣಕಾಸನ್ನು ಪೂರೈಸುತ್ತವೆ. ಕೃಷಿ ಉತ್ಪಾದನೆ ಹೆಚ್ಚಳ, ಗ್ರಾಮೀಣ ಬಡತನ ನಿರ್ಮೂಲನೆ, ಆದಾಯ ಅಸಮಾನತೆಯ ನಿವಾರಣೆ, ಗ್ರಾಮೀಣ ಉದ್ಯೋಗಾವಕಾಶಗಳ ಸೃಷ್ಟಿ ಮತ್ತು ಹೆಚ್ಚಳದಲ್ಲಿ ಸಂಘಟಿತ ಬ್ಯಾಂಕಿಂಗ್ ವಲಯದ ಸಾಲ ಸೌಲಭ್ಯಗಳು ಪ್ರಮುಖ ಪಾತ್ರ ವಹಿಸುತ್ತದೆ. ಇದರೊಂದಿಗೆ ಗ್ರಾಮೀಣ ಜನರು ಸ್ವಾವಲಂಭಿ ಬದುಕನ್ನು ನಡೆಸಲು ನೆರವಾಗುತ್ತದೆ. ಆದರೆ ಸಂಘಟಿತ ಹಣಕಾಸು ವ್ಯವಸ್ಥೆಯ ಮೂಲಕ ಮೇಲಿನ ಉದ್ದೇಶಗಳಿಗೆ ಸಾಲ ಸೌಲಭ್ಯಗಳನ್ನು ಪೂರೈಸುವುದು ಸಮಗ್ರ ಆರ್ಥಿಕ ಅಭಿವೃದ್ಧಿ ಪ್ರಕ್ರಿಯೆಯ ಭಾಗವೆಂದು ಪರಿಗಣಿಸಬೇಕು. ಈ ರೀತಿ ಪರಿಗಣಿಸುತ್ತಾ ಸಂಘಟಿತ ಹಣಕಾಸು ವ್ಯವಸ್ಥೆಯ ಸಾಲ ಸೌಲಭ್ಯಗಳ ಪ್ರಯೋಜನ ಪಡೆಯಲಾಗದೆ ಅಭಿವೃದ್ಧಿಯ ಪಾಲುದಾರಿಕೆಯಿಂದ ಸಮಾಜದ ಯಾವ ವರ್ಗಗಳು ಹೊರಗುಳಿದಿವೆ? ಇದಕ್ಕೆ ಮೂಲಭೂತ ಸಾಮಾಜಿಕ, ಆರ್ಥಿಕ ಕಾರಣಗಳೇನು? ಇದಕ್ಕೆ ಪರಿಹಾರಗಳೇನು? ಎಂಬುದನ್ನು ಚರ್ಚಿಸುವುದೇ ನನ್ನ ಅಧ್ಯಯನದ ಪ್ರಮುಖ ವಿಷಯ. ನೀತಿಗಳು ಉದ್ದೇಶಿತ ಕಾರ್ಯ ಮತ್ತು ಪರಿಣಾಮಗಳನ್ನು ಒಳಗೊಳ್ಳುತ್ತವೆ. ನೀತಿಗಳು ಒಂದು

ಸಂಸ್ಥೆ ರಾಷ್ಟ್ರದ ಕ್ರಿಯಾ ಯೋಜನೆಯನ್ನು ಸೂಚಿಸುತ್ತವೆ. ನೀತಿಗಳು ಸಂಸ್ಥೆಯ ತತ್ವ ಸಿದ್ಧಾಂತಗಳನ್ನು ಪ್ರತಿನಿಧಿಸುತ್ತವೆ. ನೀತಿಗಳನ್ನು ರಚಿಸುವಾಗ ನೀತಿಗಳ ಫಲ ಸಮಾಜದ ಎಲ್ಲಾ ಗುಂಪುಗಳು ಮತ್ತು ವರ್ಗಗಳಿಗೆ ತಲುಪುವಂತೆ ರೂಪಿಸಬೇಕಾಗುತ್ತದೆ. ಅದೇ ರೀತಿ ನಿರ್ಧಿಷ್ಟ ಗುರಿ ಸಾಧನೆಗೆ ನೀತಿಯ ಅನುಷ್ಠಾನವೂ ಪ್ರಮುಖವಾದುದು. ನೀತಿಯ ಅನುಷ್ಠಾನದ ಹೊಣೆಗಾರಿಕೆ ಹೊತ್ತಿರುವ ಎಲ್ಲಾ ಸಂಸ್ಥೆಗಳು ಪರಸ್ಪರ ಸಮನ್ವಯ ಹೊಂದಿರಬೇಕು. ನೀತಿ ತನ್ನದೇ ಆದ ಆಯಾಮಗಳನ್ನು ಹೊಂದಿರುತ್ತದೆ. ನೀತಿಗಳ ಅನುಷ್ಠಾನದ ನಂತರ ಅವುಗಳನ್ನು ವಿಮರ್ಶಿಸಬೇಕಾದ ಅಗತ್ಯವಿದೆ. ಗ್ರಾಮೀಣ ಹಣಕಾಸು ಕ್ಷೇತ್ರಕ್ಕೆ ರಚನೆಯಾಗುವ ನೀತಿಗಳನ್ನು ಪರಿಶೀಲಿಸಬೇಕಾಗುತ್ತದೆ. ಮೇಲ್ಮಟ್ಟದಲ್ಲಿ ರೂಪುಗೊಳ್ಳುವ ಈ ನೀತಿಗಳಲ್ಲಿ ಸಂಘಟಿತ ಅಸಂಘಟಿತ ಸಾಲ ಮೂಲಗಳನ್ನು ಸಂಯೋಜಿಸಿಲ್ಲ. ಈ ಹಣಕಾಸು ಮೂಲಗಳ ನಡುವೆ ನೀತಿಗಳ ವಿಷಯದಲ್ಲಿ ಸಮನ್ವಯವಿಲ್ಲ. ಆರ್‌ಬಿಐ ದೇಶದ ಹಣಕಾಸು ಮಾರುಕಟ್ಟೆಯ ಉನ್ನತ ಸಂಸ್ಥೆಯಾಗಿರೂಪಿಸುವ ಹಣಕಾಸು ನೀತಿ ಅಥವಾ ಸಾಲ ನೀತಿ ಸಂಘಟಿತ ಹಣಕಾಸು ವಲಯಕ್ಕೆ ಮಾತ್ರ ಅನ್ವಯಿಸುತ್ತದೆ. ವಾಣಿಜ್ಯ ಬ್ಯಾಂಕುಗಳು, ರಾಜ್ಯ ಸರ್ಕಾರಗಳು ಮತ್ತು ಸಹಕಾರ ಸಂಸ್ಥೆಗಳನ್ನು ಮಾತ್ರ ಒಳಗೊಂಡಿರುತ್ತದೆ. ಸಾಲ ನೀತಿ ಈ ಎಲ್ಲಾ ಸಂಸ್ಥೆಗಳಿಗೆ ಅನ್ವಯಿಸಿದರೂ ಇವುಗಳ ಸಮನ್ವಯದ ಕೊರತೆ ಇದೆ. ಭಾರತದ ಗ್ರಾಮೀಣ ಹಣಕಾಸು ವ್ಯವಸ್ಥೆ ಬಹು–ಸಂಸ್ಥೆ ವಿಧಾನ ವಾಗಿದೆ. ಸಾಲ ವ್ಯವಸ್ಥೆಯು ಸಂಕೀರ್ಣವಾಗಿದೆ. ಈ ವಲಯದ ಹಣಕಾಸು ಸಂಸ್ಥೆಗಳ ಸಾಲ ನೀತಿ, ನಿಯಮಗಳು ಸಂಕೀರ್ಣವಾಗಿವೆ.

ಗ್ರಾಮೀಣ ಸಾಲ ಸಮೀಕ್ಷೆ ಗ್ರಾಮೀಣ ಸಾಲ ವ್ಯವಸ್ಥೆಗೆ ಸಂಬಂದಿಸಿದ ಸಮಗ್ರ ಸಾಲ ನೀತಿರೂಪಿಸಲು ಶಿಫಾರಸ್ಸು ಮಾಡಿದ ನಂತರ ಸಹಕಾರ ಸಾಲ ವ್ಯವಸ್ಥೆಯ ಉದ್ದೇಶಗಳು ಬದಲಾದವು. ಸರ್ಕಾರದ ಹಸ್ತಕ್ಷೇಪ ವಿಲ್ಲದೆ ಜನರೇ ಸಹಕಾರ ಸಹಾಯ ಮಾಡಿಕೊಳ್ಳುವ ಸ್ವಾವಲಂಬಿ ಸಹಕಾರ ವ್ಯವಸ್ಥೆ ಅಥವಾ ಚಳುವಳಿ ಕಟ್ಟುವ ಉದ್ದೇಶವಿತ್ತು. ಆದರೆ ಸ್ವಾತಂತ್ರ್ಯಾನಂತರ ಕೃಷಿ ಉತ್ಪಾದನೆ ಹೆಚ್ಚಿಸಲು ರೈತರಿಗೆ ಸಹಾಯ ಮಾಡುವುದು ಸರ್ಕಾರದ ನೀತಿಯಾಯಿತು. ರೈತರಿಗೆ ತೀವ್ರವಾಗಿ ಸಾಲದ ಅಗತ್ಯವಿತ್ತು. ಸಹಕಾರ ರೈತರಿಗೆ ಹೆಚ್ಚಿನ ಪ್ರಮಾಣದ ಸಾಲಗಳನ್ನು ಪೂರೈಸಲು ಸಹಕಾರ ವ್ಯವಸ್ಥೆಯನ್ನು ಒಂದು ಸಾಧನವನ್ನಾಗಿ ಬಳಸಿಕೊಂಡಿತು. ಇದಕ್ಕೆ ಪೂರಕವಾದ ನೀತಿಯನ್ನು ಸರ್ಕಾರ ಅಳವಡಿಸಿಕೊಂಡಿತು. ಆ ಮೂಲಕ ಸರ್ಕಾರ ಸಹಕಾರ ವ್ಯವಸ್ಥೆ ಭಾಗವಾಗ ತೊಡಗಿತು. ಸಹಕಾರ ವ್ಯವಸ್ಥೆಗೆ ಆ ಮೂಲಕ ಗ್ರಾಮೀಣ ಹಣಕಾಸಿಗೆ ಸಂಬಂದಿಸಿದ ನೀತಿಯನ್ನು ಕೆಳಗಿನಂತೆ ಕ್ರೂಡೀಕರಿಸಬಹುದು ಅಥವಾ ಸಾರಾಂಶಗೊಳಿಸಬಹುದು. ೧. ಸಹಕಾರ ಸಂಘಗಳ ಷೇರು ಬಂಡವಾಳಕ್ಕೆ ನೆರವು ನೀಡುವ ಮೂಲಕ ಸರ್ಕಾರ ಸಹಕಾರ ಸಂಸ್ಥೆಗಳ ಪಾಲುದಾರನಾಯಿತು. ೨. ಸಹಕಾರ ಸಂಸ್ಥೆಗಳ ವಾಣಿಜ್ಯ ವ್ಯವಹಾರಗಳಿಗೆ ಪ್ರೋತ್ಸಾಹ ನೀಡಲು ಅನುಕೂಲವಾಗುವಂತೆ ಗ್ರಾಮೀಣ ಸಾಲದ ಸಮಗ್ರ ದೃಷ್ಟಿಕೋನರೂಪಿಸಬಹುದು. ೩. ಕೃಷಿ ಸಾಲಗಳನ್ನು ಪೂರೈಸಲು ಅನುಕೂಲವಾಗುವಂತೆ ಸಹಕಾರ ಸಂಘಗಳಿಗೆ ಸಾಕಷ್ಟು ಪ್ರಮಾಣದ ಸಂಪನ್ಮೂಲ ಒದಗಿಸುವುದು.

೧೯೬೦ರ ನಂತರ ಪ್ರಮುಖ ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣದ ವರೆಗೆ ಸಹಕಾರ ಸಂಘಗಳ ವ್ಯವಸ್ಥೆಯನ್ನು ಇನ್ನೊಂದು ಹಂತದಲ್ಲಿ ಗುರುತಿಸಲಾಗುತ್ತದೆ. ೧೯೭೦ರ ಹೊತ್ತಿಗೆ ಸರ್ಕಾರಗಳು ಸಹಕಾರ ಸಂಸ್ಥೆಗಳಿಗೆ ಸಾಕಷ್ಟು ನೆರವು ಸಹಾಯ ನೀಡಿದವು. ಸಹಕಾರ ಸಂಘಗಳ ಸಾಲ ವಿಸ್ತರಣೆಯಾಯಿತು. ಆದರೆ ೧೯೭೦-೭೧ರ ಅವಧಿಯ ನಂತರ ನೀತಿರೂಪಿಸುವವರು ಸಹಕಾರ ಸಂಸ್ಥೆಗಳ ಪ್ರಯತ್ನಗಳಿಗೆ ಪರ್ಯಾಯಗಳನ್ನು ಆಲೋಚಿಸುತ್ತಿದ್ದರು. ಹೊಸದಾಗಿ ರಾಷ್ಟ್ರೀಕರಣಗೊಂಡ ವಾಣಿಜ್ಯ ಬ್ಯಾಂಕುಗಳು ಆಗ ಸರಿಯಾದ ಆಯ್ಕೆಯಾಗಿತ್ತು. ಹೀಗೆ ಬಹು ಸಂಸ್ಥೆ ವಿಧಾನದ ನೀತಿ ಜಾರಿಗೆ ಬಂದಿತು. ೧೯೭೫ರ ಅವಧಿಯಲ್ಲಿ ಪ್ರಾದೇಶಿಕ ಬ್ಯಾಂಕುಗಳು ಸ್ಥಾಪನೆಗೊಂಡವು. ೧೯೭೫ರಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕಿನ ಸ್ಥಾಪನೆಯ ಶಿಫಾರಸ್ಸು ಮಾಡಿದ ಸಮಿತಿಯ ಪ್ರಕಾರ ವಿಶಾಲ ವಿಸ್ತೀರ್ಣ ಹಾಗೂ ಪ್ರಾದೇಶಿಕ ವೈವಿಧ್ಯತೆ, ವಿಭಿನ್ನತೆ ಇರುವ ನಮ್ಮಂತಹ ದೇಶದಲ್ಲಿ ವಾಣಿಜ್ಯ ಬ್ಯಾಂಕು ವ್ಯವಸ್ಥೆ ಅಥವಾ ಸಹಕಾರ ಸಾಲ ವ್ಯವಸ್ಥೆಗಳು ಎಲ್ಲಾ ಪ್ರದೇಶಗಳಲ್ಲಿ ಹೆಚ್ಚುತ್ತಿರುವ ಹಣಕಾಸು ಅಗತ್ಯಗಳನ್ನು ಪೂರೈಸುವುದು ಸುಲಭವಲ್ಲ. ಈ ಹೊಸದಾಗಿ ಸೃಷ್ಟಿಯಾದ ಹಣಕಾಸು ಸಂಸ್ಥೆಗಳು ಒಟ್ಟಾಗಿ ಭಾರತ ಸರ್ಕಾರ, ಸಾರ್ವಜನಿಕ ವಲಯ ಬ್ಯಾಂಕು ಮತ್ತು ಸಂಬಂಧಪಟ್ಟ ರಾಜ್ಯ ಸರ್ಕಾರಗಳ ಆಧೀನದಲ್ಲಿದ್ದವು. ಈ ರೀತಿಯ ಬಹು ಸಂಸ್ಥೆ ವಿಧಾನ ನೀತಿ ಕೃಷಿ ಕ್ಷೇತ್ರದ ಆ ಮೂಲಕ ಗ್ರಾಮೀಣ ಪ್ರದೇಶದ ಹಣಕಾಸು ಅಗತ್ಯಗಳನ್ನು ಪೂರೈಸುವ ಉದ್ದೇಶ ಒಂದಿತ್ತು ಹಾಗೂ ಸಹಕಾರ ಸಾಲ ವ್ಯವಸ್ಥೆಗಳಷ್ಟೇ ಹೆಚ್ಚುತ್ತಿರುವ ಸಾಲದ ಬೇಡಿಕೆಯನ್ನು ಪೂರೈಸಲಾಗದೆ ಸೃಷ್ಟಿಯಾಗುವ ಸಾಲ ಅಂತರವನ್ನು ತುಂಬಿ ಪರ್ಯಾಯ ಸಾಲ ಮೂಲಗಳನ್ನು ಸೃಷ್ಟಿಸುವುದಾಗಿತ್ತು. ಗ್ರಾಮೀಣ ಪ್ರದೇಶದಲ್ಲಿ ಸಾಲ ಹರಿಯುವಿಕೆಯನ್ನು ಹೆಚ್ಚಿಸುವ ಉದ್ದೇಶವನ್ನು ಬಹು ಸಂಸ್ಥೆ ವಿಧಾನ ನೀತಿಯ ಹೊಂದಿತ್ತು.

ಗ್ರಾಮೀಣ ಅರ್ಥಿಕತೆಯಲ್ಲಿ ಸಹಕಾರ ಸಂಸ್ಥೆಗಳು ಅನೇಕ ಸೇವೆಗಳನ್ನು ಒದಗಿಸುತ್ತವೆ. ಉತ್ಪಾದನೆಗೆ ಸಾಲ ನೀಡುವುದು ಹಾಗೂ ಹೂಡುವಳಿಗಳನ್ನು ಪೂರೈಸುವ ಕಾರ್ಯದಲ್ಲಿ ತೊಡಗಿವೆ. ಕೃಷಿ ಉತ್ಪಾದನೆಯ ಸಾಲ ಅಗತ್ಯಗಳ ವಿಷಯದಲ್ಲಿ ಪ್ರತ್ಯೇಕ ಸಾಂಸ್ಥಿಕ ವ್ಯವಸ್ಥೆಗಳಿವೆ. ಈ ವ್ಯವಸ್ಥೆಯಲ್ಲಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ಧೀರ್ಘಾವಧಿ ಸಾಲಗಳಿವೆ. ಸಹಕಾರ ಸಾಲ ವ್ಯವಸ್ಥೆ ಅಲ್ಪಾವಧಿ ಸಾಲಗಳನ್ನು ಹೆಚ್ಚಾಗಿ ಒದಗಿಸುತ್ತವೆ, ಇದರಡಿ ಮೂರು ವಿವಿಧ ಸಹಕಾರ ಒಕ್ಕೂಟ ವ್ಯವಸ್ಥೆಯಿದೆ. ರಾಜ್ಯ ಮಟ್ಟದಲ್ಲಿ ಅಥವಾ ಅಪೆಕ್ಸ್ ಮಟ್ಟದಲ್ಲಿ ರಾಜ್ಯ ಸಹಕಾರ ಬ್ಯಾಂಕು (ರಾ.ಸ.ಬಾ), ಜಿಲ್ಲಾ ಮಟ್ಟದಲ್ಲಿ ಕೇಂದ್ರ ಸಹಕಾರ ಬ್ಯಾಂಕುಗಳು (ಕೆ.ಸ.ಬಾ) ಮತ್ತು ಗ್ರಾಮ ಮಟ್ಟದಲ್ಲಿ ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳಿವೆ (ಪ್ರಾ.ಕೃ.ಸ.ಸಾ.ಸ). ಈ ಸಹಕಾರ ಸಾಲ ಒಕ್ಕೂಟ ವ್ಯವಸ್ಥೆ ರಾಷ್ಟ್ರದಾದ್ಯಂತವೂ ಇದೆ. ಕರ್ನಾಟಕದಲ್ಲಿ ಮೂರು ವಿಧದ ಸಹಕಾರ ಸಾಲ ವ್ಯವಸ್ಥೆಯಿದೆ.

ಅಲ್ಪಾವಧಿ ಸಾಲ ಸಹಕಾರ ವ್ಯವಸ್ಥೆ ಒಂದಕ್ಕೊಂದು ಸಂಪರ್ಕ ಒಂದಿದ್ದು ಎರಡು ಮಾರ್ಗಗಳ ಮೂಲಕ ಸಂಪನ್ಮೂಲ ಹರಿಯುತ್ತದೆ. ಮೇಲಿನ ಸಂಸ್ಥೆಗಳಿಂದ ಕೆಲ ಹಂತದ

ಸಂಸ್ಥೆಗಳಿಗೆ ಸಂಪನ್ಮೂಲ ಹರಿಯುವುದು ಒಂದು ಮಾರ್ಗ. ಇದಕ್ಕೆ ವಿರುದ್ಧವಾಗಿ ಕೆಳಹಂತದ ಸಂಸ್ಥೆಗಳಿಂದ ಮೇಲ್ಮಟ್ಟದ ಸಂಸ್ಥೆಗಳಿಗೆ ಸಣ್ಣ ಪ್ರಮಾಣದಲ್ಲಿ ಸಂಪನ್ಮೂಲ ಹರಿಯುವುದು ಇನ್ನೊಂದು ಮಾರ್ಗ. ಹೆಚ್ಚಿನ ಸಂಪನ್ಮೂಲ ಅಪೆಕ್ಸ್ ಮಟ್ಟದಲ್ಲಿ ರಾಜ್ಯ ಸಹಕಾರ ಬ್ಯಾಂಕುಗಳಿಂದ ಜಿಲ್ಲಾ ಮಟ್ಟದಲ್ಲಿ ಕೇಂದ್ರ ಸಹಕಾರ ಬ್ಯಾಂಕುಗಳಿಗೆ ಹಾಗೂ ಕೇಂದ್ರ ಸಹಕಾರ ಬ್ಯಾಂಕುಗಳಿಂದ ಗ್ರಾಮ ಮಟ್ಟದಲ್ಲಿ ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳಿಗೆ ಹರಿಯುತ್ತದೆ. ರಾಜ್ಯ ಸಹಕಾರ ಬ್ಯಾಂಕುಗಳು ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳಿಗೆ ಮತ್ತು ಇವುಗಳ ಸದಸ್ಯರುಗಳಿಗೆ ನೇರವಾಗಿ ಸಾಲ ಪೂರೈಸಿಸುವುದಿಲ್ಲ. ಕಾರ್ಯ ವೈಶಿಷ್ಟ್ಯತೆ, ವ್ಯವಸ್ಥಾಪಕ ಮತ್ತು ವೆಚ್ಚ ಪರಿಣಾಮಕಾರಿ ದೃಷ್ಠಿಯಿಂದ ಈ ರೀತಿ ಮಾಡಲಾಗುತ್ತದೆ. ಈ ವೈಚಾರಿಕ ನೆಲೆಯೇ ಮೂರು ವಿಧದ ಸಹಕಾರ ಸಾಲ ವ್ಯವಸ್ಥೆಗೆ ಕಾರಣ. ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳು ಸಾರ್ವಜನಿಕರಿಂದ ಸಾಕಷ್ಟು ಪ್ರಮಾಣದಲ್ಲಿ ಸಂಪನ್ಮೂಲ ಸಂಗ್ರಹಿಸಲು ಆಗದಿರುವುದರಿಂದ ಇವುಗಳಿಗೆ ರಾಜ್ಯ ಸಹಕಾರ ಬ್ಯಾಂಕುಗಳಿಂದ ಹೆಚ್ಚಿನ ಸಂಪನ್ಮೂಲದ ಅಗತ್ಯವಿದೆ. ಕರ್ನಾಟಕ ರಾಜ್ಯದಲ್ಲೂ ಸಹಕಾರ ಸಂಸ್ಥೆಗಳು ಸಾರ್ವಜನಿಕರಿಂದ ಠೇವಣಿ ಸಂಗ್ರಹಿಸುತ್ತವೆ. ಈ ಠೇವಣಿ ಸಂಗ್ರಹ ಕಾರ್ಯದಿಂದ ಸಹಕಾರ ಸಂಸ್ಥೆಗಳು ಗ್ರಾಮೀಣ ಪ್ರದೇಶಗಳಲ್ಲಿ ಇನ್ನೂ ಜೀವಂತವಾಗಿವೆ. ಇಲ್ಲದಿದ್ದರೇ ಇಷ್ಟು ಹೊತ್ತಿಗೆ ಭೂ ಅಭಿವೃದ್ಧಿ ಬ್ಯಾಂಕುಗಳ ರೀತಿಯಲ್ಲಿ ದಿವಾಳಿ ಅಂತ ತಲುಪುತ್ತಿದ್ದವು.

ರಾಜ್ಯ ಸಹಕಾರ ಬ್ಯಾಂಕುಗಳು ತಮ್ಮ ಸ್ವಂತ ಬಂಡವಾಳ ಮತ್ತು ವಯುಕ್ತಿಕ ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳ ಠೇವಣಿಗಳಿಂದ ನಿಧಿ ಸಂಗ್ರಹಿಸುತ್ತವೆ. ರಾಜ್ಯ ಸಹಕಾರ ಬ್ಯಾಂಕುಗಳು ನಬಾರ್ಡ್‌ನಿಂದ ಹೆಚ್ಚಿನ ಪ್ರಮಾಣದಲ್ಲಿ ಸಾಲ ಪಡೆಯುತ್ತದೆ. ೧೯೮೨ರ ನಬಾರ್ಡ್ ಸ್ಥಾಪನೆಗೆ ಮುಂಚೆ ಆರ್.ಬಿ.ಐ.ನ ಕೃಷಿ ಸಾಲ ಇಲಾಖೆಗಳು ರಾಜ್ಯ ಸಹಕಾರ ಬ್ಯಾಂಕುಗಳಿಗೆ ಸಾಲ ಒದಗಿಸುತ್ತಿದವು. ನಂತರ ನಬಾರ್ಡ್ ಈ ಕಾರ್ಯ ನಿರ್ವಹಿಸಿತು. ಆರ್.ಬಿ.ಐ. ಮತ್ತು ನಾಬಾರ್ಡ್‌ಗಳು ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳಿಗೆ ನೇರವಾಗಿ ಸಾಲ ನೀಡುವುದಿಲ್ಲ. ಕೇಂದ್ರ ಸಹಕಾರ ಬ್ಯಾಂಕುಗಳಿಗೆ ಸಹ ನೇರವಾಗಿ ನೀಡುವುದಿಲ್ಲ. ರಾಜ್ಯ ಸಹಕಾರ ಬ್ಯಾಂಕುಗಳ ಮುಖಾಂತರ ಸಂಪನ್ಮೂಲಗಳು ಹರಿಯುತ್ತವೆ. ಕೇಂದ್ರ ಸಹಕಾರ ಬ್ಯಾಂಕುಗಳು ಇತರೆ ಕೇಂದ್ರ ಸಹಕಾರ ಬ್ಯಾಂಕುಗಳಿಗೆ ಸಾಲ ನೀಡುವುದಿಲ್ಲ. ಕೇಂದ್ರ ಸಹಕಾರ ಬ್ಯಾಂಕುಗಳು ತಮ್ಮ ಹೆಚ್ಚುವರಿ ಸಂಪನ್ಮೂಲಗಳನ್ನು ರಾಜ್ಯ ಸಹಕಾರ ಬ್ಯಾಂಕುಗಳ ಬಳಿ ಇಡಬೇಕು. ಅದೇ ರೀತಿ ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳು ಇತರೆ ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳಿಗೆ ತಮ್ಮೊಳಗೆ ಸಾಲ ನಿಡುವಂತಿಲ್ಲ. ಇವುಗಳು ತಮ್ಮ ಮಿಗತೆ ಅಥವಾ ಹೆಚ್ಚುವರಿ ಸಂಪನ್ಮೂಲಗಳನ್ನು ಕೇಂದ್ರ ಸಹಕಾರ ಬ್ಯಾಂಕುಗಳ ಹತ್ತಿರ ಇಡಬೇಕು.

ಮೂರು ವಿವಿಧ ಸಹಕಾರ ವ್ಯವಸ್ಥೆಯಡಿ ಸಣ್ಣ ಪ್ರಮಾಣದ ಸಂಪನ್ಮೂಲಗಳು ಕೆಳಹಂತದ ಸಂಸ್ಥೆಗಳಿಂದ ಮೇಲ್ಮಟ್ಟದ ಸಂಸ್ಥೆಗಳಗೆ ಹರಿಯುತ್ತವೆ. ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳಿಂದ

ಕೇಂದ್ರ ಸಹಕಾರ ಬ್ಯಾಂಕುಗಳಿಗೆ, ಇವುಗಳಿಂದ ರಾಜ್ಯ ಸಹಕಾರ ಬ್ಯಾಂಕ್‌ಗಳಿಗೆ ಸಂಪನ್ಮೂಲಗಳು ಹರಿಯುತ್ತವೆ. ಕೆಳಹಂತದ ಬ್ಯಾಂಕುಗಳು ತಮ್ಮ ಹೆಚ್ಚುವರಿ ಅಥವಾ ಮಿಗತೆ ಸಂಪನ್ಮೂಲವನ್ನು ಮೇಲಿನ ಹಂತದ ಸಂಸ್ಥೆಗಳಲ್ಲಿ ಹಾಗೂ ಕೆಳಸಂಸ್ಥೆಗಳು ಮೇಲಿನ ಸಂಸ್ಥೆಗಳ ಷೇರು ಬಂಡವಾಳಕ್ಕೆ ವಂತಿಗೆ ನೀಡುವ ಮೂಲಕ ನಿಧಿ ಅಥವಾ ಸಂಪನ್ಮೂಲ ಕೆಳ ಹಂತದಿಂದ ಮೇಲಿನ ಹಂತಕ್ಕೆ ಹರಿಯುತ್ತವೆ. ಕೆಳ ಹಂತದ ಸಂಸ್ಥೆಗಳು ತಾವು ಮೇಲ್ಮಟ್ಟದ ಸಂಸ್ಥೆಗಳ ಷೇರು ಬಂಡವಾಳಕ್ಕೆ ವಂತಿಗೆ ಅಥವಾ ಕೊಡುಗೆ ನೀಡುವುದಕ್ಕೂ, ಇವುಗಳು ಮೇಲಿನ ಹಂತದ ಸಂಸ್ಥೆಗಳಿಂದ ಸಾಲ ಪಡೆಯುವುದಕ್ಕೂ ಸಂಬಂದವಿದೆ. ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳು ಕೇಂದ್ರ ಸಹಕಾರ ಬ್ಯಾಂಕುಗಳ ಷೇರು ಬಂಡವಾಳಕ್ಕೆ ನೀಡಿರುವ ವಂತಿಗೆಗಿಂತ ಹತ್ತರಷ್ಟು ಸಾಲ ಪಡೆಯಬುಹುದು. ಇದೇ ರೀತಿ ಕೇಂದ್ರ ಸಹಕಾರ ಬ್ಯಾಂಕು ಮತ್ತು ರಾಜ್ಯ ಸಹಕಾರ ಬ್ಯಾಂಕ್‌ಗಳ ನಡುವೆಯೂ ಇರುತ್ತದೆ. ಈ ರೀತಿ ಷೇರು ಬಂಡವಾಳಕ್ಕೆ ನೀಡುವ ವಂತಿಗೆಗೂ ಮತ್ತು ಸಾಲ ಪಡೆಯುವುದಕ್ಕೂ ಇರುವ ಸಂಬಂಧದ ಉದ್ದೇಶಗಳೆಂದರೆ,

ಅ) ಕೆಳಹಂತದ ಸಂಸ್ಥೆಗಳು ಸಾಲ ಪಡೆಯುವುದನ್ನು ನಿಯಂತ್ರಿಸಲು

ಆ) ಮೇಲ್ಮಟ್ಟದ ಸಂಸ್ಥೆಗಳಿಗೆ ನಿಧಿ ಸಂಗ್ರಹಿಸಲು

ಇ) ಮೇಲ್ಮಟ್ಟದ ಸಂಸ್ಥೆಗಳಿಗಿಂತ ಕೆಳಹಂತದ ಸಂಸ್ಥೆಗಳನ್ನು ಲಾಭದಾಯಕವಾಗಿರುವಂತೆ ಪ್ರೇರೇಪಿಸಲು

ಸಂಸ್ಥೆಗಳು ಲಾಭದಾಯಕ ಹಾಗೂ ಸ್ವಾವಲಂಬಿಗಳಾಗಿರುವಂತೆ ಪ್ರೋತ್ಸಾಹಿಸುವುದು, ಪ್ರೇರೇಪಿಸುವುದು ಈ ನೀತಿಯ ಉದ್ದೇಶ. ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳ ಲಾಭದಾಯಕ ಅಂಶದ ಬಗ್ಗೆ ವಿಭಿನ್ನ ದೃಷ್ಟಿಕೋನಗಳಿವೆ. ೧೯೬೦ರ ಸಹಕಾರ ಸಮಿತಿ ವರದಿಯನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರ ಸ್ವೀಕರಿಸಿದವು. ಈ ಸಮಿತಿ ಪ್ರಕಾರ ಸಹಕಾರ ಸಂಸ್ಥೆಗಳು ಪ್ರಾಥಮಿಕ ಘಟಕಗಳೆಂದು ಪರಿಗಣಿಸಬೇಕು. ಇವುಗಳನ್ನು ಗ್ರಾಮ ಸಮುದಾಯದ ಆಧಾರದ ಮೇಲೆ ಸಂಘಟಿಸಬೇಕು. ಗ್ರಾಮಗಳ ಗಾತ್ರ ಚಿಕ್ಕದಾಗಿದ್ದು ಸಹಕಾರ ಸಂಸ್ಥೆಗಳು ಸೇವೆ ಸಲ್ಲಿಸಬೇಕಾದ ಗ್ರಾಮಗಳ ಸಂಖ್ಯೆಯನ್ನು ಲಾಭದಾಯಕ ಅಂಶದ ದೃಷ್ಟಿಯಿಂದ ಹೆಚ್ಚಿಸಬೇಕು. ೧೯೬೪ರಲ್ಲಿ ಸಹಕಾರ ಸಂಘಗಳ ರಾಜ್ಯ ಸಚಿವರ ಸಮ್ಮೇಳನ ಹೈದರಾಬಾದ್‌ನಲ್ಲಿ ನಡೆಯಿತು. ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳು ಲಾಭದಾಯಕವಾಗಿರಲು ಅಗತ್ಯ ನಿಯಾಮವಳಿ ರೂಪಿಸಿತು.

ಅ) ಪೂರ್ಣಾವಧಿ ವೇತನ ಆಧಾರಿತ ಕಾರ್ಯದರ್ಶಿ ನೇಮಕವಾಗಿರಬೇಕು.

ಆ) ಸ್ವಂತ ಅಥವಾ ಬಾಡಿಗೆಯ ಕಟ್ಟಡದಲ್ಲಿ ಕಛೇರಿ ಇರಬೇಕು.

ಇ) ಶಾಸನಬದ್ಧ ಮೀಸಲು ನಿಧಿಗಳಿಗೆ ವಂತಿಗೆ ನೀಡಬೇಕು.

ಈ) ಕನಿಷ್ಠ ಲಾಭಾಂಶವನ್ನು ನೀಡಬೇಕು.

ಒಂದು ಪ್ರಾಥಮಿಕ ಸಹಕಾರ ಸಾಲ ಸಂಸ್ಥೆ ಕನಿಷ್ಠ ನಿಗದಿತ ಎರಡು ಲಕ್ಷ ಸಾಲ ವ್ಯವಹಾರ ನಿರ್ವಹಿಸಬೇಕು ಎಂದು ೧೯೭೩ರಲ್ಲಿ ನಿರ್ಧರಿಸಲಾಗಿತ್ತು. ಮುಂದೆ ಆರ್‌ಬಿಐ ಒಂದು ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಯು ಕಾರ್ಯವ್ಯಾಪ್ತಿ ಕನಿಷ್ಠ ೧೦ ಕೀ.ಮಿ. ವ್ಯಾಪ್ತಿಯಲ್ಲಿ ೨೦೦೦ ಎಕರೆ ಸಾಗುವಳಿ ಪ್ರದೇಶವನ್ನು ಒಳಗೊಳ್ಳಬೇಕು ಎಂದು ಸಲಹೆ ನೀಡಿತು. ರಾಷ್ಟ್ರದ ಎಲ್ಲಾ ರಾಜ್ಯಗಳು ಸಹಕಾರ ಸಂಘದ ಈ ಮರುಸಂಘಟನೆಯ ಪ್ರಕ್ರಿಯೆಯನ್ನು ಅನುಸರಿಸಿದವು. ಕರ್ನಾಟಕವು ಇದನ್ನ ಅನುಸರಿಸಿತು. ೧೯೬೪ರ ನಂತರ ಆರ್‌ಬಿಐ ಬೆಳೆ ಸಾಲ ಯೋಜನೆಯನ್ನು ನೀತಿಯನ್ನು ಅನುಷ್ಠಾನಗೊಳಿಸಿತು. ಎಲ್ಲಾ ರಾಜ್ಯಗಳು ಈ ಯೋಜನೆಯನ್ನು ಅನುಷ್ಠಾನಗೊಳಿಸಿದವು. ಬೆಳೆ ಸಾಲ ಯೋಜನೆಯ ಲಕ್ಷಣಗಳು.

ಅ) ಒಂದು ಎಕರೆಗೆ ತಗುಲುವ ಉತ್ಪಾದನಾ ವೆಚ್ಚದ ಆಧಾರದ ಮೇಲೆ ಸಹಕಾರ ಸಂಘಗಳ ಸದಸ್ಯರ ಅಲ್ಪಾವಧಿ ಸಾಲ ಅಗತ್ಯಗಳನ್ನು ನಿರ್ಧರಿಸುವುದು.

ಆ) ಸದಸ್ಯರ ಸಾಲ ಮರುಪಾವತಿ ಸಾಮರ್ಥ್ಯದ ಮೇಲೆ ಸಾಲದ ಅಗತ್ಯಗಳನ್ನು ನಿರ್ಧರಿಸಿ ಪೂರೈಸುವುದು.

ಇ) ನಿರ್ಧಿಷ್ಟ ಪಡಿಸಿದ ಸಾಲದ ಹಣವನ್ನು ನಗದು ಮತ್ತು ಇತರೆ ರೂಪದಲ್ಲಿ ಪಡೆಯುವುದು.

ಈ ಯೋಜನೆಯಡಿ ಪಡೆದ ಸಾಲದಿಂದ ಕೃಷಿ ಉತ್ಪಾದನೆಗೆ ಅಗತ್ಯವಾದ ಹೂಡುವಳಿಗಳು ಪೂರೈಕೆಯಾಗುವಂತೆ ಮಾಡಲು ನಗದು ಅಥವಾ ಇತರೆ ರೂಪದಲ್ಲಿ ಸಾಲ ನೀಡಲಾಯಿತು. ಕೃಷಿ ಹೂಡುವಳಿಗಳನ್ನು ಪೂರೈಸುವ ಮಾರಾಟಗಾರರಿಗೆ ನೇರವಾಗಿ ಸಾಲ ಪಾವತಿ ಮಾಡಲಾಯಿತು. ಈ ಯೋಜನೆಯನ್ನು ವಾಣಿಜ್ಯ ಬ್ಯಾಂಕುಗಳಿಗೂ ವಿಸ್ತರಿಸಲಾಯಿತು. ಸಹಕಾರ ಸಂಸ್ಥೆಗಳ ತಾಂತ್ರಿಕ ಸಮಿತಿಗಳು ಸಾಲದ ಪ್ರಮಾಣವನ್ನು ನಿರ್ಧರಿಸುತ್ತಿದ್ದವು. ಬೆಳೆ ಸಾಲ ನಿಯಮಗಳನ್ನು ಏಕರೂಪವಾಗಿ ಎಲ್ಲಾ ಸಂಸ್ಥೆಗಳು ಅಳವಡಿಸಿಕೊಳ್ಳಬೇಕಾಗಿತ್ತು. ಬೆಳೆ ಸಾಲದಡಿ ದೊರೆಯುವ ಸಾಲದ ಮೊತ್ತ ಮತ್ತು ಯಾವ ಬೆಳೆ ಇತ್ಯಾದಿ ವಿವರಗಳನ್ನು ಸಹಕಾರ ಸಂಸ್ಥೆಗಳು ಮತ್ತು ವಾಣಿಜ್ಯ ಬ್ಯಾಂಕುಗಳು ರೈತ ಸಮುದಾಯದ ಮಾಹಿತಿಗಾಗಿ ತಮ್ಮ ಸಂಸ್ಥೆ ಸೂಚನಾ ಫಲಕಗಳನ್ನು ಪ್ರಕಟಿಸಬೇಕು.

ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳು ಕೇಂದ್ರ ಸಹಕಾರ ಬ್ಯಾಂಕುಗಳ ಷೇರು ಬಂಡವಾಳದಲ್ಲಿ ತಮ್ಮ ವಂತಿಗೆಯ ಪ್ರಮಾಣದ ಆಧಾರದ ಮೇಲೆ ಕೇಂದ್ರ ಸಹಕಾರ ಬ್ಯಾಂಕುಳಿಂದ ಸಂಪನ್ಮೂಲ ಪಡೆಯುತ್ತಾರೆ. ಕೇಂದ್ರ ಸಹಕಾರ ಬ್ಯಾಂಕುಗಳ ಸಾಮರ್ಥ್ಯ ಬಲಪಡಿಸಿ ಹಾಗೂ ತಳಮಟ್ಟದ ಸಂಸ್ಥೆಗಳೊಂದಿಗೆ ಉತ್ತಮ ಸಂಪರ್ಕದಲ್ಲಿರುವಂತೆ ಪ್ರೇರೆಪಿಸಲು ೧೯೭೧ರಲ್ಲಿ ಆರ್‌ಬಿಐ ದುರ್ಬಲ ಕೇಂದ್ರ ಸಹಕಾರ ಬ್ಯಾಂಕುಗಳ ಕಾರ್ಯ ವೈಖರಿಯನ್ನು ಸುಧಾರಿಸುವ ಕಾರ್ಯಕ್ರಮವನ್ನು ಪ್ರಾರಂಭಿಸಿತು. ನಷ್ಟದ ಪ್ರಮಾಣ ಕೇಂದ್ರ ಸಹಕಾರ ಬ್ಯಾಂಕುಗಳ ದುಡಿಯುವ ಬಂಡವಾಳದಲ್ಲಿ ಶೇಕಡಾ ೫೦ಕ್ಕಿಂತ ಕಡಿಮೆ ಇದ್ದರೆ ಅಂತಹ ಕೇಂದ್ರ ಸಹಕಾರ ಬ್ಯಾಂಕುಗಳನ್ನು ದುರ್ಬಲ ಎಂದು

ಪರಿಗಣಿಸಿ ಅವುಗಳ ಬಲವರ್ಧನೆಗೆ ಆರ್‌ಬಿಐ ಯೋಜನೆರೂಪಿಸಿತು. ಕೇಂದ್ರ ಸಹಕಾರ ಬ್ಯಾಂಕುಗಳ ಹಣಕಾಸು ಪರಿಸ್ಥಿತಿಯ ಆಧಾರದ ಮೇಲೆ ಅವುಗಳು ದುರ್ಬಲ ಎನ್ನಲಾಗುತ್ತಿತ್ತು. ೧೯೭೬ರಿಂದಲೂ ಹೀಗೆ ಸಹಕಾರ ವ್ಯವಸ್ಥೆಯನ್ನು ಬಲಪಡಿಸುವ ಕಾರ್ಯಕ್ರಮ ಜಾರಿಯಲ್ಲಿದೆ. ಆರ್‌ಬಿಐ ಮತ್ತು ನಬಾರ್ಡ್‌ಗಳು ಸಹಕಾರ ಸಾಲ ವ್ಯವಸ್ಥೆಯನ್ನು ವಿಸ್ತರಿಸುವ ಬಲಪಡಿಸಲು ಪ್ರಯತ್ನಿಸುತ್ತಿವೆ. ಆದರೆ ಇಡೀ ವ್ಯವಸ್ಥೆ ಹಣಕಾಸಿನ ನೆರವಿಗಾಗಿ ಮೇಲ್ಮಟ್ಟದ ಹಣಕಾಸು ಸಂಸ್ಥೆಗಳು ಮತ್ತು ಸರ್ಕಾರದ ಮೇಲೆ ಅವಲಂಬಿತವಾಗುತ್ತಿದೆ. ಸಹಕಾರ ಸಂಘಗಳ ಸಾಲ ವಿಸ್ತರಣೆ, ಈ ವ್ಯವಸ್ಥೆಯ ಬಲವರ್ಧನೆ ಪ್ರಕ್ರಿಯೆಯಲ್ಲಿ ಆರ್.ಬಿ.ಐ ಮತ್ತು ಕೇಂದ್ರ ಸರ್ಕಾರ, ಸಹಕಾರ ಸಂಸ್ಥೆಗಳು ಮತ್ತು ರಾಜ್ಯ ಸರ್ಕಾರಗಳ ನಡುವೆ ಸಮನ್ವಯ ಮತ್ತು ಸಂಘಟನಾ ಕಾರ್ಯ ಪ್ರಮುಖವಾದ ಅಂಶ. ಸಹಕಾರ ಸಂಸ್ಥೆಗಳನ್ನು ಸ್ವಾವಲಂಬನೆ ಮತ್ತು ಲಾಭದಾಯಕವಾಗಿ ಬೆಳೆಸುವುದು ಈ ಸಮನ್ವಯದ ಉದ್ದೇಶ. ಸಹಕಾರ ವ್ಯವಸ್ಥೆಯಲ್ಲಿ ಸರ್ಕಾರದ ಷೇರಿನ ಪಾಲು ಹೆಚ್ಚಿತು. ಸಹಕಾರ ವ್ಯವಸ್ಥೆಯು ಸರ್ಕಾರದ ನೆರವು ಪಡೆಯುತ್ತಿದೆ. ಆದರೆ ತಮ್ಮ ಆಂತರಿಕ ಸಂಪನ್ಮೂಲ ವೃದ್ಧಿಸುವ ಸಾಮರ್ಥ್ಯ ಬೆಳವಣಿಗೆಗೆ ಸಹಕಾರ ಸಂಸ್ಥೆಗಳು ಆದ್ಯತೆ ನೀಡಲಿಲ್ಲ. ರಾಜ್ಯ ಸರ್ಕಾರ ಮತ್ತು ಕೇಂದ್ರ ಹಣಕಾಸು ಸಂಸ್ಥೆಗಳ ಹೊಂದಾಣಿಕ ಸಮನ್ವಯದ ಪ್ರಕ್ರಿಯೆಗಳಿಂದ ತಿಳಿದು ಬರುವ ಅಂಶವೆಂದರೆ ಸಹಕಾರ ವ್ಯವಸ್ಥೆಯು ಹಣಕಾಸು ಸಂಪನ್ಮೂಲಗಳಿಗೆ ಮೇಲ್ಮಟ್ಟದ ಮತ್ತು ಬಾಹ್ಯ ಸಂಸ್ಥೆಗಳ ಮೇಲೆ ಅವಲಂಬಿತರಾಗುವಂತೆ ಮಾಡಿದೆ. ಈ ಸಮನ್ವಯ ಪ್ರಕ್ರಿಯೆಯಲ್ಲಿ ಸಹಕಾರ ಸಂಸ್ಥೆಗಳ ಸ್ವಾವಲಂಬನೆ ಪರಿಕಲ್ಪನೆ ಹಾಗೂ ಆಂತರಿಕವಾಗಿ ಸಂಪನ್ಮೂಲ ಸೃಷ್ಟಿಸುವ ಸಾಮರ್ಥ್ಯಗಳಿಗೆ ಮಹತ್ವ ನೀಡಿಲ್ಲ. ರಾಜ್ಯಸರ್ಕಾರದ ಮಧ್ಯ ಪ್ರವೇಶ ಅಥವಾ ಅವಲಂಭನೆಯಿಂದ ಸಹಕಾರ ಸಂಸ್ಥೆಗಳು ಸ್ಥಳೀಯವಾಗಿ ಸಂಸ್ಥೆಗಳ ಬೆಳವಣಿಗೆಗೆ ಅಗತ್ಯವಾದ ನಿರ್ಧಾರ ತೆಗೆದುಕೊಳ್ಳುವ ಅವಕಾಶಗಳು ಇಲ್ಲವಾಗುತ್ತಿವೆ. ಸ್ಥಳೀಯ ಪರಿಸ್ಥಿತಿಯ ಅಗತ್ಯಗಳಿಗೆ ತಕ್ಕಂತೆ ಸಂಸ್ಥೆಗಳು ಕಾರ್ಯ ನಿರ್ವಹಿಸಬೇಕು ಎಂಬ ಸೈದ್ಧಾಂತಿಕ ಪರಿಕಲ್ಪನೆಗೆ ದಕ್ಕೆ ಬಂದಿದೆ. ಮೂಲ ಬಂಡವಾಳವಿಲ್ಲದೆ ಹೊಸ ಸಾಲಗಳನ್ನು ನೀಡಲಾಗಿದೆ ಸಂಪನ್ಮೂಲದ ಮರುಬಳಕೆ ಸಾಧ್ಯವಾಗುತ್ತಿಲ್ಲ. ಸರ್ಕಾರ ನೀಡುವ ಹಣಕಾಸು ನೆರವಿಗಾಗಿ ಕಾಯಬೇಕಾಗಿದೆ. ಇದರಿಂದ ಸರ್ಕಾರ ನೀಡುವ ಹಣದಿಂದ ಸಾಲ ನೀಡುವುದು ಮತ್ತು ಸರ್ಕಾರದ ಸಾಲ ಮನ್ನಾ ಯೋಜನೆಯನ್ನು ಕಾರ್ಯನಿರ್ವಹಿಸುವ ಸಂಸ್ಥೆಗಳಿವೆ. ಕೃಷಿ ಉದ್ದೇಶಗಳಿಗೆ ದೀರ್ಘಾವಧಿ ಸಾಲಗಳ ಪೂರೈಕೆಯಲ್ಲಿ ಭೂ ಅಭಿವೃದ್ಧಿ ಬ್ಯಾಂಕುಗಳು ವಿಶೇಷ ಸಂಸ್ಥೆಗಳಾಗಿ ಕಾರ್ಯ ನಿರ್ವಹಿಸುತ್ತವೆ. ಎಲ್ಲಾ ರಾಜ್ಯಗಳಲ್ಲಿ ಇವು ಎರಡೂ ರೀತಿಯ ಒಕ್ಕೂಟ ವ್ಯವಸ್ಥೆಯನ್ನು ಹೊಂದಿವೆ. ಮೇಲ್ಮಟ್ಟದಲ್ಲಿ ರಾಜ್ಯಮಟ್ಟದ ಭೂ ಅಭಿವೃದ್ಧಿ ಬ್ಯಾಂಕು (ಎಸ್.ಎಲ್.ಡಿ.ಬಿ) ಮತ್ತು ಸ್ಥಳೀಯ ಮಟ್ಟದಲ್ಲಿ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು. ಸ್ಥಳೀಯ ಮಟ್ಟದಲ್ಲಿ ರಾಜ್ಯಮಟ್ಟದ ಭೂ ಅಭಿವೃದ್ಧಿ ಬ್ಯಾಂಕುಗಳ ಶಾಖೆಗಳು ಕಾರ್ಯ ನಿರ್ವಹಿಸುತ್ತವೆ. ೧೯೨೬ರಲ್ಲಿ ನಡೆದ ಉಪನಿಭಂದಕರ ಸಮ್ಮೇಳನದಲ್ಲಿ ಭೂ ಅಡಮಾನ ಬ್ಯಾಂಕುಗಳ ಸಂಘಟನಾ ನೀತಿ ಅಂತಿಮರೂಪ ಪಡೆಯಿತು. ಭೂ ಅಭಿವೃದ್ಧಿ ಬ್ಯಾಂಕುಗಳು ಕೆಳಗಿನ ಉದ್ದೇಶಗಳ ಆಧಾರದ ಮೇಲೆ ಸಾಲಗಳನ್ನು ನೀಡುತ್ತವೆ.

ಎ) ಕೃಷಿಕರು ತಮ್ಮ ಭೂಮಿ ಮತ್ತು ಮನೆಗಳನ್ನು ಹಿಂದಿರುಗಿ ಪಡೆಯಬೇಕು.

ಬಿ) ಭೂ ಅಭಿವೃದ್ಧಿ ಮತ್ತು ಸಾಗುವಳಿ ವಿಧಾನಗಳು ಬದಲಾಗಬೇಕು.

ಸಿ) ಹಳೆ ಸಾಲಗಳ ಸಂದಾಯ ಮತ್ತು ಭೂ ಖರೀದಿ ಇತ್ಯಾದಿ. ಇದನ್ನು ಸಂಸ್ಥೆ ಬೈಲಾದಲ್ಲಿ ವಿವರಿಸಬೇಕು.

ಭೂ ಅಭಿವೃದ್ಧಿ ಬ್ಯಾಂಕುಗಳ ಈ ನೀತಿಯನ್ನು ಭಾರತದ ಕೃಷಿ ಮೇಲಿನ ರಾಯಲ್ ಕಮಿಷನ್ ಅನುಮೋದಿಸಿತು. ಹಾಗೂ ಎಲ್.ಡಿ.ಬಿ.ಗಳ ಕೇಂದ್ರ ಭೂ ಅಭಿವೃದ್ಧಿ ಬ್ಯಾಂಕುಗಳಿಂದ ನಿಧಿ ಸಂಗ್ರಹಿಸಬೇಕು. ಎಲ್.ಡಿ.ಬಿ.ಗಳ ನಿಧಿ ಸಂಗ್ರಹ ಸಮಸ್ಯಾತ್ಮಕವಾಗಿತ್ತು. ನಿಧಿ ಸಂಗ್ರಹ ವ್ಯವಸ್ಥೆಯನ್ನು ನಿಯಂತ್ರಿಸುವುದು ಕಷ್ಟವಾಯಿತು. ನಿಧಿ ಸಂಗ್ರಹ ವಿವಾದದ ವಿಷಯವಾಯಿತು. ಪ್ರಥಮ ಕೇಂದ್ರ ಭೂ ಅಡಮಾನ ಬ್ಯಾಂಕು ೧೯೨೯ರಲ್ಲಿ ಮದ್ರಾಸ್‌ನಲ್ಲಿ ಜಾರಿಗೆ ಬಂದಿತು. ಅಖಿಲ ಭಾರತ ಗ್ರಾಮೀಣ ಸಮೀಕ್ಷೆಯು ಭೂ ಅಭಿವೃದ್ಧಿ ಬ್ಯಾಂಕುಗಳ ನೀತಿಗಳಲ್ಲಿ ಬದಲಾವಣೆ ತರುವಂತೆ ಸಲಹೆ ನೀಡಿ ಕೆಳಗಿನ ಅಂಶಗಳಿಗೆ ಆದ್ಯತೆ ಮತ್ತು ಮಹತ್ವ ನೀಡಲಾಯಿತು.

ಎ) ಉತ್ಪಾದನೆ ಹೂಡಿಕೆ ಉದ್ದೇಶಗಳಿಗೆ ಸಾಲ ನೀಡಬೇಕು.

ಬಿ) ಭೂ ಅಭಿವೃದ್ಧಿ ಬ್ಯಾಂಕುಗಳ ಷೇರು ಬಂಡವಾಳದಲ್ಲಿ ಸರ್ಕಾರ ಪ್ರಮುಖ ಮತ್ತು ಸಕ್ರೀಯ ಪಾತ್ರ ವಹಿಸಬೇಕು.

ಸಿ) ಭೂ ಅಭಿವೃದ್ಧಿ ಬ್ಯಾಂಕುಗಳು ಮೂರು ವಿದಧ ಅಲ್ಪಾವಧಿ ಸಾಲ ಸಹಕಾರ ವ್ಯವಸ್ಥೆಯಿಂದ ಪ್ರತ್ಯೇಕವಾಗಿರುಬೇಕು.

ಕರ್ನಾಟಕದಲ್ಲಿ ಇದೇ ರೀತಿಯ ಭೂ ಅಭಿವೃದ್ಧಿ ವ್ಯವಸ್ಥೆ ಪ್ರಸ್ತುತ ಜಾರಿಯಲ್ಲಿದೆ. ಕೃಷಿ ಪುನರ್ ಹಣಕಾಸು ಅಭಿವೃದ್ಧಿ ಸಂಘಟನೆ ಅಥವಾ ನಿಗಮದ ಸ್ಥಾಪನೆಯೊಂದಿಗೆ ಯೋಜನೆ ಆಧಾರಿತ ಸಾಲ ನೀಡುವ ನೀತಿ ಮಹತ್ವ ಪಡೆಯಿತು. ಕೃಷಿ ಮತ್ತು ಕೃಷಿ ಪೂರಕ ಚಟುವಟಿಕೆಗಳ ಆಧಾರದ ಮೇಲೆ ಹಣಕಾಸು ಒದಗಿಸುವ ನೀತಿ ಅನುಷ್ಠಾನವಾಯಿತು. ಕೃಷಿ ಆದಾಯಕ್ಕೆ ಪರ್ಯಾಯವಾಗಿ ಡೈರಿ, ಕೋಳಿ ಸಾಕಾಣಿಕೆ ಅಥವಾ ಪೌಲ್ಟ್ರಿ, ಕುರಿ ಸಾಕಾಣಿಕೆ ಮತ್ತು ಮೀನುಗಾರಿಕೆ ಗಳಂತಹ ಆದಾಯ ಬರುವ ಚಟುವಟಿಕೆಗಳಿಗೆ ಸಾಲ ನೀಡುವ ವಿಧಾನ ಮಹತ್ವ ಪಡೆಯಿತು. ಭೂ ಅಭಿವೃದ್ಧಿ ಬ್ಯಾಂಕುಗಳು ಕಾಯಿದೆ ಪ್ರಕಾರ ಸಾರ್ವಜನಿಕರಿಂದ ಠೇವಣಿ ಸಂಗ್ರಹಿಸುವಂತಿಲ್ಲ. ತಮ್ಮ ಸ್ವಂತ ಸಂಪನ್ಮೂಲಗಳೊಂದಿಗೆ ಪಿ.ಎಲ್.ಡಿ.ಗಳು ರಾಜ್ಯ ಸರ್ಕಾರದ ಖಾತರಿ ಮತ್ತು ಭರವಸೆಯ ಮೇಲೆ ವಿಶೇಷ ಸಾಲ ಪತ್ರಗಳ ಮೂಲಕ ಸಂಪನ್ಮೂಲ ಸಂಗ್ರಹಿಸಬಹುದು. ಪಿ.ಎಲ್.ಡಿಗಳ ಸಾಲ ಪತ್ರಗಳಿಗೆ ಜೀವ ವಿಮಾ ನಿಗಮ, ಭಾರತೀಯ ಸ್ಟೇಟ್ ಬ್ಯಾಂಕು, ವಾಣಿಜ್ಯ ಬ್ಯಾಂಕುಗಳು ನೆರವನ್ನು ನೀಡುತ್ತವೆ. ಕೇಂದ್ರ ಮತ್ತು ರಾಜ್ಯ ಸರ್ಕಾರ ವಂತಿಗೆ ಇರುತ್ತದೆ. ಈ ರೀತಿ ಸಂಗ್ರಹಿಸಿದ ವಂತಿಕೆಯನ್ನು ಯೋಜನೆಗಳನ್ನ ಹೊರತು ಪಡಿಸಿದ ಕಾರ್ಯಗಳಿಗೆ ನೀಡಬೇಕು.

ಕೃಷಿ ಅಭಿವೃದ್ಧಿ ಮತ್ತು ಇತರೇ ಆದಾಯದಾಯಕ ಕೃಷಿ ಪೂರಕ ಉದ್ದೇಶಗಳಿಗೆ ಸಾಲ ನೀಡಲು ನಬಾರ್ಡ್ ಪಿ.ಎಲ್.ಡಿ ಗಳಿಗೆ ವಿಶೇಷ ಸಂಪನ್ಮೂಲಗಳನ್ನು ನೀಡುತ್ತದೆ. ೧೯೮೦ರಲ್ಲಿ ಪಿ.ಎಲ್.ಡಿ ಗಳ ಸಾಲ ಪತ್ರಗಳಲ್ಲಿ ಬೇರೆ ಬೇರೆ ಸಂಸ್ಥೆಗಳ ಕೊಡುಗೆ ಹೀಗಿತ್ತು. ಎಲ್.ಐ.ಸಿದು ಶೇಕಡಾ ೪೦, ಎಸ್.ಬಿ.ಐ ಮತ್ತು ವಾಣಿಜ್ಯ ಬ್ಯಾಂಕುಗಳದು ಶೇಕಡಾ ೨೦% ಸರ್ಕಾರದ್ದು ಶೇಕಡಾ ೧೦ ಸ್ವಸಹಾಯದ್ದು ಶೇಕಡಾ ೩೦. ಪಿ.ಎಲ್.ಡಿಗಳ ಸಾಲ ಬಾಕಿಗಳಿಂದ ಸಾಲ ನಿಯಂತ್ರಣ ನೀತಿ ಜಾರಿಗೆ ಬಂದಿತು. ಪೂರ್ಣ ಪ್ರಮಾಣದ ಹೊಸ ಸಾಲಗಳನ್ನು ಪಡೆಯುವ ಮತ್ತು ನೀಡುವ ಸೌಲಭ್ಯಗಳು ನಿಂತು ಹೋಗುವಂತಾಯಿತು. ಆರ್.ಬಿ.ಐ ಮತ್ತು ಎ.ಆರ್.ಡಿ. ಸಿ ಗಳು ಪಿ.ಎಲ್.ಡಿ ಗಳ ಕಾರ್ಯಚಟುವಟಿಕೆಗಳು ಮತ್ತು ವ್ಯವಹಾರಗಳಲ್ಲಿ ಹೊಸ ಶಿಸ್ತು ಮತ್ತು ನಿಯಂತ್ರಣಗಳನ್ನು ಜಾರಿಗೆ ತಂದವು. ಪಿ.ಎಲ್.ಡಿ.ಗಳ ಸಾಲ ನೀಡಿಕೆಯನ್ನು ನಿಯಂತ್ರಿಸಲಾಯಿತು. ಈ ರೀತಿಯ ನಿಯಂತ್ರಣ ನೀತಿಯನ್ನು ಸಾಲ ವಸೂಲಿಯನ್ನು ಹೆಚ್ಚಿಸುವ ಉದ್ದೇಶದಿಂದ ತರಲಾಯಿತು ಹಾಗೂ ಪಿ.ಎಲ್.ಡಿ ಗಳು ಈ ದಿಕ್ಕಿನಲ್ಲಿ ಆಲೋಚಿಸುವಂತೆ ಮಾಡವ ಉದ್ದೇಶದಿಂದ ಸಾಲ ನಿಯಂತ್ರಣ ನೀತಿಯನ್ನು ಜಾರಿಗೆ ತರಲಾಯಿತು. ಪಿ.ಎಲ್.ಡಿ.ಗಳ ಸಾಲ ಬಾಕಿ ಪರಿಸ್ಥಿತಿ ಸುಧಾರಿಸಲು ಈ ನೀತಿ ಅಳವಡಿಸಲಾಯಿತು.

ರಾಜ್ಯಸರ್ಕಾರಗಳು ಪಿ.ಎಲ್.ಡಿಗಳಿಗೆ ಬಾಹ್ಯ ಮೂಲ ಅಥವಾ ಹೊರಗಿನಿಂದ ಬರುವ ಸಂಪನ್ಮೂಲವನ್ನು ಗರಿಷ್ಠ ಪ್ರಮಾಣದಲ್ಲಿ ಪಡೆಯುವ ಕಡೆ ಗಮನಹರಿಸಿದವು. ಆದರೆ ಹಣಕಾಸು ಸಂಸ್ಥೆಗಳಿಗೆ ಮುಖ್ಯವಾಗಿರುವ ತಮ್ಮ ಮೂಲ ಬಂಡವಾಳ ಸುಧಾರಣೆ ಮತ್ತು ಮೀಸಲು ನಿಧಿಗಳ ಬಲವರ್ಧನೆ ಕಡೆ ಸರ್ಕಾರ ಗಮನ ನೀಡಬೇಕು. ಆದರೆ ಪಿ.ಎಲ್.ಡಿ ವಿಷಯದಲ್ಲಿ ಸರ್ಕಾರ ಅವುಗಳ ಸಂಪನ್ಮೂಲ ಸೃಷ್ಟಿಸುವ ಮೂಲ ಸಾಮರ್ಥ್ಯ ವೃದ್ದಿ ಕಡೇ ಗಮನವನ್ನೇ ಹರಿಸಲಿಲ್ಲ. ೧೯೯೯–೨೦ರಲ್ಲಿ ಈ ಸಂಸ್ಥೆಗಳ ದುಡಿಯುವ ಬಂಡವಾಳವದಲ್ಲಿ ಸಾಲದ ಪ್ರಮಾಣ ಶೇಕಡಾ ೯೦ರಷ್ಟಿತ್ತು. ಸಾಲ ಅರ್ಹತಾ ಮಾನದಂಡ ಪಿ.ಎಲ್.ಡಿ ಮತ್ತು ನಬಾರ್ಡ್‌ಗಳ ಸಂಘರ್ಷದ ವಿಷಯ. ನಬಾರ್ಡ್ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳ ಸಾಲ ನೀಡಿಕೆ ಕಾರ್ಯಕ್ರಮವನ್ನು ಅವುಗಳ ಸಾಲ ವಸೂಲಾತಿ ಸಾಧನೆಗೆ ಸಂಬಂಧ ಕಲ್ಪಿಸಿದೆ. ಪಿ.ಎಲ್.ಡಿ ಸಾಲ ನೀಡುವ ಪ್ರಮಾಣ ಅವುಗಳು ಸಂಗ್ರಹಿಸುವ ಅಥವಾ ಸಾಲ ವಸೂಲಾತಿ ಸಾಧನೆಯನ್ನು ಅವಲಂಭಿಸಿದೆ. ರಾಜ್ಯ ಸರ್ಕಾರಗಳು ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳ ಸಾಲ ಅರ್ಹತಾ ಮಾನದಂಡವನ್ನು ಉದಾರೀಕರಿಸುವಂತೆ ನಬಾರ್ಡ್(ಹಿಂದೆ ಎ.ಆರ್.ಡಿ.ಸಿ)ನ್ನು ಕೇಳಿಕೊಂಡಿದ್ದರೂ ನಬಾರ್ಡ್ ಈ ಮನವಿಯನ್ನು ಪರಿಗಣಿಸಿಲ್ಲ. ಕಾರಣ ನಬಾರ್ಡ್ ಪಿ.ಎಲ್.ಡಿ ಗಳ ಸಾಲ ಬಾಕಿಯನ್ನು ನಿಯಂತ್ರಿಸಲು ಬಳಸಿರುವ ಶಿಸ್ತು ಕ್ರಮ ಇದಾಗಿದೆ. ಈ ಶಿಸ್ತು ಕ್ರಮ ಅಥವಾ ನೀತಿ ರಾಷ್ಟ್ರದ ಎಲ್ಲಾ ಪಿ.ಎಲ್.ಡಿ ಗಳ ಕಾರ್ಯದ ಮೇಲೆ ಪರಿಣಾಮ ಬೀರಿದೆ. ಅದರಂತೆ ಕರ್ನಾಟಕದ ಪಿಎಲ್‌ಡಿ ಒಕ್ಕೂಟ ವ್ಯವಸ್ಥೆಯ ಮೇಲೆ ಇದರ ಪರಿಣಾಮ ಬೀರಿದೆ. ಕಳೆದ ಎರಡು ದಶಕಗಳಿಗೂ ಹೆಚ್ಚಿಗೆ ಸಹಕಾರ ಸಾಲ ವ್ಯವಸ್ಥೆಗೆ ಸಂಬಂಧಿಸಿದ ನೀತಿಯ ಚರ್ಚೆಯಂದರೆ, ಅಲ್ಪಾವಧಿ ಮತ್ತು

ದೀರ್ಘಾವಧಿ ಸಾಲ ವ್ಯವಸ್ಥೆಗಳನ್ನು ಒಟ್ಟು ಗೂಡಿಸಿ ಎಲ್ಲಾ ರೀತಿಯ ಸಾಲ ಅಗತ್ಯಗಳನ್ನು ಪೂರೈಸುವ ಒಂದು ವಿಧಾನವನ್ನು ಅನುಸರಿಸುವುದಾಗಿದೆ. ೧೯೭೭ರಲ್ಲಿ ಹಜಾರಿ ಸಮಿತಿಯ ಶಿಫಾರಸಿನಿಂದ ಈ ರೀತಿಯ ನೀತಿ ಮಟ್ಟದ ಚರ್ಚೆ ಮಹತ್ವ ಪಡೆಯಿತು. ಮೂರು ವಿಧದ ಅಲ್ಪಾವಧಿ ಸಾಲ ವ್ಯವಸ್ಥೆಯನ್ನು ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳ ಮತ್ತು ರಾಜ್ಯ ಭೂ ಅಭಿವೃದ್ಧಿ ಬ್ಯಾಂಕುಗಳ ಎರಡು ವಿಧದ ದೀರ್ಘಾವಧಿ ಸಾಲ ವ್ಯವಸ್ಥೆಗಳನ್ನು ಒಟ್ಟುಗೂಡಿಸುವ ವಿಧಾನದ ಪರವಾದಗಳೆಂದರೆ,

ಎ) ಕೃಷಿಕನ್ನೊಬ್ಬನ ಎಲ್ಲಾ ವಿಧದ ಸಾಲದ ಅಗತ್ಯಗಳನ್ನು ಏಕ ಸಂಪರ್ಕ ವಿಧಾನದ ಅಡಿ ಒದಗಿಸುವುದು.

ಬಿ) ಸಾಲ ಸಂಸ್ಥೆಯೊಂದು ಸಾಲ ಪಡೆಯುವವನ ಸಾಲ ಅಗತ್ಯಗಳ ಸಮಗ್ರ ದೃಷ್ಟಿಕೋನವನ್ನು ಪರಿಗಣಿಸುವುದು.

ಸಿ) ಸಾಲ ಪಡೆಯುವವನ ಮರುಪಾವತಿ ಸಾಮರ್ಥ್ಯವನ್ನು ಒಂದು ಸಂಸ್ಥೆಯೊಂದಿಗೆ ಕೂಡಿಸುವುದು.

ಡಿ) ಸಾಲ ಪಡೆಯುವವನು ನೀಡುವ ಭದ್ರತೆ ಪರಿಗಣಿಸುವುದು.

ಇ) ಸಾಲ ಪಡೆಯುವವನ ಸಾಲ ಬಳಕೆಯ ಸಾಧನೆಯ ಮೇಲ್ವಿಚಾರಣೆ ಉತ್ತಮ ಪಡಿಸುವುದು.

ಹೀಗೆ ಒಟ್ಟುಗೂಡಿಸುವ ವಿಧಾನದ ವಿರುದ್ಧವಾದ ವೆಂದರೆ,

ಎ) ಕೃಷಿಯ ದೀರ್ಘಾವಧಿ ಹೂಡಿಕೆಯ ವಿಷಯದಲ್ಲಿ ಪ್ರಾಥಮಿಕ ಭೂ ಅಭಿವೃದ್ಧಿ ಬ್ಯಾಂಕುಗಳು ಪರಿಣತಿ ಪಡೆದಿವೆ.

ಬಿ) ಎರಡು ವಿಧದ ವ್ಯವಸ್ಥೆ ಎಲ್ಲಾ ರಾಜ್ಯಗಳಲ್ಲೂ ಏಕರೂಪವಾಗಿಲ್ಲ.

ಸಿ) ಎರಡು ವಿಧದ ಆಡಳಿತ ವ್ಯವಸ್ಥೆಯಲ್ಲಿ ವ್ಯತ್ಯಾಸಗಳಿವೆ.

ಡಿ) ದೀರ್ಘಾವಧಿ ಸಾಲಗಳನ್ನು ನಿರ್ವಹಿಸಲು ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳು ಗ್ರಾಮ ಮಟ್ಟದಲ್ಲಿ ಸಮರ್ಥವಾಗಿಲ್ಲ.

ಇ) ಈ ಒಟ್ಟುಗೂಡಿಸುವ ವಿಧಾನದಿಂದ ಒಟ್ಟಾರೆ ವೆಚ್ಚದ ಉಳಿತಾಯಗಳೇನೂ ಇಲ್ಲ.

ಪಂಜಾಬ್ ಒಗ್ಗೂಡಿಸುವ ಇಂತಹ ವಿಧಾನದ ಪ್ರಸ್ತಾವನೆಯನ್ನು ಆರ್.ಬಿ.ಐ.ಗೆ ಸಲ್ಲಿಸಿತು. ಆರ್.ಬಿ.ಐ.ನ ಕೃಷಿ ಸಾಲ ಮಂಡಳಿ ಈ ಪ್ರಸ್ತಾವನೆಯನ್ನು ಪರಿಗಣಿಸಿತು. ಆದರೆ ರಾಜ್ಯ ಸರ್ಕಾರ ಈ ವಿಷಯವನ್ನು ಸರಿಯಾಗಿ ಪರಿಗಣಿಸಲಿಲ್ಲ. ಹೀಗೆ ನೀತಿ ರಚನೆ ವಿಷಯದಲ್ಲಿ ರಾಷ್ಟ್ರ ಮತ್ತು ರಾಜ್ಯಗಳು ನಡುವೆ ಸಮನ್ವಯದ ಅಗತ್ಯವಿದೆ. ಈ ನಿಟ್ಟಿನಲ್ಲಿ ರಾಷ್ಟ್ರದ ನೀತಿಗಳೇ ಪ್ರಮುಖವಾಗುತ್ತವೆ. ರಾಜ್ಯಗಳು ಇವುಗಳನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಸ್ವತಂತ್ರವಾಗಿ ತಮ್ಮ ಅಗತ್ಯ ಪರಿಸ್ಥಿತಿಗೆ ಪೂರಕವಾದ ನೀತಿ ರೂಪಿಸುವ ಅವಕಾಶಗಳು ಕಡಿಮೆ. ಗ್ರಾಮೀಣ ಸಾಲ ವ್ಯವಸ್ಥೆಯಲ್ಲಿ ವಾಣಿಜ್ಯ ಬ್ಯಾಂಕುಗಳ

ಪಾತ್ರವನ್ನು ಎ.ಐ.ಆರ್.ಸಿ.ಎಸ್ ೧೯೫೪ರಲ್ಲಿ ಪ್ರಸ್ತಾಪಿಸಿತು. ೧೯೬೦ರ ಮಧ್ಯ ಭಾಗದಲ್ಲಿ ಈ ನಿಟ್ಟಿನಲ್ಲಿ ಕೆಲವು ಪ್ರಯತ್ನಗಳು ನಡೆದವು. ಆರ್ಥಿಕತೆಯಲ್ಲಿ ವಿವಿಧ ವಲಯಗಳಿಗೆ ಅಗತ್ಯವಿರುವ ಬ್ಯಾಂಕು ಸಾಲದ ಆದ್ಯತೆಗಳನ್ನು ನಿರ್ಧರಿಸಲು ೧೯೬೭ರಲ್ಲಿ ರಾಷ್ಟ್ರೀಯ ಸಾಲ ಪರಿಷತ್ತನ್ನು ಸ್ಥಾಪಿಸಲಾಯಿತು. ಇದೇ ವೇಳಗೆ ಅಧ್ಯಯನವೊಂದರ ಪ್ರಕಾರ ಗ್ರಾಮೀಣ ಸಾಲ ವ್ಯವಸ್ಥೆಯಲ್ಲಿ ವಾಣಿಜ್ಯ ಬ್ಯಾಂಕುಗಳ ಸಾಲದ ಪಾಲು ತುಂಬಾ ಕಡಿಮೆ ಇದ್ದು, ಸಹಕಾರ ಸಂಸ್ಥೆಗಳು ಒಟ್ಟು ಸಾಲದ ಬೇಡಿಕೆಯಲ್ಲಿ ಶೇಕಡಾ ೩೮ರಷ್ಟನ್ನು ಮಾತ್ರ ಪೂರೈಸಿದ್ದವು ಎಂಬುದನ್ನು ಗುರುತಿಸಿತು. ಹಾಗೂ ಈ ಅಧ್ಯಯನದ ಸಮಿತಿ ಕೆಳಗಿನ ಶಿಫಾರಸ್ಸುಗಳನ್ನು ಮಾಡಿತು.

೧) ಗ್ರಾಮೀಣ ಪ್ರದೇಶಗಳಲ್ಲಿ ಶಾಖಾ ಬ್ಯಾಂಕಿಂಗ್ ನೆಲೆಯನ್ನು ವಿಸ್ತರಿಸಬೇಕು ಅಥವಾ ವಿಸ್ತುತಗೊಳಿಸಬೇಕು.

೨) ಪ್ರಾಥಮಿಕ ಸಾಲ ಸಹಕಾರ ಸಂಸ್ಥೆಗಳು ದುರ್ಬಲವಾಗಿರುವ ಅಥವಾ ಇವುಗಳು ಪರಿಣಾಕಾರಿಯಾಗಿ ಸ್ಥಾಪನೆಯಾಗದ ಪ್ರದೇಶಗಳಲ್ಲಿ ವಾಣಿಜ್ಯ ಬ್ಯಾಂಕುಗಳು ನೇರ ಸಾಲ ಒದಗಿಸಬೇಕು.

೩) ಸಾಲ ಸೌಲಭ್ಯ ಸಹಾಯವನ್ನು ಒದಗಿಸಲು ಸಾಧ್ಯವಾಗದೆ ಆರ್ಥಿಕವಾಗಿ ಹಣಕಾಸಿನ ವಿಷಯಗಳಲ್ಲಿ ಪ್ರಬಲವಲ್ಲದ ಕೇಂದ್ರ ಸಹಕಾರ ಬ್ಯಾಂಕುಗಳಿರುವ ಪ್ರದೇಶಗಳಲ್ಲಿ ಪ್ರಾಥಮಿಕ ಸಾಲ ಸಹಕಾರ ಸಂಸ್ಥೆಗಳಿಗೆ ಸಾಲ ಸೌಲಭ್ಯದ ಸಹಾಯ ಒದಗಿಸಬೇಕು.

೪) ಅಧ್ಯಯನ ಸಮಿತಿಯ ಶಿಫಾರಸ್ಸುಗಳು ಮುಂದೆ ಗ್ರಾಮೀಣ ವಲಯದಲ್ಲಿ ವಾಣಿಜ್ಯ ಬ್ಯಾಂಕುಗಳ ವಿಸ್ತರಣೆಗೆ ಆಧಾರ ಒದಗಿಸಿದವು. ೧೯೬೯ರಲ್ಲಿ ೧೪ ಪ್ರಮುಖ ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಿಸಿದಾಗ ಈ ವಿಸ್ತರಣೆ ಪ್ರಕ್ರಿಯೆಗೆ ವೇಗ ದೊರಕಿತು. ಶಾಖಾ ವಿಸ್ತರಣೆ ಕಾರ್ಯಕ್ರಮದ ಸಮಿತಿಯು ಪಿ.ಕೆ.ಎಫ್ ನಾರಿಮನ್‌ರ ಅಧ್ಯಕ್ಷತೆಯಲ್ಲಿ ೧೯೬೯ರಲ್ಲಿ ರಚನೆಯಾಯಿತು. ಶಾಖಾ ಜಾಲದ ವಿಸ್ತರಣೆ ಮತ್ತು ಅಭಿವೃದ್ಧಿಗೆ ಸಂಬಂಧಿಸಿದಂತೆ ಈ ಸಮಿತಿಯು ರಾಷ್ಟ್ರೀಯ ನೀತಿಯನ್ನು ಅಭಿವೃದ್ಧಿ ಪಡಿಸಿತು. ಈ ಸಮಿತಿಯ ರಾಷ್ಟ್ರೀಯ ನೀತಿಯ ಶಿಫಾರಸ್ಸುಗಳು:

೧) ಬ್ಯಾಂಕು ಸೇವೆಗಳಲ್ಲಿದ ಮತ್ತು ಕಡಿಮೆ ಇರುವ ಪ್ರದೇಶಗಳಲ್ಲಿ ಹೊಸ ಶಾಖೆಗಳನ್ನು ಪ್ರಾರಂಭಿಸಬೇಕು.

೨) ಶಾಖೆಗಳ ವಿಸ್ತರಣೆಯ ಸಂದರ್ಭದಲ್ಲಿ ಅನುಮತಿ ನೀಡುವಾಗ ಜನಸಂಖ್ಯೆ ಮಾನದಂಡದ ಆಧಾರ ಮೇಲೆ ನೀಡಬೇಕು. ೧೦೦೦೦ ಜನ ಸಂಖ್ಯೆ ಇರುವ ಪ್ರದೇಶಕ್ಕೆ ಒಂದು ಶಾಖೆ ಅಥವಾ ಘಟಕ ಇರಬೇಕು.

೩) ಪ್ರತಿ ವಾಣಿಜ್ಯ ಬ್ಯಾಂಕು ಒಂದು ಜಿಲ್ಲೆಗೆ (ಆಯ್ದ ಜಿಲ್ಲೆಯಲ್ಲಿ) ಲೀಡ್ ಬ್ಯಾಂಕ್ ಆಗಿ ಕಾರ್ಯ ನಿರ್ವಹಿಸಬೇಕು.

ಬ್ಯಾಂಕು ರಾಷ್ಟ್ರೀಕರಣ ಮತ್ತು ೧೯೮೫ರ ಆರನೇ ಪಂಚವಾರ್ಷಿಕ ಯೋಜನೆಯ ಅಂತ್ಯದ ನಡುವಿನ ಅವಧಿಯಲ್ಲಿ ಆರ್.ಬಿ.ಐ ಶಾಖಾ ವಿಸ್ತರಣೆಗೆ ಸಂಬಂಧಿಸಿದಂತೆ ಜಾರಿಗೆ ತಂದ ನೀತಿಗಳು ಮತ್ತು ಮಾರ್ಗದರ್ಶಿ ಸೂತ್ರಗಳು ಕೆಳಗಿನಂತಿವೆ.

ಎ) ಶಾಖೆಗಳನ್ನು ಪ್ರಾರಂಭಿಸಬೇಕಾದ ಕೇಂದ್ರ ಸ್ಥಳಗಳನ್ನು ಗುರ್ತಿಸಿ, ವಿಸ್ತರಣೆ ಯೋಜನೆ ತಯಾರಿಸುವಾಗ ಬ್ಯಾಂಕುಗಳು ರಾಜ್ಯ ಸರ್ಕಾರ, ಜಿಲ್ಲಾ ಸಮಾಲೋಚನ ಸಮಿತಿ, ಲೀಡ್ ಬ್ಯಾಂಕ್ ಮತ್ತು ಆರ್.ಬಿ.ಐ.ನ್ನು ಸಂಪರ್ಕಿಸಬೇಕು.

ಬಿ) ಲೀಡ್ ಬ್ಯಾಂಕ್‌ಗಳು ಅಸ್ತಿತ್ವದಲ್ಲಿರುವ ಜಿಲ್ಲೆಗಳಲ್ಲಿ ಅವುಗಳನ್ನು ಬ್ಯಾಂಕ್ ಶಾಖೆ ವಿಸ್ತರಣೆ ಪ್ರಕ್ರಿಯೆಯಲ್ಲಿ ತೊಡಗಿಸಬೇಕು.

ಸಿ) ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು ವ್ಯವಹಾರ ನಿರ್ವಹಿಸುತ್ತಿರುವ ಪ್ರದೇಶಗಳಲ್ಲಿ ಇವುಗಳಿಗೆ ಶಾಖೆ ವಿಸ್ತರಣೆಗೆ ಆದ್ಯತೆ ನೀಡಬೇಕು.

ಡಿ) ಕಾರ್ಯ ನಿರ್ವಹಿಸುತ್ತಿರುವ ಬ್ಯಾಂಕುಗಳ ಪ್ರದೇಶಗಳಲ್ಲಿ ಈ ಬ್ಯಾಂಕುಗಳ ವ್ಯವಹಾರಗಳು ವಿಸ್ತರಿಸುವ ಅವಕಾಶಗಳನ್ನು ಪರಿಗಣಿಸಿ ಇವುಗಳಿಗೆ ಆದ್ಯತೆ ನೀಡಬೇಕು.

ಇ) ಶಾಖೆ ವಿಸ್ತರಣೆ ವಿಷಯದಲ್ಲಿ ನಗರ ಮತ್ತು ಮೆಟ್ರೋ ಪಾಲಿಟನ್ ಸಿಟಿಗಳಲ್ಲಿ ಆಯ್ದ ಮತ್ತು ಅಗತ್ಯತೆ ಆಧಾರದ ವಿಧಾನವನ್ನು ಅಳವಡಿಸಿಕೊಳ್ಳಬೇಕು.

೭ನೇ ಪಂಚವಾರ್ಷಿಕ ಯೋಜನೆ ಅವಧಿಯಲ್ಲಿ ಆರ್.ಬಿ.ಐ ಶಾಖೆ ವಿಸ್ತರಣೆ ಅನುಮತಿ ನೀತಿಯನ್ನು ೧೯೮೫–೯೦ರ ಅವಧಿಗೆ ಅನುಸರಿಸಿತು. ೧೯೯೦ರ ಮಾರ್ಚ್‌ಗೆ ಅಂತ್ಯಗೊಂಡ ಆರ್.ಬಿ.ಐ ನ ಈ ಶಾಖೆ ವಿಸ್ತರಣೆ ನೀತಿಯ ಲಕ್ಷಣಗಳು:

೧) ೧೯೮೧ರ ಜನಗಣತಿ ಪ್ರಕಾರ ಪ್ರತಿ ಬ್ಯಾಂಕ್ ಕಛೇರಿ ಅಥವಾ ಶಾಖೆ ಸರಾಸರಿ ೧೭೦೦೦ದಷ್ಟು ಜನಸಂಖ್ಯೆಯ ಗುರಿ ಸಾಧಿಸುವಂತೆ ಹೆಚ್ಚುವರಿ ಬ್ಯಾಂಕ್ ಶಾಖೆಯನ್ನು ಪ್ರಾರಂಭಿಸ ಬೇಕು.

೨) ೧೦ ಕಿಮೀ, ವ್ಯಾಪ್ತಿಯೊಳಗೆ ಒಂದು ಗ್ರಾಮೀಣ ಶಾಖೆ ಇರಬೇಕು. ಹಾಗೂ ೨೦೦೦ ಸ್ಕ್ವೇರ್ ಮೀಟರ್ ಪ್ರದೇಶವನ್ನು ಒಳಗೊಳ್ಳಬೇಕು.

೩) ಬೆಟ್ಟ, ಪರ್ವತ ಮತ್ತು ಆದಿವಾಸಿ ಪ್ರದೇಶಗಳಲ್ಲಿ ಜನಸಂಖ್ಯೆ ನಿಯಮವನ್ನು ಸಡಿಲ ಗೊಳಿಸಬೇಕು.

೪) ಪೂರ್ಣ ಪ್ರಮಾಣದ ಶಾಖೆ ತೆರೆಯಲು ಆಗದ ಪ್ರದೇಶಗಳಲ್ಲಿ ಮೊಬೈಲ್ ಕಛೇರಿಗಳನ್ನು ತೆರೆಯಬಹುದು.

ಮೇಲಿನ ಶಾಖಾ ವಿಸ್ತರಣೆ ನೀತಿಯ ಪ್ರಕಾರ ಜಿಲ್ಲಾ ಸಮನ್ವಯ ಸಮಿತಿಗಳ ಶಿಫಾರಸ್ಸಿನ ಮೇರೆಗೆ ಗ್ರಾಮೀಣ ಪ್ರದೇಶಗಳಲ್ಲಿ ಶಾಖೆ ತೆರೆಯುವ ಕೇಂದ್ರಗಳನ್ನು ಗುರುತಿಸಬೇಕು. ರಾಜ್ಯ ಸರ್ಕಾರಗಳು ಶಾಖೆ ತೆರೆಯಲು ಗುರ್ತಿಸಿದ ಕೇಂದ್ರಗಳ ಪಟ್ಟಿಯನ್ನು ಅನುಮತಿಗಾಗಿ ಆರ್.ಬಿ.ಐಗೆ ಸಲ್ಲಿಸುತ್ತವೆ. ಈ ರೀತಿ ಶಾಖೆ ವಿಷಯದಲ್ಲಿ ಸಮನ್ವಯ ನಡೆಯುತ್ತದೆ. ಆದರೆ ಅಂತಿಮ ಅನುಮತಿ ಆರ್.ಬಿ.ಐ ನ ಕೈಯಲ್ಲಿ ಇರುತ್ತದೆ. ಆರ್.ಬಿ.ಐ ಅನುಮತಿ ನೀಡುವಾಗ ರಾಜ್ಯದ ನಿರೀಕ್ಷೆಗೆ ಅನುಗುಣವಾಗಿ ರಾಜ್ಯಗಳು ಸಲ್ಲಿಸಿರುವ ಪಟ್ಟಿಯನ್ನು ಗೌರವಿಸುತ್ತದೆ. ಶಾಖೆ ವಿಸ್ತರಣೆ ಪ್ರಕ್ರಿಯೆ ರಾಜ್ಯ ಸರ್ಕಾರಗಳ ಸಮನ್ವಯವೆಂಬುದು ಕೇವಲ ಔಪಚಾರಿಕ. ಅನುಮತಿ ನೀಡುವ ಪ್ರಾಧಿಕಾರ (ಆರ್.ಬಿ.ಐ) ಇದನ್ನು ಗಂಬೀರವಾಗಿ ಗಮನಿಸುವುದಿಲ್ಲ.[೨೯]

ಹಣಕಾಸು ಒಳಗೊಳ್ಳುವಿಕೆಗೆ ಪೂರಕವಾಗಿ ಹಾಗೂ ಗ್ರಾಮೀಣ ಸಾಲ ವಿತರಣಾ ವ್ಯವಸ್ಥೆಯನ್ನು ಬಲಪಡಿಸಲು ಸಂಘಟಿತ ಹಣಕಾಸು ವ್ಯವಸ್ಥೆಯಡಿ ಸರ್ಕಾರ ಜಾರಿಗೆ ತಂದಿರುವ ಕೆಲವು ಕೃಷಿ ಸಾಲ ಕಾರ್ಯಕ್ರಮಗಳೆಂದರೆ,

**೩.೪. ಬೆಳೆಸಾಲ**

ಕೇಂದ್ರ ಬಜೆಟ್‌ನಲ್ಲಿ ೨೦೧೧-೧೨ರ ವರ್ಷಕ್ಕೆ ೪,೭೫೦ ಬಿಲಿಯನ್ ಕೋಟಿ ಕೃಷಿ-ಬೆಳೆ ಸಾಲ ನೀಡುವ ಗುರಿ ಇಟ್ಟುಕೊಂಡು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ಸಹಕಾರ ಸಂಸ್ಥೆಗಳು ವಿತರಿಸಿದ ಸಾಲ ಸೇರಿ ೫.೧೧೦ ಬಿಲಿಯನ್ ಕೋಟಿ ವಿತರಿಸಲಾಗಿದೆ. ಶೇಕಡಾ ೧೦ರಷ್ಟು ಸಾಲ ವಿತರಣೆ ಸಾಧನೆ ಮಾಡಲಾಗಿದೆ. ೨೦೧೨-೧೩ರ ಅವಧಿಯಲ್ಲಿ ೫೭೫೦ ಕೋಟಿ ಸಾಲ ನೀಡುವ ಗುರಿ ಇಟ್ಟುಕೊಳ್ಳಲಾಗಿದೆ. ಹೀಗೆ ಪ್ರತೀ ವರ್ಷ ಅಪಾರ ಪ್ರಮಾಣದ ಸಾಲ ಕೃಷಿ ಕ್ಷೇತ್ರಕ್ಕೆ ಪೂರೈಕೆಯಾಗುತ್ತಿದೆ. ಆದರೆ ಅಧ್ಯಯನಗಳ ಪ್ರಕಾರ ಈ ಸಾಲ ಸೌಲಭ್ಯಗಳು ಆಸ್ತಿವುಳ್ಳ ಶ್ರೀಮಂತ, ದೊಡ್ಡ ರೈತರ ಪಾಲಾಗುತ್ತಿದೆ.

**೩.೫. ಬಡ್ಡಿ ರಿಯಾಯತಿ ಯೋಜನೆ**

೨೦೧೧-೧೨ರ ಕೇಂದ್ರ ಬಜೆಟ್‌ನಲ್ಲಿ ಬಡ್ಡಿ ರಿಯಾಯತಿ ದರವನ್ನು ಹೆಚ್ಚಿಸಲಾಗಿದೆ. ಅಲ್ಪಾವಧಿ ಉತ್ಪಾದನಾ ಸಾಲಗಳಿಗೆ ನೀಡುವ ಬಡ್ಡಿ ರಿಯಾಯತಿಯನ್ನು ಶೇಕಡಾ ೧.೫ ರಿಂದ ಶೇಕಡಾ ೨ಕ್ಕೆ ಹೆಚ್ಚಿಸಲಾಗಿದೆ. ಅದೇ ರೀತಿ ಹೆಚ್ಚುವರಿಯಾಗಿ ಸಾಲ ಸರಿಯಾದ ಸಮಯಕ್ಕೆ ಮರುಪಾವತಿ ಮಾಡಿದ ರೈತರಿಗೆ ನೀಡುವ ಹೆಚ್ಚುವರಿ ಬಡ್ಡಿ ರಿಯಾಯತಿಯನ್ನು ಶೇಕಡಾ ೨ರಿಂದ ೩ಕ್ಕೆ ಹೆಚ್ಚಿಸಲಾಗಿದೆ. ಅಂದರೆ ಸಾಲದ ಮೇಲಿನ ವಾಸ್ತವ ಬಡ್ಡಿ ಶೇಕಡಾ ೪ ಮಾತ್ರ. ಈ ಸೌಲಭ್ಯವನ್ನು ಶ್ರೀಮಂತರೇ ಪಡೆಯುತ್ತಾರೆ. ಪಡೆದ ಸಾಲವನ್ನು ಹಿಂತಿರುಗಿಸುವ ಸಾಮರ್ಥ್ಯ ಇರುವುದು ಶ್ರೀಮಂತ ರೈತರಿಗೆ ಮಾತ್ರ. ಈ ಸೌಲಭ್ಯವನ್ನು ಸಂಘಟಿತ ಹಣಕಾಸು ವ್ಯವಸ್ಥೆಯಿಂದ ಸಾಲ ಪಡೆದವರು ಪಡೆಯುತ್ತಾರೆ. ಈ ವ್ಯವಸ್ಥೆಯಿಂದ ಹೆಚ್ಚಿನ ಪ್ರಮಾಣದ ಸಾಲ ಪಡೆಯುವವರು ಶ್ರೀಮಂತ ದೊಡ್ಡ ರೈತರು. ಇವರೆಲ್ಲಾ ಬಹುತೇಕ ಬಲಾಢ್ಯ ಜಾತಿಯ ಜನರು.

## ೩.೬. ಕೃಷಿ ಸಾಲ ಮನ್ನಾ ಯೋಜನೆ

೨೦೦೮ರಲ್ಲಿ ಸರ್ಕಾರ ಈ ಯೋಜನೆಯನ್ನು ಜಾರಿಗೆ ತಂದಿತು. ಈ ಯೋಜನೆಯಡಿ ಕೇಂದ್ರ ಸರ್ಕಾರ ೫ ಕಂತುಗಳಲ್ಲಿ ೫೨೫ ಬಿಲಿಯನ್ ಕೋಟಿ ಹಣವನ್ನು ಬಿಡುಗಡೆ ಮಾಡಿದೆ. ಈ ಮನ್ನಾ ಹಣವನ್ನು ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು, ಸಹಕಾರ ಸಂಸ್ಥೆಗಳು ಮತ್ತು ವಾಣಿಜ್ಯ ಬ್ಯಾಂಕುಗಳಿಗೆ ನೀಡಿವೆ. ಈ ಸೌಲಭ್ಯವನ್ನು ಪಡೆದವರು ಶ್ರೀಮಂತ ದೊಡ್ಡ ರೈತರೆ ವಿನಃ ಬಡ ರೈತರಲ್ಲ.[೨೦]

## ೩.೭. ಲೀಡ್ ಬ್ಯಾಂಕ್ ಯೋಜನೆ

ಪ್ರತಿ ಜಿಲ್ಲೆಯಲ್ಲಿ ಸಮರ್ಪಕ ಬ್ಯಾಂಕು ಸಾಲ ಒದಗಿಸಲು ಲೀಡ್ ಬ್ಯಾಂಕು ಯೋಜನೆಯನ್ನು ೧೯೬೯ರಲ್ಲಿ ಒಂದು ಪ್ರಬಲ ಅಸ್ತ್ರವಾಗಿ ಜಾರಿಗೆ ತರಲಾಯಿತು. ಯಾವುದಾದರು ಒಂದು ವಾಣಿಜ್ಯ ಬ್ಯಾಂಕು ಜಿಲ್ಲೆಯಲ್ಲಿ ನಾಯಕತ್ವ ವಹಿಸುವ ಆ ಪ್ರದೇಶದಲ್ಲಿ ಸಾಲ ಪೂರೈಕೆ ಮತ್ತು ಅಭಿವೃದ್ಧಿ ಕಾರ್ಯಗಳನ್ನು ನಡೆಸುತ್ತವೆ. ಜಿಲ್ಲೆಯಲ್ಲಿ ವಾಣಿಜ್ಯ ಬ್ಯಾಂಕೊಂದು ನಾಯಕತ್ವ ವಹಿಸುವ ನೀತಿ ಇತರ ಬ್ಯಾಂಕುಗಳ ಮೇಲೆ ಏಕಸ್ವಾಮ್ಯ ಸ್ಥಾಪಿಸುವುದಲ್ಲ. ಈ ಬ್ಯಾಂಕು ಲೀಡ್ ಬ್ಯಾಂಕ್ ಆಗಿ ಜಿಲ್ಲೆಯಲ್ಲಿ ಬ್ಯಾಂಕಿಂಗ್ ಸೌಲಭ್ಯಗಳನ್ನ ವಿಸ್ತರಿಸುವುದು ಹಾಗೂ ಜಿಲ್ಲೆಯ ಸಹಕಾರ ಸಂಸ್ಥೆಗಳು, ವಾಣಿಜ್ಯ ಬ್ಯಾಂಕುಗಳು, ಪ್ರಾದೇಶಿಕ ಬ್ಯಾಂಕುಗಳು ಮತ್ತು ಇತರೇ ಹಣಕಾಸು ಸಂಸ್ಥೆಗಳ ಚಟುವಟಿಕೆಗಳನ್ನ ಸಂಘಟಿಸಿ ಸಮನ್ವಯದಿಂದ ಮುನ್ನಡೆಸಬೇಕು. ಪ್ರತಿ ಲೀಡ್ ಬ್ಯಾಂಕುಗಳು ಜಿಲ್ಲೆಯಲ್ಲಿ ಬ್ಯಾಂಕು ಸೇವೆಗಳಿಲ್ಲದ ಕೇಂದ್ರಗಳನ್ನ ಸಮೀಕ್ಷೆ ಮಾಡಿ ಗುರುತಿಸಿ ಶಾಖೆ ಸ್ಥಾಪನೆಗೆ ಯತ್ನಿಸಬೇಕು. ಜಿಲ್ಲೆಯ ಸ್ಥಳೀಯ ಸಮಸ್ಯೆಗಳನ್ನ ಅಧ್ಯಯನ ಮಾಡಿ ಸಮಗ್ರ ಯೋಜನೆರೂಪಿಸಿ ಹಣಕಾಸು ಮತ್ತು ಅಭಿವೃದ್ಧಿ ಸಂಸ್ಥೆಗಳ ಯೋಜನೆಗಳ ಅನುಷ್ಠಾನದಲ್ಲಿ ಪಾಲ್ಗೊಂಡು, ಅವುಗಳು ಅಭಿವೃದ್ಧಿ ಕಾರ್ಯಗಳನ್ನ ಕೈಗೆತ್ತಿಕೊಳ್ಳುವಂತೆ ಪ್ರೇರೇಪಿಸಬೇಕು. ಲೀಡ್‌ಬ್ಯಾಂಕ್ ಆಗಿ ಆಯ್ಕೆ ಮಾಡುವ ಬ್ಯಾಂಕಿನ ಗಾತ್ರ, ಅದರ ಸಂಪನ್ಮೂಲ, ಬ್ಯಾಂಕುಗಳ ಪ್ರಾದೇಶಿಕ ಹಿನ್ನೆಲೆಯನ್ನು ಆಧಾರವಾಗಿಟ್ಟುಕೊಂಡು ಲೀಡ್‌ಬ್ಯಾಂಕ್‌ನ್ನು ಆಯ್ಕೆ ಮಾಡಲಾಗುತ್ತದೆ. ಕರ್ನಾಟಕದ ಪ್ರತಿ ಜಿಲ್ಲೆಯಲ್ಲಿ ಒಂದೊಂದು ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕ್ ಲೀಡ್ ಬ್ಯಾಂಕ್ ಆಗಿ ಕಾರ್ಯ ನಿರ್ವಹಿಸುತ್ತವೆ. ರಾಯಚೂರು ಜಿಲ್ಲೆಯಲ್ಲಿ ಬ್ಯಾಂಕ್ ಆಫ್ ಹೈದರಾಬಾದ್ ಲೀಡ್ ಬ್ಯಾಂಕ್ ಆಗಿ ಕಾರ್ಯ ನಿರ್ವಹಿಸುತ್ತಿದೆ.

## ೩.೮. ಜಿಲ್ಲಾ ಸಾಲ ಯೋಜನೆ

ಲೀಡ್ ಬ್ಯಾಂಕ್‌ಗಳು ಸಂಘಟಿತ ಹಣಕಾಸು ಸಂಸ್ಥೆಗಳ ಕಾಲ ಮಿತಿ ಮತ್ತು ಸಾಲ ಗುರಿಗಳನ್ನು ಒಳಗೊಂಡ ಜಿಲ್ಲಾ ಸಾಲ ಯೋಜನೆಯನ್ನು ತಯಾರಿಸುವುದು ಆರಂಭವಾಯಿತು. ಈ ರೀತಿ ಜಿಲ್ಲಾ ಸಾಲ ಯೋಜನೆರೂಪಿಸುವಾಗ ತಾಲ್ಲೂಕುವಾರು, ವಲಯವಾರು, ಯೋಜನೆವಾರು ಮತ್ತು ಬ್ಯಾಂಕುವಾರು ಸಿದ್ದಪಡಿಸಲಾಗುತ್ತದೆ. ಯಾದೃಚ್ಚಿಕ ವಿಧಾನದ ಆಧಾರದ ಮೇಲೆ ಆರ್.ಬಿ.ಐ

೧೯೭೫ರಲ್ಲಿ ಗುಜರಾತ್ ಮತ್ತು ಮಹಾರಾಷ್ಟ್ರಗಳಲ್ಲಿ ಪ್ರಥಮ ಬಾರಿಗೆ ಜಿಲ್ಲಾ ಸಾಲ ಯೋಜನೆಯನ್ನು ರೂಪಿಸಿತು. ಈ ಯೋಜನೆಯನ್ನು ೧೯೭೮ರಲ್ಲಿ ಅನುಷ್ಠಾನಗೊಳಿಸಿತು. ಆದರೆ ೧೯೭೯ರಲ್ಲಿರದ್ದು ಪಡಿಸಲಾಯಿತು. ೧೯೮೦–೮೨ ಅವಧಿಯಲ್ಲಿ ೨ನೇ ಹಂತದ ಜಿಲ್ಲಾ ಸಾಲ ಯೋಜನೆಯ ನಿಯಾಮವಳಿಗಳನ್ನುರೂಪಿಸಲಾಯಿತು. ಇದರಡಿ ವಾರ್ಷಿಕ ಕ್ರಿಯಾ ಯೋಜನೆ (ಆನ್ಯುಅಲ್ ಆಕ್ಷನ್ ಪ್ಲಾನ್–ಎಎಪಿ) ಪ್ರಾರಂಭಿಸಲಾಯಿತು. ಜಿಲ್ಲೆಯ ಯೋಜನೆಗಳಲ್ಲಿ ಜಿಲ್ಲಾ ಕೇಂದ್ರಗಳು ಮತ್ತು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಮತ್ತು ಸರ್ಕಾರಿ ಯೋಜನೆಗಳನ್ನ ಒಟ್ಟು ಗೂಡಿಸಲಾಯಿತು. ೧೯೮೬–೮೭ರ ಅವಧಿಗೆ ವಾರ್ಷಿಕ ಕ್ರಿಯಾ ಯೋಜನೆರೂಪಿಸಲು ಲೀಡ್ ಬ್ಯಾಂಕ್‌ಗಳಿಗೆ ನಿರ್ದೇಶಿಸಲಾಯಿತು. ೧೯೮೩–೮೫ರ ಅವಧಿಗೆ ಮೂರನೇ ಹಂತದ ಜಿಲ್ಲಾ ಸಾಲ ಯೋಜನೆಗಳನ್ನರೂಪಿಸಲು ನಿಯಮರೂಪಿಸಲಾಯಿತು. ೧೯೮೮–೯೦ರ ಅವಧಿಗೆ ನಾಲ್ಕನೇ ಹಂತದ ಜಿಲ್ಲಾ ಸಾಲ ಯೋಜನೆಗಳನ್ನರೂಪಿಸಲಾಯಿತು. ಲೀಡ್ ಬ್ಯಾಂಕ್ ಯೋಜನೆ ಯನ್ನು ಲೀಡ್ ಬ್ಯಾಂಕ್ ನೇಮಿಸಿದ ಅಧಿಕಾರಿ, ನಬಾರ್ಡ್‌ನ ಅಧಿಕಾರಿಗಳು, ಆರ್.ಬಿ.ಐ.ನ ಜಿಲ್ಲಾ ಮಟ್ಟದ ಅಧಿಕಾರಿಗಳು ಜಾರಿಗೊಳಿಸುತ್ತಾರೆ. ಈ ಯೋಜನೆಯ ಅನುಷ್ಠಾನದಲ್ಲಿ ವಿವಿಧ ಸಂಸ್ಥೆಗಳ ನಡುವಿನ ಸಮನ್ವಯ ಮುಖ್ಯ. ಲೀಡ್ ಬ್ಯಾಂಕ್ ಯೋಜನೆಯನ್ನು ಕೆಳಕಂಡ ವ್ಯವಸ್ಥೆ ಮೂಲಕ ಅನುಷ್ಠಾನ ಗೊಳಿಸಲಾಗುತ್ತದೆ.

ಎ) ಜಿಲ್ಲಾಧಿಕಾರಿ ಅಧ್ಯಕ್ಷತೆಯ ಜಿಲ್ಲಾ ಸಮಾಲೋಚನಾ ಸಮಿತಿಯು ಈ ಯೋಜನೆಯ ಅನುಷ್ಠಾನವನ್ನು ಮೇಲ್ವಿಚಾರಣೆ ಮಾಡುತ್ತದೆ. ಪ್ರತಿ ತಿಂಗಳೂ ಈ ಸಮಿತ ಸಭೆ ಸೇರುತ್ತದೆ.

ಬಿ) ಜಿಲ್ಲಾ ಮಟ್ಟದ ಪರಿಶೀಲನಾ ಸಮಿತಿಯು ಅಧಿಕಾರೇತರ ಪ್ರತಿನಿಧಿಗಳು ಭಾಗವಹಿಸುವಂತೆ ನೋಡಿಕೊಳ್ಳಬೇಕು.

ಸಿ) ರಾಜ್ಯಮಟ್ಟದ ಸಮನ್ವಯ ಸಮಿತಿ ಹಣಕಾಸು ಸಂಸ್ಥೆಗಳ ಚಟುವಟಿಕೆಗಳು ಮತ್ತು ಸರ್ಕಾರಿ ಸಂಸ್ಥೆಗಳ ಚಟುವಟಿಕೆಗಳನ್ನು ಸಮನ್ವಯಸುತ್ತದೆ.

ಡಿ) ರಾಜ್ಯ ಮಟ್ಟದ ಪರಿಶೀಲನಾ ಸಮಿತಿ ಸಹ ಇದೆ.

ಲೀಡ್ ಬ್ಯಾಂಕ್ ಯೋಜನೆ ಮೂಲಕ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳ ಅನುಷ್ಠಾನದ ವೇಗವನ್ನು ಹೆಚ್ಚಿಸುವಲ್ಲಿ ಬ್ಯಾಂಕು ಸಾಲದ ಪಾತ್ರವನ್ನು ಜಿಲ್ಲಾ ಬ್ಯಾಂಕುಗಳು ಮನವರಿಕೆ ಮಾಡಿಕೊಂಡಿವೆ.[೨] ೧೯೮೦ ನಂತರ ಲೀಡ್ ಬ್ಯಾಂಕ್ ಯೋಜನೆಯ ಕಾರ್ಯವನ್ನು ಶರ್ಮಾ ಸಮಿತಿ ಪರಿಶೀಲಿಸಿತು. ಲೀಡ್ ಬ್ಯಾಂಕ್ ಯೋಜನೆಯ ಆಡಳಿತದಲ್ಲಿ ತರಬೇಕಾದ ಗುಣಾತ್ಮಕ ಬದಲಾವಣೆಯನ್ನು ಪ್ರಸ್ತಾಪಿಸಿತು. ಈ ಯೋಜನೆ ಅನುಷ್ಠಾನದ ಮಾಹಿತಿ, ಅಂಕಿ ಅಂಶಗಳನ್ನು ಸರಿಯಾದ ಮಾದರಿಯಲ್ಲಿ ಸಂಗ್ರಹಿಸಿ ಕ್ರೋಡಿಕರಿಸುವ ಅಗತ್ಯವಿದೆ ಎಂದು ಅಭಿಪ್ರಾಯಪಟ್ಟಿತು. ನೀತಿರಚನೆಯ ವಿವಿಧ ಆಯಾಮಗಳನ್ನ ಚರ್ಚಿಸುತ್ತಾ ಗ್ರಾಮೀಣ ಹಣಕಾಸು ವ್ಯವಸ್ಥೆಯ ಎರಡು ವಲಯಗಳಾದ ಸಂಘಟಿತ ಮತ್ತು ಅಸಂಘಟಿತ ಹಣಕಾಸು ಮೂಲಗಳನ್ನು ಒಟ್ಟುಗೂಡಿಸುವ

ಯಾವುದೇ ಕ್ರಮಗಳು ನಡೆದಿಲ್ಲ ಎನ್ನಬಹುದು. ಸಂಘಟಿತ ವಲಯದ ಮೂಲಕ್ಕೆ ಸಂಬಂಧಿಸಿದಂತೆ ಕಾಲಕಾಲಕ್ಕೆ ನೀತಿಗಳಲ್ಲಿ ಬದಲಾವಣೆ ತಂದು ಈ ಮೂಲವನ್ನು ಹೆಚ್ಚು ಸಂಘಟಿತ ಅಥವಾ ಸಾಂಸ್ಥಿಕಗೊಳಿಸುವ ಪ್ರಯತ್ನಗಳು ನಿರಂತರವಾಗಿ ನಡೆದಿವೆ. ಆದರೆ ಇವೆರಡರ ಮಹತ್ವ ಎರಡೂ ವಲಯದ ಸಮಸ್ಯೆ ಸಂಕೀರ್ಣತೆಗಳ ಅರಿವಿದ್ದರು ಎರಡು ವಲಯಗಳನ್ನು ಸಮಗ್ರ ಗೊಳಿಸುವ ಪ್ರಯತ್ನಗಳು ಕಂಡಿಲ್ಲ. ರೈತರು ಸಂಘಟಿತ ವ್ಯವಸ್ಥೆಯ ಹಲವು ಸಮಸ್ಯೆಗಳಿಂದಾಗಿ ಇಂದಿಗೂ ಅಸಂಘಟಿತ ಮೂಲದಿಂದ ತಮ್ಮ ಸಾಲ ಅಗತ್ಯಗಳನ್ನು ಪೂರೈಸಿಕೊಳ್ಳುತ್ತಾರೆ. ಈ ವಲಯದ ಒತ್ತಡ ಸಹಿಸಿಕೊಳ್ಳಲು ಸಮರ್ಥರಾಗದ ಸಣ್ಣ ಅತೀ ಸಣ್ಣ ರೈತರು ಅಸಹಾಯಕ ಸ್ಥಿತಿಯಿಂದ ಆಸ್ತಿ ಮತ್ತು ಸಾಮಾಜಿಕ ಸ್ಥಾನಮಾನ ಕಳೆದುಕೊಂಡು ಆತ್ಮಹತ್ಯೆ ದಾರಿ ಹಿಡಿಯುತ್ತಾರೆ. ಸರ್ಕಾರ ಮತ್ತು ಆರ್.ಬಿ.ಐ ಸ್ವಾತಂತ್ರ್ಯ ನಂತರದಿಂದಲೂ ಸಂಘಟಿತ ಹಣಕಾಸನ್ನು ಸುಧಾರಿಸಿ ಸಾಲ ಪೂರೈಕೆ ಹರಿಯುವಿಕೆಯನ್ನು ಹೆಚ್ಚಿಸುವ ಕ್ರಮಕೈಗೊಂಡಿದೆ. ಆದರೂ ಜಾಗತೀಕರಣದ ಸಂದರ್ಭದಲ್ಲಿ ಮಾರುಕಟ್ಟೆ ಆಧಾರಿತ ಅರ್ಥ ವ್ಯವಸ್ಥೆಯಲ್ಲಿ ಮಾರುಕಟ್ಟೆಯೇ ಜನರ ತಮ್ಮ ಎಲ್ಲಾ ಅವಶ್ಯಕತೆಗಳನ್ನು ಪೂರೈಸುತ್ತದೆ ಎಂದು ಭಾವಿಸಲಾಗಿದೆ. ಸಣ್ಣ ಅತಿಸಣ್ಣ ರೈತರು ಮತ್ತು ಕೃಷಿ ಕಾರ್ಮಿಕರು ಭೂರಹಿತರು ತಮ್ಮ ಸಾಲ ಅಗತ್ಯಗಳನ್ನು ಮಾರುಕಟ್ಟೆಯಿಂದಲೇ ಪೂರೈಸಿಕೊಳ್ಳಲಿ ಎಂಬ ಭಾವನೆ ಸರ್ಕಾರಕ್ಕಿದ್ದಂತಿದೆ. ಜಾಗತೀಕರಣದ ಸಂದರ್ಭದಲ್ಲಿ ಸಂಘಟಿತ ಹಣಕಾಸು ಸಂಸ್ಥೆಗಳು ಲಾಭ ಗಳಿಕೆಗೆ ಆದ್ಯತೆ ನೀಡುತ್ತವೆ. ಪ್ರಬಲ ವರ್ಗಗಳು ಮಾತ್ರ ಸಂಘಟಿತ ಮೂಲದಿಂದ ಸಾಲ ಸೌಲಭ್ಯಗಳನ್ನು ಪಡೆಯುತ್ತಾರೆ. ಈ ವಲಯದ ಸಾಲ ನೀತಿಗಳು ಸಂಕೀರ್ಣವಾಗಿದ್ದು ದರ್ಬಲ ವರ್ಗಗಳೂ ಹಣಕಾಸು ಸೌಲಭ್ಯ ಪಡೆಯುವಂತೆ ಸಾಲ ನೀತಿ ಮತ್ತು ನಿಯಮಗಳು ಸರಳವಾಗಿ ಪೂರಕವಾಗಿಲ್ಲ. ಇದರಿಂದ ಅಸಂಘಟಿತ ಹಣಕಾಸು ಮಾರುಕಟ್ಟೆ ವಿಶೇಷವಾಗಿ ಗ್ರಾಮೀಣ ಭಾಗಗಳಲ್ಲಿ ಪ್ರಬಲವಾಗುತ್ತಿವೆ. ಅಸಂಘಟಿತ ಮಾರುಕಟ್ಟೆ ಹಿತಾಸಕ್ತಿಗಳು ತಮ್ಮ ವಿಸ್ತೃತ ಜಾಲ-ಮಾರುಕಟ್ಟೆಗಳನ್ನು ಸೃಷ್ಟಿಸಿಕೊಂಡು ನಿರಂತರವಾಗಿ ಜನರ ಕೃಷಿಕರ ಶೋಷಣೆಯಲ್ಲಿ ತೊಡಗಿವೆ. ಅಸಂಘಟಿತ ಸಾಲ ಮೂಲದ ಪ್ರಮಾಣ ಮತ್ತು ಪ್ರಭಾವ ಕಡಿಮೆಯಾಗಿದೆ ಎಂದು ಸರ್ಕಾರ ವಾದಿಸುತ್ತದೆ. ಆದರೆ ಜಾಗತೀಕರಣದ ಮಾರುಕಟ್ಟೆ ಆರ್ಥಿಕತೆಯಲ್ಲಿ ಖಾಸಗೀ ಲೇವಾದೇವಿಗಳ ಮೂಲ ಪ್ರಭಾವಶಾಲಿಯಾಗಿ ಬೆಳೆಯುತ್ತಿದೆ.

### ೩.೯. ಸಾಲ ನೀತಿಯ ಅನುಷ್ಠಾನ ವಿಧಾನ

ಹಸಿರು ಕ್ರಾಂತಿ ಮತ್ತು ಹೆಚ್ಚಿದ ಕೃಷಿ ಸಾಲ ಬೇಡಿಕೆಯಿಂದ ಗ್ರಾಮೀಣ ಸಾಲ ವಿಷಯವನ್ನು ನಿರಂತರವಾಗಿ ಪರಿಶೀಲಿಸಲಾಯಿತು. ಗ್ರಾಮೀಣ ಸಾಲ ವ್ಯವಸ್ಥೆಯ ಸಾಂಸ್ಥಿಕ ಬೆಳವಣಿಗೆಯ ಪರಿಶೀಲನೆಯೊಂದಿಗೆ ಸರ್ಕಾರರೂಪಿಸಿರುವ ಸಾಲ ನೀತಿಗಳ ಪರಿಶೀಲನೆಯೂ ಅಗತ್ಯವಿದೆ. ನೀತಿ ರೂಪಿಸುವ ಪ್ರಕ್ರಿಯೆಯಲ್ಲಿ ನೀತಿಯ ಮೌಲ್ಯ ಮಾಪನ ಮತ್ತು ಪರಿಷ್ಕರಣೆ ಅಥವಾ ತಿದ್ದುಪಡಿ ಒಂದು ಮುಖ್ಯ ಹೆಜ್ಜೆ. ನೀತಿಯು ದಕ್ಷ ಮತ್ತು ಪರಿಣಾಮಕಾರಿಗಿದ್ದು ನಿರೀಕ್ಷಿಸಿದ ಉದ್ದೇಶಗಳು ಈಡೇರುವಂತೆ ಮಾರ್ಗದರ್ಶನ ನೀಡುವಂತಿರಬೇಕು. ಗುರಿ ಸಾಧಿಸಲು ಬೇಕಾದ

ಸಮಗ್ರ ತಳಹದಿಯನ್ನು ನೀತಿಯು ಹೊಂದಿದೆಯಾ ಎನ್ನುವುದರ ಮೇಲೆ ಅದು ಪರಿಣಾಮಕಾರಿ ಎಂಬುದನ್ನು ನಿರ್ಧರಿಸಬಹುದು. ನೀತಿಗಳು ವಾಸ್ತವವಾಗಿವೆಯೇ? ಯಶಸ್ವಿ ಅನುಷ್ಠಾನಕ್ಕೆ ಅಗತ್ಯವಾದ ಸಂಪನ್ಮೂಲಗಳ ಲಭ್ಯತೆ, ಸಂಸ್ಥೆಯ ಸಾಮರ್ಥ್ಯ ಹಾಗೂ ಸಂಸ್ಥೆಯ ಕಾರ್ಯ ವೈಖರಿಯ ಮೇಲೆ ಪ್ರಭಾವ ಬೀರುವ ಅಂಶಗಳು ಇತ್ಯಾದಿಗಳನ್ನು ನೀತಿಯು ಪರಿಗಣಿಸಿದೆಯೇ? ಎಂಬುದರ ಆಧಾರಿದ ಮೇಲೆ ನೀತಿಯನ್ನು ಮೌಲೀಕರಿಸಬೇಕು. ನೀತಿಗಳನ್ನು ಅನುಷ್ಠಾಗೊಳಿಸಬಹುದೇ ಅಥವಾ ಆಚರಣೆಗೆ ತರಬಹುದೇ? ನೀತಿಯನ್ನು ಅನುಸರಿಸಲಾಗುತ್ತಿದೆಯೇ? ಎಂಬ ಅಂಶಗಳ ಆಧಾರದ ಮೇಲೆಯೂ ಅದನ್ನು ಮೌಲ್ಯಮಾಪನ ಮಾಡಲಾಗುತ್ತದೆ. ಸಂಸ್ಥೆಯ ಸಮಗ್ರ ಉದ್ದೇಶಗಳನ್ನು ನೀತಿಗಳು ಸಾಧಿಸಿದವೇ? ಎಂಬುದನ್ನು ನೀತಿರೂಪಿಸುವವರು ಪರಿಶೀಲಿಸ ಬೇಕಾಗುತ್ತದೆ. ನೀತಿ ರೂಪಿಸುವವರು ಮತ್ತು ಅನುಷ್ಠಾನಗೊಳಿಸುವವರ ನಡುವೆ ನಿರಂತರ ನಿರಂತರ ಸಂಪರ್ಕವಿರಬೇಕು. ಸಮನ್ವಯ ಇರಬೇಕು. ಸಭೆಗಳು, ಲಿಖಿತ ವರದಿಗಳು, ಸಂಶೋಧನೆಗಳು ಮತ್ತು ವಯುಕ್ತಿಕ ಸಂಪರ್ಕಗಳ ಮೂಲಕ ಇದನ್ನು ಸಾಧಿಸಬೇಕು. ಈ ಪ್ರಕ್ರಿಯೆ ಆಧಾರದ ಮೇಲೆ ಪರಿಹಾರ ಕ್ರಮಗಳನ್ನು ಕೈಗೊಳ್ಳಲು ಸಾಧ್ಯವಾಗುತ್ತದೆ. ನೀತಿ ಮತ್ತು ಪ್ರಸ್ತುತ ಬ್ಯಾಂಕುಗಳ ಆಚರಣೆಗಳನ್ನು ಪರಿಶೀಲಿಸುವ ಮೂಲಕ ನೀತಿಯ ಅನುಷ್ಠಾನದ ಪರಿಣಾಮವನ್ನು ಗುರುತಿಸುವ ಪ್ರಯತ್ನ ಈ ಅಧ್ಯಯನದಲ್ಲಿ ಮಾಡಲಾಗಿದೆ. ಆರ್.ಬಿ.ಐ, ಸರ್ಕಾರ ಪ್ರಾಯೋಜಿತ ಸ್ವ ಉದ್ಯೋಗ, ಬಡತನ ನಿರ್ಮೂಲನೆ ಕಾರ್ಯಕ್ರಮಗಳಲ್ಲಿ ಬ್ಯಾಂಕುಗಳು ಭಾಗವಹಿಸುವಂತೆ ನಿರ್ದೇಶನ ನೀಡಿದೆ. ಸರ್ಕಾರದ ಯೋಜನೆಗಳಿಗೆ ಬ್ಯಾಂಕುಗಳು ನೀಡುವ ಸಾಲ ಸೌಲಭ್ಯ ಮತ್ತು ಬ್ಯಾಂಕುಗಳ ಪಾಲ್ಗೊಳ್ಳುವಿಕೆಯನ್ನು ಪರಿಶೀಲಿಸಿದ ಕೆಲವು ಅಧ್ಯಯನಗಳು ಯೋಜನೆಯ ಸಾಲದ ಗುರಿ ಮತ್ತು ಬ್ಯಾಂಕುಗಳು ಮಂಜೂರು ಮಾಡಿದ ಸಾಲಗಳ ನಡುವೆ ಅಂತರ ಇರುವುದನ್ನು ಗುರ್ತಿಸಿವೆ. ಇದಕ್ಕೆ ಕಾರಣಗಳನ್ನು ಪಟ್ಟಿ ಮಾಡಲಾಗಿದೆ. ಅದರಂತೆ ಸಿಬ್ಬಂದಿ ಕೊರತೆ, ನಿರ್ಧಾರ ತೆಗೆದುಕೊಳ್ಳುವಿಕೆಯ ವಿಷಯದಲ್ಲಿ ಶಾಖಾ ವ್ಯವಸ್ಥಾಪಕರಿಗೆ ಹೆಚ್ಚಿನ ಸ್ವಾತಂತ್ರ್ಯ ಮತ್ತು ಅಧಿಕಾರ ಇಲ್ಲದಿರುವುದು ಪ್ರಮುಖ ಕಾರಣಗಳು, ಹಾಗೆಯೇ ಆರ್.ಬಿ.ಐ ೧೯೯೦ರಲ್ಲಿ ೧೯೮೬–೮೭ ಅವಧಿಗೆ ಬ್ಯಾಂಕುಗಳಿಗೆ ನೀಡಿದ ಹಣಕಾಸು ನೆರವಿನ ಬಳಕೆ ಕುರಿತು ನಡೆಸಿದ ಅಧ್ಯಯನ ಪ್ರಕಾರ ಸಾಕಷ್ಟು ಸಂಪನ್ಮೂಲ ಅಥವಾ ಹಣಕಾಸು ಇಲ್ಲದಿರುವಿಕೆ, ಸಾಲ ನೀಡಿದ ನಂತರ ಮೇಲ್ವಿಚಾರಣೆ ಮತ್ತು ನಿರಂತರ ಗಮನಿಸುವಿಕೆ ಇಲ್ಲದಿದ್ದರಿಂದ ಸಾಲ ಸೌಲಭ್ಯಗಳು ಬಳಕೆಯಾಗಿಲ್ಲ. ಆದಾಯ ದಾಯಕ ವ್ಯವಹಾರಗಳಲ್ಲಿ ಸಾಲ ಹೂಡಿಕೆಯಾಗಿಲ್ಲ. ಹಣಕಾಸು ದುರ್ಬಳಕೆ ಆಗಿರುವುದನ್ನು ಗುರುತಿಸಲಾಗಿದೆ.

ಬ್ಯಾಂಕುಗಳು ಸಾಮಾನ್ಯವಾಗಿ ಅಪೆಕ್ಸ್ ಸಂಸ್ಥೆಗಳು ರೂಪಿಸಿದ ನೀತಿಗಳ ನಿಯಮಾವಳಿಗಳನ್ನು ಪಾಲಿಸುತ್ತವೆ ಎಂದು ಕಂಡು ಬಂದರೂ ವಾಸ್ತವವಾಗಿ ಪಾಲಿಸಿರುವುದಿಲ್ಲ. ಅಥವಾ ಅನಗತ್ಯವಾಗಿ ನಿಯಾಮವಳಿಗಳನ್ನು ಹೆಚ್ಚುವರಿಯಾಗಿ ಅನುಸರಿಸುತ್ತಾರೆ ಅಥವಾ ಸಂಕೀರ್ಣಗೊಳಿಸುತ್ತವೆ. ಕೆಲವು ಬ್ಯಾಂಕುಗಳು ೩ನೇ ವ್ಯಕ್ತಿಯಿಂದ ಗ್ಯಾರಂಟಿ ಬರವಸೆ ನೀಡುವ ನಿಯಮಗಳನ್ನು ಅನುಸರಿಸುವುದು ಕಂಡು ಬಂದಿದೆ. ಸಂಘಟಿತ ಹಣಕಾಸು ಮೂಲದ ಸಾಲ ನೀತಿಯ ಅನುಷ್ಠಾನ ಮತ್ತು

ಸಾಧನೆಗಳನ್ನು ಸಾರ್ವಜನಿಕ ಬ್ಯಾಂಕುಗಳ ಸಾಲದ ನಿಯಮಗಳು ಮತ್ತು ಆಡಳಿತಾತ್ಮಕ ಅಂಶಗಳ ಆಧಾರದ ಮೇಲೆ ಪರೀಕ್ಷಿಸಬೇಕಾಗುತ್ತದೆ. ಅದೇ ರೀತಿ ಸಾಲ ಅನುಮೋದನೆಯ ವಿಧಾನ, ನಿಯಮಗಳು ಮತ್ತು ಬ್ಯಾಂಕುಗಳು ತೆಗೆದು ಕೊಳ್ಳುವ ನಿರ್ಧಾರ ಇತ್ಯಾದಿ ಅಂಶಗಳನ್ನು ವಿಶ್ಲೇಷಿಸಬೇಕು. ಸಹಕಾರ ಸಂಸ್ಥೆಗಳು ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳಿಗೆ ಅಲ್ಪಾವಧಿ ಮತ್ತು ಮಧ್ಯಮವಾಧಿ ಸಾಲಗಳನ್ನು ಪೂರೈಸುತ್ತವೆ. ೧೯೬೫-೬೬ರಲ್ಲಿ ಆರ್.ಬಿ.ಐ ಅನುಷ್ಠಾನಕ್ಕೆ ತಂದ ಬೆಳೆಸಾಲ ಯೋಜನೆಯಡಿ ರೈತರ ಕೃಷಿ ಸಾಲಗಳನ್ನು ಬೆಳೆ ತೆಗೆಯಲು ಬೇಕಾಗುವ ಖರ್ಚಿನ ಆಧಾರದ ಮೇಲೆ ನೀಡಲಾಗುತ್ತದೆ. ಸಾಲಗಳಿಂದ ಕೃಷಿ ಚಟುವಟಿಕೆಗಳಿಗೆ ಅಗತ್ಯವಾದ ರಸಗೊಬ್ಬರ, ಬಿತ್ತನೆ ಬೀಜ ಇತ್ಯಾದಿಗಳನ್ನು ಖರೀದಿಸಲಾಗುತ್ತದೆ. ಕರ್ನಾಟಕದಲ್ಲಿ ಸಹಕಾರ ಸಂಸ್ಥೆಗಳು ಕಿಸಾನ್ ಕ್ರೇಡಿಟ್ ಕಾರ್ಡುಗಳ ಮೂಲಕ ರೈತರಿಗೆ ಅಲ್ಪಾವಧಿ ಸಾಲಗಳನ್ನು ಪೂರೈಸುತ್ತವೆ. ಸಾಲ ನೀಡಲಾಗಿದೆ. ಮೂರು ವರ್ಷಗಳ ಅವಧಿಗೆ ಅನ್ವಯವಾಗುವಂತೆ ಪ್ರತಿಯೊಂದು ಸಹಕಾರ ಸಂಸ್ಥೆಗಳ ವ್ಯವಸ್ಥಾಪಕ ಮಂಡಳಿ ತನ್ನ ಎಲ್ಲಾ ಸದಸ್ಯರಿಗೆ ಬೆಳೆಗಳ ಆಧಾರದ ಮೇಲೆ ನೀಡಬೇಕಾದ ಗರಿಷ್ಠ ಸಾಲ ಮಿತಿಯನ್ನು ನಿರ್ಧರಿಸುತ್ತವೆ. ಸದಸ್ಯರು ತಮ್ಮ ಹೆಚ್ಚುವರಿ ಭೂಮಿಯ ಆಧಾರದ ಮೇಲೆ ತೃಪ್ತಿಕರವಾದ ದಾಖಲೆಗಳನ್ನು ವ್ಯವಸ್ಥಾಪಕ ಮಂಡಳಿಗೆ ನೀಡುವುದರ ಮೇಲೆ ಗರಿಷ್ಠ ಸಾಲ ಮಿತಿ ಬದಲಾಗಬಹುದು. ದೊಡ್ಡ ಭೂಹಿಡುವಳಿ ಹೊಂದಿರುವವರು ದೊಡ್ಡ ಮೊತ್ತದ ಸಾಲಗಳನ್ನು ಪಡೆಯುತ್ತಾರೆ. ಸಹಕಾರ ಸಂಸ್ಥೆಗಳ ವ್ಯವಸ್ಥಾಪಕ ಮಂಡಳಿ ಸಭೆಗಳಲ್ಲಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಅಧಿಕಾರಿಯೊಬ್ಬರು ಭಾಗವಹಿಸುತ್ತಾರೆ. ಎಲ್ಲಾ ಸದಸ್ಯರ ಗರಿಷ್ಠ ಸಾಲಮಿತಿಯ ವಿವರಗಳನ್ನು ಕ್ರೋಡಿಕರಿಸಿ ಸಹಕಾರ ಸಂಸ್ಥೆಯ ಕಾರ್ಯದರ್ಶಿ ಸಂಸ್ಥೆಯ ಆಡಳಿತ ಮಂಡಳಿಯ ಅನುಮೋದನೆಯೊಂದಿಗೆ ಕೇಂದ್ರ ಸಹಕಾರ ಬ್ಯಾಂಕಿಗೆ ಸಲ್ಲಿಸುತ್ತಾರೆ. ಕೇಂದ್ರ ಸಹಕಾರ ಬ್ಯಾಂಕು ಅನುಮೋದಿಸಿದ ಸಾಲ ಮಿತಿ ವಿಷಯವನ್ನು ಸಂಬಂಧಿಸಿದ ಸಹಕಾರ ಸಂಸ್ಥೆ ಹಾಗೂ ಸಹಕಾರ ಸಂಘಗಳ ನಿರ್ಭಂದಕರಿಗೆ ತಿಳಿಸುತ್ತಾರೆ. ಸಹಕಾರ ಸಂಸ್ಥೆಯ ಕಾರ್ಯದರ್ಶಿ ಎಲ್ಲಾ ಸದಸ್ಯರ ಗರಿಷ್ಠ ಸಾಲ ಮಿತಿಯನ್ನು ಕ್ರೋಡಿಕರಿಸಿ ಅಂತಿಮಗೊಳಿಸಿ ಸಾಲ ಪಡೆಯುವವರ ಭೂ ದಾಖಲೆಗಳನ್ನು ಹಾಗೂ ಭೂ ವಿವರಗಳನ್ನು ನಮೂದಿಸಲು ಒಂದು ಭೂ ದಾಖಲಾತಿ ರಿಜಿಸ್ಟ್ರನ್ನು ನಿರ್ವಹಿಸುತ್ತಾನೆ. ರಾಯಚೂರು ಜಿಲ್ಲೆಯ ಸಿಂಧನೂರು ಮತ್ತು ದೇವದುರ್ಗ ತಾಲ್ಲೂಕಿನ ಕ್ರಮವಾಗಿ ಯಾಪಲಪರ್ವಿ ಹಾಗೂ ಜಾಲಹಳ್ಳಿಯಲ್ಲಿ ಸಂದರ್ಶಿಸಲ್ಪಟ್ಟವರಲ್ಲಿ ಸಾಲ ಪಡೆದವರೆಲ್ಲಾ ಸಹಕಾರ ಸಂಘಗಳ ಸದಸ್ಯತ್ವ ಪಡೆದಿದ್ದಾರೆ. ಸಾಲ ಪಡೆದವರೆಲ್ಲಾ ಭೂಮಿ ಉಳ್ಳವರೇ. ಆರ್.ಬಿ.ಐ ೧ ಲಕ್ಷ ದವರೆಗೂ ಭೂ ದಾಖಲಾತಿ ಅಥವಾ ಇನ್ನಾವುದೇ ಆಧಾರಗಳಿಲ್ಲದೆ ಸಾಲ ನೀಡಬೇಕೆಂಬ ನಿಯಮ ಮಾಡಿದೆ. ಆದರೂ ಸಹಕಾರ ಸಂಸ್ಥೆಗಳಾಗಲಿ, ವಾಣಿಜ್ಯಬ್ಯಾಂಕುಗಳಾಗಲೀ ಈ ನಿಯಮವನ್ನು ಪಾಲಿಸುವುದಿಲ್ಲ. ಸುರಕ್ಷತೆ ದೃಷ್ಟಿಯಿಂದ ಆಧಾರಗಳನ್ನು ಪಡೆಯಲಾಗುತ್ತದೆ ಎಂದು ಯಾಪಲಪರ್ವಿ ಕಾರ್ಯದರ್ಶಿ ಹೇಳುತ್ತಾರೆ. ಭೂಮಿ, ಬಂಡವಾಳ, ಕೌಶಲ್ಯಗಳು ಇತ್ಯಾದಿ ಸ್ಥಿರಾಸ್ತಿ ಅಥವಾ ಚರಾಸ್ತಿ ಗಳನ್ನು ಹೊಂದಿಲ್ಲದ ಆಸ್ತಿ ವರ್ಗಗಳಾದ ಕೃಷಿ ಕಾಮಿಕರು ಭೂರಹಿತ ಕಾರ್ಮಿಕರು ಹಾಗೂ ಅತೀ ಸಣ್ಣ

ರೈತರು ಸಂಘಟಿತ ಹಣಕಾಸು ಮೂಲದ ಸಾಲ ಸೌಲಭ್ಯದಿಂದ ಶಾಶ್ವತವಾಗಿ ಹೊರಗುಳಿಯಬೇಕೆ? ಅಭಿವೃದ್ಧಿಯ ಮಂಚೂಣಿಗೆ ಬರುವ ಹಕ್ಕು ಈ ವರ್ಗಗಳಿಗೆ? ಇಲ್ಲವೆ ಎಂಬುದು ಮೂಲಭೂತ ಪ್ರಶ್ನೆಗಳು. ಒಂದು ಲಕ್ಷದವರೆಗೂ ಭದ್ರತೆ ಅಗತ್ಯವಿಲ್ಲ. ಸಾಲ ನೀಡುವಾಗ ಅನುಸರಿಸ ಬೇಕಾದ ಸಾಲ ನಿಯಮ ವಿಷಯದಲ್ಲಿ ಶಾಖಾ ವ್ಯವಸ್ಥಾಪಕರಿಗೆ ತೀರ್ಮಾನ ತೆಗೆದುಕೊಳ್ಳುವ ಅವಕಾಶ ನೀಡಿಲಾಗಿದೆ. ಅಂದರೆ ಎಲ್ಲಾ ವರ್ಗಗಳು ಸಾಲ ಸೌಲಭ್ಯ ಪಡೆಯುವಂತಾಗಲು ಸಾಲ ನಿಯಮಗಳನ್ನು ಸರಳೀಕರಿಸಬಹುದು. ಆದರೆ ಸಾಲ ನಿಯಮಗಳ ಸರಳೀಕರಣದ ವಿಷಯವನ್ನು ಬ್ಯಾಂಕು ಶಾಖಾ ವ್ಯವಸ್ಥಾಪಕರು ಗಂಭೀರವಾಗಿ ಪರಿಗಣಿಸುವುದೇ ಇಲ್ಲ. ಪಾಲಿಸುವುದೂ ಇಲ್ಲ. ಈ ಹಿನ್ನೆಲೆಯಲ್ಲಿ ಸಂಘಟಿತ ಹಣಕಾಸು ಸಂಸ್ಥೆಗಳ ಕಾರ್ಯವೈಕರಿಯನ್ನು ಪರಿಶೀಲಿಸುವ ಅಗತ್ಯವಿದೆ? ಸರ್ಕಾರ ತನ್ನ ವರದಿಗಳು ಮತ್ತು ದಾಖಲೆಗಳಲ್ಲಿ ಸಾಲ ನಿಯಮಗಳನ್ನು ಸರಳೀಕರಿಸಲಾಗಿದೆ ಎಂದು ವಾದಿಸುತ್ತದೆ. ಆದರೆ ವಾಸ್ತವ ಭಿನ್ನವಾಗಿದೆ. ಸಾಲ ನೀತಿಗಳ ಅನುನಷ್ಠಾದ ವಿಧಾನಗಳನ್ನು ಪರಿಶೀಲಿಸುವ ಮಾರ್ಗದರ್ಶಿ ಸೂತ್ರವನ್ನುರೂಪಿಸಬೇಕಾಗುತ್ತದೆ. ಸಿಂಧನೂರು ತಾಲ್ಲೂಕಿನ ಯಾಪಲಪರ್ವಿ ಸಹಕಾರ ಸಂಸ್ಥೆ ಕೃಷಿಯೇತರ ಉದ್ದೇಶಗಳಿಗೆ ಸಾಲ ನೀಡಲುವಾಗಲು ಭದ್ರತೆಯನ್ನೇ ಆಧಾರವಾಗಿ ಪರಿಗಣಿಸುತ್ತವೆ. ಈ ಸಂಸ್ಥೆಯು ಸಾರ್ವಜನಿಕರಿಂದ ಠೇವಣಿಗಳನ್ನು ಸ್ವೀಕರಿಸುತ್ತದೆ. ಕೃಷಿಯೇತರ ಚಟುವಟಿಕೆಗಳಿಗೆ ನೀಡುವ ಸಾಲ ಮತ್ತು ಠೇವಣಿಗೆ ಸಂಬಂಧ ಕಲ್ಪಿಸಲಾಗಿದೆ. ಠೇವಣಿ ಮೊತ್ತ ಕನಿಷ್ಠ ೧೦ ಸಾವಿರಕ್ಕೂ ಹೆಚ್ಚಿಗೆ ಇದ್ದರೆ ಠೇವಣಿ ಹಣವನ್ನೇ ಭದ್ರತೆಯಾಗಿ ಪರಿಗಣಿಸಿ ಸಾಲ ನೀಡಲಾಗುತ್ತದೆ. ಕೃಷಿಯೇತರ ಚಟುವಟಿಕೆಗಳಿಗೆ ನೀಡುವ ಸಾಲ ವ್ಯವಹಾರದ ಸ್ವರೂಪ ಮತ್ತು ವೆಚ್ಚವನ್ನು ಆದರಿಸಿರುತ್ತದೆ. ಠೇವಣಿ ಇಡುವವರೆಲ್ಲಾ ಸಹಕಾರ ಸಂಸ್ಥೆಯ ಸದಸ್ಯರು. ಈ ರೀತಿಯ ಸದಸ್ಯತ್ವಕ್ಕೆರೂ.೫೦೦ ನಿಗದಿ ಮಾಡಲಾಗಿದೆ. ದೇವದುರ್ಗ ತಾಲ್ಲೂಕಿನ ಜಾಲಹಳ್ಳಿ ಸಹಕಾರ ಸಂಸ್ಥೆಯು ಕೃಷಿಯೇತರ ಚಟುವಟಿಕೆಗಳಿಗೆ ಮನೆ ಅಥವಾ ಕಟ್ಟದ ಆಧಾರದ ಮೇಲೆ ಸಾಲ ಸೌಲಭ್ಯಗಳನ್ನು ನೀಡಿದೆ. ಹೀಗೆ ಸಾಗುವಳಿಯಲ್ಲಿ ತೊಡಗಿರುವ ಸದಸ್ಯರು ಮತ್ತು ಕೃಷಿಯೇತರ ಚಟುವಟಿಕೆಗಳಲ್ಲಿ ತೊಡಗಿರುವ ಸದಸ್ಯರಿಗೆ ಭದ್ರತೆಯ ಆಧಾರದ ಮೇಲಯೇ ಸಾಲ ಸೌಲಭ್ಯ ನೀಡಲಾಗುತ್ತದೆ. ಹೀಗೆ ಭೂಭದ್ರತೆ ನೀಡಲು ಅಥವಾ ಠೇವಣಿ ಇಡಲು ಸಾಧ್ಯವಿಲ್ಲದ ವರ್ಗಗಳು ನಿರ್ಲಕ್ಷಿತರಾಗಿದ್ದಾರೆ. ಇವರಿಗೂ ಸಾಲ ಸೌಲಭ್ಯ ದೊರೆಯಬೇಕಾಗಿರುವುದು ನ್ಯಾಯವಲ್ಲವೇ?

**ಸಹಕಾರ ಸಂಸ್ಥೆ:** ಸಾಲ ನಿಯಮಗಳಿಗೆ ಸಂಬಂಧಿಸಿದಂತೆ ಬೆಳೆ ಸಾಲ ನೀಡವಾಗ ಬೆಳೆಗೆ ತಗಲುವ ಖರ್ಚನ್ನು ಪರಿಗಣಿಸಲಾಗುತ್ತದೆ. ರಾಜ್ಯ ಸಹಕಾರಿ ಬ್ಯಾಂಕು ಕೃಷಿ ಇಲಾಖೆಯ ಸಹ ಯೋಗದಲ್ಲಿ ಪ್ರತಿ ವರ್ಷ ಸಾಗುವಳಿ ವೆಚ್ಚ ಮತ್ತು ಕಾರಿಫ್ ಮತ್ತುರಬಿ ಬೆಳೆಗಳ ಒಟ್ಟು ಉತ್ಪನ್ನಗಳನ್ನು ಲೆಕ್ಕ ಹಾಕಲಾಗುತ್ತದೆ. ಹೀಗೆ ಬೆಳೆ ವೆಚ್ಚ ಮತ್ತು ಉತ್ಪನ್ನಗಳನ್ನು ಪರಿಗಣಿಸಿ ಸಾಲ ಮಿತಿಯನ್ನು ಪ್ರತಿ ಸದಸ್ಯರಿಗೆ ನಿಗಧಿಗೊಳಿಸಲಾಗುತ್ತದೆ. ರಾಜ್ಯ ಸಹಕಾರ ಬ್ಯಾಂಕು ನೀಡುವ ಬೆಳೆ ವೆಚ್ಚ ಮತ್ತು ಉತ್ಪನ್ನ ಲೆಕ್ಕಗಳ ಆಧಾರದ ಮೇಲೆ ಸಹಕಾರ ಸಂಸ್ಥೆಯ ಕಾರ್ಯದರ್ಶಿ ಗರಿಷ್ಠ ಸಾಲ ಮಿತಿಯನ್ನು ನಿರ್ಧರಿಸುತ್ತಾರೆ. ಹೀಗೆ ನಿರ್ಧರಿಸುವಾಗ ಬೆಳೆಯ ವಿಸ್ತೀರ್ಣವನ್ನು ಪರಿಗಣಿಸಿ ಸಾಲ

ನೀಡಲಾಗುತ್ತದೆ. ಸಹಕಾರ ಸಂಸ್ಥೆಯ ಎಲ್ಲಾ ಸದಸ್ಯರ ಸಾಲ ಬೇಡಿಕೆಯನ್ನು ಒಟ್ಟುಗೂಡಿಸಿ ಕೇಂದ್ರ ಸಹಕಾರ ಬ್ಯಾಂಕು ಪ್ರಸ್ತಾಪಿತ ಉದ್ದೇಶಕ್ಕೆ ಅನುಗುಣವಾಗಿ ಸಾಲ ಅನುಮೋದಿಸುವಂತೆ ಪ್ರಸ್ತಾವನೆ ಸಲ್ಲಿಸುತ್ತದೆ. ಕೇಂದ್ರ ಸಹಕಾರ ಬ್ಯಾಂಕು ತನ್ನಲ್ಲಿರುವ ಸಂಪನ್ಮೂಲದ ಆಧಾರದ ಮೇಲೆ ತಾನು ಒದಗಿಸುವ ಸಾಲದ ಮಿತಿಯನ್ನು ಸಹಕಾರ ಬ್ಯಾಂಕಿಗೆ ತಿಳಿಸುತ್ತದೆ. ಕೇಂದ್ರ ಸಹಕಾರ ಬ್ಯಾಂಕುಗಳು ನೀಡುವ ಸಾಲದ ಪ್ರಮಾಣವು ನರ್ಬಾಡ್ ನಿಗಿದಿಪಡಿಸಿರುವ ಸಾಲ ವಸೂಲಾತಿ ಶಿಸ್ತಿಗೆ ಅನುಗುಣ ವಾಗಿರಬೇಕು. ಈ ಶಿಸ್ತಿನ ಪ್ರಕಾರ ಶೇಕಡಾ ೬೦ಕ್ಕಿಂತ ಹೆಚ್ಚಿನ ಸಾಲ ಬಾಕಿ ಇರುವ ಕೇಂದ್ರ ಸಹಕಾರ ಬ್ಯಾಂಕುಗಳು ಋತುಮಾನ ಆಧಾರಿತ ಕೃಷಿ ಚಟುವಟಿಕೆಗಳಿಗೆ ಸಾಲ ನೀಡುವಂತಿಲ್ಲ. ಅದೇ ರೀತಿ ಸಾಲ ಪಡೆದ ಸದಸ್ಯರು ಪಡೆದ ಹಿಂದಿನ ಸಾಲವನ್ನು ತೀರಿಸುವವರೆಗೂ ಹೊಸ ಸಾಲ ಪಡೆಯಲು ಅರ್ಹರಲ್ಲ. ಆದರೆ ಸಹಕಾರ ಬ್ಯಾಂಕುಗಳ ಸಾಲ ಸೌಲಭ್ಯ ರಾಜಕೀರಣಗೊಂಡಿರುವ ಅಪವಾದವಿದೆ. ಅಧಿಕಾರಕ್ಕೆ ಬರಲಿಚ್ಚಿಸುವ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಸಹಕಾರ ವ್ಯವಸ್ಥೆಯಿಂದ ಪಡೆದ ಸಾಲವನ್ನು ಮನ್ನಾ ಮಾಡಲಾಗುವುದೆಂದು ವಚನ ನೀಡುತ್ತವೆ. ಸಹಕಾರ ಸಾಲ ವ್ಯವಸ್ಥೆಯ ಮೂಲ ಉದ್ದೇಶಗಳಿಗೆ ಮತ್ತು ಆಶಯಗಳಿಗೆ ವಿರುದ್ಧವಾದ ಪರಿಕಲ್ಪನೆ ಸೃಷ್ಟಿಯಾಗಿದೆ. ಸರ್ಕಾರಗಳು ಮೂಲ ಪರಿಕಲ್ಪನೆಯನ್ನು ಹಾಳುಗೆಡವಿ ರುವುದರಿಂದ ಸಹಕಾರ ಸಂಘಗಳು ಸಾಲ ಸೌಲಭ್ಯ ವಿತರಿಸಿರುವ ಮತ್ತು ಸಾಲ ಮನ್ನಾ ಮಾಡುವ ಸಂಸ್ಥೆಗಳಾಗಿ ಪರಿವರ್ತನೆಗೊಂಡಿವೆ. ಗ್ರಾಮೀಣ ಅಭಿವೃದ್ಧಿಯನ್ನು ಪ್ರೇರೇಪಿಸುವ ಮತ್ತು ತಳ ಮಟ್ಟದ ಸಂಸ್ಥೆಯಾಗಿ ಕಾರ್ಯನಿರ್ವಹಿಸುವ ಆಶಯವೇ ಮಾಯವಾಗಿದೆ. ಸರ್ಕಾರಗಳ ಸಾಲ ಮನ್ನಾ ಯೋಜನೆಯಿಂದ ಲಾಭ ಪಡೆದವರೇ ಮತ್ತೆ ಸಾಲ ಪಡೆಯುತ್ತಿದ್ದಾರೆ. ಹಳೇ ಸಾಲದಲ್ಲಿ ಅರ್ಧದಷ್ಟು ಸಾಲ ಪಾವಸಿದರೆ ಉಳಿದ ಸಾಲ ಮನ್ನಾ ಆಗುತ್ತದೆ. ಹೀಗೆ ಸಾಲ ಮನ್ನಾ ಸೌಲಭ್ಯ ಪಡೆದ ಸದಸ್ಯರಿಗೆ ಸಾಲ ಮತ್ತೆ ನೀಡಬೇಕು. ಮುಂದಿನ ಸಾರಿ ಸಾಲ ನೀಡುವಾಗ ಇವರಿಗೇ ಮೊದಲ ಆದ್ಯತೆ. ಹೊಸದಾಗಿ ಸಾಲ ಪಡೆಯಲು ಇಚ್ಚಿಸುವ ಸದಸ್ಯರು ಮತ್ತು ಸಾಲ ಪಡೆಯಲು ಅರ್ಹತೆ ಇಲ್ಲದ ವರ್ಗಗಳು ಈ ಸೌಲಭ್ಯಗಳಿಂದ ಹೊರಗುಳಿಯುತ್ತಾರೆ. ಸಾಲ ಮನ್ನಾ ಸೌಲಭ್ಯ ಪಡೆದ ಶ್ರೀಮಂತ ರೈತರು ಸಾಲ ಪಡೆಯದ ಮತ್ತು ವಂಚಿತರ ಸೌಲಭ್ಯ ಪಡೆಯುವ ಅವಕಾಶಗಳೇ ಇಲ್ಲವಾಗಿವೆ. ಮೂಲ ಬಂಡವಾಳ ಸೃಷ್ಟಿಸಲು ಸಾಧ್ಯವಾಗದೇ ಸ್ವಂತ ಸಂಪನ್ಮೂಲಗಳನ್ನು ಹೊಂದಲಾಗದೆ ಆರ್ಥಿಕ ದುಸ್ಥಿತಿಗೆ ತಲುಪಿರುವ ಸಹಕಾರ ಸಂಸ್ಥೆಗಳು ಪುನರ್ವಸತಿಗೊಳಿಸಲು ಮತ್ತು ಸುಧಾರಣೆಗೊಳಿಸಲು ಸಾಧ್ಯವಾಗದ ಸ್ಥಿತಿ ತಲುಪಿವೆ. ಪ್ರಾಥಮಿಕ ಭೂ ಅಭಿವೃಧಿ ಬ್ಯಾಂಕುಗಳು ಮತ್ತು ಪ್ರಾಥಮಿಕ ಸಹಕಾರ ಸಾಲ ಸಂಸ್ಥೆಗಳು ಸಾಲ ಮನ್ನಾ ಕೇಂದ್ರಗಳಾಗಿವೆ. ನೀಡಿದ ಸಾಲ ವಸೂಲಿ ಆಗದೆ, ಉಳ್ಳವರಿಗೆ ಮಾತ್ರ ಸೇವೆ ಒದಗಿಸುವ ಸಂಸ್ಥೆಗಳಾಗಿ ಸ್ವತಂತ್ರವಾಗಿ ಸಂಪನ್ಮೂಲ ಸೃಷ್ಟಿಸದೇ ಸಂಪನ್ಮೂಲಕ್ಕಾಗಿ ಸರ್ಕಾರ ಮತ್ತು ಮೇಲಿನ ಸಂಸ್ಥೆಗಳ ಮೇಲೆ ಅವಲಂಬನೆ ಆಗಿರುವುದು ಮುಂದುವರೆದರೆ ಸಹಕಾರ ಸಾಲ ಸಂಸ್ಥೆಗಳು, ಭೂ ಅಭಿವೃಧಿ ಬ್ಯಾಂಕುಗಳು ಹಾಗೆ ದೀವಾಳಿಯಾಗಿ ಸಹಕಾರ ವ್ಯವಸ್ಥೆಯು ಶಾಶ್ವತವಾಗಿ ದುಸ್ಥಿತಿಗೆ ತಲುಪಲಿವೆ. ಇದಕ್ಕೆ ಕಾರಣಗಳೇನು? ಸರ್ಕಾರದ

ಅದಕ್ಷ ಅವೈಜ್ಞಾನಿಕ ನೀತಿ ಧೋರಣೆಗಳಲ್ಲವೇ? ಭೂರಹಿತರು, ಕೃಷಿ ಕಾರ್ಮಿಕರು ಶಾಶ್ವತವಾಗಿ ಸಾಲ ಸೌಲಭ್ಯಗಳು ದೊರಕದಂತ ವಾತಾವರಣ ಸೃಷ್ಠಿಸದ ಸರ್ಕಾರದ ಧೋರಣೆ ಪ್ರಶ್ನಾರ್ಹ? ಈ ವರ್ಗಗಳು ಶಾಶ್ವತವಾಗಿ ಅಭಿವೃದ್ಧಿಯ ಪ್ರಯತ್ನಗಳು– ಯೋಜನೆಗಳು, ನೀತಿಗಳಲ್ಲಿ ಪಾಲ್ಗೊಳ್ಳಲಾಗದೆ, ಅಭಿವೃದ್ಧಿ ಫಲದಿಂದ ಹೊರಗಳಿಯುಲು ಕಾರಣವಾದ ಸರ್ಕಾರದ ಆಲೋಚನಯೇ ಪ್ರಶ್ನಾರ್ಹ. ಹಣಕಾಸು ಒಳಗೊಳ್ಳುವಿಕೆ ಇಲ್ಲದೆ ಎಲ್ಲರನ್ನು ಒಳಗೊಳ್ಳುವ ಅಭಿವೃದ್ಧಿ ಎಂಬ ಸರ್ಕಾರದ ೧೧ನೇ ಪಂಚವಾರ್ಷಿಕ ಯೋಜನೆಯ ಅಭಿವೃದ್ಧಿ ನೀತಿ ಫಲಿಸುವುದೇ? ಇದೊಂದು ರಾಜಕೀಯವಲ್ಲವೇ? ಕೇಂದ್ರ ಸಹಕಾರ ಬ್ಯಾಂಕು ಸಾಲ ನೀಡಬೇಕಾದ ಪ್ರಮಾಣವನ್ನು ಅನುಮೋದಿಸಿ ಸಹಕಾರ ಸಂಸ್ಥೆಗೆ ತಿಳಿಸುತ್ತದೆ. ಸಾಲ ಅನುಮೋದನೆ ಪಡೆದ ರೈತರು ಸಾಲವನ್ನು ಎಷ್ಟು ಹಂತಗಳಲ್ಲಿ ಪಡೆಯಬೇಕು ಎಂಬುದನ್ನು ನಿರ್ಧಿಷ್ಟ ಪಡಿಸಿ ಚೆಕ್ ಪತ್ರ ನೀಡಲಾಗುತ್ತದೆ ಹಾಗೂ ಸಾಲಗಾರರಿಂದ ಔಪಾಚಾರಿಕವಾಗಿ ಒಪ್ಪಂದ ಪತ್ರ ಪಡೆದುಕೊಳ್ಳಲಾಗುತ್ತದೆ. ಈ ಒಪ್ಪಂದ ನಗದು ಮೊತ್ತ ಮತ್ತು ಕೃಷಿ ಹೂಡುವಳಿಗೆ ನೀಡಿದ ಚೆಕ್ಕುಗಳನ್ನು ವಯುಕ್ತಿಕ ಸಾಲಗಾರರು ಸಹಕಾರ ಸಂಘಗಳ ಕಾರ್ಯದರ್ಶಿಗೆ ನೀಡುತ್ತಾರೆ. ಕಾರ್ಯದರ್ಶಿರಸಗೊಬ್ಬರ ಇತ್ಯಾದಿಗಳನ್ನು ಪೂರೈಸುತ್ತಾರೆ ಆದರೆ ಎಲ್ಲಾ ಸಹಕಾರ ಸಂಸ್ಥೆಗಳು ಕೃಷಿ ಹೂಡುವಳಿಗಳನ್ನ ಪೂರೈಸುವುದಿಲ್ಲ. ಸಿಂಧನೂರು ತಾಲ್ಲೂಕಿನ ಯಾಪಲಪರ್ವಿ ಗ್ರಾಮದ ಸಹಕಾರ ಸಂಸ್ಥೆಯುರಸಗೊಬ್ಬರ ಪೂರೈಸುತ್ತದೆ. ಸಹಕಾರ ಸಂಸ್ಥೆಯ ವ್ಯವಸ್ಥಾಪಕ ಅಥವಾ ಕಾರ್ಯದರ್ಶಿ ಸಾಲ ಪಡೆಯುವವನು ಸುಸ್ತಿದಾರನಲ್ಲನೆಂಬುದನ್ನು ಖಚಿತ ಪಡಿಸಿಕೊಂಡು ಸಾಲವನ್ನು ಸಾಲ ಖಾತೆಯಿಂದ ಪಡೆಯಲು ಅನುವು ಮಾಡಿಕೊಡಬೇಕು. ಸಾಲ ಪಡೆದ ಸಹಕಾರ ಸಂಸ್ಥೆಯ ಸದಸ್ಯ ತನ್ನ ಸಾಲದ ಪ್ರಮಾಣದಲ್ಲಿ ಶೇಕಡಾ ೧೦ರಷ್ಟನ್ನು ಸಂಸ್ಥೆಯ ಷೇರುರೂಪದಲ್ಲಿ ಇಡಬೇಕು. ಷೇರಿನ ಪ್ರಮಾಣ ಸಣ್ಣ ಮತ್ತು ಅತಿಸಣ್ಣ ರೈತರ ವಿಷಯದಲ್ಲಿ ಶೇಕಡಾ ೫ರಷ್ಟು ಮಾತ್ರ. ಅನುಭೋಗ ಸಾಲ ಪಡೆಯಲು ಇಚ್ಚಿಸುವ ಮೇಲೆ ತಿಳಿಸಿದ ವರ್ಗಗಳಿಗೆ ಷೇರಿನ ಪ್ರಮಾಣ ಕಡಿಮೆ ಇದೆ. ಗ್ರಾಮ ಮಟ್ಟದ ಸಹಕಾರ ಸಂಸ್ಥೆಗಳು ತಮ್ಮ ಗ್ರಾಮಗಳಲ್ಲಿರಸಗೊಬ್ಬರ ಮಳಿಗೆಗಳನ್ನು ತೆರೆಯಬೇಕು.ರಸಗೊಬ್ಬರ ಮಳಿಗೆಗಳಿಲ್ಲದ ಸಂಸ್ಥೆಗಳು ತಮ್ಮ ಸದಸ್ಯರು ಮಾರುಕಟ್ಟೆಯಿಂದ ಖರೀದಿಸಬಹುದು ಅಥವಾ ಪಕ್ಕದ ಸಹಕಾರ ಸಂಸ್ಥೆಯಿಂದ ಖರೀದಿಸಲು ಅನುವುಮಾಡಿಕೊಡುತ್ತದೆ. ಮುಂಗಾರು ಬೆಳೆಗಳಿಗೆ ಏಪ್ರಿಲ್ ತಿಂಗಳಿಂದ ಸೆಪ್ಟೆಂಬರ್ ವರೆಗೆ ಸಾಲ ಮುಂಗಡವನ್ನು ಒದಗಿಸಬೇಕು. ಮೇಲಿನ ವಿವರಗಳು ಸಹಕಾರ ಸಂಸ್ಥೆಗಳ ಸಾಲ ಅನುಮೋದನೆ ನಿಯಮಗಳನ್ನು ತಿಳಿಸುತ್ತವೆ. ಈ ನಿಯಮಗಳ ಪರಿಷ್ಕರಣೆಯ ಅಗತ್ಯವನ್ನು ಇಲ್ಲಿ ಚರ್ಚಿಸಲಾಗಿದೆ. ತೀರ್ಮಾನ ತೆಗೆದುಕೊಳ್ಳವ ಸ್ವಾತಂತ್ರವಿಲ್ಲ ಎನ್ನುವ ಸಮಸ್ಯೆ ಇಡೀ ಸಹಕಾರ ವ್ಯವಸ್ಥೆಯನ್ನು ದುರ್ಬಲಗೊಳಿಸಬಾರದು. ಗ್ರಾಮೀಣ ಸಾಲ ವ್ಯವಸ್ಥೆಯ ಮೇಲೆ ವ್ಯತಿರಿಕ್ತ ಪರಿಣಾಮ ಬೀರಬಾರದು. ಸಾಲ ನಿಯಮಗಳ ಸರಳೀಕರಣದ ಮೂಲಕ ಸಾಲ ಸೌಲಭ್ಯ ವಿಸ್ತರಿಸಿ ಅದರೊಂದಿಗೆ ಕೃಷಿ ಉತ್ಪಾಧನೆ ಮತ್ತು ಕೃಷಿಯೇತರ ಉದ್ಯಮ ಚಟುವಟಿಕೆಗಳನ್ನು ಪ್ರೇರೆಪಿಸಿ ಗ್ರಾಮೀಣ ಅಭಿವೃದ್ಧಿ ಸಾಧಿಸುವಲ್ಲಿ ಸಾಲ ಸೌಲಭ್ಯದ ಪಾತ್ರ ಹೆಚ್ಚಬೇಕು. ವಿಸ್ತ್ರುತವಾಗಿ ಸಮಾದ ಎಲ್ಲಾ

ವರ್ಗಗಳಿಗೆ ವಿತರಣೆಯಾಗಬೇಕು. ಆದರೆ ಸಂಘಟಿತ ಸಾಲ ವ್ಯವಸ್ಥೆಯ ನಿಯಮಗಳ ಸರಳೀಕರಣದ ವಿಷಯವನ್ನು ಅಸಂಘಟಿತ ಸಾಲ ಮಾರುಕಟ್ಟೆಯ ವ್ಯವಹಾರ ಪದ್ಧತಿಗಳ ನಿಯಮಗಳೊಂದಿಗೆ ಹೋಲಿಸಲು ಸಾಧ್ಯವಿಲ್ಲ. ಕಾರಣ ಸಂಘಟಿತ ವಲಯದ ಸಂಸ್ಥೆಗಳು ಕಾನೂನುಬದ್ಧ ಸಂಸ್ಥೆಗಳು, ಈ ಸಂಸ್ಥೆಗಳ ವರದಿಗಳು, ಲಿಖಿತ ದಾಖಲೆಗಳನ್ನು ಎಲ್ಲರಿಗೂ ಒದಗಿಸಲಾಗುವುದಿಲ್ಲ. ಅಸಂಘಟಿತ ಮಾರುಕಟ್ಟೆಯ ವ್ಯವಹಾರಗಾರರು ತೆಗೆದುಕೊಳ್ಳುವ ಕಷ್ಟ(ರಿಸ್ಕ್)ಗಳನ್ನು ಸಂಘಟಿತ ವಲಯದಿಂದ ನಿರೀಕ್ಷಿಸಲು ಸಾಧ್ಯವಿಲ್ಲ. ಅಸಂಘಟಿತ ಹಣಕಾಸು ಮಾರುಕಟ್ಟೆ ಕೃಷಿ ಸಾಲಗಳನ್ನು ನೀಡುವಾಗ ತಮಗೆ ಅನುಕೂಲಕರವಾದ ನಿಯಮಗಳನ್ನ ಅನುಸರಿಸುತ್ತವೆ. ಗ್ರಾಮೀಣ ಹಣಕಾಸು ಮಾರುಕಟ್ಟೆ ವಲಯ ಲಕ್ಷಣಗಳು ಅದೇ ರೀತಿ ಇರುತ್ತವೆ. ಬೇನಾಮಿ ಸಾಲಗಳನ್ನು ನಿಯಂತ್ರಿಸುವ, ಕಾನೂನು ಬಾಹಿರ ವ್ಯವಹಾರಗಳನ್ನು ನಿಯಂತ್ರಿಸುವ ಸಲುವಾಗಿ ಸಂಘಟಿತ ಸಾಲ ವ್ಯವಸ್ಥೆಯಲ್ಲಿ ಸಾಲ ಖಾತೆ, ಪಾಸ್‌ಬುಕ್ ಮತ್ತು ಚೆಕ್ ಬುಕ್ ವಿಧಾನಗಳನ್ನ ಜಾರಿಗೆ ತರಲಾಗಿದೆ.

### ಭೂ ಅಭಿವೃದ್ಧಿ ಬ್ಯಾಂಕುಗಳ ಸಾಲ ಅನುಷ್ಠಾನ ವಿಧಾನ

ಅಲ್ಪಾವಧಿ ಸಹಕಾರ ಸಾಲ ವ್ಯವಸ್ಥೆಗಿಂತ ಭೂ ಅಭಿವೃದ್ಧಿ ಬ್ಯಾಂಕುಗಳ ಧೀರ್ಘಾವಧಿ ಸಾಲ ನೀತಿಯು ಭಿನ್ನವಾಗಿದ್ದು ವಾಣಿಜ್ಯ ಬ್ಯಾಂಕುಗಳ ಸಾಲ ಮಂಜೂರಾತಿ ನಿಯಮಗಳನ್ನು ಹೋಲುತ್ತದೆ. ಸಾಲ ಪಡೆಯಲಿಚ್ಚಿಸುವವರು ನಿರ್ಧಿಷ್ಟವಾದ ಸಾಲ ಅರ್ಜಿ ಭರ್ತಿಮಾಡಿ ಭೂ ದಾಖಲಾತಿಗಳನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು. ಸಾಲ ಪಡೆಯಲು ಅರ್ಜಿದಾರರು ತಮ್ಮ ಭೂಮಿಯನ್ನು ಬ್ಯಾಂಕಿಗೆ ಅಡವಿಡಬೇಕು. ತಾಲ್ಲೂಕು ತಹಸೀಲ್ದಾರ ಕಛೇರಿಯಿಲ್ಲಿ ಉಪನೋಂದಾಣಿ ಆಧಿಕಾರಿಗಳ ಕಛೇರಿಯಲ್ಲಿ ಅಧಿಕೃತವಾಗಿ ತಮ್ಮ ಭೂಮಿಯನ್ನು ಬ್ಯಾಂಕಿನ ಹೆಸರಿನಲ್ಲಿ ನೊಂದಾಯಿಸಬೆಕು. ಸಾಲಗಾರರು ಪಡೆದ ಸಾಲವನ್ನು ಮರುಪಾವತಿ ಮಾಡಲು ವಿಫಲವಾದಾಗ ಬ್ಯಾಂಕ್ ನೋಂದಾಯಿಸಲ್ಪಟ್ಟ ಭೂಮಿಯನ್ನು ಮುಟ್ಟುಗೋಲು ಹಾಕಿಕೊಳ್ಳಬಹುದು. ಭೂಮಿ ಬದುಕು ಸಾಮಾಜಿಕ ಅಂತಸ್ತಿಗೂ ಸಂಬಂಧವಿದೆ. ಭೂಮಿ ಕಳೆದುಕೊಳ್ಳುವುದು ಜೀವನಾಧಾರ ಮಾರ್ಗವನ್ನು ಕಳೆದುಕೊಂಡಂತೆ. ಜನರು ತಮ್ಮ ಅಸ್ಥಿತ್ವ ಕಳೆದು ಕೊಂಡಂತೆ ಎಂದು ಭಾವಿಸುತ್ತಾರೆ. ಸಾಲ ಹಿಂತಿರುಗಿಸಲು ಸಾಧ್ಯವಾಗದೆ ಭೂಮಿಯನ್ನು ಕಳೆದುಕೊಂಡು ತನ್ನ ಸಮಾಜಿಕ ಸ್ಥಾನಮಾನ ಕಳೆದುಕೊಂಡು ನಿರ್ಲಕ್ಷಿತನಾಗುತ್ತೇನೆಂಬ ಭಯವಿದೆ. ಈ ಪರಿಸ್ಥಿತಿ ಮಾನಸಿಕ ಆತಂಕಕ್ಕೂ ನೂಕುತ್ತದೆ. ಈ ಅಂಶಗಳನ್ನು ಪರಿಗಣಿಸೆ ಬ್ಯಾಂಕುಗಳು ಭೂಮಿಯನ್ನು ಬ್ಯಾಂಕಿನ ಹೆಸರಲ್ಲಿ ನೊಂದಾಯಿಸಿಕೊಳ್ಳುತ್ತಾರೆ. ಇದರಿಂದ ಸಾಲ ಮರುಪಾವತಿಯಾಗುತ್ತದೆ ಎಂಬುದು ಹಣಕಾಸು ಸಂಸ್ಥೆಗಳ ತರ್ಕ. ಹಾಗೆಯೇ ಕಾನೂನು ಬದ್ದವಾಗಿ ಬ್ಯಾಂಕುಗಳು ಸುಸ್ತಿದಾರರ ವಿರುದ್ದ ಕ್ರಮ ಜರುಗಿಸಲು ಇದನ್ನು ಅಸ್ತ್ರವಾಗಿ ಬಳಸುತ್ತವೆ. ಆದರೆ ಈ ಹಿಂದೆ ಚರ್ಚಿಸಿದಂತೆ ಸಹಕಾರ ಸಂಸ್ಥೆಗಳೂ ಭೂಮಿಯನ್ನು ಬ್ಯಾಂಕಿನ ಹೆಸರಿಗೆ ನೊಂದಯಿಸಿಕೊಳ್ಳುತ್ತವೆ. ಆದರೆ ಪರಿಸ್ಥಿತಿ ಬದಲಾಗಿದ್ದು ಈ ಹಿಂದೆ ಸುಸ್ತಿಗಾರರ ವಿರುದ್ದ ಸಹಕಾರ ಸಂಸ್ಥೆಗಳು ನಿಷ್ಟುರ ಕ್ರಮ ಕೈಗೊಳ್ಳುತ್ತಿದ್ದವು. ಅಡವಿಟ್ಟು

ಭೂಮಿಯನ್ನು ಹಾರಾಜು ಮಾಡುತ್ತಿದ್ದವು. ಮನೆಯ ಸಾಮಾನುಗಳನ್ನು ಎತ್ತಿಕೊಂಡು ಹೋಗುತ್ತಿದ್ದವು. ಆದರೆ ಪ್ರಸ್ತುತ ಈ ರೀತಿಯ ಮರುಪಾವತಿ ಕ್ರಮ ಅನುಸರಿಸುವಂತಿಲ್ಲ. ಸುಸ್ತಿದಾರರ ವಿರುದ್ಧ ಕಾನೂನು ಕ್ರಮ ಜರುಗಿಸಿದ ಉದಾಹರಣೆಗಳು ಅಧ್ಯಯನದ ಕ್ಷೇತ್ರದ ವ್ಯಾಪ್ತಿಯಲ್ಲಿ ಕಂಡು ಬಂದಿಲ್ಲ. ಇದಕ್ಕೆ ರಾಜಕೀಯ ಪ್ರೇರಣೆಯೂ ಇದೆ. ಸಹಕಾರ ಸಂಸ್ಥೆಗಳು ಈ ರೀತಿ ಮಾಡುವ ಧೈರ್ಯವಿಲ್ಲ. ರಾಯಚೂರು ಜಿಲ್ಲೆಯಲ್ಲಿ ರಾಜಕೀಯ ಕಾರಣಗಳು ಬೆಳೆನಷ್ಟ, ನೀರಿನ ಮೂಲಗಳು ಬತ್ತಿ ಹೋಗಿರುವುದು ಮತ್ತು ಸಾಲ ಮನ್ನಾ ಅಗುತ್ತದೆ ಎಂಬ ಭಾವನೆ ಹಿತ್ಯಾದಿ ಕಾರಣಗಳಿಂದ ಭೂ ಅಭಿವೃದ್ಧಿ ಬ್ಯಾಂಕುಗಳ ಸಾಲ ವಸೂಲಾಗದೆ ತೀವ್ರ ಸಂಕಷ್ಟದಲ್ಲಿವೆ. ಕರ್ನಾಟಕ ರಾಜ್ಯದಾದ್ಯಂತ ಇದೇ ಪರಿಸ್ಥಿತಿ ಇದೆ ಎನ್ನಬಹುದು. ಈ ಬ್ಯಾಂಕುಗಳು ದಾಖಲೆ ಪಡೆಯುವ ವಿಷಯದಲ್ಲಿ ವಾಣಿಜ್ಯ ಬ್ಯಾಂಕುಗಳಂತೆ ಕಠಿಣ ನೀತಿ ಅನುಸರಿಸಿದರೂ ಈವರೆಗೂ ತಮ್ಮ ಸುಸ್ತಿದಾರರ ಮೇಲೆ ಕ್ರಮ ಜರುಗಿಸಿದ ನಿದರ್ಶನಗಳಿಲ್ಲ.

ಅರ್ಜಿದಾರನು ನಿರ್ಧಿಷ್ಟ ಮೊತ್ತದ ಹಣವನ್ನು ಬ್ಯಾಂಕಿನಲ್ಲಿ ಠೇವಣಿ ಇಡಬೇಕು. ಈ ಠೇವಣಿ ಹಣವನ್ನು ಸಾಲ ನೀಡುವಾಗ ಅನುಸರಿಸುವ ಪ್ರಕ್ರಿಯೆಗೆ ಬಳಸಲಾಗುತ್ತದೆ. ಅರ್ಜಿದಾರ ನೀಡುವ ದಾಖಲೆಗಳ ಪರಿಸೀಲನೆಗೆ ತಗುಲುವ ಖರ್ಚನ್ನು ಈ ಠೇವಣಿಯಿಂದ ಬರಿಸಲಾಗುತ್ತದೆ. ಅರ್ಜಿದಾರ ಸಾಲಕ್ಕೆ ಭದ್ರತೆಯಾಗಿ ನೀಡಿದ ಭೂಮಿಯ ಮೇಲೆ ಯಾವುದೇ ಸಾಲ ಪಡೆದಿಲ್ಲವೆಂದು ತಾಲ್ಲೂಕು ತಹಸೀಲ್ದಾರ್ ಕಛೇರಿಯ ನೊಂದಣಾಧಿಕಾರಿ ಧೃಢೀಕರಿಸಬೇಕಾಗುತ್ತದೆ. ಈ ಧೃಢೀಕರಣ ಪತ್ರ ಅಥವಾ ಎನ್‌ಕಂಬರೆನ್ಸ್ ಪ್ರಮಾಣ ಪತ್ರವನ್ನು ಪಡೆಯಲು ನೊಂದಾಣಾಧಿಕಾರಿಗೆ ಮನವಿ ಸಲ್ಲಿಸಬೇಕು. ತನ್ನ ಹೆಸರಿನಲ್ಲಿ ಭೂಮಿ ಇದೆ ಎನ್ನುವುದಕ್ಕೆ ಸಂಬಂಧಪಟ್ಟ ಖಾತೆ ಪಹಣಿಗಳನ್ನು ತಹಸೀಲ್ಧಾರ್ ಕಡೆಯಿಂದ ಪಡೆದು ನೊಂದಾಣಾಧಿಕಾರಿ ಕಛೇರಿಗೆ ನೀಡಬೇಕು. ದಾಖಲೆಗಳನ್ನು ಪಡೆಯುವ ಮತ್ತು ನೋಂದಾಯಿಸುವ ವೆಚ್ಚಗಳನ್ನು ಸಾಲ ಪಡೆಯುವವರು ಭರಿಸಬೇಕಾಗುತ್ತದೆ. ಈ ಪ್ರಕ್ರಿಯೆ ವಿಳಂಬವಾಗುತ್ತದೆ. ಈ ರೀತಿಯ ವಿಳಂಬ ಹಾಗೂ ಖರ್ಚುಗಳನ್ನು ನಿಭಾಯಿಸುವ ಸಮರ್ಥರಿರುವ ಮತ್ತು ತಮ್ಮ ಪ್ರಭಾವವನ್ನು ಬಳಸಿಕೊಳ್ಳುವವರು ಸಂಘಟಿತ ಹಣಕಾಸು ಮೂಲದಿಂದ ಸಾಲ ಪಡೆಯಲು ಪ್ರಯತ್ನಿಸುತ್ತಾರೆ. ಆದರೆ ಇವೆಲ್ಲವನ್ನೂ ನಿರ್ವಹಿಸಲಾಗದ ಸಣ್ಣ, ಅತೀ ಸಣ್ಣ ಮತ್ತು ಕೃಷಿ ಕಾರ್ಮಿಕರು (ತುಂಡು ಭೂಮಿಯಿದ್ದ ಕೂಲಿಗಾರರಾಗಿರುವರು) ಈ ಧೃಢೀಕರಣ ಪತ್ರ ಪಡೆಯಲು ಪ್ರಯತ್ನಿಸುವುದೇ ಇಲ್ಲ. ಇದರಿಂದ ಈ ವರ್ಗಗಳು ಸಾಲ ಸೌಲಭ್ಯ ಪಡೆಯಲು ಇರುವ ಅಲ್ಪ ಅವಕಾಶಗಳನ್ನು ಬಳಸಿಕೊಳ್ಳಲಾಗದ ಪರಿಸ್ಥಿತಿಯಲ್ಲಿರುತ್ತಾರೆ. ಇದರಿಂದ ದರ್ಬಲ ವರ್ಗಗಳು ಸರಳ ನಿಯಮಗಳು, ಅತೀ ಶೀಘ್ರದಲ್ಲಿ ಸಾಲ ಪಡೆಯಲು ಅವಕಾಶವಿರುವ ಅಸಂಘಟಿತ ಮೂಲವನ್ನು ಅವಲಂಭಿಸುತ್ತಾರೆ. ದುಬಾರಿ ಬಡ್ಡಿ, ಶೋಷಣೆಗೆ ಒಳಗಾಗುವ ಸಾಧ್ಯತೆಗಳ ಅರಿವಿದ್ದು ತಮ್ಮ ಕೃಷಿ ಮತ್ತು ಕೃಷಿಯೇತರ ಹಣಕಾಸು ಅಗತ್ಯಗಳಿಗಾಗಿ ಖಾಸಗೀ ಮಾರುಕಟ್ಟೆಯನ್ನು ಅವಲಂಭಿಸುತ್ತಾರೆ. ಸಂಘಟಿತ ಮೂಲದ ಮುಖ್ಯವಾಗಿ ಸಹಕಾರ ಸಂಸ್ಥೆಗಳಿಂದ ಹಣಕಾಸು ದೊರಯುತ್ತದೆ ಎಂಬ ಭರವಸೆಯೇ ಇರುವುದಿಲ್ಲ. ಭೂ ಅಭಿವೃದ್ಧಿ ಮತ್ತು ವಾಣಿಜ್ಯಬ್ಯಾಂಕುಗಳ

ಕಠಿಣ ಸಾಲ ನಿಯಮಗಳಿಂದ ಸಣ್ಣ, ಅತೀ ಸಣ್ಣ ಮತ್ತು ಕೃಷಿ ಕಾರ್ಮಿಕರು ಸಂಘಟಿತ ಹಣಕಾಸು ಮೂಲದ ಸಾಲ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ ಎನ್ನಬಹುದು. ಭೂರಹಿತ ಕಾರ್ಮಿಕರು ಸಂಘಟಿತ ಮೂಲದಿಂದ ಸಾಲ ಪಡೆಯುವ ಅರ್ಹತೆಯೇ ಇರುವುದಿಲ್ಲ. ಹೀಗಾಗಿ ಇವರು ಸಂಘಟಿತ ಮೂಲದಿಂದ ಶಾಶ್ವತವಾಗಿ ಹೊರಗುಳಿಯುತ್ತಾರೆ. ಅಸಂಘಟಿತ ಮಾರುಕಟ್ಟೆಯ ಸಾಲ ಪೂರೈಕೆದಾರರು ಸಾಲ ನೀಡುವಾಗ ಎದುರಾಗುಬ ಸಮಸ್ಯೆ(ರಿಸ್ಕ್ ಫ್ಯಾಕ್ಟರ್)ಯನ್ನು ಎದುರಿಸುತ್ತಾರೆ. ಸಂಘಟಿತ ಹಣಕಾಸು ವಲಯವು ಸಾಲನಿಯಮ ಸಡಲಿಸಿ ದಾಖಲೆಗಳನ್ನು ನಿರ್ಲಕ್ಷಿಸುವ ಸಮಸ್ಯೆ ತೆಗೆದುಕೊಳ್ಳುವುದಿಲ್ಲ. ಬೇಬಾಕಿ ಪ್ರಮಾಣ ಪತ್ರ ಅಥವಾ ಯಾವ ಬ್ಯಾಂಕಿನಲ್ಲೂ ಸಾಲ ವಿಲ್ಲವೆಂಬ ಪ್ರಮಾಣ ಪತ್ರ, ಕಂದಾಯ ದಾಖಲೆಗಳ ಪರಿಶೀಲನೆ, ಭೂ ಮೌಲ್ಯಮಾಪನ ಅಧಿಕಾರಿಯ ಖರ್ಚು ಇತ್ಯಾದಿ ಪ್ರಕ್ರಿಯೆ ನಂತರ ಅರ್ಜಿದಾರರಿಂದ ಅರ್ಜಿಯನ್ನು ಸ್ವೀಕರಿಸಿದ ಕೂಡಲೇ ಭೂ ಅಭಿವೃದ್ಧಿ ಬ್ಯಾಂಕಿನ ಮ್ಯಾನೇಜರ್ ಅರ್ಜಿದಾರರು ಬ್ಯಾಂಕ್‌ನ ಸದಸ್ಯರೆಂಬುದನ್ನು ಖಾತರಿಪಡಿಸಿ ಕೊಳ್ಳಬೇಕು. ಸಾಲದ ಉದ್ದೇಶ ಅಭಿವೃದ್ಧಿಗೆ, ಅಂದರೆ ಭೂಮಿ ಸುಧಾರಣೆ, ಸಾಗುವಳಿ ವಿಧಾನಗಳ ಬದಲಾವಣೆ ಇತ್ಯಾದಿಗೆ ಸಂಬಂಧಿಸಿದಿಯೇ ಎಂಬುದನ್ನು ಪರಿಶೀಲಿಸಬೇಕು. ಸಾಲದ ದಾಖಲೆಗಳು, ಸಾಲದ ಉದ್ದೇಶ ಪರಿಶೀಲನೆ ನಂತರ ತಮ್ಮ ಬ್ಯಾಂಕ್‌ನ ರಿಜಿಸ್ಟರ್‌ನಲ್ಲಿ ಅರ್ಜಿಯ ವಿವರಗಳನ್ನು ದಾಖಲಿಸಿಬೇಕು. ಅದಕ್ಕೆ ಒಂದು ಸಂಖ್ಯೆಯನ್ನು ನೀಡಬೇಕು. ಭೂ ಮೌಲ್ಯಮಾಪನ ಅಧಿಕಾರಿ ಅರ್ಜಿಯನ್ನು ಪರಿಸೀಲಿಸಿ ವರದಿ ನೀಡಬೇಕು. ಇವರು ಬ್ಯಾಂಕಿನ ಉದ್ಯೋಗಿಯಾಗಿರುತ್ತಾರೆ. ಇವರು ಅರ್ಜಿಯೊಂದಿಗೆ ಸಲ್ಲಿಸಿರುವ ದಾಖಲೆಗಳ ಸತ್ಯಾಸತ್ಯತೆಯನ್ನು ಪರಿಶೀಲಿಸುತ್ತಾರೆ. ಸಾಮನ್ಯವಾಗಿ ಸಾಲವನ್ನು ಭೂಮಿಯ ಮೌಲ್ಯದ ಶೇಕಡಾ ೬೦ರಷ್ಟನ್ನು ಮಂಜೂರು ಮಾಡಲಾಗುತ್ತದೆ. ಭೂ ಮೌಲ್ಯ ಮಾಪನ ಅಧಿಕಾರಿಯು ಅರ್ಜಿಯ ಬಗ್ಗೆ ಅಕ್ಷೇಪಣೆಗಳಿದ್ದರೆ ಬ್ಯಾಂಕಿನ ವ್ಯವಸ್ಥಾಪಕರಿಗೆ ವರದಿ ನೀಡುತ್ತಾರೆ. ಈ ಆಕ್ಷೇಪಣೆಗಳನ್ನು ಅರ್ಜಿಯ ಮೇಲೆ ಅಧಿಕಾರಿಯ ಬರೆದಿರಬೇಕು. ಈ ಆಕ್ಷೇಪಣೆಗಳ ಆಧಾರದ ಮೇಲೆ ಶಾಖಾ ವ್ಯವಸ್ಥಾಪಕರು ಅರ್ಜಿದಾರರಿಗೆ ಅರ್ಜಿ ತಿರಸ್ಕೃತ ಗೊಂಡಿರುವ ಅಥವಾ ಆಕ್ಷೇಪಣೆಗಳನ್ನು ತಿಳಿಸುತ್ತಾರೆ. ಈ ಪ್ರಕ್ರಿಯೆಯಿಂದ ಅರ್ಜಿಗಳನ್ನು ಏಕಪಕ್ಷಿಯವಾಗಿ ತಿರಸ್ಕರಿಸುವ ಸಾಧ್ಯತೆಗಳಿವೆ. ಇದನ್ನು ಬಳಸಿಕೊಂಡು ಸಂಸ್ಥೆಯ ಶಾಖೆಗಳು ಪ್ರಾಭಾವಿಗಳಿಗೆ ಸಾಲ ನೀಡುವ ಸಾಧ್ಯತೆಗಳಿವೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ದಾಖಲೆಗಳ ಪ್ರಕಾರ ಸಣ್ಣ ಅತೀ ಸಣ್ಣ ರೈತರು ದೇವದುರ್ಗ ತಾಲ್ಲೂಕಿನ ಭೂ ಅಭಿವೃದ್ಧಿ ಬ್ಯಾಂಕಿನಿಂದ ಸಾಲ ಪಡೆದಿದ್ದಾರೆ. ಆದರೂ ಭೂ ಅಭಿವೃದ್ಧಿ ಬ್ಯಾಂಕುಗಳು ಸಾಮಾನ್ಯವಾಗಿ ದೊಡ್ಡ ಮತ್ತು ಮದ್ಯಮ ರೈತರಿಗೆ ಹೆಚ್ಚಿನ ಪ್ರಮಾಣದ ಸಾಲವನ್ನು ಹಲವು ಬಾರಿ ನೀಡಿವೆ.

### ೩.೧೦. ಸಾಲ ಮಂಜೂರು ನಿಯಮ

ಅರ್ಜಿದಾರರ ಭೂ ದಾಖಲಾತಿ ಪರಿಶೀಲನೆಯ ಹಂತಕ್ಕೆ ನಿಂತು ಹೋಗುವುದಿಲ್ಲ. ಬ್ಯಾಂಕಿನ ಅಭಿವೃದ್ಧಿ ಅಧಿಕಾರಿಯ ವರದಿಯ ನಂತರ ಸಾಲ ಅರ್ಜಿಗಳನ್ನು ಬ್ಯಾಂಕಿನ ಕಾನೂನು ಅಧಿಕಾರಿಗೆ

ಅವರ ಅಭಿಪ್ರಾಯ ಪಡೆಯಲು ಕಳುಹಿಸಲಾಗುತ್ತದೆ. ಕಾನೂನು ಸಲಹೆಗಾರರು ಅರೆಕಾಲಿಕ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಾರೆ. ಪ್ರತಿ ಪ್ರಕರಣ ಅಥವಾ ಪ್ರತೀ ಅರ್ಜಿಗೆ ಇಂತಿಷ್ಟು ಫೀಸ್ ಎಂದು ಪಡೆಯುತ್ತಾರೆ. ಕಾನೂನು ಸಲಹೆಗಾರರು ಸಾಲದ ಉದ್ದೇಶವನ್ನು ಪರಿಶೀಲಿಸುತ್ತಾರೆ. ಸಾಲದ ಶೀರ್ಷಿಕೆಯನ್ನು ಗಮನಿಸಲಾಗುತ್ತದೆ. ಸಾಲದ ಶೀರ್ಷಿಕೆಯ ಮೇಲೆ ಸಾಲದ ಧೀರ್ಘಾವಧಿ ಯನ್ನು ನಿರ್ಧರಿಸಲಾಗುತ್ತದೆ. ಇವರು ಭೂ ದಾಖಲೆಗಳನ್ನು ಪರಿಶೀಲಿಸಿ ತಹಸೀಲ್ ಉಪ ನೊಂದಣಾಧಿಕಾರಿಗಳಿಂದ ಪಡೆದಿರುವ ಯಾವುದೇ ಸಾಲವಿಲ್ಲ (**ಎನ್‌ಕಂಬರೆನ್ಸ್ ಪ್ರಮಾಣಪತ್ರ**) ಪತ್ರ ಸರಿ ಇದೆಯೇ? ಸಾಲದ ಉದ್ದೇಶ ಬ್ಯಾಂಕಿನ ನೀತಿ ನಿಯಮಗಳಿಗೆ ಅನುಗುಣವಾಗಿದಿಯೇ ಎಂಬುದನ್ನು ಪರಿಶೀಲಿಸಿರುತ್ತಾರೆ. ಕಾನೂನು ಸಲಹೆ ಬಂದ ನಂತರವೇ ಸಾಲ ಮಂಜೂರು ಪ್ರಕ್ರಿಯೆ ಪ್ರಾರಂಭವಾಗುವುದು. ಹೀಗೆ ಸಾಲ ಮಂಜೂರು ನೀತಿ ಕಠಿಣ ಮತ್ತು ವಿಳಂಬಕಾರಿ. ಈ ಪ್ರಕ್ರಿಯೆಯಲ್ಲಿ ಪ್ರಭಾವಿಗಳು ಸಾಲ ಅರ್ಜಿಗಳ ಮಂಜೂರು ಮಾಡಿಸಿಕೊಳ್ಳುವಲ್ಲಿ ತಮ್ಮದೇ ಆದ ಪ್ರಭಾವ ಬೀರುತ್ತಾರೆ. ಕಾನೂನು ಸಲಹೆ ವರದಿ ಸ್ವೀಕರಿಸಿದ ನಂತರ ಸಾಲ ಮಂಜೂರಾತಿಗೆ ಬ್ಯಾಂಕಿನ ಮ್ಯಾನೇಜರ್ ವ್ಯವಸ್ಥಾಪಕ ಸಮಿತಿ ಮುಂದೆ ಸಾಲ ಪ್ರಸ್ತಾವನೆಗಳನ್ನ ಇಡುತ್ತಾರೆ. ಸಾಲದ ಮೊತ್ತ ಹೆಚ್ಚಾಗಿದ್ದಲ್ಲಿ. ರಾಜ್ಯ ಭೂ ಅಭಿವೃದ್ಧಿ ಬ್ಯಾಂಕಿನ ಒಪ್ಪಿಗೆ ಪಡೆಯಬೇಕಾಗುತ್ತದೆ. ನಂತರ ಮಂಜೂರಾತಿ ಆದೇಶವನ್ನು ಸಾಲ ಪಡೆದವರಿಗೆ ನೀಡಲಾಗುತ್ತದೆ. ಸಾಲ ಮಂಜೂರಾದ ನಂತರ ಸಾಲ ಪಡೆಯುವರು ಬ್ಯಾಂಕಿನ ಹೆಸರಿಗೆ ಭೂಮಿಯನ್ನು ನೊಂದಾಯಿಸಬೇಕು. ಭೂಮಿ ಖರೀದಿ, ಯಂತ್ರೋಪಕರಣಗಳ ಖರೀದಿಯನ್ನು ಹೊರತುಪಡಿಸಿ ಉಳಿದ ಉದ್ದೇಶಗಳಿಗೆ ಬ್ಯಾಂಕಿನ ವ್ಯವಸ್ಥಾಪಕರು ನೇರವಾಗಿ ಸಾಲ ಬಿಡುಗಡೆ ಮಾಡುತ್ತಾರೆ. ಭೂಮಿ ಯಂತ್ರೋಪಕರಣ ವಿಷಯಗಳಾದರೆ ಯಾರು ಮಾಲೀಕರೋ ಅವರ ಹೆಸರಿಗೆ ಸಾಲ ಬಿಡುಗಡೆ ಮಾಡಲಾಗುತ್ತದೆ. ಈ ಸಾಲವನ್ನು ಕಂತುಗಳಲ್ಲಿ ನೀಡಲಾಗುತ್ತದೆ. ಪ್ರತೀ ಕಂತಿನಲ್ಲಿ ನಿಗದಿತ ಸಾಲ ಮೊತ್ತವನ್ನು ನೀಡಲಾಗುತ್ತದೆ. ಆದರೆ ಪ್ರತೀ ಕಂತಿನ ಸಾಲ ಪಡೆಯುವದಕ್ಕಿಂತ ಮುಂಚೆ ಹಿಂದಿನ ಕಂತಿನ ಸಾಲ ಬಳಕೆಯ ಪ್ರಮಾಣ ಪತ್ರ ನೀಡಬೇಕು. ಭೂ ಅಭಿವೃದ್ಧಿ ಬ್ಯಾಂಕುಗಳು ಸಾಲ ವಸೂಲಾತಿ ರಿಜಿಸ್ಟರ್ ನಿರ್ವಹಿಸುತ್ತಾರೆ. ಸಾಲ ವಸೂಲಾತಿಗಾಗಿ ಬೇಡಿಕೆ ನೋಟೀಸ್ ಅನ್ನು ಕಳುಹಿಸುತ್ತಾರೆ. ಬ್ಯಾಂಕಿನ ಅಧಿಕಾರಿಗಳು ನೋಟೀಸ್ ತಲುಪಿರುವ ಮತ್ತು ಅದರ ವಿರುದ್ಧ ಸಾಲ ಪಡೆದವರು ಸಾಲ ಬಾಕಿ ಮಾಡಿದ್ದಾರೆ ಇಲ್ಲವೇ ಎಂಬುದನ್ನು ಪರೀಶಿಲಸುತ್ತಾರೆ. ಸಾಲ ಮರುಪಾವತಿಯಾಗದ ಹೊರತು ಹೊಸ ಸಾಲಗಳನ್ನು ನೀಡುವುದಿಲ್ಲ. ವಿಶೇಷ ಸಂದರ್ಭಗಳಲ್ಲಿ ಮಾತ್ರ ಸಾಲ ಹಿಂತಿರುಗಿಸುವಿಕೆ ತೃಪ್ತಿಕರವಾಗಿದ್ದರೆ ಮಾತ್ರ ಹೊಸ ಸಾಲ ನೀಡಲಾಗುತ್ತದೆ. ಆರು ತಿಂಗಳ ಒಳಗೆ ಒಂದೇ ಉದ್ದೇಶಕ್ಕೆ ಮತ್ತೆ ಸಾಲ ನೀಡಲಾಗುವುದಿಲ್ಲ. ಒಂದು ವೇಳೆ ಈ ರೀತಿ ಮಾಡಿದಲ್ಲಿ ಅದಕ್ಕೆ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕಿನ ಅನುಮತಿ ಅಗತ್ಯ. ಸಾಲ ಹಿಂತಿರುಗಿಸಿದ ನಂತರ ಸ್ಥಳೀಯ ಘಟಕ ಪ್ರಮಾಣ ಪತ್ರ ನೀಡಿ ರಾಜ್ಯ ಭೂ ಅಭಿವೃದ್ಧಿ ಬ್ಯಾಂಕಿಗೆ ಕಳುಹಿಸಿಕೊಡುತ್ತದೆ. ಆನಂತರ ಭೂ ಅಭಿವೃದ್ಧಿ ಬ್ಯಾಂಕಿನ ಹೆಸರಲ್ಲಿ ಅಡವಿಟ್ಟ ಭೂಮಿಯನ್ನು ಹಿಂತಿರುಗಿಸಲಾಗುತ್ತದೆ. ದೇವದುರ್ಗ

ಮತ್ತು ಸಿಂದನ್ನೂರು ತಾಲ್ಲೂಕುಗಳ ಭೂ ಅಭಿವೃದ್ಧಿ ಬ್ಯಾಂಕುಗಳು ತಮ್ಮ ಹಳೆಯ ಮಹತ್ವ ಕಳೆದುಕೊಂಡು ದೀವಾಳಿಯ ಅಂಚಿನಲ್ಲಿ ಬಂದು ನಿಂತಿವೆ. ಸಾಲ ವಸೂಲಾಗದೆ ಸಂಪನ್ಮೂಲಗಳ ಸಮಸ್ಯೆಗಳಿಂದ ನರಳುತ್ತಿವೆ. ಸಾಲ ಪಡೆದವರು ಸಾಲ ಮನ್ನಾ ಆಗುತ್ತದ ಎಂಬ ಭಾವನೆಯಿಂದ ಸಾಲವನ್ನು ಹಿಂತಿರುಗಿಸಲು ಉತ್ಸಾಹವಾಗಲೀ ಯಾವುದೇ ಆಸಕ್ತಿಯಾಗಲಿ ಇಲ್ಲ. ಪ್ರಾಮಾಣಿಕವಾಗಿ ಸಾಲಗಳನ್ನು ಹಿಂತಿರುಗಿಸಿದವರು ಹೊಸ ಸಾಲ ಪಡೆಯಲಾಗದೆ ನಾವು ಸಾಲ ಹಿಂತಿರುಗಿಸಬಾರದಿತ್ತು ಎಂಬ ಭಾವನೆಯಲ್ಲಿದ್ದಾರೆ. ಸಿಂಧನೂರು ತಾಲ್ಲೂಕಿನ ಭೂ ಅಭಿವೃದ್ಧಿ ಬ್ಯಾಂಕು ಅನೇಕ ಉದ್ದೇಶಳಿಗೆ ಸಾಲ ನೀಡಿವೆ. ಈ ಬ್ಯಾಂಕಿನ ಸ್ಥಿತಿಯು ದೇವದರ್ಗ ಭೂ ಅಭಿವೃದ್ಧಿ ಬ್ಯಾಂಕಿನ ಸ್ಥಿತಿಗಿಂತ ಭಿನ್ನವಾಗಿಲ್ಲ. ಈ ಶಾಖೆಗಳ ವ್ಯವಸ್ಥಾಪಕರ ಪ್ರಕಾರ ಸಾಲ ಹಿಂತಿರುಗಿ ಬರದಿರುವುದಕ್ಕೆ ಸಾಲ ಮನ್ನಾ ಆಗುತ್ತದೆ ಎಂಬ ಭಾವನೆಯೇ ಕಾರಣ. ಈ ಬ್ಯಾಂಕುಗಳ ಸಾಲ ಬಾಕಿ ಹೆಚ್ಚಾಗಿದ್ದು ವಸೂಲಾತಿ ಕೇವಲ ಶೇಕಡಾ ೬ ರಿಂದ ೭ರಷ್ಟಿರುವುದರಿಂದ ಹೊಸ ಸಾಲಗಳನ್ನ ನೀಡಲಾಗುತ್ತಿಲ್ಲ. ದೇವದುರ್ಗ ತಾಲ್ಲೂಕಿನ ಭೂ ಅಭಿವೃದ್ಧಿ ಬ್ಯಾಂಕು ನೀರಾವರಿ ಪಂಪ್ ಸೆಟ್ ಗಳಿಗೆ ಹೆಚ್ಚಿನ ಸಾಲ ನೀಡಿವೆ. ಸುಮಾರು ೧೧ ಕೋಟಿ ಸಾಲ ನೀಡಿದೆ. ಆದರೆ ನೀರು ಬತ್ತಿ ಹೋಗಿ ಪಂಪ್‌ಸೆಟ್‌ಗಳು ವಿಫಲವಾಗಿ ಬೆಳೆ ಬೆಳೆಯಲು ಸಾಧ್ಯವಾಗದೆ ಸಾಲ ಬಾಕಿ ಹೆಚ್ಚಿದೆ. ಕಳೆದು ಎರಡು ವರ್ಷ ಅಂದರೆ ೨೦೧೨ ಮತ್ತು ೨೦೧೩ರಲ್ಲಿ ಮಳೆ ಆಗದೆ ಬರಗಾಲ ಬಂದಿದೆ. ಸಾಲ ವಸೂಲಾತಿ ಪ್ರಮಾಣ ಶೇಕಡಾ ೭ಕ್ಕಿಂತ ಕಡಿಮೆ ಇದೆ. ರಾಜ್ಯ ಮತ್ತು ರಾಷ್ಟ್ರಾದ್ಯಾದಂತ ಭೂ ಅಭಿವೃದ್ಧಿ ಬ್ಯಾಂಕುಗಳ ಸ್ಥಿತಿ ಇದೆ ರೀತಿ ಇದ್ದು, ಸಹಕಾರ ವ್ಯವಸ್ಥೆ ತನ್ನ ಮಹತ್ವ ಕಳೆದುಕೊಂಡಿದೆ. ಈ ಎರಡೂ ಭೂ ಅಭಿವೃದ್ಧಿ ಬ್ಯಾಂಕುಗಳೂ ಸಾಲ ನೀಡುವಾಗ ಕಠಿಣ ಸಾಲ ನಿಯಮದಂತೆ ದಾಖಲೆಗಳನ್ನು ಪಡೆದಿವೆ. ಆದರೂ ಸಾಲ ಸುಸ್ಥಿದಾರರ ವಿರುದ್ದ ಕಾನೂನು ಕ್ರಮ ಕೈಗೊಳ್ಳಲಾಗಿಲ್ಲ. ಇದಕ್ಕೆ ರಾಜಕೀಯ ಅಂಶಗಳೇ ಕಾರಣ ವೆನ್ನಬಹುದು. ಸಾಲ ಪಡೆದವರಲ್ಲಿ ಸಣ್ಣ, ಮಧ್ಯಮ ಮತ್ತು ದೊಡ್ಡ ರೈತರಿದ್ದು ಇವರೆಲ್ಲಾ ಬೇರೆ ಬೇರೆ ಜಾತಿಗೆ ಸೇರಿದವರಾಗಿದ್ದಾರೆ. ಇದರಲ್ಲಿ ಪ್ರಬಲ ಲಿಂಗಾಯತ ಜಾತಿಯವೇ ಹೆಚ್ಚಾಗಿದ್ದಾರೆ. ಇವರೆಲ್ಲಾ ಮಧ್ಯಮ ಮತ್ತು ದೊಡ್ಡ ರೈತರಾಗಿದ್ದಾರೆ. ಸಾಲ ಪಡೆದ ಸಣ್ಣ ರೈತರ ಸಂಖ್ಯೆ ಮತ್ತು ಪಡೆದ ಸಾಲ ದೊಡ್ಡ ರೈತರ ಸಂಖ್ಯೆ ಮತ್ತು ಸಾಲ ಪ್ರಮಾಣಕ್ಕಿಂತ ಕಡಿಮೆ ಇದೆ. ಈ ಬ್ಯಾಂಕುಗಳ ವ್ಯವಸ್ಥಾಪಕರು ನೀಡಿದ ವರದಿಗಳ ಆಧಾರದ ಮೇಲೆ ಈ ಮೇಲಿನ ವಿಶ್ಲೇಷಣೆ ಮಡಲಾಗಿದೆ. ಭೂ ಅಭಿವೃದ್ಧಿ ಬ್ಯಾಂಕುಗಳು ನೀಡುವ ಸಾಲದ ಪ್ರಮಾಣ (ತನ್ನ ಸದಸ್ಯರುಗಳಿಗೆ) ನಬಾರ್ಡ್ ನಿಗಧಿಗೊಳಿಸಿರುವ ಸಾಲ ವಸೂಲಾತಿ ಶಿಸ್ತನ್ನು ಅವಲಂಭಿಸಿದೆ. ವಸೂಲಾತಿ ಪ್ರಮಾಣ ಶೇಕಡಾ ೭೫ ಕ್ಕಿಂತ ಹೆಚ್ಚಿರುವ ಬ್ಯಾಂಕುಗಳು ನೀಡುವ ಹೊಸ ಸಾಲಗಳ ಮಿತಿಯನ್ನು ಹೆಚ್ಚಿಸಲಾಗುತ್ತದೆ. ಈ ಸಾಲ ವಸೂಲಾತಿ ಶಿಸ್ತಿನಿಂದಾಗಿ ರೈತರಿಂದ ಅಧಿಕ ಸಾಲ ಬೇಡಿಕೆ ಇದ್ದರೂ ಭೂ ಅಭಿವೃದ್ಧಿ ಬ್ಯಾಂಕುಗಳ ಸಾಲ ವಿತರಣ ಪ್ರಮಾಣ ತುಂಬಾ ಕಡಿಮೆ.

## ವಾಣಿಜ್ಯ ಬ್ಯಾಂಕುಗಳ ಸಾಲ ಅನುಷ್ಠಾನ ವಿಧಾನ

ಗ್ರಾಮೀಣ ವಲಯದ ಪ್ರಮುಖ ಬ್ಯಾಂಕ್ ಆದ ವಾಣಿಜ್ಯ ಬ್ಯಾಂಕುಗಳ ಕಾರ್ಯ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಸರ್ಕಾರ ಮತ್ತು ಆರ್.ಬಿ.ಐರೂಪಿಸಿರುವ ನೀತಿಗಳನ್ನು ಚರ್ಚಿಸುವುದಾದರೆ. ಸಾಲ ಪಡೆಯಲು ಇಚ್ಛಿಸುವವರು ತಮಗೆ ಅಗತ್ಯವಿರುವ ಸಾಲ ಉದ್ದೇಶವನ್ನು ನಿಗದಿತ ನಮೂನೆಯ ಅರ್ಜಿ ಭರ್ತಿಮಾಡಿ ವಾಣಿಜ್ಯ ಬ್ಯಾಂಕುಗಳ ಶಾಖೆಗಳಿಗೆ ನೀಡಬೇಕು. ಅಲ್ಪಾವಧಿ ಉದ್ದೇಶಗಳಿಗೆ ಈ ಬ್ಯಾಂಕುಗಳು ಸಾಲ ನೀಡುತ್ತವೆ. ಸಾಲದ ಉದ್ದೇಶ ಅಲ್ಪಾವಧಿ ಉತ್ಪಾದನಾ ಸಾಲ, ಹಸುಗಳ ಖರೀದಿ, ಪಂಪ್ಸೆಟ್ಟ್ ಖರೀದಿ, ಕೃಷಿ ಉಪಕರಣಗಳ ಖರೀದಿ ಇತ್ಯಾದಿಗಳಿರಬಹುದು. ಸರಳ ಅರ್ಜಿ ನಮೂನೆಗಳನ್ನು ಈ ಮೇಲಿನ ಎಲ್ಲಾ ಉದ್ದೇಶಗಳಿಗೆ ನೀಡಲಾಗುತ್ತದೆ. ಪ್ರಾದೇಶಿಕ ಅಥವಾ ಸ್ಥಳೀಯ ಭಾಷೆಯಲ್ಲೂ ಈ ಅರ್ಜಿ ನಮೂನೆಗಳಿವೆ. ಸಾಲದ ಷರತ್ತುಗಳು ಹಾಗೂ ಸಾಲ ಪಡೆಯಲು ನೀಡಬೇಕಾದ ಭದ್ರತೆಗಳ ವಿವರಗಳನ್ನು ಅರ್ಜಿಯ ಹಿಂಬದಿಯಲ್ಲಿ ನೀಡಲಾಗುತ್ತದೆ. ಬ್ಯಾಂಕು ಶಾಖೆಗಳು ಈ ಅರ್ಜಿಗಳನ್ನು ಸಂಗ್ರಹಿಸಿ ಪ್ರಕ್ರಿಯೆ ಮುಂದುವರಿಸುತ್ತದೆ. ಪ್ರತಿ ೫೦೦ ಖಾತೆಗಳಿಗೆ ಒಬ್ಬ ಕೃಷಿ ಕ್ಷೇತ್ರ ಅಧಿಕಾರಿ ಇದ್ದು, ನಿರ್ಧಿಷ್ಟ ಶೈಕ್ಷಣಿಕ ಅರ್ಹತೆ ಹಾಗೂ ಕೃಷಿ ಹಣಕಾಸು ಕ್ಷೇತ್ರ ಅಥವಾ ವಿಷಯವದಲ್ಲಿ ತರಬೇತಿ ಹೊಂದಿದವನಾಗಿರುತ್ತಾನೆ. ಸಾಲ ಪಡೆಯುವವರು ಎರಡು ಭಾಗಗಳಲ್ಲಿ ಅರ್ಜಿ ಸಲ್ಲಿಸುತ್ತಾರೆ. ಒಂದು ಭಾಗ ಅಭ್ಯರ್ಥಿಯ ಪ್ರಾಥಮಿಕ ವಿವರಗಳನ್ನು ಒಳಗೊಂಡಿರುತ್ತದೆ. ಈ ಭಾಗ ಎಲ್ಲಾ ವಿಧದ ಕೃಷಿ ಸಾಲಗಳಿಗೂ ಅನ್ವಯಸುತ್ತದೆ. ಎರಡನೇ ಭಾಗ ಸಾಲದ ವಿವಿಧ ಉದ್ದೇಶಗಳಿಗೆ ಅನ್ವಯಿಸುತ್ತದೆ. ಅರ್ಜಿಯಲ್ಲಿ ಬ್ಯಾಂಕಿನ ಮೇಲ್ವಿಚಾರಣೆ ಸಿಬ್ಬಂದಿ ವರದಿ ನೀಡಲು ಸ್ಥಳ ನೀಡಲಾಗಿದೆ. ಬ್ಯಾಂಕಿನ ಅಧಿಕಾರಿಗಳು ಸಾಲ ಪಡೆಯುವವರ ಬಗ್ಗೆ ಸೂಕ್ತ ಮಾಹಿತಿ ಸಂಗ್ರಹಿಸಿ, ಪರಿಶೀಲಿಸಿ, ಸ್ಥಳ ಬೇಟಿ ಮಾಡಿ ನಂತರ ಸಾಲ ಪ್ರಸ್ತಾವನೆ ಬಗ್ಗೆ ವರದಿ ನೀಡಲಾಗುತ್ತದೆ. ಸಾಲದ ಮೊತ್ತ ಅಧಿಕವಾಗಿದ್ದರೆ ಬ್ಯಾಂಕಿನ ಅಧಿಕಾರಿಗಳು ಸಾಲ ಪ್ರಸ್ತಾವನೆಯ ಲಾಭ ಲಾಭಗಳಿಸುವ ಸಾಧ್ಯತೆ, ಸಾಮರ್ಥ್ಯವನ್ನು ಪರಿಶೀಲಿಸಲಾಗುತ್ತದೆ. ಬ್ಯಾಂಕು ಈ ರೀತಿಯ ಪರಿಶೀಲನೆಗೆ ಒಂದು ನಿರ್ಧಿಷ್ಟ ವಿಧಾನವನ್ನು ಅನುಸರಿಸಿ ಒಂದು ಪ್ರತ್ಯೇಕ ವರದಿ ಸಿದ್ದಪಡಿಸುತ್ತದೆ. ಹಾಗೂ ಅಧಿಕಾರಿಗಳು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಅಭಿಪ್ರಾಯಗಳು ಸಾಲದ ಮೊತ್ತ, ಅವಧಿ, ಸಾಲ ಪಡೆಯುವವರ ಸಾಲ ಮರುಪಾವತಿ ಸಾಮರ್ಥ್ಯಗಳನ್ನು ಒಳಗೊಳ್ಳುತ್ತದೆ. ಹೀಗೆ ಈ ಬ್ಯಾಂಕುಗಳ ಸಾಲ ನಿಯಮದ ಸಂಕೀರ್ಣತೆಯಿಂದ ಸಣ್ಣ, ಅತೀಸಣ್ಣ ರೈತರು ಮತ್ತು ತುಂಡು ಭೂಮಿ ಹೊಂದಿರುವ ಕೃಷಿ ಕಾರ್ಮಿಕರು ವಾಣಿಜ್ಯ ಬ್ಯಾಂಕುಗಳಿಂದ ಸಾಲ ಪಡೆಯಲು ಇಚ್ಛಿಸುವುದಿಲ್ಲ. ಜೊತೆಗೆ ಬಡ್ಡಿದರದಲ್ಲಿ ಜಾಸ್ತಿ. ಸಾಲದ ಮೇಲೆ ಬಡ್ಡಿ ರಿಯಾಯಿತಿ ದೊರೆಯುವುದೇ ವಿನಃ ಸಾಲ ಮನ್ನಾ ಆಗುವ ಸಾಧ್ಯತೆ ಕಡಿಮೆ. ಕೃಷಿ ಕಾರ್ಮಿಕರು ಮತ್ತು ಭೂರಹಿರ ದಡಿಮೆಗಾರರಿಗೆ ವಾಣಿಜ್ಯ ಬ್ಯಾಂಕುಗಳು ಎಂದಿಗೂ ಕೈಗೆಟುಕುವುದಿಲ್ಲ. ವಾಣಿಜ್ಯ ಬ್ಯಾಂಕುಗಳು ಬೇಬಾಕಿ (ನೊಡ್ಯೂ ಸರ್ಟಿಫಿಕೆಟ್ಟ್) ಪ್ರಮಾಣ ಪತ್ರಗಳನ್ನು ಪಡೆಯುತ್ತವೆ. ಸಾಲ ಪಡೆಯುವವರು ಬೇರಾವ ಬ್ಯಾಂಕಿನಲ್ಲೂ ಸಾಲ ಪಡೆದಿಲ್ಲ ಎಂಬುದಕ್ಕೆ ಖಾತರಿಗಾಗಿ ಈ ಪ್ರಮಾಣ

ಪತ್ರ ಪಡೆಯುತ್ತವೆ. ಸಾಮಾನ್ಯವಾಗಿ ವಾಣಿಜ್ಯ ಬ್ಯಾಂಕುಗಳು ತಾಲ್ಲೂಕು ಕೇಂದ್ರಗಳಲ್ಲಿ ತಮ್ಮ ಶಾಖೆಗಳನ್ನು ತೆರೆದಿರುತ್ತವೆ. ಎಲ್ಲಾ ಬ್ಯಾಂಕ್‌ಗಳಿಂದ ಬಾಕಿ ಪ್ರಮಾಣ ಪತ್ರ ಪಡೆಯುವುದು ಖರ್ಚು ಮತ್ತು ಸಮಯ ತೆಗೆದುಕೊಳ್ಳುವ ಕಾರ್ಯವಾಗಿದೆ. ಸಾಲಗಾರರು ಬ್ಯಾಂಕಿನಿಂದ ಬ್ಯಾಂಕಿಗೆ ತಿರುಗಬೇಕು. ಬ್ಯಾಂಕುಗಳು ನೀಡಿದಾಗ ಈ ಪ್ರಮಾಣ ಪತ್ರ ಪಡೆಯಬೇಕು. ಶೀಘ್ರವಾಗಿ ಈ ಪತ್ರ ನೀಡುವಂತೆ ಒತ್ತಾಯಿಸುವ ಅವಕಾಶಗಳೇ ಇರುವುದಿಲ್ಲ. ಈ ಪ್ರಕ್ರಿಯೆಯಲ್ಲಿ ಸಾಲಗಾರ ಮಾನಸಿಕ ಹಿಂಸೆಗೆ ಒಳಗಾಗುವ ಸಾಧ್ಯತೆಗಳಿರುತ್ತವೆ. ಈ ಪ್ರಮಾಣ ಪತ್ರಕ್ಕೆ ಸಂಬಂಧಿಸಿದ ಮಾಹಿತಿಯನ್ನು ಬ್ಯಾಂಕುಗಳು ತಾವೇ ಪಡೆಯುವ ವ್ಯವಸ್ಥೆಯೊಂದನ್ನು ಬ್ಯಾಂಕುಗಳು ಅಳವಡಿಸಿಕೊಳ್ಳಬೇಕು. ಅದರಲ್ಲೂ ಸಾರ್ವಜನಿಕ ಬ್ಯಾಂಕುಗಳು ಇದನ್ನು ಅಳವಡಿಸಿಕೊಳ್ಳುವುದು ಅತೀ ಮುಖ್ಯ. ಜಿಲ್ಲಾ ಸಮನ್ವಯ ಸಭೆ ಹಾಗೂ ಇತರೇ ಜಿಲ್ಲಾ ಮಟ್ಟದ ಸಭೆಗಳಲ್ಲಿ ಈ ವಿಷಯವನ್ನು ಚರ್ಚಿಸಿ, ಸಾರ್ವಜನಿಕ ಬ್ಯಾಂಕುಗಳು ಈ ಬಗ್ಗೆ ಮಾಹಿತಿ ಪಡೆಯುವ ವಿಧಾನವೊಂದನ್ನು ಅಭಿವೃದ್ಧಿಗೊಳಿಸಬಹುದು. ಆರ್.ಬಿ.ಐ ಮತ್ತು ನಬಾರ್ಡ್ ಒಂದು ಲಕ್ಷದ ವರೆಗೂ ಕೃಷಿ ಸಾಲ ಅಥವಾ ಬೆಳೆ ಸಾಲ ಪಡೆಯಲು ಇಚ್ಚಿಸುವವರಿಗೆ ಭದ್ರತೆ ಇಲ್ಲದೆ ಸಾಲ ನೀಡಲು ಬ್ಯಾಂಕುಗಳಿಗೆ ನಿರ್ದೇಶನ ನೀಡಿದೆ. ಸಾಲದ ಮೊತ್ತ ಹೆಚ್ಚಾಗಿದ್ದರೆ ಭದ್ರತೆಗಳನ್ನು ಹೆಚ್ಚುವರಿಯಾಗಿ ಪಡೆಯಬಹುದು. ಆರ್.ಬಿ.ಐ ನ ಇಂತಹ ನಿರ್ದೇಶನದಿಂದ ಆರ್.ಬಿ.ಐ ಕಾಲ ಕಾಲಕ್ಕೆ ಬ್ಯಾಂಕುಗಳ ಸಾಲ ನಿಯಮಗಳನ್ನು ಸರಳೀಕರಣಗೊಳಿಸುತ್ತಿದೆ ಅನಿಸುತ್ತದೆ. ಆದರೆ ಈ ನಿಯಮಗಳನ್ನು ಯಾವ ಬ್ಯಾಂಕುಗಳು ಜಾರಿಗೊಳಿಸುತ್ತಿಲ್ಲ. ಅಂದರೆ ಸಾರ್ವಜನಿಕ ಬ್ಯಾಂಕುಗಳು ಗ್ರಾಮೀಣ ಸಾಲ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದ್ದರೂ ಈ ನಿಯಮಗಳ ಸಡಿಲಿಕೆಯನ್ನು ಅನುಸರಿಸುತ್ತಿಲ್ಲ. ಈ ನಿಟ್ಟಿನಲ್ಲಿ ನಿಯಮ ಸಡಿಲಿಕೆ ಆಯಾ ಬ್ಯಾಂಕುಗಳ ಶಾಖಾ ವ್ಯವಸ್ಥಾಪಕರು ಅನುಸರಿಸಬಹುದು ಅನುಸರಿಸದೇ ಇರಬಹುದು. ಸಂಘಟಿತ ಹಣಕಾಸು ವಲಯದ ಬ್ಯಾಂಕುಗಳಿಗೆ ಸ್ವಂತ ನಿರ್ಧಾರ ತೆಗೆದುಕೊಳ್ಳುವ ಅವಕಾಶಗಳಿಲ್ಲ ಎಂಬುದು ಬಹು ಮುಖ್ಯ ಟೀಕೆಯಾಗಿತ್ತು. ಆದರೆ ಇಂದು ಈ ಅವಕಾಶವಿದ್ದರೂ ಶಾಖಾ ವ್ಯವಸ್ಥಾಪಕರು ಅದನ್ನು ಅನುಷ್ಠಾನಗೊಳಿಸುತ್ತಿಲ್ಲ. ರೀತಿಯ ನಿಯಮ ಸಡಿಲಿಕೆಯಿಂದ ದಶಕಗಳಿಗಳಿಂದ ಸಂಘಟಿತ ಹಣಕಾಸು ವ್ಯವಸ್ಥೆಯ ಸಾಲ ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗದೇ ಹೊರಗುಳಿದಿರುವ ವರ್ಗಗಳಿಗೆ ಯಾವುದೇ ಪ್ರಯೋಜನವಾಗಿಲ್ಲ. ಈ ನಿಯಮದ ಸರಳೀಕರಣ ಕೇವಲ ಕಾಯಿದೆ ಅಥವಾ ಪುಸ್ತಕಗಳಲ್ಲಿ ಮಾತ್ರ ಜಾರಿಗೊಂಡಿದೆ. ಇದರ ಅನುಷ್ಠಾನವನ್ನು ಪರಿಶೀಲಿಸುವ ಯಾವುದೇ ವಿಧಾನ ಅಸ್ತಿತ್ವದಲ್ಲಿಲ್ಲ. ಎಲ್ಲಾ ಬ್ಯಾಂಕ್ ಶಾಖೆಗಳಲ್ಲೂ ಕ್ಷೇತ್ರ ಸಿಬ್ಬಂದಿ ಇರುವುದಿಲ್ಲ. ಕ್ಷೇತ್ರ ಸಿಬ್ಬಂದಿಗಳ ನೇಮಕದಿಂದ ಬ್ಯಾಂಕಿನ ನಿರ್ವಹಣಾ ವೆಚ್ಚ ಅಧಿಕವಾಗಲಿದೆ. ಗ್ರಾಮೀಣ ಶಾಖೆಗಳ ಸಿಬ್ಬಂದಿಗಳು ಕಡಿಮೆ ಇದ್ದು ಸಾಲ ಖಾತೆಗಳು ಹೆಚ್ಚಿದರೆ ಸಾಲ ಮೇಲ್ವಿಚಾರಣೆ ಕಷ್ಟವಾಗಲಿದೆ ಎಂಬ ಆಡಳಿತಾತ್ಮಕ ಲೆಕ್ಕಾಚಾರಗಳಿವೆ. ಈ ಪರಿಸ್ಥಿತಿಯಲ್ಲಿ ಗುಣಮಟ್ಟದ ಸಾಲ ನೀಡಿಕೆಗೆ ತೊಂದರೆಯಾಗುತ್ತದೆ. ಈ ಹಿನ್ನೆಲೆಯಲ್ಲಿ ಬ್ಯಾಂಕುಗಳು ಸಾಲ ನೀಡುವಾಗ ಹೆಚ್ಚು ಎಚ್ಚರಿಕೆ ವಹಿಸುತ್ತವೆ. ಸಾಲ ಬೇ ಬಾಕಿ ಪತ್ರಗಳನ್ನು (ನೊಡ್ಯೂ ಸರ್ಟಿಫಿಕೆಟ್) ಶಾಖಾ ವ್ಯವಸ್ಥಾಪಕರು

ಸಾಲ ಪ್ರಸ್ತಾವನೆಗಳನ್ನು ನಿರ್ಲಕ್ಷಿಸುವ ತಂತ್ರವಾಗಿಯೂ ಬಳಸಲಾಗುತ್ತದೆ. ಈ ಪ್ರಮಾಣ ಪತ್ರದಿಂದ ಸಾಲ ಪಡೆಯುವ ಪ್ರಕ್ರಿಯೆ ಸಹಜವಾಗಿಯೂ ವಿಳಂಬವಾಗುತ್ತದೆ. ಈ ಸಮಸ್ಯೆಯನ್ನು ಜಿಲ್ಲಾ ಸಮಾಲೋಚನ ಸಭೆಗಳಲ್ಲಿ ಪರಿಹರಿಸಿಕೊಳ್ಳಬಹುದು. ಸಾಲ ನೀಡುವ ಅಥವಾ ನೀಡದಿರುವ ಅಂತಿಮ ನಿರ್ಣಯ ಶಾಖಾ ವ್ಯವಸ್ಥಾಪಕರ ಕೈಯಲ್ಲಿ ಇರುತ್ತದೆ. ಸಾಲ ಪ್ರಸ್ತಾವನೆಗಳನ್ನು ಕಡ್ಡಾಯವಾಗಿ ಪರಿಗಣಿಸಬೇಕು ಎಂಬ ನಿಯಮ ಇಲ್ಲದಿರುವುದರಿಂದ ಸಾಲ ನೀಡುವ ನಿರ್ಣಯ ವ್ಯವಸ್ಥಾಪಕರಿಗೆ ಬಿಟ್ಟಿರುತ್ತದೆ. ಸರ್ಕಾರಿ ಯೋಜನೆಯಡಿ ಸಾಲ ನೀಡುವುದಾದರೆ ಬ್ಯಾಂಕುಗಳ ಸಾಲ ನೀಡಿಕೆ ಸಾಧನೆಯನ್ನು ಪರಿಶೀಲಿಸುವ ವ್ಯವಸ್ಥೆ ಇರುವುದರಿಂದ ಸರ್ಕಾರಿ ಯೋಜನೆಯಡಿ ಬಂದ ಸಾಲ ಅರ್ಜಿಗಳನ್ನು ಪ್ರಸ್ತಾವನೆಗಳ ಪ್ರಗತಿ ಉತ್ತಮ. ಶಾಖಾ ವ್ಯವಸ್ಥಾಪಕರ ಇಚ್ಛೆಗನುಗುಣವಾಗಿ ಸಾಲ ನೀಡುವ ಪದ್ಧತಿಯಿಂದ ಸರ್ಕಾರ ಮತ್ತು ಆರ್.ಬಿ.ಐ ನ ಎಲ್ಲಾ ಸಾಲ ನಿಯಮಗಳು ಅನುಷ್ಠಾನಗೊಳ್ಳುತ್ತವೆ ಎಂದು ಹೇಳಲು ಸಾಧ್ಯವಿಲ್ಲ. ಆರ್.ಬಿ.ಐ ಜಾರಿಗೆ ತಂದಿರುವ ನಿರ್ಧಿಷ್ಟ ಕ್ಷೇತ್ರದಲ್ಲಿ (ಸರ್ವಿಸ್ ಏರಿಯಾ ಅಪ್ರೋಚ್) ನಿರ್ಧಿಷ್ಟ ಬ್ಯಾಂಕುಗಳು ಕಾರ್ಯ ನಿರ್ವಹಿಸುವ ವಿಧಾನದಿಂದ ಸಾಲ ಪಡೆಯುವವರ ಮಾಹಿತಿಯನ್ನು ಬ್ಯಾಂಕುಗಳೇ ಬೇರೆ ಶಾಖೆಗಳಿಂದ ಉಚಿತವಾಗಿ ಪಡೆಯುವ ವಿಧಾನ ಅಳವಡಿಸಿಕೊಳ್ಳಬಹುದು. ಆರ್.ಬಿ.ಐ ವಾಣಿಜ್ಯ ಬ್ಯಾಂಕುಗಳ ಖಾತೆಗಳ ವ್ಯವಸ್ಥಾಪಕರಿಗೆ ಸಾಲ ಪ್ರಸ್ತಾವನೆಗಳನ್ನು ಪರಿಶೀಲಿಸಿ ತಮ್ಮ ಮಟ್ಟದಲ್ಲಿ ನಿರ್ಣಯ ಕೈಗೊಳ್ಳುವ  ಅಧಿಕಾರ ನೀಡುವಂತೆ ಈ ಹಿಂದೆ ಪ್ರತಿಪಾದಿಸಿದ್ದೆ. ಇದರಿಂದ ಸಣ್ಣ ಪ್ರಮಾಣದ ಸಾಲ ಪ್ರಸ್ತಾವನೆಗಳನ್ನು ಮೇಲಿನ ಅಧಿಕಾರಿಗಳಿಗೆ ಕಳುಹಿಸದೆ ತಮ್ಮ ಮಟ್ಟದಲ್ಲಿ ಪರಿಗಣಿಸಿ ಸಾಲ ಮಂಜೂರು ಮಾಡಲು ಅನುಕೂಲವಾಗುತ್ತದೆ. ಶಾಖೆಗಳ ಆಡಳಿತಾತ್ಮಕ ವ್ಯವಸ್ಥೆ ಮತ್ತು ವ್ಯವಸ್ಥಾಪಕರ ವ್ಯವಸ್ಥಪನಾ ಕೌಶಲ್ಯ, ಸಂಸ್ಕೃತಿ ಮತ್ತು ಮನೋಭಾಗಗಳ ಆಧಾರದ ಮೇಲೆ ವಾಣಿಜ್ಯ ಬ್ಯಾಂಕುಗಳು ಸಾರ್ವಜನಿಕ ವಲಯದ ಹಣಕಾಸು ಸಂಸ್ಥೆಗಳಾಗಿ ತಮ್ಮ ಶಾಖಾ ವ್ಯವಸ್ಥಾಪಕರಿಗೆ ಈ ತಮ್ಮ ಮಟ್ಟದಲ್ಲಿ ತೀರ್ಮಾನ ತಗೆದುಕೊಳ್ಳುವ ಅವಕಾಶ ನೀಡವೆ. ಆ ಮೂಲಕ ನಿರ್ಣಯ ಕೈಗೊಳ್ಳುವ ಪ್ರಕ್ರಿಯೆಯನ್ನು ವಿಕೇಂದ್ರೀಕರಣಗೊಳಿಸುವ ಪ್ರಯತ್ನಗಳು ನಡೆದಿವೆ. ೧೯೮೧ರಿಂದಲೂ ಈ ಅಧಿಕಾರ ನೀಡಲಾಗಿದೆ. ೧೯೮೬ರಲ್ಲಿ ಈ ಪ್ರಕ್ರಿಯೆಗೆ ತಿದ್ದುಪಡಿ ಮಾಡಲಾಯಿತು. ಈ ತಿದ್ದುಪಡಿ ಲಕ್ಷಣಗಳೆಂದರೆ "ಕೃಷಿ ಹಣಕಾಸು ವಿಷಯಕ್ಕೆ ಪ್ರತ್ಯೇಕ ಅಧಿಕಾರ ನೀಡುವುದು. ಬಹುತೇಕ ತೀರ್ಮಾನಗಳು ಶಾಖಾ ಮಟ್ಟದಲ್ಲಿ ಅಂತಿಮಗೊಳ್ಳಬೇಕು. ಹೆಚ್ಚೆಂದರೆ ವಲಯ ಮಟ್ಟದಲ್ಲಿ ಅಂತಿಮಗೊಳ್ಳಬೇಕು. ಶಾಖಾ ವ್ಯವಸ್ಥಾಪಕರು ತಮಗೆ ನೀಡಿರುವ ಸಾಲ ಮಂಜೂರಾತಿ ನಿರ್ಣಯದ ಅಧಿಕಾರವನ್ನು ನ್ಯಾಯ ಬದ್ದವಾಗಿ, ಎಚ್ಚರಿಕೆಯಿಂದ ವಿಶ್ವಾಸದಿಂದ ಜವಾಬ್ದಾರಿಯಿಂದ ನಿರ್ವಹಿಸಬೇಕು ಎಂದು ಬ್ಯಾಂಕುಗಳು ಬಯಸುತ್ತವೆ. ತಮ್ಮ ಕೇಂದ್ರ ಕಛೇರಿಗಳು ನೀಡುವ ನಿಬಂಧನೆಗಳನ್ನು ಅನುಸರಿಸಬೇಕಾಗುತ್ತದೆ. ಆದರೆ ಶಾಖಾ ವ್ಯವಸ್ಥಾಪಕರ ಈ ವಿಕೇಂದ್ರಿಕೃತ ನಿರ್ಧಾರ ತೆಗೆದುಕೊಳ್ಳುವ ಪ್ರಕ್ರಿಯೆ ಅಥವಾ ವಿಧಾನದಿಂದ ದುರ್ಬಲ ವರ್ಗಗಳಿಗೆ ಯಾವುದೇ ಪ್ರಯೋಜನವಿಲ್ಲ. ಕಾರಣ ವ್ಯವಸ್ಥಾಪಕರ ತಮ್ಮ ಸಾಲ ಮಂಜೂರಾತಿ ಅಧಿಕಾರದಿಂದ ಶ್ರೀಮಂತರಿಗೆ ಅನುಕೂಲವಾಗಿದೆ.

ಭದ್ರತೆ ನೀಡಲು ಸಾಧ್ಯವಾಗದ, ಈ ಬ್ಯಾಂಕುಗಳ ಸಾಲ ನಿಯಮಗಳನ್ನು ಪಾಲಿಸಲು ಸಾಧ್ಯವಾಗದ ವರ್ಗದವರಿಗೆ ಬ್ಯಾಂಕಿನ ವ್ಯವಸ್ಥಾಪಕರು ತಮ್ಮ ಅಧಿಕಾರ ಬಳಸಿ ಸಾಲ ಸೌಲಭ್ಯಗಳನ್ನ ನೀಡುವುದಿಲ್ಲ. ಈ ಹಿನ್ನೆಲಯಲ್ಲಿ ರಿಸ್ಕ್ ತೆಗೆದುಕೊಳ್ಳಲು ಸಂಘಟಿತ ವಲಯದ ಯಾವ ಬ್ಯಾಂಕಿನ ವ್ಯವಸ್ಥಾಪಕರು ಬಯಸುವುದಿಲ್ಲ. ಕಾರಣ ಭದ್ರತೆ ನೀಡಲು ಸಾಧ್ಯವಾಗದ ವರ್ಗಗಳಿಗೆ ಸಾಲ ನೀಡುವ ಪ್ರಯತ್ನಗಳನ್ನು ಮಾಡಿದರೆ ಬ್ಯಾಂಕಿನ ವ್ಯವಹಾರಗಳ ಮೇಲೆ ಇದು ಪರಿಣಾಮ ಬೀರಬಹುದು. ಸಾಲದ ಮೊತ್ತ ಮತ್ತು ಮಿತಿಗಳಿಗೆ ಅನುಗುಣವಾಗಿ ಹೆಚ್ಚಿನ ಅಧಿಕಾರ ಇರುವ ಅಧಿಕಾರಿಗಳಿಗೆ ಸಾಲ ಪ್ರಸ್ತಾವನೆಗಳನ್ನು ಕಳುಹಿಸಲಾಗುತ್ತದೆ. ಗ್ರಾಮೀಣ ಶಾಖೆಗಳ ವ್ಯವಸ್ಥಾಪಕರು ಬೆಳೆ ಸಾಲ ೨೦,೦೦೦ ಸಾವಿರ, ಕೃಷಿ ಚಿನ್ನದ ಮೇಲಿನ ಸಾಲ, ಹೊಸ ಟ್ರಾಕ್ಟರ್ ಖರೀದಿಸಲು ಸಾಲ, ನೀರಾವರಿ ಸಾಲ ೩೫,೦೦೦ ಹೀಗೆ ವ್ಯವಸ್ಥಾಪಕರು ತಮ್ಮ ತೀರ್ಮಾನ ತೆಗೆದುಕೊಳ್ಳುವ ಅಧಿಕಾರ ಬಳಸಿ ಸಾಲ ಒದಗಿಸಬಹುದು. ದೀರ್ಘಾವಧಿ ಕೃಷಿ ಅಭಿವೃದ್ಧಿ ಉದ್ದೇಶಗಳಿಗೆ ಸಲ್ಲಿಸುವ ಸಾಲ ಪ್ರಸ್ತಾವನೆಗಳನ್ನು ಹೊರತುಪಡಿಸಿ ಬಹುತೇಕ ಅಲ್ಪಾವಧಿ ಕೃಷಿ ಸಾಲ ಪ್ರಸ್ತಾವನೆಗಳನ್ನು ತಮ್ಮ ತಮ್ಮ ಶಾಖೆಗಳ ಮಟ್ಟದಲ್ಲೇ ವ್ಯವಸ್ಥಾಪಕರು ಅಂತಿಮಗೊಳಿಸಬಹುದು. ಆದರೆ ಈ ಹಿಂದೆ ತಿಳಿಸಿದಂತೆ ಈ ರೀತಿಯ ಅಧಿಕಾರ ಇದ್ದರೂ ಬಹುತೇಕ ವ್ಯವಸ್ಥಾಪಕರು ಆರ್ಥಿಕವಾಗಿ ಪ್ರಬಲವಾಗಿರುವ, ದೊಡ್ಡ ಹಿಡುವಳಿ ದಾರರು, ದೊಡ್ಡ ಮಟ್ಟದ ನೀರಾವರಿ ಮತ್ತು ಉತ್ಪನ್ನ ಚಟುವಟಿಕೆ ಕೈಗೊಳ್ಳುವ, ಸಾಲ ಮರುಪಾವತಿ ಮಾಡಲು ಸಮರ್ಥರಾಗಿರುವವರಿಗೆ ಮಾತ್ರ ಸಾಲ ನೀಡುತ್ತಾರೆ. ಸಮರ್ಥರಲ್ಲದವರು ಉದಾ: ಸಣ್ಣ, ಅತೀಸಣ್ಣ ಮತ್ತು ಕೃಷಿ ಕಾರ್ಮಿಕರು ಮತ್ತು ಭೂರಹಿತರಿಗೆ ಸಾಲ ನೀಡುವುದು ರಿಸ್ಕ್ ಅಥವಾ ಸಮಸ್ಯೆ ಎಂದು ಭಾವಿಸಿ ಇವರಿಗೆ ಸಾಲ ನೀಡುವುದಿಲ್ಲ. ಇಂತಹ ಧೋರಣೆಯನ್ನು ಪರಿಶೀಲಿಸಿ ಕ್ರಮ ಕೈಗೊಳ್ಳುವ ವ್ಯವಸ್ಥೆ ಅಪೆಕ್ಸ್ ಮಟ್ಟದಲ್ಲಿ ಇಲ್ಲದಿರುವುದರಿಂದ ಆಸ್ತಿ ಇಲ್ಲದವರು, ತುಂಡು ಭೂಮಿ ಇದ್ದು ನೀರಾವರಿ ಸೌಲಭ್ಯಗಳಿಲ್ಲದವರು ಮಳೆ ಆಶ್ರಿತರು ರೈತರು, ಈ ವರ್ಗಗಳು ದಶಕಗಳಿಂದ ಸಂಘಟಿತ ಹಣಕಾಸು ವಲಯಗಳ ಸಾಲ ಸೌಲಭ್ಯಗಳಿಂದ ಹೊರಗುಳಿದಂತೆ ಮುಂದೆಯೂ ಹೊರಗುಳಿಯುತ್ತಾರೆ. ಹೀಗಾಗಿ ಆರ್.ಬಿ.ಐ ನ ಪ್ರಸ್ತುತ ಶಾಖಾ ವ್ಯವಸ್ಥಾಪಕರ ತೀರ್ಮಾನ ತೆಗೆದುಕೊಳ್ಳುವ ಅಧಿಕಾರ ವಿಕೇಂದ್ರಿಕರಣದಿಂದ ಮತ್ತು ಸಾಲ ನಿಯಮಗಳ ಸರಳೀಕರಣ ನೀತಿಗಳಿಂದ ಯಾವುದೇ ಪ್ರಯೋಜನವಾಗುತ್ತಿಲ್ಲ. ಇವು ಮೂಲಭೂತವಾಗಿ ಅನುಷ್ಠಾನಗೊಳ್ಳುವುದೇ ಇಲ್ಲ. ಇದರಿಂದ ಈ ವರ್ಗಗಳು ತಮ್ಮ ಸಾಲ ಸೌಲಭ್ಯಗಳ ಅಗತ್ಯಳನ್ನು ಪೂರೈಸಿಕೊಳ್ಳಲು ಅಸಂಘಟಿತ ಹಣಕಾಸು ಮಾರುಕಟ್ಟೆ ಮೇಲೆ ಅವಲಂಭಿತರಾಗುತ್ತಾರೆ. ಅಸಂಘಟಿತ ಖಾಸಗೀ ಸಾಲ ಮೂಗಳು ತಮ್ಮ ಸರಳ ನಿಯಮಗಳಿಂದ ಕೂಡಲೇ ಸಾಲ ಪೂರೈಸುತ್ತಾರೆ. ಹೀಗೆ ರಿಸ್ಕ್ ತೆಗೆದುಕೊಳ್ಳುವ ಖಾಸಗೀ ಸಾಲ ಮಾರುಕಟ್ಟೆಯ ಮನೋಭಾವ ಮತ್ತು ರಿಸ್ಕ್ ತೆಗೆದುಕೊಳ್ಳದ ಸಂಘಟಿತ ಹಣಕಾಸು ಮೂಲಗಳ ಮನೋಭಾವ ಗ್ರಾಮೀಣ ಸಾಲ ವ್ಯವಸ್ಥೆಯ ಮುಖ್ಯ ಲಕ್ಷಣ ಅಥವಾ ವ್ಯತ್ಯಾಸ ಎನ್ನಬಹುದು. ಈ ಲಕ್ಷಣದಿಂದಾಗಿ ಸಂಘಟಿತ ಮೂಲದ ಸಾಲ ನಿಯಮದ ಸರಳೀಕರಣದ ಮತ್ತು ಈ ಮೂಲದ ಸಾಂಸ್ಥಿಕ ಬೆಳವಣಿಗೆಯ ನಡುವೆಯೂ ಖಾಸಗೀ ಸಾಲ

ಮಾರುಕಟ್ಟೆಗಳು ಗ್ರಾಮೀಣ ಜನರ ಹಣಕಾಸು ಅಗತ್ಯಗಳು, ಕೃಷಿ ಉತ್ಪಾದನೆ ಮತ್ತು ಇತರೇ ಸಾಮಾಜಿಕ ಉದ್ದೇಶಗಳಿಗೆ ಸಾಲ ಸೌಲಭ್ಯಗಳನ್ನು ನಿರಂತರವಾಗಿ ಪೂರೈಸುತ್ತಾ ಗ್ರಾಮೀಣ ಪ್ರದೇಶಗಳಲ್ಲಿ ಪ್ರಬಲವಾಗಿ ಉಳಿದಿವೆ. ಸಂಪನ್ಮೂಲ ಸಮಸ್ಯೆ ಇದ್ದಾಗ ಹಾಗೂ ಸಾಲ ವಿಸ್ತರಣೆ ಪ್ರಕ್ರಿಯೆಯನ್ನು ನಿಯಂತ್ರಿಸಲು ಉದ್ದೇಶಿಸಿದಾಗ ಆರ್.ಬಿ.ಐ ಅಥವಾ ಮೇಲ್ಮಟ್ಟದ ಅಧಿಕಾರಿಗಳು ಶಾಖಾ ವ್ಯವಸ್ಥಾಪಕರ ತೀರ್ಮಾನ ಕೈಗೊಳ್ಳುವ ಅಧಿಕಾರವನ್ನು ಮೊಟಕುಗೊಳಿಸುತ್ತಾರೆ. ಹೀಗೆ ವಿಕೇಂದ್ರೀಕೃತ ಸಾಲ ನಿರ್ಣಯ ಪ್ರಕ್ರಿಯೆಯಲ್ಲೇ ಕೇಂದ್ರೀಕೃತ ಸ್ಥಿತಿಯನ್ನು ಕಾಣಬಹುದು. ಸಂಪನ್ಮೂಲಗಳ ಸಮಸ್ಯೆ ಇದ್ದಾಗ ಶಾಖಾ ವ್ಯವಸ್ಥಾಪಕರು ತಮಗೆ ಸೀಮಿತವಾಗಿ ಹಂಚಿಕೆಯಾದ ಸಾಲವನ್ನು ಮಾತ್ರ ನೀಡಲು ತೀರ್ಮಾನ ತೆಗೆದುಕೊಳ್ಳಬಹುದು. ಇಂತಹ ಸಂದರ್ಭದಲ್ಲಿ ವ್ಯವಸ್ಥಾಕರು ಸಂಪನ್ಮೂಲಗಳ ಕೊರತೆಯಿಂದ ಸಾಲ ನೀಡಲು ಸಾಧ್ಯವಾಗುವುದಿಲ್ಲ ಎಂದು ಸಾಲ ಪಡೆಯಲು ಬಂದವರ ಸಾಲ ಅರ್ಜಿಗಳನ್ನು ಹಿಂದಿರುಗಿಸಲಾಗುತ್ತದೆ. ಗ್ರಾಮೀಣ ಸಾಲಗಳನ್ನು ವಿಸ್ತರಿಸದಿರಲು ಇರುವ ಪ್ರಮುಖ ಕಾರಣಗಳಲ್ಲಿ ಬ್ಯಾಂಕುಗಳ ಒಟ್ಟು ಕಾರ್ಯಗಳಲ್ಲಿ ಗ್ರಾಮೀಣ ಸಾಲ ಒದು ಸಣ್ಣ ಭಾಗವಾಗಿದೆ. ಬ್ಯಾಂಕುಗಳಿಗೆ ಸಿಬ್ಬಂದಿ ಕೊರತೆ ಇರುತ್ತದೆ. ದುರ್ಬಲ ವರ್ಗಗಳಿಗೆ ಸಣ್ಣ ಸಾಲಗಳನ್ನು ವಿತರಿಸುವುದರಿಂದ ಬ್ಯಾಂಕುಗಳಿಗೆ ತುಂಬಾ ಕಡಿಮೆ ಆದಾಯ ಬಂದಿರುತ್ತದೆ. ಈ ಕಾರಣಗಳಿಂದ ವ್ಯವಸ್ಥಾಪಕರು ತಮ್ಮ ಅಧಿಕಾರ ಬಳಸಿ ಸಣ್ಣ ಸಾಲಗಳನ್ನ ನೀಡಲು ಇಚ್ಚಿಸುವುದಿಲ್ಲ. ಸಾಲಗಳ ವಿಸ್ತರಣೆ ಸಹ ಮಾಡುವುದಿಲ್ಲ.

ವಾಣಿಜ್ಯ ಬ್ಯಾಂಕುಗಳು ಕರ್ನಾಟಕ ಮತ್ತು ಅಖಿಲಭಾರತ ಮಟ್ಟದಲ್ಲಿ ಒಂದೇ ರೀತಿಯಲ್ಲಿ ಶಾಖೆಗಳನ್ನು ವಿಸ್ತರಿಸಿದವು. ಹೊಸ ಶಾಖೆಗಳನ್ನು ಗ್ರಾಮೀಣ ಪ್ರದೇಶ ನಗರ ಮತ್ತು ಪಟ್ಟಣ ಇತರೇ ಪ್ರದೇಶಗಳಲ್ಲಿ ತೆರೆದವು. ಇದರಿಂದ ವಾಣಿಜ್ಯ ಬ್ಯಾಂಕುಗಳು ತಮ್ಮ ಕಾರ್ಯಜಾಲದಿಂದ ಗ್ರಾಮೀಣ ಪ್ರದೇಶಗಳಲ್ಲಿ ಠೇವಣಿಗಳ ಮೂಲಕ ಸಂಪನ್ಮೂಲ ಸಂಗ್ರಹಿಸಿದವು ಹಾಗೂ ಸಾಲ ಪೂರೈಕೆ ಮಾಡುವ ಮೂಲಕ ಗ್ರಾಮೀಣ ಆರ್ಥಿಕತೆ ಸುಧಾರಣೆಗೆ ಪ್ರಯತ್ನಿಸಿದವು. ಕೃಷಿ ಕ್ಷೇತ್ರದ ಉತ್ಪಾದನಾ ಮತ್ತು ಹೂಡಿಕೆ ಉದೇಶಗಳಿಗೆ ವಾಣಿಜ್ಯ ಬ್ಯಾಂಕುಗಳು ಪೂರೈಸುವ ಸಾಲದ ಪ್ರಮಾಣ ಸಹ ಹೆಚ್ಚಿತು. ವಾಣಿಜ್ಯ ಬ್ಯಾಂಕುಗಳು ಅಲ್ಪಾವಧಿ ಕೃಷಿ ಉದ್ದೇಶಗಳಿಗೆ ಹಾಗೂ ಹೂಡಿಕೆ ಉದ್ದೇಶಗಳಿಗೆ ಸಾಲ ಪೂರೈಸುತ್ತವೆ. ಕರ್ನಾಟಕದಲ್ಲೂ ಇ ಬ್ಯಾಂಕುಗಳು ಪೂರೈಸುವ ಕೃಷಿ ಸಾಲದ ಪ್ರಮಾಣ ಪ್ರತಿ ವರ್ಷ ಹೆಚ್ಚಿತು. ಆದರೆ ವಾಣಿಜ್ಯ ಬ್ಯಾಂಕುಗಳಿಂದ ಹೆಚ್ಚಿನ ಪ್ರಮಾಣದಲ್ಲಿ ಸಾಲ ಪಡೆದವರು ದೊಡ್ಡ ರೈತರು. ಉತ್ತಮ ಆರ್ಥಿಕ ಹಿನ್ನೆಲೆವುಳ್ಳವರಾಗಿದ್ದರು. ಸಂಘಟಿತ ಹಣಕಾಸು ವಲಯದ ವಿಸ್ತರಣೆಯ ಅನುಕೂಲ ಅಥವಾ ಲಾಭ ಕರ್ನಾಟಕ ಹಾಗೂ ಅಖಿಲ ಭಾರತ ಮಟ್ಟದಲ್ಲಿ ಎಲ್ಲಾ ವರ್ಗದ ರೈತರಿಗೆ ಲಭಿಸಲಿಲ್ಲ. ಗ್ರಾಮೀಣ ಹಣದ ಮಾರುಕಟ್ಟೆಯಲ್ಲಿ ಅಲ್ಪಾವಧಿ ಸಾಲಗಳು ಹೆಚ್ಚಾಗಿ ಅಸಂಘಟಿತ ಸಾಲ ಮೂಲದಿಂದ ಬಂದಿತು. (ಚಂದ್ರ:೧೯೮೯:೧೮೧). ಸಾಲ ಸಂಸ್ಥೆಗಳು ನೀಡುವ ಅವಧಿ ಸಾಲಗಳಿಗೆ ಸಂಪನ್ಮೂಲವು ಕೃಷಿ ಮರು ಹಣಕಾಸು ಮತ್ತು ಅಭಿವೃದ್ಧಿ ನಿಗಮದಿಂದ ಬರುತ್ತಿತ್ತು (ಎ.ಆರ್.ಡಿ.ಸಿ). ಇದೇ ಸಂಸ್ಥೆ ಇಂದು ನಬಾರ್ಡ್-ರಾಷ್ಟ್ರೀಯ

ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಾಗಿ ಬದಲಾಗಿದೆ. ನಬಾರ್ಡ್ ಗ್ರಾಮೀಣ ಸಾಲ ವ್ಯವಸ್ಥೆಗೆ ಸಾಲ ಪೂರೈಸುವ ಮತ್ತು ಅಭಿವೃದ್ಧಿ ಆಧಾರಿತ ಸಂಸ್ಥೆಗಳಿಗೆ ಬೇಕಾದ ನೆರವನ್ನು ಒದಗಿಸುವ ಜವಾಬ್ದಾರಿಯೊಂದಿಗೆ ಸ್ಥಾಪನೆಗೊಂಡಿತು. ಇದು ವಾಣಿಜ್ಯ ಬ್ಯಾಂಕುಗಳ ಯೋಜನಾಧಾರಿತ ಸಾಲ ಒದಗಿಸುವಿಕೆ ಹಾಗೂ ಸಹಕಾರಿ ಸಾಲ ಸಂಸ್ಥೆಯ ಬೆಳವಣಿಗೆ ಮತ್ತು ಸ್ಥಿರತೆ ಸಾಧಿಸುವ ಹೊಣೆಗಾರಿಕೆ ಹೊತ್ತಿದೆ. ಆದರೆ ನಬಾರ್ಡ್‌ನ ಬೆಳವಣಿಗೆಯೊಂದಿಗೆ ವಾಣಿಜ್ಯ ಬ್ಯಾಂಕುಗಳಿಗೆ ಸಿಗುವ ನೆರವು ಹೆಚ್ಚಿತು. ಸಹಕಾರ ಸಂಸ್ಥೆಗಳಿಗೆ ದೊರೆಯುವ ನೆರವು ಕುಸಿಯಿತು. ಇಂದಿಗೂ ಗ್ರಾಮೀಣ ಹಣಕಾಸು ಮಾರುಕಟ್ಟೆಯಲ್ಲಿ ಸಾರ್ವಜನಿಕ ಬ್ಯಾಂಕುಗಳ ಸಾಲ ವಿತರಣೆ ಸಾಧನೆಯಲ್ಲಿ ಅಥವಾ ಶೇಕಡಾವಾರು ಪ್ರಗತಿಯಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಪಾಲು ಕಡಿಮೆ ಇದ್ದು ಸಹಕಾರ ಸಂಸ್ಥೆಗಳ ಪಾಲಿಗಿಂತ ವಾಣಿಜ್ಯ ಬ್ಯಾಂಕುಗಳ ಪಾಲು ಹೆಚ್ಚಿದೆ. ಅಂದರೆ ವಾಣಿಜ್ಯ ಬ್ಯಾಂಕುಗಳಿಂದ ಹೆಚ್ಚು ಪ್ರಯೋಜನ ಪಡೆಯುವವರು ದೊಡ್ಡ ರೈತರು ಆರ್ಥಿಕವಾಗಿ ಸಬಲರೇ ಎಂದಾಯ್ತು. ಸಣ್ಣ, ಅತೀ ಸಣ್ಣ ರೈತರು ಸಾಲ ಮನ್ನಾ ಅನುಕೂಲ ಪಡೆಯಲು ಮಾತ್ರ ಸಹಕಾರ ಸಂಸ್ಥೆಗಳಿಂದ ಸಾಲ ಸೌಲಭ್ಯ ಪಡೆದು, ಕೃಷಿ ಚಟುವಟಿಕೆಗಳು ಮತ್ತು ಇತರೆ ಉತ್ಪಾದಕ ಉದ್ದೇಶಗಳಿಗೆ ಇಂದಿಗೂ ಅಸಂಘಟಿತ ಮಾರುಕಟ್ಟೆಯನ್ನೇ ಅವಲಂಭಿಸಿದೆ. ಅಸಂಘಟಿತ ಮೂಲದಿಂದ ಸಣ್ಣ, ಅತೀ ಸಣ್ಣ ಮತ್ತು ಕೃಷಿ ಕಾರ್ಮಿಕ, ಭೂರಹಿತ ದುಡಿಮೆಗಾರ ವರ್ಗಗಳು ಸಾಲ ಪಡೆದಿವೆ. ತಮ್ಮ ಸಾಲ ಅಗತ್ಯಗಳನ್ನು ಅಸಂಘಟಿತ ಖಾಸಗೀ ಮೂದಿಂದ ಪೂರೈಸಿಕೊಳ್ಳುತ್ತಾರೆ. ಇದರಿಂದ ಅನೇಕ ಸಮಸ್ಯೆಗಳಿಗೂ ಗುರಿಯಾಗುತ್ತಿದ್ದಾರೆ. ಜೀವನ ಭದ್ರತೆಯಾದ ಭೂಮಿ ಕಳೆದುಕೊಳ್ಳುವ ಭಯ, ಆತ್ಮಹತ್ಯೆಗೆ ಮನುಸ್ಸು ಮಾಡುವುದು ಮತ್ತು ಹತಾಶೇಯಿಂದ ಸಾಮಾಜಿಕ ಆರ್ಥಿಕ ಸ್ಥಾನಮಾನ ಕಳೆದುಕೊಂಡು ಸಮಾಜದ ಮುಖ್ಯ ವಾಹಿನಿಯಿಂದ ಹೊರಗುಳಿಯುವಂತಾಗಿದೆ.

ಅಧ್ಯಯನ ಕ್ಷೇತ್ರವಾದ ರಾಯಚೂರು ಜಿಲ್ಲೆಯಲ್ಲಿ ಹಣಕಾಸು ಸಂಸ್ಥೆಗಳು ಅವುಗಳು ಪೂರೈಸಿದ ಸಾಲಗಳ ಬಗ್ಗೆ ಮಾಹಿತಿ ಲಭಿಸಲಿಲ್ಲ. ಸಹಕಾರ ಸಾಲ ಸಂಸ್ಥೆಗಳು ನೀಡಿದ ಮಾಹಿತಿ, ಗ್ರಾಮದಲ್ಲಿ ನಡೆಸಿದ ಸಮೀಕ್ಷೆ, ರೈತರು ಮತ್ತು ಅಧಿಕಾರಿಗಳೊಂದಿಗೆ ನಡೆಸಿದ ಸಂದರ್ಶನದ ವಿವರಗಳ ವಿಶ್ಲೇಷಣೆಯನ್ನು ಇಲ್ಲಿ ನೀಡಲಾಗಿದೆ. ಮಾಹಿತಿ ವಿಶ್ಲೇಷಣೆಗೆ ಗುಣಾತ್ಮಕ ವಿಧಾನವನ್ನು ಅನುಸರಿಸಲಾಗಿದೆ. ಈ ಕ್ಷೇತ್ರದಲ್ಲಿ ಸಂಗ್ರಹಿಸಿದ ಮಾಹಿತಿ ಮತ್ತು ಅದರ ವಿಶ್ಲೇಷಣೆ ಈ ಪ್ರದೇಶಕ್ಕೆ ಸಂಬಂಧಿಸಿದ್ದಾಗಿದೆ. ಪರಿಣಾತ್ಮಕ ವಿಧಾನದ ಮೂಲಕ ಎಲ್ಲಾ ಪ್ರದೇಶಗಳಲ್ಲೂ ಇದೇ ಚಿತ್ರಣ-ಪರಿಸ್ಥಿತಿ ಅಥವಾ ಸಮಸ್ಯೆಗಳಿವೆ ಎಂದು ಸಾರ್ವತ್ರಿಕವಾಗಿ ಹೇಳುವ ಪ್ರಯತ್ನ ಈ ವಿಶ್ಲೇಷಣೆಯಲ್ಲಿ ಮಾಡಿಲ್ಲ. ಆದರೂ ಈ ಮಾಹಿತಿಯ ಆಧಾರದ ಮೇಲೆ ನೀತಿ ಮಟ್ಟದ ವಿಷಯಗಳನ್ನ ವಿಶ್ಲೇಷಣೆ ಮಾಡುವ ಪ್ರಯತ್ನ ಮಾಡಲಾಗಿದೆ. ಸಮಗ್ರ ಮಟ್ಟದಲ್ಲಿರೂಪಿತವಾಗುವ ನೀತಿಗಳ ಸಮಸ್ಯೆಗಳನ್ನ ಗುರ್ತಿಸಿ ವಿಶ್ಲೇಷಿಸಲು ಯತ್ನಿಸಲಾಗಿದೆ. ಇದಕ್ಕೆ ಸೂಕ್ತ ಸಲಹೆ – ಶಿಪಾರಸ್ಸುಗಳನ್ನು ಕಂಡುಕೊಂಡು ಪರಿಹಾರ ಹುಡುಕುವ ಯತ್ನದೊಂದಗಿ ಸಮಾಜದ ಎಲ್ಲಾ ವರ್ಗಗಳಿಗೂ ತಲುಪಬಹುದಾದ ಸಂಘಟಿತ ಹಣಕಾಸು ವಲಯದ ಸಾಲ ನೀತಿಯನ್ನು ಚರ್ಚಿಸಲಾಗಿದೆ. ಸರ್ಕಾರ ಮತ್ತು

ಆರ್.ಬಿ.ಐ ನೀತಿಗಳ ಪ್ರಯತ್ನಗಳ ಮೂಲಕ ಕೃಷಿ ಸಾಲ ವ್ಯವಸ್ಥೆ ಸಾಂಸ್ಥಿಕರಣಗೊಂಡಿದೆ. ಸಾಲದ ಉದ್ದೇಶ ಮತ್ತು ಅವಧಿಗೆ ಸಂಬಂಧಿಸಿದ ನೀತಿ ನಿಯಮಗಳನ್ನುರೂಪಿಸಲಾಗಿದೆ. ಸರ್ಕಾರ ಮತ್ತು ಆರ್.ಬಿ.ಐ ಗಳ ಸಾಲ ಸೌಲಭ್ಯದ ಕಾರ್ಯಕ್ರಮಗಳು ಮತ್ತು ಯೋಜನೆಗಳನ್ನು ಹಾಗೂ ಅವುಗಳಿಗೆ ಸಂಬಂಧಿಸಿದ ಸಾಲ ನೀತಿಗಳನ್ನು ಅನುಷ್ಠಾನಗೊಳಿಸುವ ಹಣಕಾಸು ಸಂಸ್ಥೆಗಳು ಮತ್ತು ಬ್ಯಾಂಕಿಂಗ್ ವ್ಯವಸ್ಥೆ ಅಸ್ಥಿತ್ವದಲ್ಲಿದೆ. ಇಂತಹ ಸಂಘಟಿತ ಸಾಲ ವ್ಯವಸ್ಥೆಯ ಮೂಲಕ ಸಾಕಷ್ಟು ಪ್ರಮಾಣದ ಹಣಕಾಸು ಮತ್ತು ಸಂಪನ್ಮೂಲವನ್ನು ಗ್ರಾಮೀಣ ಪ್ರದೇಶದಲ್ಲಿ ಪೂರೈಸಲಾಗುತ್ತದೆ. ಹೀಗಿದ್ದರೂ ಕ್ಷೇತ್ರಕಾರ್ಯದ ಮಾಹಿತಿ ವಿಶ್ಲೇಷಣೆ ಪ್ರಕಾರ ಕೃಷಿ ಉತ್ಪಾದನೆ ಹಾಗೂ ಇತರೆ ಆದಾಯ ವೃದ್ದಿ ಚಟುವಟಿಕೆಗಳಿಗೆ ಬೇಕಾದ ಸಾಲದ ಅಗತ್ಯಗಳಿಗೆ ಗ್ರಾಮೀಣ ಜನತೆ ಅಸಂಘಟಿತ ಸಾಲ ಮೂಲವನ್ನು ಅವಲಂಬಿಸುವಂತಾಗಿದೆ. ಈ ಮೂಲದ ಬಗ್ಗೆ ಗ್ರಾಮೀಣ ರೈತರು ಮುಖ್ಯವಾಗಿ ಸಣ್ಣ ಮತ್ತು ಅತೀ ಸಣ್ಣ ರೈತರು ಹೆಚ್ಚು ಒಲವನ್ನು ಹೊಂದಿದ್ದಾರೆ. ಗ್ರಾಮೀಣ ಭಾಗದಲ್ಲಿ ಇಂದಿಗೂ ಲೇವಾದೇವಿ ಮೂಲಗಳು ಹೆಚ್ಚು ಮಹತ್ವ ಪದೆದಿವೆ ಎಂಬುದು ಇದರಿಂದ ತಿಳಿದು ಬರುತ್ತದೆ. ಸಂಘಟಿತ ಹಣಕಾಸು ವಲಯದ ಸಾಲನೀತಿಗಳು ಹಾಗೂ ಆಡಳಿತಾತ್ಮಕ ನಿಯಮಗಳೇ ಗ್ರಾಮೀಣ ಜನರು ಅಸಂಘಟಿತ ಸಾಲ ಮೂಲವನ್ನ ಅವಲಂಬಿಸುವಂತೆ ಮಾಡಿದೆ. ಸಾಮಾಜಿಕ ನ್ಯಾಯ ಬಡತನ ನಿರ್ಮೂಲನೆ ಹಾಗೂ ಗ್ರಾಮೀಣ ಅಭಿವೃದ್ಧಿಯನ್ನು ಪ್ರೇರೇಪಿಸುವಂತಹ ಮೂಲ ಉದ್ದೇಶಗಳನ್ನು ಸಂಘಟಿತ ಸಾಲ ವ್ಯವಸ್ಥೆ ಹೊಂದಿದ್ದರು ಈ ವ್ಯವಸ್ಥೆಯ ಸಾಲ ಸೌಲಭ್ಯ ಕಾರ್ಯಕ್ರಮಗಳ ಪ್ರಯೋಜನ ಪಡೆಯುವವರು ಉಳ್ಳವರು ಮಾತ್ರ ಎಂಬುದು ಈ ಅಧ್ಯಯನದಿಂದ ತಿಳಿದು ಬಂದಿದೆ. ಪ್ರಸ್ತುತ ಅದ್ಯಯನದ ವಿಶ್ಲೇಷಣೆ ಪ್ರಕಾರ ಪ್ರಬಲ ಜಾತಿಗೆ ಸೇರಿದ ದೊಡ್ಡ ಭೂ ಹಿಡುವಳಿದಾರರು, ಸಾಮಾಜಿಕ ಆರ್ಥಿಕವಾಗಿ ಪ್ರಾಬಲ್ಯ ಹೊಂದಿರುವ ರೈತರು ಅಥವಾ ಜನರು ಸಂಘಟಿತ ಸಾಲ ಮೂಲದಿಂದ ಹೆಚ್ಚಿನ ಅನೂಕುಲಗಳನ್ನು ಪಡೆದಿದ್ದಾರೆ. ಸರ್ಕಾರ ಸ್ವಾತಂತ್ರ್ಯ ನಂತರದಲ್ಲಿ ಸಂಘಟಿತ ಸಾಲ ವ್ಯವಸ್ಥೆಯಲ್ಲಿ ಸುಧಾರಣೆ ತರಲು ನಿರಂತರವಾಗಿ ಪ್ರಯತ್ನಿಸಿತು. ರಿಯಾಯಿತಿ ಬಡ್ಡಿ ದರದಲ್ಲಿ ಕೃಷಿ ಕ್ಷೇತ್ರಕ್ಕೆ ಪೂರೈಕೆಯಗುತ್ತಿದ್ದ ಸಾಲದ ಪ್ರಮಾಣವನ್ನು ಗಣನೀಯವಾಗಿ ಹೆಚ್ಚಿಸಿತು. ಅದರೂ ಅಸಂಘಟಿತ ಸಾಲ ಮೂಲದ ಮಹತ್ವ ಮತ್ತು ಪ್ರಭಾವವನ್ನು ಸಂಪೂರ್ಣವಾಗಿ ಕಡಿಮೆ ಮಾಡಲು ಸಾದ್ಯವಾಗಲಿಲ್ಲ. ಇದರಿಂದ ಅಸಂಘಟಿತ ಸಾಲ ಮಾರುಕಟ್ಟೆ ಗ್ರಾಮೀಣ ಪ್ರದೇಶಗಳಲ್ಲಿ ಸಣ್ಣ ಸಾಗುವಳಿದಾರರ ಸಾಲ ಸೌಲಭ್ಯಗಳನ್ನ ಪೂರೈಸುವಲ್ಲಿ ಕ್ರಿಯಾಶೀಲವಾಗಿದೆ. ಮಾಹಿತಿ ವಿಶ್ಲೇಷಣೆಯಿಂದ ತಿಳಿದುಬಂದಂತೆ ಈ ಮೂಲದಿಂದ ಸಾಲ ಪಡೆದ ರೈತರು ಬದುಕಿನ ಆಧಾರವಾಗಿದ್ದ ಭೂಮಿಯನ್ನ ಕಳೆದುಕೊಂಡು ಜಿಗುಪ್ಸೆಗೆ ಒಳಗಾಗುತ್ತಾರೆ. ಈ ಪರಿಸ್ಥಿತಿ ಭೂಮಿ ಕಳೆದುಕೊಂಡ ಸಣ್ಣ ಹಿಡುವಳಿದಾರರನ್ನು ಆತ್ಮಹತ್ಯೆಗೆ ಪ್ರೇರೇಪಿಸುತ್ತದೆ. ರೈತರ ಆತ್ಮಹತ್ಯೆ ಯಾವುದೇ ನಾಗರೀಕ ಸಮಾಜದ ಅಸಹನೀಯ ಸಂಗತಿ. ಆದರೆ ಸರ್ಕಾರ ಅಥವಾ ಪ್ರಭುತ್ವ ಈ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸುವ ಅನಿವಾರ್ಯತೆ ಇದೆ. (ಹಣಕಾಸು ಹರಿಯುವಿಕೆ ಪಟ್ಟಿ ನೋಡಿ: ಪು.೨೦೦)

ಹಣಕಾಸು ಹರಿಯುವಿಕೆ


ಲೀಡ್‌ಬ್ಯಾಂಕು
ಮಾಹಿತಿ ಹರಿಯುವಿಕೆ
ಭೂ ಅಭಿವೃದ್ಧಿ ಬ್ಯಾಂಕುಗಳು
ಕೇಂದ್ರ ಸಹಕಾರ ಬ್ಯಾಂಕುಗಳು
ಗ್ರಾಮೀಣ ಬ್ಯಾಂಕುಗಳು
ವ್ಯಾಣಿಜ್ಯಬ್ಯಾಂಕು
ಸಂಪನ್ಮೂಲ ಹರಿಯುವಿಕೆ
ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳು
ಗ್ರಾಮಗಳು
ಕೃಷಿ ಕುಟುಂಬಗಳು
ಇತರೇ

## ಕೊನೆ ಟಿಪ್ಪಣಿಗಳು

೧. ದಾಂಡೇಕರ್ ವಿ.ಎಮ್ ಗ್ರಾಮೀಣ ಹಣಕಾಸು ವ್ಯವಸ್ಥೆಯ ಐತಿಹಾಸಿಕ ಬೆಳೆವಣಿಗೆಗಳನ್ನು ಹಾಗೂ ಗ್ರಾಮೀಣ ಪ್ರದೇಶಗಳಲ್ಲಿ ಸಾಗುವಳಿದಾರ ಹಣಕಾಸಿನ ಅಗತ್ಯಗಳನ್ನು ಪೂರೈಸುವ ಸರ್ಕಾರದ ಅಧಿಕೃತ ಪ್ರಯತ್ನಗಳನ್ನು ಚರ್ಚಿಸಿದ್ದಾರೆ. ಅದೇ ರೀತಿ ಗ್ರಾಮೀಣ ಹಣಕಾಸು ವ್ಯವಸ್ಥೆಯನ್ನು ಸಾಂಸ್ಥಿಕಗೊಳಿಸಲು ನಡೆದ ಪ್ರಯತ್ನಗಳನ್ನು ವಿಶ್ಲೇಷಿಸಿದ್ದಾರೆ. *ದಿ ಇಂಡಿಯನ್ ಎಕಾನಮಿ ೧೯೪೭–೯೨ ವಾಲ್ಯೂಮ್ ೧: ಅಗ್ರಿಕಲ್ಚರ್,* ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ/ ತೌಸಂಡ್ ಓಕ್ಸ್/ಲಂಡನ್, ೧೯೯೪, ಪು. ೩೫೬–೩೬೮

೨. ಗಾಡ್ಗಿಲ್ ಡಿ.ಆರ್ ೧೯೪೫ ಕೃಷಿ ಹಣಕಾಸು ಉಪ ಸಮಿತಿ ಪ್ರಸ್ತುತ ಅಸ್ತಿತ್ವದಲ್ಲಿರುವ ಮೂರು ವಿಧದ ಸಹಕಾರ ಸಾಲ ವ್ಯವಸ್ಥೆಯ ದೌರ್ಬಲ್ಯಗಳು ಮತ್ತು ಈ ವ್ಯವಸ್ಥೆಯನ್ನು ಸಬಲೀಕರಣಗೊಳಿಸಲು ಅಗತ್ಯವಾದ ಮೂಲ ಬಂಡವಾಳ ಮತ್ತು ಹಣಕಾಸನ್ನು ಒದಗಿಸುವಂತೆ ಮಾಡಿದ ಸಮಿತಿಯ ಶಿಫಾರಸ್ಸುಗಳನ್ನು ಇವರು ಚರ್ಚಿಸುತ್ತಾ ಪ್ರಾಥಮಿಕ ಸಹಕಾರಿ ಸಾಲ ಸಂಸ್ಥೆಗಳು ಅಲ್ಪಾವಧಿ ಸಾಲ ವ್ಯವಸ್ಥೆಯ ಮೂಲ ಘಟಕಗಳಾದವು ಎಂದು ಪ್ರತಿಪಾದಿಸಿದ್ದಾರೆ. *ಟುವರ್ಡ್ಸ್ ಎ ಕೊಆಪರೇಟೀವ್ ಕಾಮನ್‌ವೆಲ್ತ್, ಪ್ರೊ. ಬ್ರಿಜ್ ನರೈನ್ ಮೆಮೋರಿಯಲ್ ಲೆಕ್ಚರ್ಸ್,* ಯೂನಿವರ್ಸಿಟಿ ಆಫ್ ಪಂಜಾಬ್, ೧೯೬೦, ಪು.೨೩೦–೨೩೬

೩. ಗೊರವಾಲ ಏ.ಡಿ ಅಖಿಲ ಭಾರತ ಗ್ರಾಮೀಣ ಸಾಲ ಸಮೀಕ್ಷೆ (೧೯೫೪) ಸಮಿತಿ ವರದಿಯ ಮುಖ್ಯಾಂಶಗಳನ್ನು ಚರ್ಚಿಸುತ್ತಾ ಸಮಿತಿಯು ಪ್ರಸ್ತಾಪಿಸಿದ ಗ್ರಾಮೀಣ ಸಾಲ ವ್ಯವಸ್ಥೆಯ ಸಮಸ್ಯೆಗಳು ಹಾಗೂ ಈ ವ್ಯವಸ್ತೆಯ ಅಭಿವೃದ್ಧಿ ಮತ್ತು ಮರು ಸಂಘಟನೆಗೆ ಮಾಡಿದ ಕೆಲವು ಶಿಫಾರಸ್ಸುಗಳನ್ನು ದಾಖಲಿಸಿದ್ದಾರೆ. *ಆಲ್ ಇಂಡಿಯಾರೂರಲ್ ಕ್ರೆಡಿಟ್ ಸರ್ವೆ– ರಿಪೋರ್ಟ್ ಆಫ್ ದಿ ಕಮಿಟಿ ಆಫ್ ಡೈರೆಕ್ಷನ್,* ವಾಲ್ಯೂಮ್.ಋಋ, ಜನರಲ್ ರಿಪೋರ್ಟ್, ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ, ಬಾಂಬೆ, ೧೯೫೬, ಪು. ೨೪೫–೨೬೦

೪. ದಿನೇಶ್ ಚಂದ್ರ (೧೯೯೩).*ರೂರಲ್ ಕ್ರೆಡಿಟ್; ರೋಲ್ ಆಫ್ ಇನ್‌ಫಾರ್ಮಲ್ ಸೆಕ್ಟರ್,* ಸೆಗ್ಮೆಂಟ್ ಬುಕ್ಸ್, ನ್ಯೂಡೆಲ್ಲಿ, ಪು.೨೩

೫. ಗ್ರಾಮೀಣ ಹಣಕಾಸು ಪೂರೈಕೆಯಲ್ಲಿ ಕೃಷಿ ಸಾಲದ ಸ್ಥಿತಿ, ಸಮಸ್ಯೆಗಳು ಹಾಗೂ ಭವಿಷ್ಯದ ಬಗ್ಗೆ ಇಲ್ಲಿ ವಿಶ್ಲೇಷಿಸಲಾಗಿದೆ. ರಾಕೇಶ್ ಮೋಹನ್, ಆಗ್ರಿಕಲ್ಚರ್ ಕ್ರೆಡಿಟ್ ಇನ್ *ಇಂಡಿಯಾ; ಸ್ಟೇಟಸ್, ಇಷ್ಯೂಸ್ ಅಂಡ್ ಫ್ಯೂಚರ್ ಅಜೆಂಡಾ,* ರಿಸರ್ವಬ್ಯಾಂಕ್ ಆಪ್ ಇಂಡಿಯಾ ಬುಲೆಟಿನ್, ನವಂಬರ್ ೨೦೦೪, ಪು.೯೯೬

೬. ಅಸಂಘಟಿತ ಸಾಲ ಮೂಲಗಳು ಕಾರ್ಯ ಯಾವುವು? ಹೇಗೆ? ಕಾರ್ಯನಿರ್ವಹಿಸುತ್ತವೆ ಎಂಬುದನ್ನು ದಾಂಡೇಕರ್ ವಿ.ಎಮ್ ವಿಶ್ಲೇಷಿಸಿದ್ದಾರೆ. ಭಾರತದಲ್ಲಿ ಕೃಷಿಗೆ ಸಾಲ ಪೂರೈಸುವ

ಖಾಸಗಿ ಲೇವಾದೇವಿಗಳು, ಸ್ಥಳೀಯ ಬ್ಯಾಂಕರುಗಳು, ಭೂಮಾಲೀಕರು, ವ್ಯಾಪಾರಸ್ಥರು, ಕಮಿಷನ್ ಏಜೆಂಟ್‌ಗಳು, ಸ್ನೇಹಿತರು ಮತ್ತು ಸಂಬಂಧಿಕರು ಹೇಗೆ ಕಾರ್ಯ ನಿರ್ವಹಿಸುತ್ತಾರೆ, ಸಾಲ ಪೂರೈಸುವಾಗ ಇವರು ಅನುಸರಿಸುವ ವಿಧಾನಗಳು ಹೇಗಿವೆ ಎಂಬುದನ್ನು ವಿಶ್ಲೇಷಿಸಿದ್ದಾರೆ. ದಿ ಇಂಡಿಯನ್ ಎಕಾನಮಿ ೧೯೪೭–೯೨ ವಾಲ್ಯೂಮ್ ೧ ಅಗ್ರಿಕಲ್ಚರ್, ಸೇಜ್ ಪಬ್ಲಿಕೇಷನ್, ನ್ಯೂ ಡೆಲ್ಲಿ, ೧೯೯೪, ಪು.೩೪೧–೩೫೫, ನೋಡಬಹುದು.

೭. ಮಾಲ್ಕಮ್ ಹಾರ್ಪರ್ (೨೦೦೨). ಸೆಲ್ಫ್ ಹೆಲ್ಪ್ ಗ್ರೂಪ್ಸ್ ಅಂಡ್ ಗ್ರಾಮೀಣ್ ಬ್ಯಾಂಕ್ ಗ್ರೂಪ್ಸ್; ವಾಟ್ ಆರ್ ದಿ ಡಿಫರೆನ್ಸಸ್ ಇಲ್ಲಿ ಥಾಮಸ್ ಫಿಷರ್ ಅಂಡ್ ಎಮ್ ಎಸ್ ಶ್ರೀರಾಮ್ (ಸಂ) ಬಿಹಾಂಡ್ ಮೈಕ್ರೊ ಕ್ರೆಡಿಟ್, ವಿಸ್ತಾರ್ ಪಬ್ಲಿಕೇಷನ್, ನ್ಯೂ ಡೆಲ್ಲಿ, ಪು.೧೬೯–೧೯೦

೮. ಜಾನ್ ನೆಡರ್‌ವೀನ್ ವಿವಿಧ ಅಭಿವೃದ್ಧಿ ಸಿದ್ಧಾಂತಗಳನ್ನು ವಿಶ್ಲೇಷಿಸಿದ್ದಾರೆ. ಇತೀಚನ ಜನರ ಪಾಲ್ಗೊಳ್ಳುವಿಕೆಯ ಅಭಿವೃದ್ಧಿ ಮಾಧರಿಯನ್ನು ಕುರಿತು ಚರ್ಚಿಸದ್ದಾರೆ. ಮಹಿಳಾ ಸ್ವಸಹಾಯ ಗುಂಪುಗಳ ಪರಿಕಲ್ಪನೆಯನ್ನು ಈ ರೀತಿಯ ಪರ್ಯಾಯ ಅಭಿವೃದ್ಧಿ ವಿಧಾನವೆಂದೇ ಹೇಳಲಾಗಿದೆ. ಡವಲಪ್‌ಮೆಂಟ್ ಥಿಯರಿ: ಡಿಕನ್‌ಸ್ಟ್ರಕ್ಷನ್ ಅಂಡ್ ರಿಕನ್‌ಸ್ಟ್ರಕ್ಷನ್, ವಿಸ್ತಾರ್ ಪಬ್ಲಿಕೇಷನ್, ನ್ಯೂ ಡೆಲ್ಲಿ, ೨೦೦೧, ಪು. ೫–೨೦

೯. ಕರ್ನಾಟಕ ರಾಜ್ಯದ ವಿವಿಧ ಬೆಳೆಸಾಲದ ಯೋಜನೆಗಳು ಹಾಗೂ ಬಡ್ಡಿದರಗಳ ಬಗ್ಗೆ ಮಾಹಿತಿ ನೀಡಲಾಗಿದೆ. ಲೋಕೇಶ ಕಾಯರ್ಗ ಮತ್ತು ಕೇಶವ ಪ್ರಸಾದ್ ಬಿ ಕಿದೂರು, ಸಾಲ ಬೆಳೆಯದಿರಲು ಬೆಳೆ ಸಾಲ ಸೌಲಭ್ಯ, ವಿಜಯ ಕರ್ನಾಟಕ, ಭಾನುವಾರ, ೭ ಜುಲೈ ೨೦೧೩, ಬೆಂಗಳೂರು, ಪು. ೯ ನೋಡಿ

೧೦. ಸಹಕಾರ ಸಂಸ್ಥೆಗಳು ವಿತರಿಸಿದ ಸಾಲದ ಪ್ರಮಾಣ ಮತ್ತು ವಿಧಿಸಿದ ಬಡ್ಡಿದರಗಳ ಬಗ್ಗೆರುದ್ರ ಪ್ರತಾಪ್ ಸಿಂಗ್ ಚರ್ಚಿಸಿದ್ದಾರೆ. ನಬಾರ್ಡ್–ಆರ್ಗನೈಷೇಶನ್, ಮ್ಯಾನೇಜ್‌ಮೆಂಟ್ ಅಂಡ್ ರೋಲ್, ದೀಪ್ ಪಬ್ಲಿಕೇಷನ್, ನ್ಯೂ ಡೆಲ್ಲಿ, ೧೯೯೩, ಪು.೩೪–೩೫

೧೧. ರಾಯಚೂರು ಜಿಲ್ಲೆ ವಾರ್ಷಿಕ ಸಾಲ ಯೋಜನೆ (೨೦೧೩–೧೪). ಲೀಡ್‌ಬ್ಯಾಂಕ್ ಆಫೀಸ್, ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದ್, ರಾಯಚೂರು, ಪು.೨೭–೩೨

೧೨. ಗುರುದೇವ್ ಸಿಂಗ್ ಅಂಡ್ ಎಸ್ ಆರ್ ಅಶೋಕನ್ (೧೯೮೮). ಇನ್‌ಸ್ಟಿಟ್ಯೂಶನಲ್ ಫೈನಾನ್ಸ್ ಇನ್‌ರೂರಲ್ ಇಂಡಿಯಾ; ಎಫಿಶಿಯನ್ಸಿ ಅಂಡ್ ಎಫಿಕೆಸಿ, ನ್ಯೂಡೆಲ್ಲಿ, ಐಬಿಹೆಚ್ಚ್ ಕಂಪನಿ, ಬಾಂಬೆ, ಪು.೧೯–೨೧

೧೩. ಅದೇ

೧೪. ಸಂಕ್ಷಿಪ್ತ ವಾರ್ಷಿಕ ವರದಿ (೨೦೧೩). ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು-ಕೆಎಸ್‌ಸಿಅ&ಆರ್‌ಡಿ ಸಂಸ್ಥೆ, ಬೆಂಗಳೂರು, ಪು.೧೬-೨೨

೧೫. ರಾಯಚೂರು ಜಿಲ್ಲೆ ವಾರ್ಷಿಕ ಸಾಲ ಯೋಜನೆ (೨೦೧೩-೧೪). ಲೀಡ್‌ಬ್ಯಾಂಕ್ ಆಫೀಸ್, ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದ್, ರಾಯಚೂರು, ಪು.೨೭-೩೨

೧೬. ವಾರ್ಷಿಕ ವರದಿ (೨೦೧೨-೧೩). ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು, ಸಿಂಧನೂರು ತಾಲ್ಲೂಕು, ರಾಯಚೂರು ಜಿಲ್ಲೆ, ಪು.೨-೧೦ ನ್ನು ನೋಡಿ

೧೭. ವಾರ್ಷಿಕ ವರದಿ (೨೦೧೨-೧೩). ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು, ರಾಯಚೂರು ಜಿಲ್ಲೆ, ಪು.೧-೫ ನ್ನು ನೋಡಿ

೧೮. ಸಿಬ್ಬಂದಿ ತರಬೇತಿ ಕೈಪಿಡಿ (೨೦೧೨). ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು, ಬೆಂಗಳೂರು, ಪು.೪-೫

೧೯. ನಬಾರ್ಡ್ (೨೦೧೨-೧೩). ರಾಜ್ಯ ಹಣಕಾಸು ಯೋಜನೆ, ನಬಾರ್ಡ್, ಕರ್ನಾಟಕ ರೀಜಿನಲ್ ಆಫೀಸ್, ಬೆಂಗಳೂರು, ಪು.೫೬-೫೮

೨೦. ದೇಸಾಯಿ ಎಸ್, ಎಸ್, ಎಮ್ (೧೯೮೬).ರೂರಲ್ ಬ್ಯಾಂಕಿಂಗ್ ಇನ್ ಇಂಡಿಯಾ, ಹಿಮಾಲಯ ಪಬ್ಲಿಕೇಷನ್, ಬಾಂಬೆ, ಪು.೨೬೬

೨೧. ಫೋರ್ತ್ ಫೈವ್ ಇಯರ್ ಪ್ಲಾನ್ (ಡ್ರಾಫ್ಟ್) (೧೯೬೬) ಪ್ಲಾನಿಂಗ್ ಕಮಿಷನ್, ಗೌರ್ನಮೆಂಟ್ ಆಫ್ ಇಂಡಿಯಾ,

೨೨. ನಬಾರ್ಡ್ (೨೦೧೨-೧೩). ರಾಜ್ಯ ಹಣಕಾಸು ಯೋಜನೆ, ನಬಾರ್ಡ್, ಕರ್ನಾಟಕ ರೀಜಿನಲ್ ಆಫೀಸ್, ಬೆಂಗಳೂರು, ಪು.೫೮

೨೩. ಸಿಂಗ್ ಜೆ ಪಿ (೧೯೮೮). ಅಗ್ರಿಕಲ್ಚರಲ್ ಫೈನಾನ್ಸ್, ಥಿಯರಿ ಅಂಡ್ ಪ್ರಾಕ್ಟೀಸ್, ಆಶಿಸ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೬೩

೨೪. ಲೀಡ್ ಬ್ಯಾಂಕು (೨೦೧೩). ರಾಯಚೂರು ಡಿಸ್ಟ್ರಿಕ್ಟ್ ಕ್ರೆಡಿಟ್ ಅನ್ಯುಯಲ್ ಪ್ಲಾನ್, ಲೀಡ್ ಬ್ಯಾಂಕು ಕಛೇರಿ, ರಾಯಚೂರು, ಪು.೩೨

೨೫. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ (೨೦೦೮-೦೯) ವಾರ್ಷಿಕ ವರದಿ, ಆರ್‌ಬಿಐ, ಬಾಂಬೆ, ಪು.೨೧೪

೨೬. ಲೀಡ್ ಬ್ಯಾಂಕು (೨೦೧೩). ರಾಯಚೂರು ಡಿಸ್ಟ್ರಿಕ್ಟ್ ಕ್ರೆಡಿಟ್ ಅನ್ಯುಯಲ್ ಪ್ಲಾನ್, ಲೀಡ್ ಬ್ಯಾಂಕು ಕಛೇರಿ, ರಾಯಚೂರು, ಪು.೩೫

೨೭. ಗ್ರಾಮೀಣ ಬ್ಯಾಂಕುಗಳ ಪ್ರಸ್ತುತ ಸ್ಥಿತಿಯನ್ನು ಇಲ್ಲಿ ಚರ್ಚಿಸಲಾಗಿದೆ. ರಿಸರ್ವ್‌ಬ್ಯಾಂಕ್ ಆಫ್ ಇಂಡಿಯಾ ಬುಲೆಟಿನ್, ಮಾರ್ಚ್ ೧೯೯೧, ಸಪ್ಲಿಮೆಂಟ್, ಪು. ೬೮-೬೯

೨೮. ದೇಸಾಯಿ ಎಸ್.ಎಸ್.ಎಮ್ ಕೃಷಿ ಕ್ಷೇತ್ರಕ್ಕೆ ಸುಲಲಿತವಾಗಿ ಹಣಕಾಸು ಪೂರೈಕೆಯಾಗುವಂತೆ ಮಾಡಲು ರಿಸರ್ವ್‌ಬ್ಯಾಂಕ್ ಆಫ್ ಇಂಡಿಯಾ ಕೈಗೊಂಡ ಕ್ರಮಗಳನ್ನು ಇಲ್ಲಿ ಚರ್ಚಿಸಲಾಗಿದೆ.ರೂರಲ್ ಬ್ಯಾಂಕಿಂಗ್ ಇನ್ ಇಂಡಿಯಾ, ಹಿಮಾಲಯ ಪಬ್ಲಿಷಿಂಗ್ ಹೌಸ್, ೧೯೮೬, ಪು.೨೫೩-೨೫೫.

೨೯. ಸಂಕ್ಷಿಪ್ತ ವಾರ್ಷಿಕ ವರದಿ (೨೦೧೩). ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು-ಕೆಎಸ್‌ಸಿಅ&ಆರ್‌ಡಿ ಸಂಸ್ಥೆ, ಬೆಂಗಳೂರು, ಪು.೧೬-೨೨

೩೦. ಆರ್‌ಬಿಐ (೨೦೧೨-೧೩). ವಾಷಿಕ ವರದಿ, ಆರ್‌ಬಿಐ, ಬಾಂಬೆ ಪು.೮

೩೧. ಲೀಡ್‌ಬ್ಯಾಂಕ್ (೨೦೧೩-೧೪). ರಾಯಚೂರು ಜಿಲ್ಲೆ ವಾರ್ಷಿಕ ಸಾಲ ಯೋಜನೆ, ಲೀಡ್ ಬ್ಯಾಂಕ್ ಆಫೀಸ್, ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದ್, ರಾಯಚೂರು, ಪು.೨೭-೩೨

## ಅಧ್ಯಾಯ ನಾಲ್ಕು

# ಸಂಘಟಿತ ಸಾಲದ ಫಲಾನುಭವಿಗಳು

ಪ್ರಾಥಮಿಕ ಮೂಲದಿಂದ ಸಂಗ್ರಹಿಸಿದ ಮಾಹಿತಿಯು ಅಧ್ಯಯನಕ್ಕೆ ಒಂದು ಚೌಕಟ್ಟು ಮತ್ತು ಗುಣಾತ್ಮಕ ದಿಕ್ಕನ್ನು ಒದಗಿಸುತ್ತದೆ. ಈ ಅಧ್ಯಾಯದಲ್ಲಿ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಮಾಹಿತಿ ವಿಶ್ಲೇಷಣೆಯ ಆಧಾರದ ಮೇಲೆ ಸಂಘಟಿತ ಮೂಲದಿಂದ ಸಾಲ ಸೌಲಭ್ಯ ಪಡೆದ ಫಲಾನುಭವಿಗಳನ್ನು ಕುರಿತು ಚರ್ಚಿಸಲಾಗಿದೆ. ಜನರ ಸಾಮಾಜಿಕ ಆರ್ಥಿಕ ಹಿನ್ನೆಲೆ ಸಾಲ ಸೌಲಭ್ಯ ಪಡೆಯುವಲ್ಲಿ ಹಾಗೂ ಪಡೆದ ಸಾಲವನ್ನು ತಮ್ಮ ಪ್ರಗತಿಗೆ ಬಳಸಿಕೊಳ್ಳುವ ಪ್ರತಿಕ್ರಿಯೆಯಲ್ಲಿ ಮುಖ್ಯ ಪಾತ್ರ ವಹಿಸುತ್ತದೆ. ಅಧ್ಯಯನ ಗ್ರಾಮಗಳ ಯಾವ ರೈತ ವರ್ಗಗಳು ಸಂಘಟಿತ ಸಾಲ ಸೌಲಭ್ಯ ಪಡೆಯುತ್ತವೆ? ಪಡೆಯಲು ನೆರವಾಗುವ ಅಂಶಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ವಿವಿಧ ಆರ್ಥಿಕ ಸಾಮಾಜಿಕ ಸೂಚ್ಯಾಂಕಗಳಾದ ಭೂ ಹಿಡುವಳಿ, ಸಾಲ ನೀತಿ, ಸಾಲ ಪಡೆಯಲು ಭರಿಸಬೇಕಾದ ವೆಚ್ಚ, ಸಾಲ ಯೋಜನೆ ಬಗೆಗಿನ ಮಾಹಿತಿ, ಜಾತಿ ಮತ್ತು ಶಿಕ್ಷಣ, ಜನರ ಸಾಲದ ಅಗತ್ಯಗಳು, ಸಾಲ ಪೂರೈಕೆಯ ಮೂಲಗಳು, ಈ ಮೂಲಗಳ ಸಾಲ ನೀತಿ ನಿಯಮಗಳು, ಸಾಲದ ಬೇಡಿಕೆ ಮತ್ತು ಪೂರೈಕೆಗಳ ಅಂತರ, ಪಡೆದ ಸಾಲದ ಬಳಕೆಯ ಪರಿಣಾಮ ಈ ಅಂಶಗಳ ಮೂಲಕ ಸಂಘಟಿತ ಮೂಲದ ಸಮಸ್ಯೆಗಳು ಮತ್ತು ಪರಿಹಾರಗಳ ಬಗ್ಗೆ ಚರ್ಚಿಸಲಾಗಿದೆ. ಭೂ ಹಿಡುವಳಿಯನ್ನು ಅಥವಾ ಭದ್ರತೆ ನೀಡುವ ಜನರ ಸಾಮರ್ಥ್ಯವನ್ನು ಸಾಮಾನ್ಯವಾಗಿ ಎಲ್ಲಾ ಕಾಲಘಟ್ಟದಲ್ಲೂ ಜನರ ಆರ್ಥಿಕ ಸ್ಥಿತಿಯ ಸೂಚ್ಯಾಂಕವೆಂದು ಪರಿಗಣಿಸ ಲಾಗುತ್ತದೆ. ಸಂಘಟಿತ ಸಾಲ ಸಂಸ್ಥೆಗಳು ಸಾಲ ನೀಡಲು ಸಾಗುವಳಿ ಭೂಮಿಯನ್ನು ಭ್ರದತೆ ಮತ್ತು ಅರ್ಹತೆಯಾಗಿ ಪರಿಗಣಿಸುತ್ತವೆ. ಇದರಿಂದಾಗಿಯೇ ಸಮಾಜದ ಭೂರಹಿತ ಅಥವಾ

ಆಸ್ತಿರಹಿತ ದುರ್ಬಲ ವರ್ಗಗಳು ಸಂಘಟಿತ ಸಾಲ ಸೌಲಭ್ಯಗಳಿಂದ ಹೊರಗುಳಿಯು ವಂತಾಗಿದೆ. ಭೂಮಿ ಒಂದು ಪ್ರಮುಖ ಸಂಪನ್ಮೂಲ. ಇದರ ಒಡೆತನ ಜನರ ಸಾಮಾಜಿಕ ಆರ್ಥಿಕ ಪರಿಸ್ಥಿತಿ ಮೇಲೆ ಪರಿಣಾಮ ಬೀರುತ್ತದೆ.

**೪.೧. ಅಧ್ಯಯನ ಗ್ರಾಮಗಳಲ್ಲಿ ಕಂಡು ಬಂದ ವಿವಿಧ ರೈತ ವರ್ಗಗಳು**

| ವಿವಿಧ ರೈತ ವರ್ಗಗಳು | ಸಿಂಧನೂರು ತಾಲೂಕು | ದೇವದುರ್ಗ ತಾಲೂಕು | ಒಟ್ಟು | ಶೇಕಡಾವಾರು |
|---|---|---|---|---|
| ಅತೀ ಸಣ್ಣ ರೈತರು (<೨.೫) | ೫೦ | ೫೫ | ೧೦೫ | ೩೨.೮೧ |
| ಸಣ್ಣ ರೈತರು (೨.೫–೫.೦) | ೨೦ | ೨೫ | ೪೫ | ೧೪.೦೬ |
| ದೊಡ್ಡ ರೈತರು (>೧೦–೨೦) | ೩೦ | ೫೧ | ೮೧ | ೨೫.೩೧ |
| ಕೃಷಿ ಕಾರ್ಮಿಕ, ಭೂರಹಿತರು | ೩೫ | ೫೪ | ೮೯ | ೨೭.೮೧ |
| ಒಟ್ಟು | ೧೩೫ | ೧೮೫ | ೩೧೯ | ೯೯.೯೯ |

ಮೂಲ: ಕ್ಷೇತ್ರ ಕಾರ್ಯ

ಮೇಲಿನ ಕೋಷ್ಟಕದಲ್ಲಿ ತೋರಿಸಿರುವಂತೆ ಈ ಅಧ್ಯಯನದಲ್ಲಿ ಶೇಕಡಾ ೩೨.೮೧ ರಷ್ಟು ಅತೀ ಸಣ್ಣ ರೈತರು ಮತ್ತು ೧೪.೦೬ರಷ್ಟು ಸಣ್ಣ ರೈತರು, ಶೇಕಡಾ ೨೫.೩೧ರಷ್ಟು ದೊಡ್ಡ ರೈತರು ಹಾಗು ಶೇಕಡಾ ೨೭.೮೧ರಷ್ಟು ಕೃಷಿ ಕಾರ್ಮಿಕರು ಕಂಡು ಬಂದಿದ್ದಾರೆ. ಕೃಷಿ ಕಾರ್ಮಿಕರ ಪ್ರಮಾಣ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನಲ್ಲಿ ಹೆಚ್ಚಾಗಿದೆ. ಕರ್ನಾಟಕದ ರಾಜ್ಯದ ಶೇಕಡಾ ೭೦ಕ್ಕೂ ಹೆಚ್ಚಿನ ರೈತರ ಭೂ ಹಿಡುವಳಿ ಎರಡರಿಂದ ಒಂದೂವರೆ ಎಕರೆಯಷ್ಟಿದೆ. ಕರ್ನಾಟಕ ರಾಜ್ಯದ ಒಟ್ಟು ಕೃಷಿಕ ಕುಟುಂಬಗಳಲ್ಲಿ ಶೇಕಡಾ ೬೬ರಷ್ಟು ಅತೀ ಸಣ್ಣ ರೈತ ಕುಟುಂಬಗಳಿವೆ (ಮೀನಾಕ್ಷಿ ರಾಜೀವ್ ಮತ್ತು ವಿ.ಜಿ.ವಾಣಿ:೨೦೧೨). ಅತೀ ಸಣ್ಣ, ಸಣ್ಣ ರೈತರು ಮತ್ತು ಕೃಷಿ ಕಾರ್ಮಿಕರು ಭೂರಹಿತರು ಹಲವು ಕಾರಣಗಳಿಂದ ಸಂಘಟಿತ ಹಣಕಾಸು ಮೂಲದಿಂದ ಸಾಲ ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗಿಲ್ಲ. ಸಿಂಧನೂರು ತಾಲ್ಲೂಕು ನೀರಾವರಿ ಪ್ರದೇಶವಾದರೂ ಅಧ್ಯಯನಕ್ಕೆ ಅಯ್ಕೆಮಾಡಿಕೊಂಡ ಎರಡು ಗ್ರಾಮಗಳ (ಟೇಲ್ ಎಂಡ್) ಕಾಲುವೆ ಕೊನೆಯ ಭಾಗದ ಗ್ರಾಮಗಳು. ಕಾಲುವೆಯಿಂದ ಬಸಿದ ನೀರು ಹಳ್ಳಗಳಲ್ಲಿ ಹರಿಯುತ್ತದೆ. ಜನರು ಈ ಬಸಿದ ನೀರನ್ನು ಪಂಪ್‌ಗಳನ್ನು ಬಳಸಿ ಕೃಷಿ ಮಾಡುತ್ತಾರೆ. ಹೀಗೆ ಬಸಿದ ನೀರಿನಿಂದ ಕೃಷಿ ಮಾಡುವವರ ಪ್ರಮಾಣಕ್ಕಿಂತ ಮಳೆ ಆಧಾರಿತ ಕೃಷಿಯೇ ಪ್ರಮಾಣವೇ ಹೆಚ್ಚು. ಬಸಿದ ನೀರನ್ನು ಬಳಸಿ ಕೃಷಿ ಮಾಡುವವರು ದೊಡ್ಡ ರೈತರು ಮಾತ್ರ. ಈ ಗ್ರಾಮಗಳ ಬಹುತೇಕ ದೊಡ್ಡ ರೈತರು ಪ್ರಬಲ ಲಿಂಗಾಯತ ಜಾತಿಗೆ ಸೇರಿದ್ದಾರೆ. ಈ ಭಾಗದಲ್ಲಿ ಹೆಚ್ಚಾಗಿ ಜವಾರ್ ಜೋಳವನ್ನು ಮತ್ತು

ಹತ್ತಿ ಬೆಳೆಯಲಾಗುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ದೇವದುರ್ಗ ತಾಲ್ಲೂಕಿನ ಹೇರುಂಡಿ ಗ್ರಾಮ ಪೂರ್ಣವಾಗಿ ಒಣ ಭೂಮಿ ಸಾಗುವಳಿಗೆ ಒಳಪಟ್ಟಿರುತ್ತದೆ. ಇಲ್ಲಿ ಯಾವುದೇ ನೀರಾವರಿ ಸೌಲಭ್ಯಗಳಿಲ್ಲದೆ ಮಳೆ ಆಧಾರಿತ ಕೃಷಿ ಮಾತ್ರ. ಈ ಗ್ರಾಮದಲ್ಲಿ ಸಂಘಟಿತ ಸಾಲ ಪಡೆದಿರುವವರು ದೊಡ್ಡ ರೈತರು. ಈ ಗ್ರಾಮದ ಬಹುತೇಕ ದೊಡ್ಡ ರೈತರು ಲಿಂಗಾಯತ ಜಾತಿಗೆ ಸೇರಿದ್ದಾರೆ. ಇವರು ಆರ್ಥಿಕವಾಗಿ ಸುಸ್ಥಿತಿಯಲ್ಲಿದ್ದು, ಸಾಮಾಜಿಕವಾಗಿ ಉತ್ತಮ ಸ್ಥಾನಮಾನ ಹೊಂದಿದ್ದಾರೆ. ಜಾಲಹಳ್ಳಿಯ ಸಹಕಾರ ಸಂಸ್ಥೆಯ ಕಾರ್ಯದರ್ಶಿ ವೀರಭದ್ರಪ್ಪನವರ ಪ್ರಕಾರ ಜಾಲಹಳ್ಳಿಯ ಪ್ರಾಥಮಿಕ ಸಹಕಾರ ಸಂಸ್ಥೆಯ ದಾಖಲೆಗಳ ಪ್ರಕಾರ ಹೇರುಂಡಿ ಗ್ರಾಮದ ೪೦ ಸಾಲ ಖಾತೆಗಳಲ್ಲಿ ೩೬ ಖಾತೆಗಳು ಲಿಂಗಾಯತ ಸದಸ್ಯರದ್ದೆ. ಈ ಗ್ರಾಮದ ಅತೀಸಣ್ಣ ರೈತರು ತಮ್ಮ ಸಾಲದ ಅಗತ್ಯಗಳಿಗಾಗಿ ಗ್ರಾಮದ ಜಮೀನ್ದಾರರನ್ನು ಅವಲಂಬಿಸಿದ್ದಾರೆ. ಸಾಲ ನೀಡುವವರು ಲಿಂಗಾಯತ ಜಮೀನ್ದಾರರೆಂದು ತಿಳಿದು ಬಂದಿತು. ಆದರೆ ಸಾಲ ನೀಡುವವರ ಬಗ್ಗೆ ಸರಿಯಾದ ಮಾಹಿತಿ ದೊರೆಯಲಿಲ್ಲ. ಹೇರುಂಡಿ ಗ್ರಾಮವು ಪೂರ್ಣವಾಗಿ ಒಣಭೂಮಿ ಪ್ರದೇಶವಾಗಿದ್ದು ಜನ ಮಳೆ ಆಧಾರಿತ ಶೇಂಗ, ಹತ್ತಿ, ಜೋಳದ ಬೆಳೆ ಬೆಳೆಯುತ್ತಾರೆ. ಗ್ರಾಮದ ಕೃಷಿ ಕಾರ್ಮಿಕರು ವರ್ಷದ ಬಹುತೇಕ ಭಾಗ ನಗರಗಳಿಗೆ ವಲಸೆ ಹೋಗುತ್ತಾರೆ. ಇವರು ಸಂಘಟಿತ ಮತ್ತು ಅಸಂಘಟಿತ ಎರಡೂ ವಲಯಗಳಿಂದ ಸಾಲ ಸೌಲಭ್ಯ ಪಡೆಯಲು ಸಾಧ್ಯವಾಗುತ್ತಿಲ್ಲ. ಇವರು ತುಂಡು ಭೂಮಿ ಹೊಂದಿದ್ದು ಕೃಷಿ ಕಾರ್ಮಿಕರು ಮತ್ತು ಭೂ ರಹಿತ ದುಡಿಮೆಗಾರರು ಸಂಘಟಿತ ಸಾಲ ಪಡೆಯಲು ಅನುಕೂಲವಾಗುವಂತೆ ಕೃಷಿ ಚಟುವಟಿಕೆಗಳನ್ನು ನಡೆಸುತ್ತಿಲ್ಲ. ಜಾಲಹಳ್ಳಿ ಗ್ರಾಮದ ಬಹುತೇಕ ಭಾಗವು ನೀರಾವರಿಗೆ ಒಳಪಟ್ಟಿದೆ. ಕಳೆದ ಎಂಟು ಹತ್ತು ವರ್ಷಗಳಿಂದ ಕಾಲುವೆ ನೀರು ಬರುತ್ತಿದ್ದು ದೊಡ್ಡ ಪ್ರಮಾಣದಲ್ಲಿ ಭತ್ತ ಮತ್ತು ಹತ್ತಿ ಬೆಳೆಯುತ್ತಾರೆ.

## ೪.೨. ಅಧ್ಯಯನ ಕ್ಷೇತ್ರದ ವಿವಿಧ ರೈತ ವರ್ಗಗಳ ಗ್ರಾಮವಾರು ವಿವರಣೆ

| ವಿವಿಧ ರೈತ ವರ್ಗಗಳು | ತಾಲ್ಲೂಕು (ಎ) | | | ತಾಲ್ಲೂಕು (ಬಿ) | | | ಒಟ್ಟು | |
|---|---|---|---|---|---|---|---|---|
| | ರಾಗಲಪರ್ವಿ | ಯಾಪಲಪರ್ವಿ | ಒಟ್ಟು | ಹೇರುಂಡಿ | ಜಾಲಹಳ್ಳಿ | ಒಟ್ಟು | ಸಂಖ್ಯೆ | ಶೇಕಡಾ |
| ಅತೀ ಸಣ್ಣ ರೈತರು (<೨.೫) | ೨೫ | ೨೫ | ೫೦ | ೧೫ | ೪೦ | ೫೫ | ೧೦೫ | ೩೨.೯೧ |
| ಸಣ್ಣ ರೈತರು (೨.೫–೫.೦) | ೨೦ | ೦ | ೨೦ | ೫ | ೨೦ | ೨೫ | ೪೫ | ೧೪.೧೦ |
| ದೊಡ್ಡ ರೈತರು (>೧೦–೨೦) | ೨೫ | ೫ | ೩೦ | ೧೫ | ೩೬ | ೫೧ | ೮೧ | ೨೫.೮೮ |
| ಕೃಷಿ ಕಾರ್ಮಿಕ ಭೂರಹಿತರು | ೨೫ | ೧೦ | ೩೫ | ೨೦ | ೩೩ | ೫೩ | ೮೮ | ೨೭.೫೮ |
| ಒಟ್ಟು | ೯೫ | ೪೦ | ೧೩೫ | ೫೫ | ೧೨೯ | ೧೮೪ | ೩೧೯ | ೧೦೦.೪೭ |

ಮೂಲ: ಕ್ಷೇತ್ರಕಾರ್ಯ. ಸೂಚನೆ; ತಾಲ್ಲೂಕು ಎ–ಸಿಂದನೂರು ಬಿ–ದೇವದುರ್ಗ

ಅಧ್ಯಯನ ಗ್ರಾಮಗಲ್ಲಿ ಕಂಡು ಬಂದ ವಿವಿಧ ರೈತ ವರ್ಗಗಳ ಗ್ರಾಮಾವಾರು ವಿವರಗಳನ್ನು ಮೇಲಿನ ಕೋಷ್ಟಕದಲ್ಲಿ ನೀಡಲಾಗಿದೆ.

**೪.೩. ಅಧ್ಯಯನ ಕ್ಷೇತ್ರದ ಮಾಹಿತಿದಾರರ ತಾಲ್ಲೂಕುವಾರು ಜಾತಿವಾರು ವಿವರಗಳು**

| ವಿವಿದ ವರ್ಗಗಳು | ತಾಲ್ಲೂಕು (ಎ) | ತಾಲ್ಲೂಕು (ಬಿ) | ಒಟ್ಟು | ಶೇಕಡಾ |
|---|---|---|---|---|
| ಪರಿಶಿಷ್ಟ ಜಾತಿ ಮತ್ತು ಜನಾಂಗ | ೯೭ | ೭೩ | ೧೭೦ | ೫೩% |
| ಹಿಂದುಳಿದ ವರ್ಗ | ೧೮ | ೫೮ | ೭೬ | ೨೪% |
| ಇತರೆ (ಲಿಂಗಾಯತ) | ೨೦ | ೫೩ | ೭೩ | ೨೩% |
| ಒಟ್ಟು | ೧೩೫ | ೧೮೪ | ೩೧೯ | ೧೦೦% |

**ಮೂಲ:** ಕ್ಷೇತ್ರ ಕಾರ್ಯ, ಸೂಚನೆ; ತಾಲ್ಲೂಕು ಎ– ಸಿಂದನೂರು ಬಿ–ದೇವದುರ್ಗ

ಮೇಲಿನ ಕೋಷ್ಟಕಲ್ಲಿ ತೋರಿಸಿದಂತೆ ಈ ಅಧ್ಯಯನದಲ್ಲಿ ಶೇಕಡಾ ೫೩ರಷ್ಟು ಪರಿಶಿಷ್ಟ ಜಾತಿ ಮತ್ತ ಪಂಗಡಗಳು ಶೇಕಡಾ ೨೪ರಷ್ಟು ಹಿಂದುಳಿದ ವರ್ಗಗಳು ಅಂದರೆ ಕಬ್ಬೇರು, ಕುರುಬರು, ಪತ್ತಾರ್, ಉಪ್ಪಾರರು, ಇತ್ಯಾದಿ ವರ್ಗಗಳು ಹಾಗು ಅಧ್ಯಯನದಲ್ಲಿ ಇತರೆ ಅಂದರೆ ಶೇಕಡಾ ೨೩ರಷ್ಟು ಲಿಂಗಾಯತ ಜಾತಿಗೆ ಸೇರಿದವರು ಕಂಡು ಬಂದಿದ್ದಾರೆ.

ಅಧ್ಯಯನ ಗ್ರಾಮಗಳ ಅತಿಸಣ್ಣ ರೈತರಲ್ಲಿ ಪರಿಶಿಷ್ಟರು ಶೇಕಡಾ ೬೧.೯೦ರಷ್ಟಿದ್ದರೆ, ಇತರೇ ಜಾತಿಗಳಿಗೆ ಸೇರಿದವರು ಶೇಕಡಾ ೩೮ ರಷ್ಟಿದ್ದಾರೆ. ಇತರೆ ಜಾತಿಗಳಲ್ಲಿ ಮುಖ್ಯವಾಗಿ ಲಿಂಗಾಯತ ಜಾತಿಗೆ ಸೇರಿದ ಅತೀ ಸಣ್ಣ ರೈತರು ಯಾರೂ ಕಂಡುಬಂದಿಲ್ಲ. ಆದರೆ ಸಣ್ಣ ರೈತರಲ್ಲಿ ಶೇಕಡಾ ೧೧ರಷ್ಟು ರೈತರು ಲಿಂಗಾಯತ ಜಾತಿಗೆ ಸೇರಿದವರಾಗಿದ್ದರೆ ಶೇಕಡಾ ೨೨ರಷ್ಟು ರೈತರು ಇತರೆ ಹಿಂದುಳಿದ ವರ್ಗಗಳಿಗೆ ಸೇರಿದವರಾಗಿದ್ದಾರೆ. ಶೇಕಡಾ ೬೬.೬೬ ರೈತರು ಎಸ್/ಎಸ್.ಟಿ ಜನಾಂಗಕ್ಕೆ ಸೇರಿದವರಾಗಿದ್ದಾರೆ. ದೊಡ್ಡ ರೈತರಲ್ಲಿ ಶೇಕಡಾ ೯೮ರಷ್ಟು ರೈತರು ಇತರೇ ಜನಾಂಗಗಳಿಗೆ ಸೇರಿದ್ದಾರೆ. ಇದರಲ್ಲಿ ಶೇಕಡಾ ೭೪ರಷ್ಟು ಲಿಂಗಾಯತ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಶೇಕಡಾ ೨೪ರಷ್ಟು ಹಿಂದುಳಿದ ಜಾತಿಗಳಿಗೆ ಸೇರಿದ್ದಾರೆ. ದೊಡ್ಡ ರೈತರಲ್ಲಿ ಪರಿಶಿಷ್ಟ ಜಾತಿ ಮತ್ತ ಜನಾಂಗಗಕ್ಕೆ ಸೇರಿದವರ ಪ್ರಮಾಣದ ಶೇ. ೧ಕ್ಕಿಂತ ಕಡಿಮೆ. ಅಧ್ಯಯನ ನಡೆಸಿದ ನಾಲ್ಕು ಗ್ರಾಮಗಳಲ್ಲಿ ದೊಡ್ಡ ಹಿಡುವಳಿಗಳನ್ನು ಹೊಂದಿರುವವರು ಲಿಂಗಾಯತ ಜಾತಿಯವರು. ಗ್ರಾಮಗಳಲ್ಲಿ ಬಹುತೇಕ ಭೂ ಸಂಪತ್ತನ್ನು ಲಿಂಗಾಯತ ಸಮುದಾಯ ಹೊಂದಿದ್ದು ಆರ್ಥಿಕ ಸಾಮಾಜಿಕವಾಗಿ ಪ್ರಬಲವಾಗಿದೆ. ಇವರು ಸಾರ್ವಜನಿಕ ಬ್ಯಾಂಕುಗಳಾದ ಸಹಕಾರ ಸಂಸ್ಥೆಗಳು ಹಾಗೂ ವಾಣಿಜ್ಯ ಬ್ಯಾಂಕುಗಳಿಂದ ಸಾಲ ಸೌಲಭ್ಯ ಪಡೆಯುತ್ತಿದ್ದಾರೆ. ಅದೇ ರೀತಿ ಅಧ್ಯಯನ ಶೇಕಡಾ ೨೮ರಷ್ಟು ಕೃಷಿ ಕಾರ್ಮಿಕರು, ಭೂ ರಹಿತ ಕಾರ್ಮಿಕರನ್ನು ಒಳಗೊಂಡಿದೆ.

### ೪.೪. ಕೃಷಿಕಾರ್ಮಿಕರ ಸ್ಥಿತಿಗತಿಗಳು

ಶೇಕಡಾ ೨೮ರಷ್ಟು ಕೃಷಿ ಕಾರ್ಮಿಕರು, ಭೂರಹಿತ ಕಾರ್ಮಿಕರಲ್ಲಿ ಶೇಕಡಾ ೮೨ರಷ್ಟು ಪರಿಶಿಷ್ಟ ಜಾತಿ ಮತ್ತು ಜನಾಂಗಕ್ಕೆ ಸೇರಿದವರಾಗಿದ್ದಾರೆ. ಉಳಿದ ಶೇಕಡಾ ೧೮ರಷ್ಟು ಇತರೇ ಹಿಂದುಳಿದ ಜಾತಿಗಳಿಗೆ ಸೇರಿದ್ದಾರೆ. ಇದರಲ್ಲಿ ೫೮ರಷ್ಟು ಕೃಷಿ ಕಾರ್ಮಿಕರು ಪರಿಶಿಷ್ಟ ಪಂಗಡಗಕ್ಕೆ ಸೇರಿದ್ದು ಶೇಕಡಾ ೨೪ರಷ್ಟು ಪರಿಶಿಷ್ಟ ಜಾತಿಗೆ ಸೇರಿದ್ದಾರೆ. ಒಟ್ಟು ಕೃಷಿ ಕಾರ್ಮಿಕರಲ್ಲಿ ಶೇಕಡಾ ೨೧.೩೪ರಷ್ಟು ಕೃಷಿ ಕಾರ್ಮಿಕರಿಗೆ ತುಂಡು ಭೂಮಿಗಳಿದ್ದು ಶೇಕಡಾ ೭೮.೬೫ರಷ್ಟು ಜನರಿಗೆ ಭೂಮಿ ಇಲ್ಲದೆ ಭೂರಹಿತ ಕಾರ್ಮಿಕರಿದ್ದಾರೆ. ಕೃಷಿ ಕಾರ್ಮಿಕರು ಆರ್ಥಿಕವಾಗಿ, ಸಾಮಾಜಿಕ ಹಿಂದುಳಿದಿದ್ದ ದುಸ್ತಿತಿಯ ಬದುಕನ್ನು ನಡೆಸುತ್ತಿದ್ದಾರೆ.

ಭೂಮಿ ಒಂದು ಪ್ರಮುಖ ಸಂಪನ್ಮೂಲವಾಗಿ ಇದರ ಒಡೆತನ ಪ್ರಬಲ ಜನಾಂಗದ ಹಿಡಿತಕಲ್ಲಿದೆ ಎಂಬುದನ್ನು ಈ ಅಧ್ಯಯನ ತೋರಿಸುತ್ತದೆ. ಈ ಜನಾಂಗವು ತಮ್ಮ ಭೂಮಿಯಲ್ಲಿ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳುತ್ತಾರೆ. ಇದನ್ನೆ ಭದ್ರತೆಯಾಗಿ ಬಳಸಿಕೊಂಡು ಸಂಘಟಿತ ಹಣಕಾಸು ವಲಯದಿಂದ ಸಾಲ ಸೌಲಭ್ಯಗಳನ್ನು ಪಡೆಯುತ್ತಾರೆ. ಪಡೆದ ಸಾಲವನ್ನು ತಮ್ಮ ಅಭಿವೃದ್ಧಿಗೆ ಬಳಸಿಕೊಳ್ಳುತ್ತಾರೆ. ಈಗಾಗಿ ಅಧ್ಯಯನದಲ್ಲಿ ಕಂಡುಬಂದಂತೆ ಸಹಕಾರ ಸಂಘಗಳು ಮತ್ತು ವಾಣಿಜ್ಯಬ್ಯಾಂಕುಗಳಿಂದ ಪಡೆದ ಸಾಲದ ಬಳಕೆಯ ಅನಕೂಲಗಳನ್ನು ಈ ಜಾತಿಯ ರೈತರು ಮಾತ್ರ ಪಡೆದಿದ್ದಾರೆ. ಸಾಲ ಸೌಲಭ್ಯಗಳಿಂದ ಈ ಜನರ ಕೃಷಿ ಉತ್ಪನ್ನ ಹೆಚ್ಚಾಗಿದೆ. ಆದಾಯ ಹೆಚ್ಚಾಗಿದೆ. ಉಳಿತಾಯ ಆದಾಯ ಹೆಚ್ಚಾಗಿದೆ. ಕೆಲವರು ಹೊಸದಾಗಿ ಭೂಮಿ ಖರೀದಿಸಿ ತಮ್ಮ ಸಂಪನ್ಮೂಲ ಆಸ್ತಿ ಹೆಚ್ಚಿಸಿಕೊಂಡಿದ್ದಾರೆ. ಬದುಕಿನಲ್ಲಿ ಇನ್ನಷ್ಟು ಆತ್ಮವಿಶ್ವಾಸ ಸುಧಾರಣೆ ಕಂಡು ಬಂದಿದೆ. ಆದರೆ ಕೃಷಿ ಕಾರ್ಮಿಕರು ತಮ್ಮ ಬದುಕಿಗಾಗಿ ಕೂಲಿ ವೃತ್ತಿಯನ್ನು ಅವಲಂಬಿಸಿದ್ದಾರೆ. ಕೃಷಿ ಚಟುವಟಿಕೆಗಳು ವರ್ಷಪೂರ್ತಿ ನಡೆಯುತ್ತವೆ ಹಾಗು ಕೂಲಿ ಕೆಲಸಗಳು ವರ್ಷ ಪೂರ್ತಿ ದೊರೆಯುತ್ತವೆ ಎಂಬ ಭರವಸೆಗಳಿಲ್ಲ. ಭತ್ತದ ನಾಟಿ ಸಂದರ್ಭದಲ್ಲಿ ಕೂಲಿ ದೊರೆಯುತ್ತದೆ. ನಾಟಿ ಅವಧಿ ಕಡಿಮೆ ಇರುವುದರಿಂದ ಕೂಲಿ ದಿನಗಳು ಕಡಿಮೆ ಇರುತ್ತವೆ. ಒಣ ಭೂಮಿ ಪ್ರದೇಶಗಳಲ್ಲಿ ಮಳೆ ಆಧಾರಿತ ಬೆಳೆ ಮಾಡಲಾಗುತ್ತದೆ. ಆದರೆ ಮಳೆಯೇ ಅನಿಶ್ಚಿತವಾದುದು. ೨೦೧೦, ೨೦೧೧, ೨೦೧೨ರಲ್ಲಿ ರಾಯಚೂರು ಜಿಲ್ಲೆಯಲ್ಲಿ ಬರ ಆವರಿಸಿತ್ತು. ಮಳೆ ನಿಗದಿತ ಪ್ರಮಾಣಕ್ಕಿಂತ ದಡಿಮೆ ಆಗಿದ್ದು ಕೃಷಿ ಚಟುವಟಿಕೆಗಳ ಮೇಲೆ ಪರಿಣಾಮ ಬೀರಿತು. ರೈತರ ನೀರಿನ ಮೋರಿಗಳೇ ಬತ್ತಿ ಹೋಗಿದ್ದವು. ದೇವದುರ್ಗ ತಾಲ್ಲೂಕಿನ ರೈತರು, ಕೃಷಿ ಕಾರ್ಮಿಕರು ಸಂದರ್ಶನದ ವೇಳೆಯಲ್ಲಿ ಮತ್ತು ಗುಂಪು ಚರ್ಚೆಯಲ್ಲಿ ತಿಳಿದುಬಂದಂತೆ ಕಳೆದ ಮೂರು ವರ್ಷಗಳಲ್ಲಿ ಮಳೆ ಬೆಳೆಗಳು ಆಗದೆ ಬರಗಾಲ ಬಂದಿತ್ತು.

ಕೃಷಿ ಕಾರ್ಮಿಕರು ಬದುಕಿಗಾಗಿ ಕೂಲಿಯನ್ನು ಅವಲಂಭಿಸಿದರೂ ಕೂಲಿ ದೊರೆಯುವ ದಿನಗಳು ಕಡಿಮೆಯಾಗಿ ಬದುಕು ನಡೆಸುವುದೇ ಕಷ್ಟವಾಗಿದೆ. ಬದುಕಿನೊಂದಿಗೆ ಇವರದು ದಿನನಿತ್ಯದ ಹೋರಾಟನಡೆದಿದೆ. ಹೀಗೆ ಯಾವುದೇ ಸಂಪನ್ಮೂಲಗಳನ್ನು ಹೊಂದಿರದೆ ಅಂದರೆ

ಭೂಮಿಯಾಗಲಿ, ಬಂಡವಾಳವಾಗಲೀ, ಶಿಕ್ಷಣ ಆಧಾರಿತ ಕೌಶಲ್ಯಗಳಾಗಲಿ ಇಲ್ಲದೆ ಕೃಷಿಕಾರ್ಮಿಕರು ಆಸ್ತಿ ರಹಿತ ವರ್ಗವಾಗಿದೆ. ಸಮಾಜದಲ್ಲಿ ಈ ರೀತಿಯ ಆಸ್ತಿ ರಹಿತ ವರ್ಗಗಳನ್ನು ಸಾಮಾಜಿಕವಾಗಿ ನಿರ್ಲಕ್ಷ್ಯದಿಂದ ಕಾಣಲಾಗುತ್ತದೆ. ಆರ್ಥಿಕ, ಸಾಮಾಜಿಕ ಅಸಮಾನತೆ ಈ ವರ್ಗಗಳನ್ನು ಬದುಕಿನ ಅಂಚಿನ ತಳ್ಳಿದೆ. ಸಾಮಾಜದ ಅಂಚಿಗೆ ತಳ್ಳಲ್ಪಟ್ಟವರಾಗಿದ್ದಾರೆ. ಸಂಘಟಿತ ಹಣಕಾಸು ಮೂಲದಿಂದ ಸಾಲ ಪಡೆಯುವ ಸಾಮರ್ಥ್ಯ ಮತ್ತು ಅವಕಾಶಗಳಿಲ್ಲದೆ ಸಾಲ ಸೌಲಭ್ಯಗಳನ್ನು ಪಡೆಯಲಾಗುತ್ತಿಲ್ಲ. ಸರ್ಕಾರದ ಸಾಲ ಯೋಜನೆಗಳ ಫಲ ಪಡೆಯಲಾಗದೇ ಅಭಿವೃದ್ಧಿಯ ಹೊರಗೆ ಉಳಿದಿದ್ದಾರೆ. ಹೀಗೆ ಸರ್ಕಾರದ ಅಭಿವೃದ್ಧಿಯ ಭಾಗವೆಂದು ಪರಿಗಣಿಸಬಹುದಾದ ಸಂಘಟಿತ ಹಣಕಾಸು ವಲಯದ ಸಾಲ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಸಾಮಾಜಿಕ ಆರ್ಥಿಕವಾಗಿ ದುರ್ಬಲ ವರ್ಗವಾಗಿ ಭೂರಹಿತ ದುಡಿಮೆಗಾರರು ಸರ್ಕಾರದ ಸಾಲ ನೀತಿಗಳ ಮತ್ತು ಯಾವುದೇ ಅಭಿವೃದ್ಧಿ ಯೋಜನೆಗಳ ಪ್ರಯೋಜನ ಪಡೆಯಲಾಗದ ದುಸ್ತಿಯ ಬದುಕನ್ನು ದೂಡುತ್ತ ಅಭಿವೃದ್ಧಿ ಪ್ರಕ್ರಿಯೆಯಿಂದ ಹೊರಗುಳಿದಿದ್ದಾರೆ. ಈ ವರ್ಗಗಳು ಶಾಶ್ವತವಾಗಿ ಅಭಿವೃದ್ಧಿ ಫಲದಿಂದ ವಂಚಿತರಾಗಿರುವುದನ್ನು ಕಾಣಬಹುದು. ಸರ್ಕಾರ ಈ ವರ್ಗವನ್ನು ಸಮಾಜದ ಮುಖ್ಯ ಭಾಗವಾಗಿ ಪರಿಗಣಿಸಿ ಅವರ ಅಭಿವೃದ್ಧಿ ಹೊಂದುವ ಹಕ್ಕು ಮತ್ತು ಅವಕಾಶಗಳನ್ನು ಸೃಷ್ಟಿಸಬೇಕಾಗುತ್ತದೆ. ಈ ನಿಟ್ಟಿನ ಭವಿಷ್ಯದಲ್ಲಿ ಈ ವರ್ಗ ಅಭಿವೃದ್ಧಿಯಲ್ಲಿ ಪಾಲ್ಗೊಂಡು ಅದರ ಅನುಕೂಲ ಪಡೆದು ಯೋಗ್ಯ ಬದುಕನ್ನು ಕಟ್ಟಿಕೊಳ್ಳುವ ಮತ್ತು ಅದನ್ನು ಉತ್ತಮ ಪಡಿಸಿಕೊಳ್ಳುವ ಅವಕಾಶವನ್ನು ಸೃಷ್ಟಿಸದೇ ಹೋದರೆ ಸರ್ಕಾರದ ೧೧ನೇ ಪಂಚವಾರ್ಷಿಕ ಯೋಜನೆಯ ಮತ್ತು ಕಳೆದ ಒಂದು ದಶಕದ ಉದ್ದೇಶಿತ ಒಳಗೊಳ್ಳುವ ಅಭಿವೃದ್ಧಿ ಕೆಲವು ಉಳ್ಳವರ-ಸಮರ್ಥರ ಪಾಲಾಗುತ್ತದೆ. ಭೂರಹಿತ ಅಥವಾ ಆಸ್ತಿರಹಿತ ದುಡಿಮೆದಾರ ವರ್ಗಗಳು ಅವಕಾಶಗಳಿಲ್ಲದೇ ಅಸಮರ್ಥವಾಗಿ ನಿರಂತರ ದುಸ್ಥಿತಿ ಬದುಕನ್ನು ನಡೆಸುವಂತಾಗುತ್ತದೆ. ಈ ವರ್ಗಗಳನ್ನು ಭವಿಷ್ಯದ ಸಾಲ ನೀತಿಗಳು ಮತ್ತು ಅಭಿವೃದ್ಧಿ ನೀತಿಗಳು ನಿರ್ಲಕ್ಷಿಸಿದರೆ ದುಸ್ಥಿತಿಯಲ್ಲಿರುವ ವರ್ಗಗಳ ಜನರ ಸಂಖ್ಯೆ ಮತ್ತಷ್ಟು ಹೆಚ್ಚುತ್ತದೆ. ಸಮರ್ಥ ಆಸಮರ್ಥರ ಅಂತರ ಹೆಚ್ಚುತ್ತದೆ. ಸಮಾಜದ ಅಭಿವೃದ್ಧಿ ವಂಚಿತ ದುರ್ಬಲ ವರ್ಗಗಳ ಜನಸಂಖ್ಯೆ ಹೆಚ್ಚಿರುವುದನ್ನು ಅಧ್ಯಯನಗಳು ಗುರ್ತಿಸಿವೆ. ತಮಿಳುನಾಡಿನಲ್ಲಿ ದುರ್ಬಲ ವರ್ಗಗಳಾದ ಕೃಷಿಕಾರ್ಮಿಕರು, ಮೀನುಗಾರ ವರ್ಗ, ಭೂರಹಿತ ದುಡಿಮೆಗಾರರ ಜನಸಂಖ್ಯೆ ಹೆಚ್ಚಾಗಿದೆ ಎನ್ನಲಾಗಿದೆ. (ಸಿ.ಟಿ.ಕುರಿಯನ್:೨೦೦೦:೧೪೦). ಅದೇ ರೀತಿ ಸಾರ್ವಜನಿಕ ಬ್ಯಾಂಕುಗಳ ಸಾಲ ಸೌಲಭ್ಯಗಳು ಹಾಗೂ ಕೃಷಿ, ನೀರಾವರಿ ಕ್ಷೇತ್ರಗಳ ಮೇಲಿನ ಸರ್ಕಾರದ ಬೃಹತ್ ಸಾರ್ವಜನಿಕ ಹೂಡಿಕೆಯ ಲಾಭಗಳಿಂದ ಸಣ್ಣ ಮತ್ತು ಅತೀಸಣ್ಣ ರೈತರು ವಂಚಿತರಾದರೆ ಮುಂದೆ ಇವರು ಕೃಷಿಕಾರ್ಮಿಕ ಭೂ ರಹಿತ ದುಡಿಮೆಗಾರ ವರ್ಗಗಳಾಗಿ ಪರಿವರ್ತನೆಯಾಗಬಹುದು. ಕೃಷಿ ಕಾರ್ಮಿಕರು ಭೂರಹಿತ ಕಾರ್ಮಿಕರ ದುಸ್ಥಿತಿಯ ಬದುಕಿನ ವಿಶ್ಲೇಷಣೆಯನ್ನು ಟಿ.ಆರ್.ಚಂದ್ರಶೇಖರ ಅವರು ತಮ್ಮ ಅಧ್ಯಯನದಲ್ಲಿ ವಿಶ್ಲೇಷಿಸಿರುವುದನ್ನು ನೋಡಬಹುದು. (ಟಿ.ಆರ್. ಚಂದ್ರಶೇಖರ್:೨೦೦೦ ಹಾಗೂ ಟಿ.ಆರ್. ಚಂದ್ರಶೇಖರ್:೨೦೧೪).

ಸಿಂಧನೂರು ತಾಲ್ಲೂಕು ನೀರಾವರಿ ಪ್ರದೇಶವಾಗಿದ್ದು ಭತ್ತ ಬೆಳೆಯುವ ಪ್ರದೇಶ ಅಧಿಕದಾಗಿರುತ್ತದೆ. ಈ ಊರು ಭತ್ತ ಬೆಳೆಗೆ ಹೆಸರುವಾಸಿಯಾಗಿದ್ದರೂ ಅಧ್ಯಯನಗೊಂಡ ಗ್ರಾಮಗಳಾದ ಯಾಪಲಪರ್ವಿ ಮತ್ತು ರಾಗಲಪರ್ವಿ ಇವು ನೀರಾವರಿಯ ಕೊನೆಯ ಭಾಗದ ಗ್ರಾಮಗಳಾಗಿವೆ. ಸಮಾಜದ ವಾಸ್ತವ ಬದುಕಿನ ಸವಾಲುಗಳನ್ನು ಪ್ರತಿಬಿಂಬಿಸುವಂತಿವೆ. ಈ ಗ್ರಾಮಗಳು ಮೂಕ್ಕಾಲು ಭಾಗ ಮಳೆ ಆಶ್ರಿತವಾಗಿವೆ. ಕಾಲು ಭಾಗಕ್ಕಿಂತ ಕಡಿಮೆ ಪ್ರದೇಶ ಹಳ್ಳಗಳಲ್ಲಿನ ಬಸಿದ ನೀರಿನ್ನು ಪಂಪ್ ಸೆಟ್‌ಗಳ ಮೂಲಕ ಮೇಲೆತ್ತಿ ಹತ್ತಿ ಮತ್ತು ಜೋಳವನ್ನು ಬೆಳೆಯುತ್ತಿದ್ದಾರೆ. ಇನ್ನುಳಿದ ಭಾಗದಲ್ಲಿ ಕಾಲುವೆ ನೀರಿನ ಮೂಲಕ ಭತ್ತ ಬೆಳೆಯಲಾಗುತ್ತಿದೆ. ದೇವದುರ್ಗ ತಾಲೂಕಿನ ಜಾಲಹಳ್ಳಿ ಮತ್ತು ಹೇರುಂಡಿ ಗ್ರಾಮಗಳಲ್ಲಿ ಅಧ್ಯಯನ ನಡೆಸಲಾಯಿತು. ಹೇರುಂಡಿ ಪೂರ್ಣವಾಗಿ ಒಣ ಭೂಮಿ ಪ್ರದೇಶ. ಜಾಲಹಳ್ಳಿ ಗ್ರಾಮ ನೀರಾವರಿ ಪ್ರದೇಶವಾಗಿದ್ದು ಭತ್ತ ಮತ್ತು ಶೇಂಗ ಇತ್ಯಾದಿ ಬೆಳೆಗಳನ್ನು ಕೃಷಿ ಮಾಡುತ್ತಾರೆ. ಈ ಎಲ್ಲಾ ಗ್ರಾಮಗಳಲ್ಲಿ ಕೈಗೊಂಡ ಸಂದರ್ಶನ ಮತ್ತು ಮನೆ ಮನೆ ಬೇಟಿ ಸಂದರ್ಭದಲ್ಲಿ ತಿಳಿದುಬಂದಂತೆ ಕೃಷಿ ಕಾರ್ಮಿಕರ ಬದುಕನ್ನು ಸುಧಾರಿಸುವ ಅವಕಾಶಗಳ ಕೊರತೆಯಿಂದ ಕೃಷಿಕಾರ್ಮಿಕರು– ಭೂರಹಿತ ಕಾರ್ಮಿಕರ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ಇವರು ದೂರದ ಪೂನಾ, ಬಾಂಬೆ, ಹೈದರಾಬಾದ್, ಗೋವಾ ಮತ್ತು ಬೆಂಗಳೂರು ನಗರಗಳಿಗೆ ವಲಸೆ ಹೋಗುತ್ತಾರೆ. ನಗರಗಳಿಗೆ ವಲಸೆ ಬಂದು ವಾಸಿಸುವವರ ದುಸ್ಥಿತಿಯ ಬದುಕಿನ ಬಗ್ಗೆ ಹಲವು ಅದ್ಯಯನಗಳು ಚರ್ಚಿಸಿರುವುದನ್ನು ಕಾಣಬಹುದು. ಈ ವಲಸಿಗರಿಗೆ ನಗರಗಳಲ್ಲಿ ಸಾಮಾಜಿಕ ರಕ್ಷಣೆ–ಭದ್ರತೆಗಳಿರುವುದಿಲ್ಲ. ಅತಂತ್ರ ಬದುಕನ್ನು ನಡೆಸುತ್ತಾರೆ. ಅಭದ್ರತೆಯ ಜೀವನ ನಡೆಸುತ್ತಾ ಸರ್ಕಾರದ ಎಲ್ಲಾ ಸೌಲಭ್ಯಗಳಿಂದ ವಂಚಿತರಾಗಿ ಅಭಿವೃದ್ಧಿ ಕಾರ್ಯಕ್ರಮಗಳ ಪ್ರಯೋಜನದಿಂದ ಹೊರಗುಳಿದಿದ್ದಾರೆ ಎನ್ನಬಹುದು.

ಕೃಷಿಕಾರ್ಮಿಕರಲ್ಲಿ ತುಂಡು ಹಿಡುವಳಿ ಹೊಂದಿರುವವರು. ಕೃಷಿ ಮಾಡಲು ಹಿಂಜರಿಯುತ್ತಾರೆ. ಕಾರಣ ಕೃಷಿ ದುಬಾರಿ ಕಸುಬಾಗಿದೆ. ಕೃಷಿ ಉತ್ಪಾದನಾ ವೆಚ್ಚ ಹೆಚ್ಚಾಗಿದೆ. ಭತ್ತ ಶೆಂಗಾ ಬೆಳೆ ಬೆಳೆಯಲು ಅಧಿಕ ಖರ್ಚು ಮಾಡಬೇಕಾಗುತ್ತದೆ. ಒಟ್ಟಾರೆ ಉಳುಮೆ ಬಿತ್ತನೆ ರಾಸಯನಿಕ ಗೊಬ್ಬರ, ಕ್ರಿಮಿನಾಶಕಗಳ ಬಳಕೆ, ಕೂಲಿಕಾರ್ಮಿಕರ ಕೊರತೆಗಳಿಂದ ತುಂಡು ಭೂಮಿ ಇರುವವರು ವ್ಯವಸಾಯ ಮಾಡಲು ಮನಸ್ಸು ಮಾಡುವುದಿಲ್ಲ. ಇವರು ಈ ತುಂಡು ಹಿಡುವಳಿಗಳನ್ನು ದೊಡ್ಡ ರೈತರಿಗೆ ಗುತ್ತಿಗೆ ನೀಡಿ ನಗರಗಳಿಗೆ ವಲಸೆ ಹೋಗುತ್ತಾರೆ. ತುಂಡು ಹಿಡುವಳಿಗಳನ್ನು ಹೊಂದಿರುವ ಈ ಕೃಷಿಕಾರ್ಮಿಕ ವರ್ಗದವರಲ್ಲಿ ಕೆಲವರು ತಮ್ಮ ಭೂಮಿಗಳಿಗೆ ದಾಖಲಾತಿಗಳನ್ನು ಹೊಂದಿಲ್ಲ. ಭೂದಾಖಲೆಗಳು ತಮ್ಮ ಹೆಸರಿನಲ್ಲಿ ಇಲ್ಲದ ಕಾರಣ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆಯಲು ಸಾಧ್ಯವಿಲ್ಲ. ತಮ್ಮ ಹೆಸರಿಗೆ, ದಾಖಲೆ ಮಾಡಿಸಿಕೊಳ್ಳುವುದು ಹೆಚ್ಚು ಖರ್ಚು ಮತ್ತು ಸಮಯವನ್ನು ತೆಗೆದುಕೊಳ್ಳುತ್ತದೆ. ಹಣಕಾಸಿನ ಸಂಸ್ಥೆಗಳು ಭೂಮಿ ಇದ್ದು ಅದರ ದಾಖಲೆಗಳ ಆಧಾರದ ಮೇಲೆಯೇ ಸಾಲ ನೀಡುವುದರಿಂದ ಇದೂ ಒಂದು ಸಮಸ್ಯೆಯಾಗಿದೆ. ತುಂಡು ಭೂಮಿ ತಮ್ಮ ಹೆಸರುಗಳಿದ್ದರೂ ಎರಡು ಕಾರಣಗಳಿಂದ ಬ್ಯಾಂಕುಗಳಿಂದ ಸಾಲ ಸೌಲಭ್ಯ ಪಡೆಯಲು ಸಾಧ್ಯವಾಗುತ್ತಿಲ್ಲ.

ಬ್ಯಾಂಕುಗಳು ಬೆಳೆ ಪ್ರಮಾಣ-ಉತ್ಪನ್ನ ಪ್ರಮಾಣ ಮತ್ತು ಹಿಡುವಳಿ ವಿಸ್ತೀರ್ಣದ ಆಧಾರದ ಮೇಲೆ ಸಾಲ ಸೌಲಭ್ಯ ಒದಗಿಸುತ್ತವೆ. ಬ್ಯಾಂಕುಗಳಿಂದ ಸಾಲ ಸೌಲಭ್ಯ ಪಡೆಯುವ ಪ್ರಕ್ರಿಯೆ ದುಬಾರಿಯಾದದ್ದು. ಒಂದು ಪ್ರದೇಶದ ಎಲ್ಲಾ ಬ್ಯಾಕುಗಳಿಂದ ಸಾಲ ಪಡೆಯುವವರು ಬೇಬಾಕಿ ಪತ್ರ ಪಡೆಯಬೇಕು. ಈ ಪತ್ರ ಪಡೆಯಲು ಖರ್ಚು ಭರಿಸಬೇಕು. ಬ್ಯಾಂಕಿಗೆ ತಮ್ಮ ಸಾಗುವಳಿ ಭೂಮಿಯನ್ನು ಬ್ಯಾಂಕಿನ ಹೆಸರಲ್ಲಿ ನೊಂದಾಯಿಸಬೇಕು. ನೊಂದಣಿ ಖರ್ಚು ಅಧಿಕ, ನಿಯಮಗಳನ್ನು ಪಾಲಿಸಿ ಸೂಕ್ತ ದಾಖಲೆಗಳನ್ನು ನೀಡಿದರೂ ಬ್ಯಾಂಕುಗಳು ನೀಡುವ ಸಾಲದ ಪ್ರಮಾಣ ಅತ್ಯಂತ ಕಡಿಮೆ ಹಾಗೂ ಸಾಲ ಪಡೆಯಲು ವರ್ಷಗಳೇ ಕಾಯಬೇಕು. ಈ ಎಲ್ಲಾ ಕಾರಣಗಳಿಂದ ತುಂಡುಭೂಮಿ ಹೊಂದಿರುವ ಅತೀಸಣ್ಣ ರೈತರು ಮತ್ತು ಕೃಷಿಕಾರ್ಮಿಕರು ಸಂಘಟಿತ ಸಾಲ ಮೂಲದಿಂದ ಸಾಲಸೌಲಭ್ಯ ಪಡೆಯಲು ಇಚ್ಚಿಸುವುದಿಲ್ಲ.

### ೪.೫. ಅಧ್ಯಯನ ಕ್ಷೇತ್ರದ ಕುಟುಂಬಗಳ ವೃತ್ತಿ

ಬಹುತೇಕರು ಕೃಷಿ ಅವಂಬಿಸಿದ್ದಾರೆ. ಅಂದರೆ ಶೇಕಡಾ ೬೬.೪೫ ಕ್ಕಿಂತ ಹೆಚ್ಚು ಜನರು ಸಾಗುವಳಿಯಲ್ಲಿ ತೊಡಗಿದ್ದಾರೆ. ಕೆಲವರು ಸೇವಾ ಕ್ಷೇತ್ರದ ವೃತ್ತಿಯಲ್ಲಿ ತೊಡಗಿದ್ದರೂ ಮುಖ್ಯ ವೃತ್ತಿ ಸಾಗುವಳಿಯಾಗಿರುತ್ತದೆ. ಅಂದರೆ ಶೇಕಡಾ ೫ ಕೃಷಿಯೇತರ ವೃತ್ತಿಗಳಲ್ಲಿ ತೊಡಗಿದ್ದಾರೆ. ಕೆಲವರು ಸ್ವಉದ್ಯೋಗ-ಟೈಲರಿಂಗ್ ಇತರೆ ವೃತ್ತಿಗಳಲ್ಲಿ ತೊಡಗಿದ್ದಾರೆ. ಹೀಗಿದ್ದು ಶೇಕಡಾ ೨೮ರಷ್ಟು ಜನ ಕೂಲಿ ಮಾಡುತ್ತಿದ್ದು ಸಾಧಾರಣ ಮಟ್ಟದ ಬದುಕನ್ನು ನಡೆಸುತಿದ್ದಾರೆ. ಉದ್ಯೋಗ ಹರಸುತ್ತಾ ನಗರಗಳಿಗೆ ವಲಸೆ ಹೋಗುತ್ತಿದ್ದಾರೆ. ಸಾಗುವಳಿ ಮಾಡುವವರಲ್ಲಿ ಲಿಂಗಾಯತ ಸಮುದಾಯ ಉತ್ತಮ ಬದುಕನ್ನು ನಡೆಸುತ್ತಿದ್ದು ಇವರಲ್ಲಿ ಶಿಕ್ಷಣ ಮಟ್ಟ ಸಹ ಉತ್ತಮವಾಗಿದೆ. ಇವರಲ್ಲಿ ಕೆಲವರು ಕೃಷಿ ವೃತ್ತಿಯಲ್ಲಿ ತೊಡಗಿದ್ದರೂ ಕಾಮಗರಿ ಗುತ್ತಿಗೆ, ಸೇವಾ ವಲಯದ ಚಟುವಟಿಕೆಗಳು, ವ್ಯಾಪಾರ-ವ್ಯವಹಾರಗಳಲ್ಲಿ ತೊಡಗಿದ್ದಾರೆ. ದೇವದುರ್ಗ ತಾಲ್ಲೂಕಿನ ಹೇರಂಡಿ ಗ್ರಾಮದಲ್ಲಿ ಲಿಂಗಾಯತ ಸಮುದಾಯದವರ ಮುಖ್ಯ ವೃತ್ತಿ ಕೃಷಿಯಾಗಿದ್ದು ಇವರೆಲ್ಲಾ ಜಮೀನ್ದಾರರು. ಇವರಲ್ಲಿ ಕೆಲವರು ಬಡ್ಡಿ ವ್ಯವಹಾರ ನಡಿಸುತ್ತಿದ್ದಾರೆ. ಆದರೆ ಯಾರು ಯಾವ ರೀತಿಯ ಬಡ್ಡಿ ವ್ಯವಹಾರ ನಡಿಸತ್ತಿದ್ದಾರೆ ಎಂಬುದು ನಿರ್ದಿಷ್ಟವಾಗಿ ತಿಳಿದುಬರದಿದ್ದರೂ ಸಂದರ್ಶನದ ಸಮಯದಲ್ಲಿ ಅನೌಪಚಾರಿಕ ಗುಂಪು ಚರ್ಚೆಯಲ್ಲಿ ಈ ವಿಷಯ ತಿಳಿದುಬಂದಿತು. ಈ ಗ್ರಾಮದಲ್ಲಿ ಲಿಂಗಾಯತ ಮತ್ತು ಪರಿಶಿಷ್ಟರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಕೂಲಿ ಕೆಲಸದಲ್ಲಿ ತೊಡಗಿರುವವರಲ್ಲಿ ಶೇಕಡಾ ೮೨ ಜನರು ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಸೇರಿದ್ದಾರೆ. ಶೇಕಡಾ ೧೮ರಷ್ಟು ಕೂಲಿ ಮಾಡುವವರು ಹಿಂದುಳಿದ ಜಾತಿಗೆ ಸೇರಿದ್ದಾರೆ. ಕೂಲಿ ಕೆಲಸ ಮಾಡುವವರಲ್ಲಿ ಲಿಂಗಾಯತ ಜಾತಿಗೆ ಸೇರಿದವರು ಯಾರು ಕಂಡುಬಂದಿಲ್ಲ. ಶೇಕಡಾ ೮೨ರಷ್ಟು ಕೂಲಿ ಕೆಲಸದಲ್ಲಿ ತೊಡಗಿರುವವರಲ್ಲಿ ಎಸ್‌ಟಿ ಜಾತಿಗೆ ಸೇರಿರುವವರು ಹೆಚ್ಚಾಗಿದ್ದರೆ ಇವರ ಪ್ರಮಾಣ ಶೇಕಡಾ ೫೮ರಷ್ಟು, ಸಾಗುವಳಿದಾರರಲ್ಲಿ ಪರಿಶಿಷ್ಟ ಜಾತಿ ಜನಾಂಗದವರಿದ್ದರೂ ಇವರೆಲ್ಲಾ ಅತೀ ಸಣ್ಣ ಮತ್ತು ಸಣ್ಣರೈತರಾಗಿದ್ದು ತಮ್ಮ ಕೃಷಿ ವೃತ್ತಿಯಿಂದ ಉತ್ತಮ ಬದುಕು ಕಟ್ಟಿಕೊಳ್ಳುವುದು ಸಾಧ್ಯವಾಗಿಲ್ಲ.

ಕೂಲಿ ವೃತ್ತಿಯಲ್ಲಿ ತೊಡಗಿರುವವರಲ್ಲಿ ಬಹುತೇಕರು ಕೃಷಿ ಕಾರ್ಮಿಕರು, ಭೂರಹಿತ ಕಾರ್ಮಿಕರು ಹಾಗೂ ಅತೀಸಣ್ಣ ರೈತರು. ರಾಯಚೂರು ಜಿಲ್ಲೆಯಲ್ಲಿ ಕೃಷಿಕಾರ್ಮಿಕರು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಜಿಲ್ಲೆಯಲ್ಲಿ ಒಟ್ಟು ಕೆಲಸಗಾರರಲ್ಲಿ ಸಾಗುವಳಿದಾರರ ಸಂಖ್ಯೆ ಕಡಿಮೆಯಾಗಿ ಕೃಷಿಕಾರ್ಮಿಕರ ಸಂಖ್ಯೆ ಹೆಚ್ಚುತ್ತಿದೆ ಎಂಬುದನ್ನು ಜನಗಣತಿಯ ಮೂಲಕ ತಿಳಿದುಕೊಳ್ಳಬಹುದು. ೨೦೦೧ರ ಜನಗಣತಿ ಪ್ರಕಾರ ರಾಯಚೂರು ಜಿಲ್ಲೆಯಲ್ಲಿ ಶೇಕಡಾ ೩೭.೧೪ರಷ್ಟು ಸಾಗುವಳಿದಾರರಿದ್ದರೂ ೨೦೧೧ರ ಹೊತ್ತಿಗೆ ಜನಗಣತಿ ಪ್ರಕಾರ ಇದು ಶೇ ೩೩.೫೦ಕ್ಕೆ ಕುಸಿದಿದ್ದು ಸಾಗುವಳಿ ಮಾಡುವವರು ಕಡಿಮೆಯಾಗಿರುವುದನ್ನು ಕಾಣಬಹುದು. ಅಂದರೆ ಒಂದು ದಶಕದ ಅವಧಿಯಲ್ಲಿ ಶೇಕಡಾ ೪ರಷ್ಟು ಸಾಗುವಳಿದಾರರು ಕಡಿಮೆಯಾಗಿದ್ದಾರೆ. ಅದೇ ರೀತಿ ೨೦೦೧ರ ಜನಗಣತಿ ಪ್ರಕಾರ ಒಟ್ಟು ಸಾಗುವಳಿದಾರರಲ್ಲಿ ಶೇ ೨೬.೦೨ರಷ್ಟು ಕೃಷಿಕಾರ್ಮಿಕರಿದ್ದರು ೨೦೧೧ರ ಜನಗಣತಿ ಪ್ರಕಾರ ಇದು ಶೇ.೨೯.೫೭ಕ್ಕೆ ಹೆಚ್ಚಾಗಿದೆ.[೧]

ಕರ್ನಾಟಕ ರಾಜ್ಯದಲ್ಲಿ ಉಡುಪಿ, ದಕ್ಷಿಣ ಕನ್ನಡ ಮತ್ತು ಬೆಂಗಳೂರು ನಗರ ಮತ್ತು ಗ್ರಾಮಾಂತರ ಜಿಲ್ಲೆಯನ್ನು ಹೊರತು ಪಡಿಸಿ ಉಳಿದ ಎಲ್ಲಾ ಜಿಲ್ಲೆಗಳಲ್ಲಿ ಕೃಷಿಕಾರ್ಮಿಕರ ಸಂಖ್ಯೆ ಹೆಚ್ಚುತ್ತಿರುವುದನ್ನು ಜನಗಣತಿ ದೃಡಪಡಿಸಿದೆ. ಬೆಂಗಳೂರು ನಗರ ಮತ್ತು ಗ್ರಾಮೀಣ ಜಿಲ್ಲೆಗಳಲ್ಲಿ ಕೃಷಿಕಾರ್ಮಿಕರ ಸಂಖ್ಯೆ ಕಡಿಮೆಯಾಗಿದೆ. ಈ ಕೆಳಗಿನ ಕೋಷ್ಟಕ ರಾಯಚೂರು ಜಿಲ್ಲೆ ಹಾಗೂ ಕರ್ನಾಟಕ ರಾಜ್ಯದ ಬಹುತ್ತೇಕ ಜಿಲ್ಲೆಗಳಲ್ಲಿ ಕೃಷಿಕಾರ್ಮಿಕರ ಸಂಖ್ಯೆ ಹೆಚ್ಚಿರುವುದನ್ನು ನೋಡಬಹುದು.

**ಒಟ್ಟು ಕೆಲಸಗಾರರ ಮತ್ತು ಕೃಷಿ ಕಾರ್ಮಿಕರ ಶೇಕಡಾವಾರು ಬದಲಾವಣೆ ೨೦೦೧-೨೦೧೧**

೨೦೧೧ರ ಜನಗಣತಿ ಪ್ರಕಾರ ರಾಯಚೂರು ಜಿಲ್ಲೆಯ ಕೃಷಿ ಕೂಲಿ ಕಾರ್ಮಿಕರ ಸಂಖ್ಯೆ ಹೆಚ್ಚಾಗಿದೆ. ೨೦೦೧ರಲ್ಲಿ ಈ ಜಿಲ್ಲೆಯ ಒಟ್ಟು ಕೆಲಸಗಾರರಲ್ಲಿ ಸಾಗುವಳಿದಾರರ ಪ್ರಮಾಣ ಶೇಕಡಾ ೩೭.೧೪ರಷ್ಟಿದ್ದದ್ದು ೨೦೧೧ಕ್ಕೆ ೩೩.೫೦ಕ್ಕೆ ಕುಸಿದಿದೆ. ೨೦೦೧ರಲ್ಲಿ ಈ ಜಿಲ್ಲೆಯ ಒಟ್ಟು ಕೆಲಸಗಾರರಲ್ಲಿ ಕೃಷಿಕೂಲಿ ಕಾರ್ಮಿಕರ ಸಂಖ್ಯೆ ಶೇಕಡಾ ೨೮.೧೫ರಷ್ಟಿದ್ದದ್ದು ೨೦೧೧ಕ್ಕೆ ೨೯.೫೭ಕ್ಕೆ ಹೆಚ್ಚಾಗಿದೆ. ಕರ್ನಾಟಕ ಮುಖ್ಯವಾಗಿ ಹೈದ್ರಾಬಾದ್ ಭಾಗದಲ್ಲಿ ರಾಯಚೂರು ಜಿಲ್ಲೆಯನ್ನು ಒಳಗೊಂಡಂತೆ ಕೃಷಿಕೂಲಿ ಕಾರ್ಮಿಕರ ಸಂಖ್ಯೆ ಹೆಚ್ಚಾಗಿರುವುದು ಹಾಗು ಅದಕ್ಕೆ ಕಾರಣವಾದ ಅಂಶಗಳನ್ನು ವಿಶ್ಲೇಷಿಸಲಾಗಿದೆ.

೪.೬. ಅಧ್ಯಯನ ಕ್ಷೇತ್ರದ ಕುಟುಂಬಗಳ ವೃತ್ತಿಯ ಜಾತಿವಾರು ವಿಶ್ಲೇಷಣೆ

| ಜಾತಿ | ಸಂದರ್ಶನಕ್ಕೆ ಆಯ್ಕೆಗೊಂಡ ರೈತರ ವೃತ್ತಿಯ ಜಾತಿವಾರು ವಿಶ್ಲೇಷಣೆ; (ಸಂಖ್ಯೆಗಳಲ್ಲಿ) | | | | | | | |
|---|---|---|---|---|---|---|---|---|
| | ತಾಲ್ಲೂಕು (ಎ) | | | | | ತಾಲ್ಲೂಕು (ಬಿ) | | |
| | ಸಾಗುವಳಿ | ಕೃಷಿ ಕಾರ್ಮಿಕರು | ಇತರೆ | ಒಟ್ಟು | ಸಾಗುವಳಿ | ಕೃಷಿ ಕಾರ್ಮಿಕರು | ಇತರೆ | ಒಟ್ಟು |
| ಲಿಂಗಾಯತ | ೧೬ | – | ೪ | ೨೦ | ೪೫ | ೨ | ೬ | ೫೩ |
| ಹಿಂದುಳಿದ ವರ್ಗ | ೧೩ | ೩ | ೨ | ೧೮ | ೪೩ | ೧೦ | ೫ | ೫೮ |
| ಪರಿಶಿಷ್ಟ ಜಾತಿ | ೧೦ | ೭ | – | ೧೭ | ೨೦ | ೧೪ | - | ೩೪ |
| ಪರಿಶಿಷ್ಟ ಪಂಗಡ | ೫೦ | ೨೯ | – | ೭೯ | ೧೪ | ೨೬ | – | ೪೦ |
| | – | – | – | – | – | – | – | – |
| ಒಟ್ಟು | ೯೦ | ೩೯ | ೬ | ೧೩೪ | ೧೨೨ | ೫೨ | ೧೧ | ೧೮೫ |

ಮೂಲ: ಕ್ಷೇತ್ರ ಕಾರ್ಯ, ಸೂಚನೆ; ತಾಲ್ಲೂಕು ಎ– ಸಿಂಧನೂರು ಬಿ–ದೇವದುರ್ಗ

ಕೃಷಿಯೇ ಜನರ ಪ್ರಧಾನ ವೃತ್ತಿ. ಲಿಂಗಾಯತ ಸಮುದಾಯದವರು ಸಾಗುವಳಿ ಜೊತೆಗೆ ವ್ಯಾಪಾರ, ಗುತ್ತಿಗೆ, ಸೇವಾ ವಲಯದ–ಸಾರಿಗೆ ಸೇವೆ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದಾರೆ. ಪರಿಶಿಷ್ಟ ಜಾತಿ ಜನಾಂಗದ ಸಮುದಾಯವೂ ಕೃಷಿಯನ್ನು ಅವಲಂಬಿಸಿದೆ. ಅದರೊಂದಿಗೆ ಕೂಲಿ ಮಾಡುತ್ತಾರೆ. ಹಿಂದುಳಿದ ವರ್ಗಗಳ ಕೃಷಿಯನ್ನು ಅವಲಂಬಿಸಿದ್ದಾರೆ. ಇವರಲ್ಲಿ ಶೇಕಡಾ ೧೭ರಷ್ಟು ಹಿಂದುಳಿದ ವರ್ಗಗಳು ಕೂಲಿಯಲ್ಲಿ ತೊಡಗಿದ್ದಾರೆ. ಒಟ್ಟು ಶೇಕಡಾ ೨೮.೫೨ರಷ್ಟು ಜನ ಕೂಲಿಯನ್ನು ಅವಲಂಬಿಸಿದ್ದು ಇವರೆಲ್ಲಾ ಕೃಷಿ ಮತ್ತು ಭೂರಹಿತ ಕಾರ್ಮಿಕರಾಗಿದ್ದಾರೆ. ಕೃಷಿಕಾರ್ಮಿಕರಲ್ಲಿ ಶೇಕಡಾ ೮೫.೭೧ರಷ್ಟು ಎಸ್‌ಸಿಎಸ್‌ಟಿ ಸಮುದಾಯಕ್ಕೆ ಸೇರಿದ್ದಾರೆ. ಸಮಾಜದ ಕೆಳವರ್ಗದ ವರ್ಗಗಳೆಂದು ಗುರುತಿಸಲ್ಪಡುವ ಎಸ್‌ಸಿಎಸ್‌ಟಿ ಜಾತಿಗಳು ಕೂಲಿಯನ್ನು ಅವಲಂಬಿಸಿದ್ದು ದುಸ್ಥಿತಿಯಲ್ಲಿರುವುದನ್ನು ತಿಳಿಯಬಹುದು. ಸರ್ಕಾರದ ಅಭಿವೃದ್ಧಿ ನೀತಿ ಯೋಜನೆಗಳ ಫಲಗಳಿಂದ ದೂರವಿರುವ ಈ ವರ್ಗಗಳು ನಿರಂತರ ನಿರ್ಲಕ್ಷಕ್ಕೆ ಒಳಗಾಗಿದ್ದಾರೆ. ಕೂಲಿಯೇ ಮುಖ್ಯ ವೃತ್ತಿಯಾಗಿರುವ ಈ ವರ್ಗಗಳ ಕೃಷಿ ಕಾರ್ಮಿಕರು ಸಾಂಸ್ಥಿಕ ಮತ್ತು ಸಾಂಸ್ಥಿಕೇತರ (ಸಂಘಟಿತ ಮತ್ತು ಅಸಂಘಟಿತ) ಹಣಕಾಸು ಮೂಲದಿಂದ ಸಾಲಸೌಲಭ್ಯ ಪಡೆಯಲಾಗುತ್ತಿಲ್ಲ. ಸಾಲ ಬಡತನ ನಿರ್ಮೂಲನೆ ಅಸ್ತ್ರ ಎಂಬ ಸಂಪ್ರದಾಯಿಕ ವಾದವನ್ನು ವಿಶ್ಲೇಷಿಸುವುದಾದರೆ ಈ ವಾದವು ಸತ್ಯಕ್ಕೆ ದೂರವಾದುದು. ಕಾರಣ ಒಂದು ವೇಳೆ ಈ ವಾದವನ್ನು– ಸಾಲ ಬಡತನ ನಿರ್ಮೂಲನೆ ಅಸ್ತ್ರ ಎಂಬ ಹಿನ್ನೆಲೆಯಲ್ಲಿ ನೋಡುವುದಾದರೆ ಅದರಿಂದ ಲಾಭ ಪಡೆದ ಸಮಾಜದ ಆರ್ಥಿಕ ಮತ್ತು ಸಾಮಾಜಿಕವಾಗಿ ಪ್ರಬಲವಾಗಿರುವ ಸಮುದಾಯಗಳಿಗೆ ಅನ್ವಯಿಸುತ್ತದೆ. ಆದರೆ ಸಮಾಜದ ಕೆಳವರ್ಗಗಳಿಗೆ ಅನ್ವಯಿಸುವುದಿಲ್ಲ, ಸಂಘಟಿತ ಹಣಕಾಸು ವಲಯದಿಂದ ಸಾಲ ಪಡೆಯಲು ಸಾಧ್ಯವಾಗದ ಅಂದರೆ ಬ್ಯಾಂಕುಗಳಿಗೆ ಭದ್ರತೆ ನೀಡಿ ಸಾಲ ಸೌಲಭ್ಯ ಪಡೆಯಲಾಗದ ಹಾಗು ಸಾಗುವಳಿ ಮಾಡಲಾಗದ, ತುಂಡು ಭೂಮಿಗಳಿದ್ದು, ಭೂ ದಾಖಲೆ ತಮ್ಮ ಹೆಸರಿನಲ್ಲಿ ಇಲ್ಲದ ಅತಿಸಣ್ಣ ರೈತರು, ಕೃಷಿ ಕಾರ್ಮಿಕರು, ಭೂರಹಿತ ಕಾರ್ಮಿಕರ ವರ್ಗಗಳಿಗೆ ಸಾಲದ ಬಗೆಗಿನ ಸಾಂಪ್ರದಾಯಿಕ ವಾದ ಅನ್ವಿಸುವುದಿಲ್ಲವೆನ್ನಬಹುದು.

## ೪.೭. ಅಧ್ಯಯನ ಕ್ಷೇತ್ರದ ಕುಟುಂಬಗಳ ಜಾತಿವಾರು ಶೈಕ್ಷಣಿಕ ವಿಶ್ಲೇಷಣೆ

| ಸಂದರ್ಶನಕ್ಕೆ ಒಳಪಡಿಲಾದ ಕುಟುಂಬಗಳ ಜಾತಿವಾರು ಶೈಕ್ಷಣಿಕ ವಿಶ್ಲೇಷಣೆ | | | | | | | | | | |
|---|---|---|---|---|---|---|---|---|---|---|
| ಜಾತಿ | ತಾಲ್ಲೂಕು (ಎ) | | | | | ತಾಲ್ಲೂಕು (ಬಿ) | | | | |
| | ೧ | ೨ | ೩ | ೪ | ೫ | ೧ | ೨ | ೩ | ೪ | ೫ |
| ಲಿಂಗಾಯತ | ೭ | ೧೦ | ೨ | ೧ | ೨೦ | ೧೫ | ೨೭ | ೮ | ೩ | ೫೩ |
| ಹಿಂದುಳಿದ ವರ್ಗ | ೯ | ೩ | ೦ | ೬ | ೧೮ | ೨೨ | ೧೧ | – | ೨೩ | ೫೬ |
| ಪರಿಶಿಷ್ಟ ಜಾತಿ | ೧ | – | – | ೧೬ | ೧೭ | ೬ | – | – | ೨೮ | ೩೪ |
| ಪರಿಶಿಷ್ಟ ಪಂಗಡ | ೧೬ | ೫ | – | ೫೯ | ೮೦ | ೫ | – | – | ೩೪ | ೩೯ |
| ಇತರೆ | – | – | – | – | – | – | ೩ | – | – | ೩ |
| ಒಟ್ಟು | ೩೩ | ೧೮ | ೨ | ೮೨ | ೧೩೫ | ೪೮ | ೪೧ | ೮ | ೮೮ | ೧೮೫ |

ಮೂಲ: ಕ್ಷೇತ್ರ ಕಾರ್ಯ, ತಾಲ್ಲೂಕು ಎ–ಸಿಂಧನೂರು ಬಿ–ದೇವದುರ್ಗ. ೧–ಪ್ರಾಥಮಿಕ ೨–ಹೈಸ್ಕೂಲ್ ೩–ಕಾಲೇಜು ೪–ಅನಕ್ಷರತೆ ೫–ಒಟ್ಟು

ಭೂಹಿಡುವಳಿ ಆರ್ಥಿಕ ಸೂಚಿಯಾದರೆ ಜಾತಿ ಮತ್ತು ಶಿಕ್ಷಣ ಸಾಮಾಜಿಕ ಸೂಚಿಗಳಾಗಿವೆ. ಈ ಮೂರು ಸೂಚಿಗಳು ಸಾರ್ವಜನಿಕ ಬ್ಯಾಂಕುಗಳಿಂದ ಸಾಲ ಪಡೆಯುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಶಿಕ್ಷಣವುಳ್ಳವರಿಗೆ ಸಂಘಟಿತ ಹಣಕಾಸು ವಲಯದ ಸಾಲ ನಿಯಮಗಳು, ಸಾಲ ಯೋಜನೆಗಳು, ಅವುಗಳ ಅನುಕೂಲದ ಬಗ್ಗೆ ಮಾಹಿತಿ ತಿಳುವಳಿಕೆ ಇರುತ್ತದೆ. ಸರ್ಕಾರದ ಸಾಲ ಯೋಜನೆಗಳು ಮತ್ತು ಬ್ಯಾಂಕಿನ ನಿಯಮಗಳನ್ನು ಅರ್ಥ ಮಾಡಿಕೊಂಡು ನಿರಂತರವಾಗಿ ಪ್ರಯತ್ನಸುತ್ತಾ ಇವುಗಳ ಲಾಭ ಪಡೆದುಕೊಳ್ಳುತ್ತಾರೆ. ಸಾಲ ನಿಯಮಗಳನ್ನು ತಿಳಿದುಕೊಳ್ಳುವುದು ಇವರಿಗೆ ಕಷ್ಟವೆನಿಸುವುದಿಲ್ಲ. ಎಲ್ಲಾ ವರ್ಗಗಳ ಜನರಿಗೆ ಬ್ಯಾಂಕುಗಳ ಸಾಲ ಸೌಲಭ್ಯಗಳ ಮತ್ತು ಸಾಲ ಯೋಜನೆಗಳ ಮಾಹಿತಿ ತಿಳಿದಿರುತ್ತದೆ ಎಂದು ಹೇಳಲು ಸಾಧ್ಯವಿಲ್ಲ. ಈ ಹಿನ್ನಲೆಯಲ್ಲಿ ಸಂದರ್ಶಿಸಲ್ಪಟ್ಟ ಕುಟುಂಬಗಳಲ್ಲಿ ಲಿಂಗಾಯತ ಸಮುದಾಯಕ್ಕೆ ಸೇರಿದವರ ಶಿಕ್ಷಣಮಟ್ಟ ಉತ್ತಮವಾಗಿದೆ. ಸಾಲ ಪಡೆದಿರುವವರಲ್ಲಿ ಬಹುತೇಕ ಲಿಂಗಾಯತ ಕುಟುಂಬಗಳ ಶಿಕ್ಷಣಮಟ್ಟ ಪ್ರಾಥಮಿಕ ಹೈಸ್ಕೂಲ್‌ಗಿಂತ ಮೇಲ್ಮಟ್ಟದಲ್ಲಿದೆ. ಇವರ ಸಾಲ ಸೌಲಭ್ಯದ ಯೋಜನೆಗಳ ಬಗ್ಗೆ ಮಾಹಿತಿ ಪಡೆಯುವ ಮತ್ತು ಅದನ್ನು ತಮ್ಮ ಅನುಕೂಲಕ್ಕೆ ಬಳಸಕೊಳ್ಳುವ ಜ್ಞಾನ ಹಿಂದುಳಿದ ಮತ್ತು ಪರಿಶಿಷ್ಟ ಜಾತಿ ಜನಾಗಗಳಿಗಿಂತ ಮೇಲ್ಮಟ್ಟದಲ್ಲಿದೆ. ಸಂದರ್ಶಿಸಲ್ಪಟ್ಟ ಬಹುತೇಕ ಎಸ್‌ಸಿಎಸ್‌ಟಿಗಳು ಅನಕ್ಷರಸ್ಥರು. ಹಿಂದುಳಿದ ವರ್ಗಗಳಲ್ಲೂ ಅನಕ್ಷರಸ್ಥರಿದ್ದಾರೆ. ಸಿಂದನೂರು ತಾಲ್ಲೂಕಿನ ಶೇಕಡಾ ೮೦ರಷ್ಟು ಕುಟುಂಬದ ಮುಖ್ಯಸ್ಥರು ಅನಕ್ಷರಸ್ಥರಾಗಿದ್ದಾರೆ. ದೇವದುರ್ಗ

ತಾಲ್ಲೂಕಿನ ಶೇಕಡಾ ೫೦ರಷ್ಟು ಕುಟುಂಬದ ಮುಖ್ಯಸ್ಥರು ಅನಕ್ಷರಸ್ಥರಾಗಿದ್ದಾರೆ. ಲಿಂಗಾಯತ ಸಮುದಾಯದವರು ಹೆಚ್ಚಿನ ಸಂಖ್ಯೆಯಲ್ಲಿ ಶಿಕ್ಷಣ ಪಡೆದಿದ್ದಾರೆ. ಇವರು ಬ್ಯಾಂಕು ಸರ್ಕಾರದ ಸಾಲ ಯೋಜನೆಗಳು, ನಿಯಮಗಳು, ಅವುಗಳ ಅನುಕೂಲಗಳ ಬಗ್ಗೆ ಮಾಹಿತಿ ಹೊಂದಿದ್ದಾರೆ. ಇವರು ಸಾಮಾಜಿಕ ಮತ್ತು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿದ್ದು ಶಿಕ್ಷಣ ಪಡೆಯುವುದರ ಬಗ್ಗೆ ಹೆಚ್ಚು ಕಾಳಜಿ ಉಳ್ಳವರಾಗಿದ್ದಾರೆ. ಲಿಂಗಾಯತ ಸಮುದಾಯದಲ್ಲಿ ಅನಕ್ಷರಸ್ಥರ ಪ್ರಮಾಣ ಕಡಿಮೆ ಇದ್ದು ಹಿಂದುಳಿದ ವರ್ಗಗಳಲ್ಲಿ ಶಿಕ್ಷಣ ಪಡೆದವರು ಹಾಗೂ ಅನಕ್ಷರಸ್ಥರೂ ಇದ್ದಾರೆ. ಆದರೆ ಪರಿಶಿಷ್ಟ ಜಾತಿ ಜನಾಂಗಗಳಿಗೆ ಸೇರಿದ ಬಹುತೇಕರು ಅನಕ್ಷರಸ್ಥರಾಗಿದ್ದಾರೆ. ಇದರಲ್ಲಿ ಎಸ್‌ಟಿ ಸಮುದಾಯದವರು ಹೆಚ್ಚಿನ ಪ್ರಮಾಣದಲ್ಲಿ ಅನಕ್ಷರಸ್ಥರಾಗಿದ್ದಾರೆ. ಸಾಲಸೌಲಭ್ಯಗಳ ಯೋಜನೆಗಳ ಮಾಹಿತಿ ಅವುಗಳ ಲಾಭ, ಪ್ರಯೋಜನ ಪಡೆಯುವಲ್ಲಿ ಶಿಕ್ಷಣ ತನ್ನದೇ ಪ್ರಭಾವ ಬೀರುತ್ತದೆ. ಕ್ಷೇತ್ರ ಕಾರ್ಯದಿಂದ ತಿಳಿದುಬಂದ್ದಂತೆ ಲಿಂಗಾಯತ ಸಮುದಾಯದವರು ಸಾಮಾಜಿಕ, ಆರ್ಥಿಕವಾಗಿ ಪ್ರಬಲರಾಗಿರುವಂತೆ ಶೈಕ್ಷಣಿಕವಾಗಿಯೂ ಉತ್ತಮ ಸ್ಥಿತಿಯಲ್ಲಿದ್ದು ಸರ್ಕಾರದ ಸಾಲ ಯೋಜನೆಗಳ ಲಾಭ ಪಡೆಯುವಲ್ಲಿ ಮಂಚೂಣಿಯಲ್ಲಿದ್ದಾರೆ. ಪರಿಶಿಷ್ಟ ಜಾತಿ ಮತ್ತು ಜನಾಂಗದ ವರ್ಗಗಳು ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿಯೂ ಹಿಂದುಳಿದಿದ್ದು ಸಾಲ ಸೌಲಭ್ಯಗಳ ಯೋಜನೆಗಳ ಬಗ್ಗೆ ಮಾಹಿತಿ ಅರಿವು ಇಲ್ಲದೇ ಸಾಲಗಳನ್ನು ಪಡೆಯುವಲ್ಲಿ ಹಿಂದೆಬಿದ್ದಿದ್ದಾರೆ. ೨೦೧೩ರ ಆರ್‌ಬಿಐ ವರದಿ ಪ್ರಕಾರ ೧ ಲಕ್ಷದವರೆಗೂ ಯಾವುದೇ ಭದ್ರತೆ ಇಲ್ಲದೇ ಕಡಿಮೆ ಬಡ್ಡಿದರದಲ್ಲಿ ಸಾಲ ಸೌಲಭ್ಯವನ್ನು ಬ್ಯಾಂಕುಗಳು ನೀಡಬಹುದು. ಈ ಮಾಹಿತಿ ಅವರಿಗೆ ತಿಳಿದಿಲ್ಲ. ಬ್ಯಾಂಕುಗಳೂ ಈ ವಿಷಯವನ್ನು ಪಾರದರ್ಶಕವಾಗಿ ಜನರಿಗೆ ಅರಿವು ಮೂಡಿಸುವ ಮಾಹಿತಿ ನೀಡುವ ಯಾವುದೇ ಪ್ರಯತ್ನ ಮಾಡಿಲ್ಲ. ಮೇಲ್ವರ್ಗದ ಸಮಯುದಾಯವಾದ ಲಿಂಗಾಯತ ಜಾತಿಯವರಿಗೂ ಈ ಬಗ್ಗೆ ಮಾಹಿತಿ ಇಲ್ಲ. ಆದರೆ ಅವರಿಗೆ ಭದ್ರತೆ ನೀಡಿ ಸಾಲ ಪಡೆಯುವ ಆರ್ಥಿಕ ಸಾಮರ್ಥ್ಯ ಇರುವುದರಿಂದ ಹಾಗೂ ಬ್ಯಾಂಕುಗಳು ಈ ವರ್ಗಕ್ಕೆ ಸಾಲಸೌಲಭ್ಯ ನೀಡುವ ಆಸಕ್ತಿ ತೋರಿಸುವುದರಿಂದ ಭದ್ರತೆ ಇಲ್ಲದೆ ಸಾಲ ಪಡೆಯುವ ಯೋಜನೆ ಬಗ್ಗೆ ತಿಳಿದುಕೊಳ್ಳುವ ಪ್ರಯತ್ನಗಳನ್ನು ಮಾಡಿರುವುದಿಲ್ಲ ಎಂಬುದು ಗುಂಪು ಚರ್ಚೆಯಿಂದ ತಿಳಿದುಬಂದಿತು. ಒಂದು ಜನರಿಗೆ ವೇಳೆ ಈ ಯೋಜನೆ ಬಗ್ಗೆ ವ್ಯವಸ್ಥಿತ ಮಾಹಿತಿ ನೀಡಿ, ಅರಿವು ಮೂಡಿಸುವ ಪ್ರಯತ್ನಗಳು ನಡೆದರೂ ಬ್ಯಾಂಕುಗಳು ಯಾವುದೇ ಭದ್ರತೆ ಇಲ್ಲದೆ ಸಹಕಾರ ಬ್ಯಾಂಕುಗಳಾಗಲೀ, ಪ್ರಾದೇಶಿಕ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕುಗಳಾಗಲೀ ಸಾಲ ಸೌಲಭ್ಯವನ್ನು ನೀಡುವುದಿಲ್ಲ.

೪.೮. ಪ್ರಾಥಮಿಕ ಕೃಷಿ ಸಹಕಾರ ಸಂಘ ಸದಸ್ಯತ್ವ ಮತ್ತು ಇತರೇ ಸ್ಥಳೀಯ ಸಂಸ್ಥೆಗಳು

| ವಿವಿಧ ರೈತ ವರ್ಗ | ತಾಲ್ಲೂಕು (ಎ) | | | | | | ತಾಲ್ಲೂಕು (ಬಿ) | | | | |
|---|---|---|---|---|---|---|---|---|---|---|---|
| | ಸಹಕಾರ ಸಂಘ | ಗ್ರಾಮ ಪಂ. | ತಾಲ್ಲೂಕು ಪಂ. | ಜಿಲ್ಲಾ ಪಂ. | ಯಾವುದು ಇಲ್ಲ | ಒಟ್ಟು | ಸಹಕಾರ ಸಂಘ | ಗ್ರಾಪ ಪಂ. | ತಾಲ್ಲೂಕು ಪಂ. | ಜಿಲ್ಲಾ ಪಂ. | ಒಟ್ಟು |
| ಅತೀ ಸಣ್ಣ ರೈತರು | ೨೮ | ೨ | – | – | | ೩೦ | ೧೮ | ೩ | – | – | ೨೧ |
| ಸಣ್ಣ ರೈತರು | ೧೮ | ೧ | ೧ | – | | ೨೦ | ೨೦ | ೨ | – | – | ೨೨ |
| ದೊಡ್ಡ ರೈತರು | ೧೮ | ೨ | – | ೧ | | ೨೧ | ೫೦ | ೪ | ೧ | ೧ | ೫೬ |
| ಕೃಷಿ ಕಾರ್ಮಿಕರು/ ಭೂರಹಿತರು | – | – | – | – | | – | – | – | – | – | – |
| ಒಟ್ಟು | ೬೪ | ೫ | ೧ | ೧ | | ೭೧ | ೮೮ | ೯ | ೮ | ೧ | ೯೯ |

ಮೂಲ: ಕ್ಷೇತ್ರಕಾರರ್ಯ, ತಾಲ್ಲೂಕು ಎ–ಸಿಂಧನೂರು ಬಿ–ದೇವದುರ್ಗ. ಜಿ.ಪಂ–ಜಿಲ್ಲಾ ಪಂಚಾಯತಿ. ಗ್ರಾ.ಪಂ–ಗ್ರಾಮ ಪಂಚಾಯತಿ, ತಾ.ಪಂ–ತಾಲೂಕು ಪಂಚಾಯತಿ

ಜಾತಿ ಮತ್ತು ಶಿಕ್ಷಣದಂತೆ ಗ್ರಾಮೀಣ ಕುಟುಂಬಗಳ ಸಾಮಾಜಿಕ ಮತ್ತು ರಾಜಕೀಯ ಜಾಗೃತಿಯು ಮುಖ್ಯವಾದದು. ಸಾಲ ಪಡೆಯಲು ಇಚ್ಚಿಸುವವರ ಗ್ರಾಮ ಮಟ್ಟದ ಸ್ಥಳೀಯ ಸಾಮಾಜಿಕ ಸಂಸ್ಥೆಗಳೊಂದಿಗಿನ ಸದಸ್ಯತ್ವ ಅಥವಾ ಗುರುತಿಸುಕೊಳ್ಳುವಿಕೆ, ಭಾಗವಹಿಸುವಿಕೆ ಅಂಶಗಳು ಮುಖ್ಯವಾದುವು. ಈ ನಿಟ್ಟಿನಲ್ಲಿ ಎರಡು ರೀತಿಯ ಅಂಶಗಳನ್ನು ಅಥವಾ ಸೂಚಿಗಳನ್ನು ಬಳಸಲಾಗಿದೆ. ಸದಸ್ಯತ್ವ ಮತ್ತು ಪಾಲ್ಗೊಳ್ಳುವಿಕೆಗೆ ಸಂಬಂದಿಸಿದಂತೆ ೧. ಸಹಕಾರ ಸಂಘಗಳು ೨. ಸ್ಥಳೀಯ ಸರ್ಕಾರ ಎಂಬ ಅಂಶಗಳನ್ನು ಪರಿಗಣಿಸಲಾಗಿದೆ. ಸಿಂಧನೂರು ತಾಲ್ಲೂಕಿನ ರಾಗಲಪರ್ವಿ ಹಾಗು ಯಾಪಲಪರ್ವಿ ಗ್ರಾಮಗಳಲ್ಲಿ ಶೇಕಡಾ ೪೦ರಷ್ಟು ಜನ ಸಹಕಾರ ಸಂಘಗಳ ಸದಸ್ಯರಾಗಿದ್ದಾರೆ. ಅದೇ ರೀತಿ ದೇವದುರ್ಗ ತಾಲ್ಲೂಕಿನ ಹೇರುಂಡಿ ಹಾಗು ಜಾಲಹಳ್ಳಿ ಗ್ರಾಮಗಳಲಿ ಶೇಕಡಾ ೪೯ ಜನ ಸಹಕಾರ ಸಂಘಗಳ ಸದಸ್ಯರಾಗಿದ್ದಾರೆ. ಸಿಂದನೂರು ತಾಲ್ಲೂಕಿನಲ್ಲಿ ಒಬ್ಬರು ಎಸ್‌ಸಿ ಜನಾಂಗಕ್ಕೆ ಸೇರಿದವರು ಮಾಜಿ ತಾಲ್ಲೂಕು ಪಂಚಾಯಿತಿ ಸದಸ್ಯರಾಗಿದ್ದು ಸಣ್ಣರೈತರಾಗಿದ್ದಾರೆ. ಅದೇ ರೀತಿ ದೇವದುರ್ಗ ತಾಲ್ಲೂಕಿನಲ್ಲಿ ಇಬ್ಬರು ಎಸ್‌ಸಿ ಜಾತಿಗೆ ಸೇರಿದವರು ಗ್ರಾಮ ಪಂಚಾಯತಿ ಸದಸ್ಯರಾಗಿದ್ದಾರೆ. ಗಮನಿಸಬೇಕಾದ ಅಂಶವೆಂದರೆ ದೊಡ್ಡರೈತರು ಸಹಕಾರ ಸಂಘಗಳು ಮತ್ತು ಸ್ಥಳೀಯ ಸರ್ಕಾರಗಳಲ್ಲಿ ಹೆಚ್ಚಾಗಿ ಪಾಲ್ಗೊಳ್ಳುತ್ತಿದ್ದಾರೆ. ಸಿಂದನೂರು ತಾಲ್ಲೂಕುನಲ್ಲಿ ಶೇಕಡಾ ೮೨ರಷ್ಟು ದೊಡ್ಡ ರೈತರು ಲಿಂಗಾಯತ ಜಾತಿಗೆ ಸೇರಿದ್ದು ಬಹುತೇಕರು ಸಹಕಾರ ಸಂಘಗಳ ಸದಸ್ಯರಾಗಿದ್ದಾರೆ. ಸಂಘಟಿತ ಬ್ಯಾಂಕಿನಿಂದ ಸಾಲಸೌಲಭ್ಯ ಪಡೆದವರಲ್ಲಿ ಈ ಜನಾಂಗದವರೇ ಹೆಚ್ಚಾಗಿದ್ದಾರೆ. ಸ್ಥಳೀಯ ಸರ್ಕಾರದ ಚಟುವಟಿಕೆಗಳಲ್ಲಿ ಸಕ್ರಿಯ ಪಾಲ್ಗೊಳ್ಳುಕೆ ಇದ್ದು ಸ್ಥಳೀಯ ಸರ್ಕಾರಗಳ, ಆರ್ಥಿಕ ಮತ್ತು ಸಾಮಾಜಿಕವಾಗಿ ಹಿಂದುಳಿದ ದುರ್ಬಲ ವರ್ಗಗಳ ಸದಸ್ಯರ ಮೇಲೆ ಪ್ರಭಾವ ಬೀರುವಷ್ಟು ಸಮರ್ಥರಿದ್ದಾರೆ. ದೇವದುರ್ಗ ತಾಲ್ಲೂಕಿನ ಶೇಕಡಾ ೪೯ರಷ್ಟು ಸಹಕಾರ ಸಂಘದ ಸದಸ್ಯರಲ್ಲಿ ಶೇಕಡಾ ೫೦ರಷ್ಟು ಸದಸ್ಯರು ಲಿಂಗಾಯತ ಜಾತಿಗೆ ಸೇರಿದ್ದಾರೆ.

ಕೋಷ್ಟಕದಲ್ಲಿ ತಿಳಿದುಬರುವಂತೆ ಕೃಷಿಕಾರ್ಮಿಕರು ಭೂರಹಿತ ವರ್ಗದವರು ಸಹಕಾರ ಸಂಘಗಳ ಸದಸ್ಯರಾಗಿಲ್ಲ. ಸದಸ್ಯರಾಗುವ ಅರ್ಹತೆ ಇವರಿಗಿಲ್ಲ. ಸದಸ್ಯರಾಗುವ ಅರ್ಹತೆಗಳಿಸಲು ಮುಖ್ಯವಾಗಿ ಭೂಮಿ ಹೊಂದಿದ್ದು ಭೂದಾಖಲಾತಿಗಳು ಅವರ ಹೆಸರಿನಲ್ಲಿ ಇರಬೇಕು. ಭೂದಾಖಲಾತಿಗಳಾದ ಪಹಣಿ ಜಮೀನನ ಖಾತೆಗಳನ್ನು ಸಹಕಾರ ಸಂಸ್ಥೆಗೆ ನೀಡಬೇಕು. ಕೃಷಿಕಾರ್ಮಿಕರು ಭೂರಹಿತರು ಸ್ಥಳೀಯ ಸರ್ಕಾರಗಳ ಸದಸ್ಯರೂ ಅಲ್ಲ, ಇವರು ವರ್ಷಕ್ಕೆ ಅರ್ಧದಷ್ಟು ಕಾಲ ವಲಸೆಯಲ್ಲಿರುವುದರಿಂದ ಹಾಗೂ ಈ ರೀತಿ ಭಾಗವಹಿಸುವ ಅವಕಾಶ, ಆಲೋಚನೆ ಎರಡೂ ಅವರಿಗಿಲ್ಲ. ಕಾರಣ ಸಹಕಾರ ಸಂಘದ ಸದಸ್ಯರಾಗಲು ಜಮೀನು ಹೊಂದಿರಬೇಕು. ಜಮೀನಿನ ದಾಖಲೆಗಳು ಇವರ ಹೆಸರಿನಲ್ಲೇ ಇರಬೇಕು. ಕೃಷಿ ಕಾರ್ಮಿಕರಿಗೆ ತುಂಡು ಭೂಮಿ ಇದ್ದು ಇದರಲ್ಲೂ ಕೆಲವರಿಗೆ ಭೂ ದಾಖಲೆಗಳಿಲ್ಲ. ಇವರಿಗೆ ಸಹಕಾರ ಸಂಘಗಳ ಸದಸ್ಯರಾಗಿ ಸಾಲ ಪಡೆಯುವ ಯಾವುದೇ ಆಸಕ್ತಿ ಇಲ್ಲ. ಇವರ ತುಂಡು ಭೂಮಿಯಲ್ಲಿ ಕೃಷಿಚಟುವಟಿಕೆ ಕೈಗೊಳ್ಳುವುದು ದುಬಾರಿ ವೆಚ್ಚದ ಕಾರ್ಯ. ಒಂದು ವೇಳೆ ಸಾಲ ಪಡೆದು ಕೃಷಿ

ಕೈಗೊಂಡರೂ ಅದರಿಂದ ದೊರೆಯುವ ಪ್ರತಿಫಲದಿಂದ ಯೋಗ್ಯ ಬದುಕು ರೂಡಿಸಿಕೊಳ್ಳಬಹುದು ಎಂಬ ಭರವಸೆಗಳಿಲ್ಲ. ಸಹಕಾರ ಸಂಘಗಳು ಕೊಡುವ ಸಾಲ ಜಮೀನಿನ ವಿಸ್ತೀರ್ಣದ ಮೇಲೆ ಅವಲಂಬಿತವಾಗಿದೆ ಹಾಗು ಸಾಗುವಳಿ ಕೈಗೊಂಡಿರಬೇಕು. ಕಡಿಮೆ ವಿಸ್ತೀರ್ಣವಿರುವವರು ಅತ್ಯಂತ ಕಡಿಮೆ ಸಾಲ ಪಡೆಯುತ್ತಾರೆ. ಅದು ಸರಿಯಾದ ಅವಧಿಗೆ ದೊರೆಯುತ್ತದೆ ಎಂಬ ವಿಶ್ವಾಸವಿಲ್ಲ. ಹಾಗೆಯೇ ಸಾಲಕ್ಕಾಗಿ ಅರ್ಜಿ ಹಾಕಿದ ವರ್ಷದ ನಂತರ ಕಡಿಮೆ ಪ್ರಮಾಣದ ಸಾಲ ದೊರೆಯಬಹುದು ದೊರೆಯದೆ ಇರಬುಹುದು. ಈ ಸಾಲದಿಂದ ದುಬಾರಿ ಕೃಷಿವೆಚ್ಚಗಳನ್ನು ಭರಿಸಲು ಸಾಧ್ಯವೇ ಇಲ್ಲ. ಹಾಗಾಗಿ ಅನಿವಾರ್ಯವಾಗಿ ಇತರೆ ಮೂಲದಿಂದ ಸಾಲ ಪಡೆಯಬೇಕಾಗುತ್ತದೆ. ಹೀಗೆ ಈ ಎಲ್ಲಾ ಸಮಸ್ಯೆಗಳಿಗೆ ಸಿಲುಕುವ ಬದಲು ಕೃಷಿಕಾರ್ಮಿಕರು ಭೂರಹಿತರು ತಮ್ಮ ತುಂಡುಭೂಮಿಗಳನ್ನು ಸ್ಥಳೀಯರಿಗೆ ಗುತ್ತಿಗೆ ನೀಡಿ ಉದ್ಯೋಗ ಹರಸುತ್ತಾ ನಗರಗಳಿಗೆ ವಲಸೆ ಹೋಗುತ್ತಾರೆ.

ಕೃಷಿಕಾರ್ಮಿಕರು ಮತ್ತು ಭೂರಹಿತ ಕಾರ್ಮಿಕರು ಯಾವುದೇ ಸಂಪನ್ಮೂಲಗಳನ್ನು ಹೊಂದಿರದೆ ಅಭಿವೃದ್ಧಿ ಪ್ರಕ್ರಿಯೆಯಿಂದ ಹೊರಗುಳಿದಿದ್ದಾರೆ. ಸರ್ಕಾರ ಈ ಕಾರ್ಮಿಕ ವರ್ಗದ ಸುಧಾರಣೆಗೆ ಪ್ರಮಾಣಿಕ ಪ್ರಯತ್ನ ಮಾಡಬೇಕಿದೆ. ಈ ವರ್ಗಗಳು ಸಂಘಟಿತ ವಲಯದಿಂದ ಸಾಲಸೌಲಭ್ಯ ಪಡೆಯಲು ಅನುಕೂಲವಾಗುವಂತಹ ಪೂರಕ ಅಂಶಗಳನ್ನು ಸರ್ಕಾರದ ಸಾಲ ನೀತಿಗಳು ಹೊಂದಿರುಬೇಕು. ಈ ವರ್ಗಗಳು ಆರ್ಥಿಕ–ಸಾಮಾಜಿಕವಾಗಿ ಯೋಗ್ಯ ಬದುಕನ್ನು ರೂಪಿಸಿಕೊಳ್ಳಲು ಅನುವಾಗುವಂತೆ ಸಹಾಯಧನದ ಸಾಲಸೌಲಭ್ಯಗಳನ್ನು ಪೂರೈಕೆಯಾಗಬೇಕು. ಈ ವರ್ಗಗಳು ಸಾರ್ವಜನಿಕ ಹೂಡಿಕೆ ಮತ್ತು ಸರ್ಕಾರದ ಅಭಿವೃದ್ಧಿ ನೀತಿಗಳ ಪ್ರಯೋಜನ ಪಡೆಯಲು ಅನಕೂಲವಾಗುವಂತೆ ಭೂಮಿ ಇತ್ಯಾದಿ ಸಂಪನ್ಮೂಲಗಳನ್ನು ಹೊಂದುವ ಅವಕಾಶಗಳು ಸೃಷ್ಟಿಯಾಗಬೇಕು. ಈ ಮೂಲಕ ದುರ್ಬಲ ವರ್ಗಗಳು ಪ್ರಬಲ ವರ್ಗಗಳ ರೀತಿಯಲ್ಲಿ ಸಾರ್ವಜನಿಕ ಹಣಕಾಸು ವ್ಯವಸ್ಥೆಯಿಂದ ಸಹಜವಾಗಿ ಸಾಲಸೌಲಭ್ಯ ಪಡೆಯುವಂತಾಗಬೇಕು. ಕೃಷಿ ಚಟುವಟಿಕೆ ಕೈಗೊಳ್ಳಲು ಅವರಿಗೆ ಕೃಷಿ ಅಥವಾ ಕೃಷಿಯೇತರ ಚಟುವಟಿಕೆಗಳ ತಾಂತ್ರಿಕ ತರಬೇತಿಯನ್ನು ಸರ್ಕಾರ ಒದಗಿಸಬೇಕು. ಈ ವರ್ಗಗಳ ಸಾಮರ್ಥ್ಯ ವೃದ್ಧಿಗೆ ಅನುಕೂಲವಾಗುವ ನೀತಿ–ಯೋಜನೆಗಳನ್ನು ಸರ್ಕಾರ ರೂಪಿಸಿ ಇತರರಂತೆ ಅಭಿವೃದ್ಧಿ ಪ್ರಕ್ರಿಯೆ ಪ್ರಯೋಜನ ಪಡೆದುಕೊಳ್ಳಬೇಕು. ಈ ಮೂಲಕ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಈ ವರ್ಗಗಳೂ ಸಕ್ರೀಯವಾಗಿ ಪಾಲ್ಗೊಳ್ಳುವಂತಾಗಬೇಕು. ಸರ್ಕಾರ ಈ ಪ್ರಯತ್ನವನ್ನು ಮಾಡದಿದ್ದಲ್ಲಿ ತಲತಲಾಂತರದಿಂದ ಸಾಲಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗದೇ ಇರುವಂತೆ ಮುಂದೆಯು ಇದು ಮುಂದುವರಿದು ಈ ವರ್ಗಗಳು ಶಾಸ್ವತವಾಗಿ ನಿರ್ಲಕ್ಷಿತ ಗುಂಪುಗಳಾಗಿ ಉಳಿಯುತ್ತವೆ. ಆ ಮೂಲಕ ಅಭಿವೃದ್ಧಿಯ ಪ್ರಕ್ರಿಯೆಯಿಂದ ಶಾಸ್ವತವಾಗಿ ಹೊರಗುಳಿಯುತ್ತವೆ. ಹಾಗಾದಲ್ಲಿ ೧೧ನೇ ಪಂಚವಾರ್ಷಿಕ ಯೋಜನೆಯ ಅಥವಾ ಕೇಂದ್ರ ಸರ್ಕಾರದ ಇತ್ತೀಚಿನ "ಎಲ್ಲರನ್ನೂ ಒಳಗೊಂಡ" ಅಭಿವೃದ್ಧಿಯ ಸಿದ್ಧಾಂತ ಸಾರ್ಥಕತೆ ಪಡೆಯದೆ ಕೇವಲ ಚರ್ಚೆಯಲ್ಲಿ ಅಥವಾ ಸಿದ್ಧಾಂತದಲ್ಲಿ ಉಳಿದು ಹೋಗುತ್ತದೆ. ಕೃಷಿಕಾರ್ಮಿಕ ಅಥವಾ ಭೂರಹಿತ ವರ್ಗಗಳಲ್ಲಿ ಬಹುತೇಕ–ಹೆಚ್ಚಿನ ಸಂಖ್ಯೆಯ ಜನ ದಲಿತ ಸಮುದಾಯಕ್ಕೆ ಸೇರಿದ್ದಾರೆ.

ಈ ಸಮುದಾಯಗಳ ಜನರು ದುಸ್ಥಿತಿಯ ಬದುಕನ್ನು ನಡೆಸುತ್ತಿರುವುದನ್ನು ನೋಡಬಹುದು. ದಲಿತ ಜಾತಿಗೆ ಸೇರಿದ ಒಂದೇ ಕುಟುಂಬದ ತಾಯಿ ಮಗಳು ಒಂದೇ ಸೀರೆ ಉಡುವ ಸ್ಥಿತಿಯ ವಿಶ್ಲೇಷಣೆಯನ್ನು ನೀಡಿದ್ದಾರೆ.[೨] ಜನ ಪ್ರತಿನಿಧಿಗಳ–ಸರ್ಕಾರದ ನಿರ್ಲಕ್ಷದಿಂದ ರಾಯಚೂರು ಹಿಂದುಳಿದ ಜಿಲ್ಲೆ ಎಂಬ ಹಣೆಪಟ್ಟಿ ಕಟ್ಟಿಕೊಂಡಿದೆ. ದುರ್ಬಲ ವರ್ಗಗಳು ಶೋಷಣೆಗೆ ಒಳಗಾಗಿದ್ದಾರೆ. ಶ್ರಮಿಕ ವರ್ಗ ಬದುಕುವ ಅವಕಾಶಗಳು ಇಲ್ಲದೆ ಗುಳೆ ಹೋಗುತ್ತಾರೆ. ಆರ್ಥಿಕ ಅವಕಾಶಗಳಿಲ್ಲದೆ ಅತಂತ್ರದಿಂದ ಬದುಕು ನಡೆಸುತ್ತಿದ್ದಾರೆ. ಶ್ರಮಿಕ ವರ್ಗದಲ್ಲಿ ಬಹುತೇಕರು ದಲಿತರು.[೩] ಕರ್ನಾಟಕ ಇಂದು ಕೃಷಿ ಪ್ರಧಾನ ಆರ್ಥಿಕತೆಯಾಗಿ ಉಳಿದಿಲ್ಲ ಎನ್ನುತ್ತಾ ಕೃಷಿ ಬಿಕ್ಕಟ್ಟಿನ ಸವಾಲುಗಳನ್ನು ಎದುರಿಸುತ್ತಿದೆ. ಟಿ. ಆರ್. ಚಂದ್ರಶೇಖರ್‌ರ ಪ್ರಕಾರ ರಾಜ್ಯದ ಒಟ್ಟು ದುಡಿಮೆಗಾರರಲ್ಲಿ ಕೃಷಿಯನ್ನು ಅವಲಂಬಿಸಿರುವವರ ಪ್ರಮಾಣ ಶೇಕಡಾ ೪೯.೫೩. ರಾಜ್ಯಮಟ್ಟದಲ್ಲಿ ಒಟ್ಟು ದುಡಿಮೆಗಾರರಲ್ಲಿ ಭೂರಹಿತ ಕೃಷಿ ದಿನಗೂಲಿಗಳ ಪ್ರಮಾಣ ಶೇ. ೨೫.೯೨. ಇದು ರಾಜ್ಯದ ಅಭಿವೃದ್ಧಿಯ ರಾಜಕೀಯ ಆರ್ಥಿಕ ನೆಲೆಗಳ ಬದಲಾವಣೆಗಳನ್ನು ತೋರಿಸುತ್ತದೆ. ಕರ್ನಾಟಕದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ವೇಗವಾಗಿ ವಿಸ್ತಾರವಾಗ ತೊಡಗಿದೆ. ಆದರೆ ಗುಲ್ಬರ್ಗಾ ವಿಭಾಗದ ಬದಲಾವಣೆ ಮತ್ತು ಅಭಿವೃದ್ಧಿ ಸ್ಥಗಿತ ಗತಿಯಲ್ಲಿ ನಡೆದಿದೆ. ಗುಲ್ಬರ್ಗಾ ವಿಭಾಗದಲ್ಲಿ ೨೦೧೧ರಲ್ಲಿ ಒಟ್ಟು ದುಡಿಮೆಗಾರರು ಅಥವಾ ಕೃಷಿ ಅವಲಂಬಿಸಿರುವವರ ಪ್ರಮಾಣ ಶೇಕಡಾ ೬೩.೩. ಇಲ್ಲಿನ ಒಟ್ಟು ದುಡಿಮೆಗಾರ ಭೂರಹಿತ, ಕೃಷಿ ಕಾರ್ಮಿಕರ ಪ್ರಮಾಣ ಶೇಕಡಾ ೪೦. ಗುಲ್ಬರ್ಗಾ ವಿಭಾಗದ ಅತೀ ಹಿಂದುಳಿದ ಜಿಲ್ಲೆಗಳಲ್ಲಿ ರಾಯಚೂರು ಒಂದು. ರಾಯಚೂರು ಜಿಲ್ಲೆಯಲ್ಲಿ ಅತೀ ಹೆಚ್ಚಿನ ಸಂಖ್ಯೆಯ ದುಡಿಮೆಗಾರರು ಮತ್ತು ಕೃಷಿಕಾರ್ಮಿಕರಿದ್ದಾರೆ. ಗುಲ್ಬರ್ಗಾ ವಿಭಾಗದ ಒಟ್ಟು ದುಡಿಮೆಗಾರರಲ್ಲಿ ಮಹಿಳಾ ದುಡಿಮೆಗಾರರ ಪ್ರಮಾಣ ಶೇಕಡಾ ೩೮.೬೫ (೧೯.೩೩ಲಕ್ಷ). ಇದು ರಾಜ್ಯಮಟ್ಟದಲ್ಲಿ ಶೇಕಡಾ ೩೪.೪೫. ಗುಲ್ಬರ್ಗಾವಿಭಾಗದ ಮಹಿಳಾ ದುಡಿಮೆಗಾರರ ಪ್ರಮಾಣ ರಾಜ್ಯ ಮಟ್ಟದ ಪ್ರಮಾಣಕ್ಕಿಂತ ಹೆಚ್ಚಿನದು. ಈ ಒಟ್ಟು ಮಹಿಳಾ ದುಡಿಮೆಗಾರರಲ್ಲಿ ಭೂರಹಿತ ಕೃಷಿ ದಿನಗೂಲಿ ಮಹಿಳಾ ದುಡಿಮೆಗಾರರ ಪ್ರಮಾಣ ಶೇಕಡಾ ೫೯.೧೦ರಷ್ಟು. ಮಹಿಳಾ ದುಡಿಮೆಗಾರರ ಬದುಕು ದುಸ್ಥಿತಿಯಲ್ಲಿದೆ.[೪] ಕರ್ನಾಟಕದ ಹೊಸ ಸರ್ಕಾರ ಕೃಷಿ ಬಿಕ್ಕಟ್ಟುಗಳನ್ನು ಪರಿಹರಿಸಲು ಏನು ಮಾಡಬಹುದು ಎಂಬುದನ್ನು ಕೆಲವು ಸಂಗತಿಗಳನ್ನು ಪರಿಗಣಿಸಬಹುದು. ಅವುಗಳಲ್ಲಿ ಕೆಲವೆಂದರೆ ಭೂ ಸುಧಾರಣೆ ಮತ್ತು ಭೂಮಿತಿ ಶಾಸನದ ಬಗ್ಗೆ ಸರ್ಕಾರ ಗಂಭೀರವಾಗಿ ಚಿಂತಿಸಬೇಕು. ಹೆಚ್ಚಿನ ಭೂಮಿಯನ್ನು ಭೂರಹಿತರಿಗೆ ಹಂಚುವಂತಾಗಬೇಕು. ಭೂರಹಿತ ದಿನಗೂಲಿ ನೌಕರರ ನೊಂದಣಿಯಾಗಬೇಕು.[೫]

**ಕುಟುಂಬದಲ್ಲಿ ಸದಸ್ಯರ ಅವಲಂಬನೆ**

ಕುಟುಂಬದ ಸದಸ್ಯರ ಅವಲಂಬನೆ ಹೆಚ್ಚಾಗಿರುವುದು ಸಣ್ಣ ಮತ್ತು ಅತೀಸಣ್ಣ ರೈತರ ಕುಟುಂಬಗಳಲ್ಲೆ. ದೊಡ್ಡರೈತರ ಕುಟುಂಬಗಳಲ್ಲಿ ಕೆಲವು ಅವಿಭಕ್ತ ಕುಟುಂಬಗಳಿದ್ದು ಸದಸ್ಯರ ಸಂಖ್ಯೆ ಹೆಚ್ಚಾಗಿದೆ. ಆದರೆ ದೊಡ್ಡ ರೈತರ ಕುಟುಂಬಗಳ ಆರ್ಥಿಕವಾಗಿ ಉತ್ತಮ ಸ್ಥಿತಿಯಾಗಿರು

ವುದರಿಂದ ಕುಟುಂಬದ ಎಲ್ಲಾ ಸದಸ್ಯರ ಅವಶ್ಯಕತೆಗಳನ್ನು ಸುಲಭವಾಗಿ ಪೂರೈಸಿಕೊಳ್ಳುತ್ತಾರೆ. ಅತೀಸಣ್ಣ ಕುಟುಂಬ ಸದಸ್ಯರ ಸಂಖ್ಯೆ ಹೆಚ್ಚಾಗಿದ್ದು ಆದಾಯ ಕಡಿಮೆ ಇರುವುದರಿಂದ ಎಲ್ಲಾ ಸದಸ್ಯರ ನಿರ್ವಹಣೆ ಕಷ್ಟವಾಗುತ್ತದೆ.

### ೪.೯. ಭೂ ಮಾಲಿಕತ್ವ ಮತ್ತು ಅದರ ಅನುಕೂಲಗಳು

ಅಧ್ಯಯನದಲ್ಲಿ ಕಂಡು ಬಂದಂತೆ ಭೂಮಿ ಪ್ರಮುಖ ಸಂಪನ್ಮೂಲವಾಗಿ ದೊಡ್ಡ ರೈತರ ಹಿಡಿತದಲ್ಲಿದೆ. ದೊಡ್ಡ ರೈತರು ಆರ್ಥಿಕ ಸಾಮಾಜಿಕವಾಗಿ ಉತ್ತಮ ಸ್ಥಿತಿಯಲ್ಲಿರುವ ಲಿಂಗಾಯತ ಜಾತಿಗೆ ಸೇರಿದ್ದಾರೆ. ಭೂಮಿ ಪ್ರಮುಖ ಆಸ್ತಿ. ಬದುಕಿನ ಆಧಾರ. ಗ್ರಾಮೀಣ ಪ್ರದೇಶಗಳಲ್ಲಿ ಇಂದೆಗೂ ಅಂತಸ್ತಿನ ಸಂಕೇತ. ಸಂಪತ್ತಿನ ಸೂಚಿ. ಹೆಚ್ಚು ಭೂಮಿ ಹೊಂದಿರುವವರ ಸಾಮಾಜಿಕ ಮತ್ತು ಆರ್ಥಿಕ ಬದುಕು ಉತ್ತಮವಾಗಿರುತ್ತದೆ. ಭೂಮಿ ಆರ್ಥಿಕ ಉನ್ನತಿಯ ಸೂಚ್ಯಾಂಕವೂ ಹೌದು. ಭೂಮಿ ಹೊಂದಿಲ್ಲದವರು ಆರ್ಥಿಕವಾಗಿ ಅಭದ್ರರಾಗಿರುತ್ತಾರೆ. ಸಾಮಾಜಿಕವಾಗಿ ನಿರ್ಲಕ್ಷಿತರಾಗಿರುತ್ತಾರೆ. ಭೂಮಿ ಇಲ್ಲದವರು ಬೇರೆ ಬೇರೆ ವರ್ಗಗಳಲ್ಲಿ ಕಂಡುಬಂದರೂ ಸಮಾಜದ ಕೆಳವರ್ಗಗಳೆಂದೇ ಗುರುತಿಸಲ್ಪಡುವ ಪರಿಶಿಷ್ಟ ಜಾತಿ ಪಂಗಡಗಳಿಗೆ ಸೇರಿದವರು ಹೆಚ್ಚಿನವರು ಭೂರಹಿತರಾಗಿರುತ್ತಾರೆ. ಅತ್ಯಂತ ಕಡಿಮೆ ಪ್ರಮಾಣದಲ್ಲಿ ಈ ಸಮುದಾಯಗಳ ಜನರು ಭೂಮಿ ಹೊಂದಿರುತ್ತಾರೆ. ಪ್ರಸ್ತುತ ಚರ್ಚೆಯಲ್ಲಿ ಭೂಮಿ–ಭೂಹಿಡುವಳಿಯನ್ನು ಪ್ರಮುಖ ಅಂಶವಾಗಿ ಪರಿಗಣಿಸಲಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಸಂಘಟಿತ ಹಣಕಾಸು ವಲಯವು ಸಾಲ ಸೌಲಭ್ಯ ನೀಡುವಾಗಿ ಪರಿಗಣಿಸುವ ಪ್ರಮುಖ ಆಧಾರ ಭೂಮಿ. ಭೂಭದ್ರತೆಯ ಮೇಲೆ ಸಾಲ ಪೂರೈಕೆಯಾಗುತ್ತದೆ. ಮನೆ, ಚಿನ್ನ ಇತ್ಯಾದಿಗಳು ಆಸ್ತಿಯಾಗಿ ಪರಿಗಣಿಸಬಹುದಾದರೂ ಸಾಲ ಪೂರೈಕೆಯಲ್ಲಿ ಭೂಮಿಗೆ ಹೆಚ್ಚಿನ ಆಧ್ಯತೆ. ಅದರಲ್ಲೂ ಕೃಷಿ ಭೂಮಿಯ ಆಧಾರದ ಮೇಲೆ ಸಾಲ ದೊರೆಯುತ್ತದೆ. ಭೂಮಿ ಹೊಂದುವ ಹಕ್ಕು ಎಲ್ಲರಿಗೂ ಇರುತ್ತದೆ. ಭೂಮಿ ಮೂಲಕ ಆರ್ಥಿಕ ಅವಶ್ಯಕತೆಯನ್ನ ಈಡೇರಸಿಕೊಳ್ಳುವ ಮತ್ತು ಸಾಮಾಜಿಕ ಸ್ಥಾನ ಮಾನ ಸುಧಾರಿಸಿಕೊಳ್ಳುವ ಹಕ್ಕು ಎಲ್ಲರಿಗೂ ಇರುತ್ತದೆ. ಭೂಮಿ ಸಮಾನತೆ ತರುವ ಸಾಧನವಾಗುತ್ತದೆ. ಭೂಮಿ ಇಲ್ಲದವರ ಬದುಕಿನ ದುಸ್ಥಿತಿಯನ್ನು ಹಲವು ಅಧ್ಯಯನಗಳು ವಿಶ್ಲೇಷಿಸಿವೆ. ಸಮಾಜದ ಕೆಲವು ದುರ್ಬಲ ವರ್ಗಗಳು ಭೂಮಿ ಹೊಂದಲು ಸಾಧ್ಯವಾಗದಂತಹ ಪರಿಸ್ಥಿತಿಯನ್ನು ಬಂಡವಾಳಶಾಹಿಗಳು ಅನಾದಿಕಾಲದಿಂದ ಸೃಷ್ಟಿಸಿಕೊಂಡು ಬಂದಿದ್ದಾರೆ. ಸಾಮಾಜದ ಕೆಲವು ವರ್ಗಗಳು ಭೂಮಿ ಹೊಂದಲು ಸಾಧ್ಯವಾಗದೇ ಶೋಷಿತ ಶ್ರಮಿಕ ವರ್ಗಗಳಾಗಿ ಕೆಳಹಂತದ ಬದುಕನ್ನು ನಡೆಸುವಂತ ಸ್ಥಿತಿ ಸೃಷ್ಟಿಯಾಗಿದ್ದು ವಸಾಹತು ವ್ಯವಸ್ಥೆಯ ಕಾಲದಲ್ಲಿ ಎನ್ನಬಹುದು. ಈ ವರ್ಗವು ಭೂಮಿ–ಆಸ್ತಿ ಹೊಂದಲು ಸಾಧ್ಯವಾಗದೇ ಆಸ್ತಿ ರಹಿತರಾಗಿ ಕೇವಲ ದುಡಿಮೆಗಾರ ವರ್ಗಗಳಾಗಿ ಬೆವರನ್ನೆ ತಮ್ಮ ಆಸ್ತಿ–ಬಂಡವಾಳವನ್ನಾಗಿ ಬಳಸಿಕೊಂಡು ಅಥವಾ ಮಾರಿಕೊಂಡು ಅಥವಾ ಆಧಾರವಾಗಿಟ್ಟುಕೊಂಡು ಬದುಕುವ ಪರಿಸ್ಥಿತಿ ಸೃಷ್ಟಿಯಾಗುವಲ್ಲಿ ಪ್ರಭುತ್ವದ–ಸರ್ಕಾರದ ಪಾತ್ರವೂ

ಇದೆ. ಕೃಷಿ ಬಂಡವಾಳಶಾಹಿ-ಭೂರ್ಸ್ವಾ ವರ್ಗಗಳ ಪ್ರಗತಿಗೆ ಪೂರಕವಾಗಿ ವರ್ತಿಸಿರುವ ಸರ್ಕಾರವನ್ನು ಕಾಣಬಹುದು. ಇತರ ವರ್ಗಗಳ ಪ್ರಗತಿಯನ್ನು ಸರ್ಕಾರ ನಿರ್ಲಕ್ಷಿಸಿದೆ ಎನ್ನಬಹುದು. ಅಭಿವೃದ್ಧಿ ಹೊಂದುವುದು ಎಲ್ಲರ ಹಕ್ಕು. ಅದು ಹಂಗಲ್ಲ. ಬಿಕ್ಷೆಯಲ್ಲ.[೬] ಭೂಮಿಯನ್ನು ಭದ್ರತೆಯಾಗಿಟ್ಟುಕೊಂಡು ಸಾಲಸೌಲಭ್ಯ ನೀಡುವ ಸಂಘಟಿತ ಹಣಕಾಸು ವ್ಯವಸ್ಥೆಯ ನೀತಿಯಲ್ಲಿ ಯಾವುದೇ ಬದಲಾವಣೆ ಯಾಗಿಲ್ಲ. ೧೯೭೩ರಲ್ಲಿ ಬ್ರಟೀಷ್ ಸರ್ಕಾರ ರೈತರ ಕೃಷಿ ಅಭಿವೃದ್ಧಿ ಚಟುವಟಿಕೆಗಳಿಗೆ ಭೂ ಭದ್ರತೆಯ ಆಧಾರದಲ್ಲಿ ಕಡಿಮೆ ಅಥವಾ ರಿಯಾಯಿತಿ ಬಡ್ಡಿದರದಲ್ಲಿ ಹಣಕಾಸು ಪೂರೈಸುವ ಸಾಲನೀತಿ ಇಂದಿಗೂ ಮುಂದುವರಿದಿದೆ. ಭೂಮಿಯನ್ನು ಭಧ್ರತೆಯಾಗಿ ನೀಡಿ ಸಂಘಟಿತ ವಲಯದಿಂದ ರಿಯಾಯಿತಿ ಬಡ್ಡಿದರದಲ್ಲಿ ಸಾಲ ಪಡೆಯಲು ಭೂರಹಿತರಿಗೆ, ಕೃಷಿ ಕಾರ್ಮಿಕರಂತಹ ಆಸ್ತಿ ರಹಿತ ವರ್ಗಗಳಿಗೆ ಸಾಧ್ಯವಾಗಿಲ್ಲವೆಂದು ನೀತಿ ರೂಪಿಸುವವರಿಗೆ ಮತ್ತು ಮೇಲ್ಮಟ್ಟದ ಹಣಕಾಸು ಸಂಸ್ಥೆಗಳಿಗೆ ತಿಳಿದಿದ್ದರೂ ಅದನ್ನು ಸಡಿಲಿಸಿ ಸಮಾಜದ ಎಲ್ಲಾ ವರ್ಗಗಳಿಗೂ ಸಾಲಸೌಲಭ್ಯ ತಲುಪಬೇಕೆಂಬ ಆಲೋಚನೆ ಬಂದರೂ ಅದನ್ನು ಕಾರ್ಯಗತ ಗೊಳಿಸದೆ ನಿರ್ಲಕ್ಷಿಸಿರುವುದನ್ನು ಇಂದಿಗೂ ಕಾಣಬಹುದು. ಈ ದೃಷ್ಟಿಯಿಂದಲೇ ಸಮಾಜದಲ್ಲಿ ಸಂಪನ್ಮೂಲಗಳ ಒಡೆತನ ವುಳ್ಳವರು ಮಾತ್ರ ಸಾಲ ಸೌಲಭ್ಯ ಪಡೆಯುತ್ತಿದ್ದಾರೆ. ಆಸ್ತಿರಹಿತ ವರ್ಗಗಳು ಸೌಲಭ್ಯ ವಂಚಿತರಾಗಿ ಅಂಚಿಗೆ ತಳ್ಳಲ್ಪಟ್ಟಿದ್ದಾರೆ. ೧ ಲಕ್ಷದವರೆಗೂ ಯಾವುದೆ ಭದ್ರತೆ ಇಲ್ಲದೆ ಕೃಷಿ ಸಾಲ ನೀಡಬೇಕೆಂದು ನಿರ್ದೇಶನ ಸಾರ್ವಜನಿಕ ಹಣಕಾಸು ಸಂಸ್ಥೆಗಳು-ಬ್ಯಾಂಕುಗಳಿಗೆ ಇದ್ದರೂ ಇದನ್ನು ಯಾವ ಬ್ಯಾಂಕುಗಳು ಅನುಷ್ಟಾನಗೊಳಿಸುತ್ತಿಲ್ಲ. ಮೇಲ್ಮಟ್ಟದ ಹಣಕಾಸು ಸಂಸ್ಥೆಗಳು ಈ ನಿಟ್ಟಿನಲ್ಲಿ ಮೇಲ್ವಿಚಾರಣೆ ಮಾಡುವುದಿಲ್ಲ ಎನ್ನಬಹುದು. ಈ ನಿಯಮವನ್ನು ಜಾರಿಗೊಳಿಸುವ ಸ್ವಾತಂತ್ರ್ಯವನ್ನು ಬ್ಯಾಂಕುಗಳಿಗೆ ನೀಡಿರುವುದರಿಂದ ಇದನ್ನು ನಿರ್ಲಕ್ಷಿಸಲಾಗಿದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಬ್ಯಾಂಕುಗಳ ಅಧಿಕಾರಿಗಳು ಭೂ ಭದ್ರತೆ ಇಲ್ಲದೆ ಸಾಲ ಸೌಲಭ್ಯ ನೀಡುವುದಿಲ್ಲ ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಇಂದು ಕುಟುಂಬವೊಂದರ ಬದುಕನ್ನು ಸಕಾರಾತ್ಮಕವಾಗಿ ಪರಿವರ್ತಿಸುವ ಸಾಧನವೊಂದಿದ್ದರೆ ಅದು ಭೂಮಿ. ರಾಜಕೀಯ, ಆರ್ಥಿಕ ಪ್ರಭಾವ ಬೀರುವ ಅಂಶವೂ ಭೂಮಿಯೇ. ಕರ್ನಾಟಕದ ಬಹುತೇಕ ಭೂ ಸಂಪತ್ತು ಕೆಲವೇ ಸಮುದಾಯಗಳ ಹಿಡಿತದಲ್ಲಿದೆ. ಕಾನೂನಿನ ಮೂಲಕ ಭೂಸುದಾರಣೆ ಪರಿಣಾಮಕಾರಿಯಾಗಿ ಅನುಷ್ಟಾನಗೊಂಡರೆ ಬಡವ-ಶ್ರೀಮಂತರ, ಉಳ್ಳವರ-ಉಳ್ಳದವರ ನಡುವಿನ ಅಂತರ ಕಡಿಮೆಯಾಗುತ್ತದೆ. ಭೂರಹಿತರ ಸಂಖ್ಯೆ ಕಡಿಮೆಯಾಗುತ್ತದೆ. ಈ ರೀತಿಯ ಅಂತರ ಸಮಾಜದ ಮೂಲಭೂತ ಸಮಸ್ಯೆ. ಈ ಸಮಸ್ಯೆಯ ಪರಿಹಾರ ದೃಷ್ಠಿಯಿಂದ ಮತ್ತೊಂದು ಭೂ ಸುಧಾರಣೆ ಕರ್ನಾಟಕದಲ್ಲಿ ಅಗತ್ಯವಿದೆ ಎನ್ನಬಹುದು (ಎಮ್. ಚಂದ್ರ ಪೂಜಾರಿ:೨೦೧೦:೪೨). ಕ್ಷೇತ್ರ ಕಾರ್ಯದಲ್ಲಿ ಸಂಗ್ರಹಿಸಿದ ಮಾಹಿತಿ ಪ್ರಕಾರ ಗ್ರಾಮಗಳಲ್ಲಿ ಭೂಮಿ ಸಂಪನ್ಮೂಲ ಕ್ರೂಡೀಕರಣದ ಪ್ರಮುಖ ಅಂಶ. ಸಾಮಾಜಿಕ ಆರ್ಥಿಕ ಸ್ಥಿತಿಯ ಸೂಚಿ. ಸಂಘಟಿತ ಅಥವಾ ಅಸಂಘಟಿತ ಹಣಕಾಸು ಮೂಲದಿಂದ ಸಾಲಸೌಲಭ್ಯ ಪಡೆಯಲು ನೆರವಾಗುವ ಭದ್ರತೆಯ ಆಧಾರ. ಸಂದರ್ಶಿಸಲ್ಪಟ್ಟವರಲ್ಲಿ ಶೇಕಡಾ

೭೯ ಜನರಿಗೆ ಭೂಮಿ ಇದೆ. ಶೇಕಡಾ ೨೧ರಷ್ಟು ಜನರಿಗೆ ಭೂಮಿ ಇಲ್ಲ. ಶೇಕಡಾ ೩೨.೯೧ರಷ್ಟು ರೈತರು ಅತಿ ಸಣ್ಣ ರೈತರಾಗಿದ್ದು ಇವರ ಭೂ ವಿಸ್ತೀರ್ಣ ೨.೫ ಎಕರೆಗಿಂತ ಕಡಿಮೆ ಇದೆ. ಆದರೆ ಇವರಿಲ್ಲಿ ಶೇಕಡಾ ೧೩ರಷ್ಟು ಜನರ ಬಳಿ ಭೂಮಿ ಇದ್ದರೂ ಅವರ ಹೆಸರಲ್ಲಿ ದಾಖಲೆ ಇಲ್ಲ. ಈ ಕುಟುಂಬದಲ್ಲಿ ಮರಣ ಹೊಂದಿರಿವ ಪೂರ್ವಿಕರ ಹೆಸರಲ್ಲಿ ಖಾತೆಗಳಿವೆ. ಇವುಗಳನ್ನು ಈಗ ಪ್ರಸ್ತುತ ಕುಟುಂಬದ ಸದಸ್ಯರ ಹೆಸರಿಗೆ ಭೂ ದಾಖಲೆಗಳನ್ನು ವರ್ಗಾಹಿಸಬೇಕು. ಭೂ ದಾಖಲೆಗಳನ್ನು ಪ್ರಸ್ತುತ ಕುಟುಂಬ ಸದಸ್ಯರ ಹೆಸರಿಗೆ ಪರಿವರ್ತಿಸುವುದು ದುಬಾರಿ ವೆಚ್ಚ ವಿಷಯ. ಕಂದಾಯ ಇಲಾಖೆಯಲ್ಲಿ ಭೂದಾಖಲಾತಿ ಪರಿವರ್ತನೆ ಪ್ರಕ್ರಿಯೆ ಹೆಚ್ಚು ಸಮಯ ತೆಗೆದುಕೊಳ್ಳುವಂತದ್ದು ಹಾಗೂ ಸಾಕಷ್ಟು ಖರ್ಚಾಗತ್ತದೆ. ಶೇಕಡಾ ೧೪ರಷ್ಟು ರೈತರು ಸಣ್ಣರೈತರಾಗಿದ್ದು ಇವರ ಭೂಮಿಯ ವಿಸ್ತೀರ್ಣ ೨.೫ ಎಕರೆಯಿಂದ ೫ ಎಕರೆ ಇರುತ್ತದೆ. ಶೇಕಡಾ ೨೫ರಷ್ಟು ರೈತರು ದೊಡ್ಡ ರೈತರಾಗಿದ್ದು ಇವರ ಭೂಮಿಯ ವಿಸ್ತೀರ್ಣ ೧೦ ಎಕರೆ ಮೇಲ್ಪಟ್ಟದೆ. ದೊಡ್ಡರೈತರಲ್ಲಿ ಶೇಕಡಾ ೯೫ರಷ್ಟು ಲಿಂಗಾಯತ ಸಮುದಾಯಕ್ಕೆ ಸೇರಿದ್ದಾರೆ. ಇದರಲ್ಲಿ ಶೇಕಡಾ ೫೭ರಷ್ಟು ಲಿಂಗಾಯತ ರೈತರ ಭೂಮಿ ೨೦ ಎಕರೆಗಳಷ್ಟಿದೆ. ಶೇಕಡಾ ೮ರಷ್ಟು ಲಿಂಗಾಯತ ರೈತರ ಭೂಮಿ ೨೫ ಎಕರೆಗಿಂತ ಅಧಿಕವಾಗವಾಗಿದೆ. ಲಿಂಗಾಯತ ಜಾತಿಯನ್ನು ಹೊರತುಪಡಿಸಿ ಬೇರಾವ ಜಾತಿಯ ರೈತರು ೨೦ ಎಕರೆ ಹೊಂದಿಲ್ಲ. ಶೇಕಡಾ ೨೭.೯೦ರಷ್ಟು ಜನ ಕೃಷಿಕಾರ್ಮಿಕ ಭೂರಹಿತರಾಗಿದ್ದು ಭೂಮಿ ಹೊಂದಿಲ್ಲ. ಇದರಲ್ಲಿ ಶೇಕಡಾ ೩೧ರಷ್ಟು ಕೃಷಿಕಾರ್ಮಿಕರು ಭೂಮಿ ಹೊಂದಿದ್ದರೂ ಅದರ ವಿಸ್ತೀರ್ಣ ೧೦ ರಿಂದ ೧೫ ಗುಂಟೆಗಿಂತ ಕಡಿಮೆ ಇದೆ. ಇವೆಲ್ಲಾ ತುಂಡು ಭೂಮಿಗಳು. ಶೇಕಡಾ ೩ರಷ್ಟು ಕೃಷಿ ಕಾರ್ಮಿಕರು ತುಂಡು ಭೂಮಿ ಹೊಂದಿದ್ದರೂ ಅವರಲ್ಲಿ ಶೇಕಡಾ ೪ರಷ್ಟು ದುಡಿಮೆಗಾರರ ಹೆಸರಲ್ಲಿ ಭೂ ದಾಖಲೆಗಳಿಲ್ಲ. ಕೃಷಿ ಕಾರ್ಮಿಕರು ತುಂಡು ಭೂಮಿ ಹೊಂದಿದ್ದರೂ ಅದರಲ್ಲಿ ಸಾಗುವಳಿ ಮಾಡುತ್ತಿಲ್ಲ. ಸಾಗುವಳಿ ಮಾಡದೆ ಇರಲು ತಿಳಿದುಬಂದ ಕಾರಣಗಳು ಬಹಳ ಮುಖ್ಯವಾದುದು ದುಬಾರಿ ಉತ್ಪಾದನ ವೆಚ್ಚ. ಕೃಷಿ ಹೂಡುವಳಿಗಳು ಅಂದರೆ ಉತ್ಪಾದನೆಗೆ ಬಳಸುವ ಸರಕುಗಳ ದುಬಾರಿ ಬೆಲೆ. ದುಬಾರಿ ಉತ್ಪಾದನ ವೆಚ್ಚವಿದ್ದಾಗ್ಯೂ ಉತ್ಪಾದನೆಯಲ್ಲಿ ತೊಡಗಿದರೆ ಅದರಿಂದ ದೊರೆಯುವ ಪ್ರತಿಪಲ ಕಡಿಮೆ. ದುಬಾರಿ ವೆಚ್ಚ ಬರಿಸುವ ಉಳಿತಾಯದ ಹಣವಿರುವುದಿಲ್ಲ. ಅ ಸಾಮರ್ಥ್ಯವೂ ಇವರಿಗೆ ಇರುವುದಿಲ್ಲ. ಇದಕ್ಕಾಗಿ ಸಾಲ ಮಾಡಬೇಕಾಗುತ್ತದೆ. ಆದರೆ ಇವರಿಗೆ ಸಂಘಟಿತ ಅಥವಾ ಅಸಂಘಟಿತ ಮೂಲಗಳೆರಡರಿಂದಲೂ ಸಾಲ ಸೌಲಭ್ಯ ದೊರೆಯುವುದಿಲ್ಲ. ಈ ಹಿನ್ನೆಲೆಯಲ್ಲಿ ಕೃಷಿ ಕಾರ್ಮಿಕರು ತಮ್ಮ ತುಂಡು ಭೂಮಿಯನ್ನು ಗುತ್ತಿಗೆಗೆ ನೀಡಿ ವಲಸೆ ಹೋಗುತ್ತಾರೆ. ವಲಸೆ ಹೋಗುವ ಜನರ ದುಸ್ಥಿತಿಯನ್ನು ಹಲವು ಅಧ್ಯಯನಗಳು ವಿಶ್ಲೇಷಿಸಿವೆ. ಅಭಿವೃದ್ಧಿಯ ಫಲಗಳು ಆಸ್ತಿ ಇಲ್ಲದವರಿಗೆ ಲಭಿಸುವುದಿಲ್ಲ. ಕೃಷಿಕಾರ್ಮಿಕರು ಬಡವರಾಗಿದ್ದಾರೆ. ಬಡತನದ ವಿಷವರ್ತುಲದಲ್ಲಿ ಸಿಲುಕುತ್ತಾರೆ.[೬]

**ಬೆಳೆಗಳ ವಿವರಣೆ**

ಕೆಲವು ಬೆಳೆಗಳು ಎರಡೂ ತಾಲ್ಲೂಕಿನಲ್ಲಿ ಸಾಮಾನ್ಯವಾಗಿದ್ದರೂ ನೀರಾವರಿ ಮತ್ತು ಒಣಭೂಮಿ ಆಧಾರದ ಮೇಲೆ ಬೆಳೆ ತೆಗೆಯುವ ವ್ಯವಸ್ಥೆಯಲ್ಲಿ ವ್ಯತ್ಯಾಸಗಳಿವೆ. ಸಿಂದನೂರು ತಾಲ್ಲೂಕಿನಲ್ಲಿ ಜವಾರ್ ಜೋಳ, ಹತ್ತಿ, ಭತ್ತ ಪ್ರಮುಖ ಬೆಳೆಗಳು. ದೇವದುರ್ಗ ತಾಲ್ಲೂಕಿನ ಜಾಲಹಳ್ಳಿ ಗ್ರಾಮ ನೀರಾವರಿ ಪ್ರದೇಶವಾಗಿದ್ದು ಸಂಪೂರ್ಣವಾಗಿ ಭತ್ತ ಬೆಳೆಯಲಾಗುತ್ತದೆ. ಆದರೆ ಇದೆ ತಾಲ್ಲೂಕಿನ ಒಣಭೂಮಿ ಪ್ರದೇಶವಾದ ಹೇರುಂಡೆ ಗ್ರಾಮದಲ್ಲಿ ಶೇಂಗ, ಹೆಸರು, ಹಲಸಂದಿ ಕಾಳುಗಳು, ಜವಾರ್ ಜೋಳ ಪ್ರಮುಖ ಬೆಳೆಗಳು. ಸಿಂಧನೂರು ತಾಲ್ಲೂಕಿನ ಎರಡೂ ಗ್ರಾಮಗಳು ಕಾಲುವೆ ನೀರಾವರಿಯ ಕೊನೆಯ ಭಾಗದಲ್ಲಿ ಇರುವುದರಿಂದ ನೀರು ಸರಿಯಾಗಿ ದೊರಿಯುವುದಿಲ್ಲ. ಆದರೂ ಗ್ರಾಮದ ಅರ್ಧಭಾಗದಷ್ಟು ಜನ ಹಳ್ಳದ ಬಸಿದ ನೀರನ್ನು ಪಂಪ್‌ಗಳ ಮೂಲಕ ಬಳಸಿಕೊಂಡು ಭತ್ತವನ್ನು ಬೆಳೆಯುತ್ತಾರೆ. ಕೆಳಗಿನ ಕೋಷ್ಟಕದದಿಂದ ಬೆಳೆಯ ವ್ಯವಸ್ಥೆ ಅಥವಾ ಪದ್ಧತಿಯನ್ನು ತಿಳಿಯಬಹುದು. ಕೃಷಿ ಕಾರ್ಮಿಕರು ಭೂ ರಹಿತ ದುಡಿಮೆಗಾರರು ಯಾವುದೇ ಸಾಗುವಳಿ ಚಟುವಟಿಕೆಯಲ್ಲಿ ತೊಡಗುವುದಿಲ್ಲ. ಹಾಗಾಗಿ ಇಲ್ಲಿ ಅವರ ಬಗ್ಗೆ ವಿವರಣೆಗಳಿಲ್ಲ.

| ವಿವಿದ ಬೆಳೆಗಳು | ತಾಲ್ಲೂಕು (ಎ) | ತಾಲ್ಲೂಕು (ಬಿ) |
|---|---|---|
| ಭತ್ತ | ೨೬ | ೭೦ |
| ಕಾಳುಗಳು | – | ೨೨ |
| ಹತ್ತಿ | ೨೩ | ೧೦ |
| ಶೇಂಗ | – | ೧೦ |
| ಜವಾರ್ ಜೋಳ | ೫೧ | ೨೧ |
| **ಒಟ್ಟು** | **೧೦೦** | **೧೩೩** |

ಮೂಲ: ಕ್ಷೇತ್ರ ಕಾರ್ಯ, ತಾಲ್ಲೂಕು ಎ– ಸಿಂದನೂರು ಬಿ–ದೇವದುರ್ಗ

ಶೇಕಡಾ ೪೦ರಷ್ಟು ರೈತರು ಎರಡೂ ತಾಲ್ಲೂಕುಗಳಲ್ಲಿ ಭತ್ತ ಬೆಳೆಯಲು ಇಚ್ಚಿಸುತ್ತಾರೆ. ಶೇಕಡಾ ૩૧ರಷ್ಟು ರೈತರು ಜವಾರ್ ಜೋಳ ಬೆಳೆಯುತ್ತಾರೆ. ಜವಾರ್ ಜೋಳವನ್ನು ಒಣಭೂಮಿ ಪ್ರದೇಶದಲ್ಲೂ ಭತ್ತವನ್ನು ನೀರಾವರಿ ಪ್ರದೇಶದಲ್ಲೂ ಬೆಳೆಯುತ್ತಾರೆ. ಎರಡೂ ತಾಲ್ಲೂಕುಗಳ ಒಣಭೂಮಿಯಲ್ಲಿ ಹತ್ತಿ ಬೆಳೆಯನ್ನು ಬೆಳೆಯಲಾಗುತ್ತದೆ.

**೪.೧೦. ಕೃಷಿ ಆದಾಯ**

ಕೃಷಿ ಚಟುವಟಿಕೆಗಳಿಂದ ಬರುವ ಆದಾಯ ಮತ್ತು ಅದರಿಂದಾಗುವ ಜೀವನ ಮಟ್ಟದ ಬದಲಾವಣೆ ಮುಖ್ಯ ವಿಷಯ. ಅಧ್ಯಯನದ ಪ್ರಕಾರ ಶೇಕಡಾ ೨೫ರಷ್ಟು ದೊಡ್ಡ ರೈತರಲ್ಲಿ

ಶೇಕಡಾ ೯೫ರಷ್ಟು ರೈತರು ಲಿಂಗಾಯತ ಸಮುದಾಯಕ್ಕೆ ಸೇರಿದ್ದು ಶೇಕಡಾ ೯.೮೭ರಷ್ಟು ದೊಡ್ಡ ರೈತರು ಇತರೇ ಜನಾಂಗಕ್ಕೆ ಸೇರಿದ್ದಾರೆ. ಲಿಂಗಾಯತ ಜಾತಿಯವರ ಭೂಹಿಡುವಳಿಗಳು ದೊಡ್ಡ ವಿಸ್ತೀರ್ಣವುಳ್ಳವುಗಳಾಗಿದ್ದು ದೊಡ್ಡ ಮಟ್ಟದಲ್ಲಿ ಸಾಗುವಳಿ ಚಟುವಟಿಕೆಗಳು ನಡೆಯುತ್ತವೆ. ಸಾಗುವಳಿಯಿಂದ ಬರುವ ಇವರ ಆದಾಯವು ಹೆಚ್ಚು. ಈ ರೀತಿಯ ಹೆಚ್ಚಿನ ಅದಾಯದಿಂದ ಈ ಕುಟುಂಬಗಳ ಉಳಿತಾಯ ಹೆಚ್ಚಾಗಿರುತ್ತದೆ. ಆದಾಯ ಹೆಚ್ಚಾಗಿರುವುದರಿಂದ ಜೀವನ ಮಟ್ಟ ಉತ್ತಮವಾಗಿರುತ್ತದೆ. ಆರ್ಥಿಕ ಸಾಮಾಜಿಕ ಸ್ಥಿತಿಗತಿಗಳು ಉತ್ತಮವಾಗಿರುತ್ತವೆ. ಶೈಕ್ಷಣಿಕ ಅವಕಾಶಗಳ ಬಳಕೆಯು ಹೆಚ್ಚು. ಇದರಿಂದ ರಾಜಕೀಯ ಪ್ರಭಾವಗಳು ಹೆಚ್ಚುತ್ತವೆ. ಹೆಚ್ಚುವರಿ ಆದಾಯದಿಂದ ಉತ್ತಮ ಜೀವನ ನಿರ್ವಹಣೆಯೊಂದಿಗೆ ಈ ಸಮುದಾಯದ ಆಸ್ತಿ ಸಂಗ್ರಹ ಮತ್ತಷ್ಟು ಹೆಚ್ಚಿಸುತ್ತದೆ. ಲಿಂಗಾಯತ ಸಮುದಾಯದಲ್ಲಿ ತಮ್ಮ ಮಿಗುತೆ ಆದಾಯದಿಂದ ಶೇ. ೨೮ ಜನ ಹೊಸದಾಗಿ ಭೂಮಿಯನ್ನು ಖರೀದಿಸಿದ್ದಾರೆ. ಈ ವಿಶ್ಲೇಷಣೆಯನ್ನು ಸಾಲದ ಪರಿಣಾಮವನ್ನು ಕುರಿತ ಪ್ರತ್ಯೇಕ ಕೋಷ್ಟಕಲ್ಲಿ ನೀಡಲಾಗಿದೆ. ಸಣ್ಣ ಅತೀ ಸಣ್ಣ ರೈತರು ಹೆಚ್ಚಾಗಿರುವುದು ಪರಿಶಿಷ್ಟ ಜಾತಿ ಮತ್ತು ಜನಾಂಗಗಳಲ್ಲಿ ಹಾಗೂ ಇತರೇ ಜನಾಂಗಗಳಲ್ಲಿ. ಲಿಂಗಾಯತ ಸಮುದಾಯವನ್ನು ಹೊರತುಪಡಿಸಿ ಬೇರಾವುದೇ ವರ್ಗ ಕೃಷಿಯಲ್ಲಿ ಗಳಿಸಿದ ಮಿಗುತೆ ಆದಾಯದಿಂದ ಹೊಸದಾಗಿ ಆಸ್ತಿ-ಭೂಮಿ ಖರೀದಿಸಿ ತಮ್ಮ ಸಂಪತ್ತನ್ನು ಹೆಚ್ಚಿಸಿಕೊಂಡಿರುವ ನಿದರ್ಶನಗಳು ಅಧ್ಯಯನದಲ್ಲಿ ಕಂಡುಬಂದಿಲ್ಲ. ಭೂಹಿಡುವಳಿಗೂ-ಸಾಲ ಸೌಲಭ್ಯಕ್ಕೂ ನೇರ ಸಂಬಂಧವಿದೆ. ಭೂಹಿಡುವಳಿಗೂ ಸಾಮಾಜಿಕ ಆರ್ಥಿಕ ಸ್ಥಾನಮಾನ ಮತ್ತು ರಾಜಕೀಯ ಪ್ರಭಾವಗಳಿಗೂ ನೇರ ಸಂಬಂಧವಿದೆ. ದೊಡ್ಡ ಭೂಹಿಡುವಳಿಗೆ ಅಧಿಕ ಸಾಲ ಸೌಲಭ್ಯ ದೊರೆಯುತ್ತದೆ. ದೊರೆತ ಸಾಲವನ್ನು ಸಾಗುವಳಿಗೆ ಬಳಸಿಕೊಳ್ಳುವುದರಿಂದ ಕೃಷಿ ಇಳುವರಿ-ಪ್ರತಿಫಲವು ಅಧಿವಾಗಿರುತ್ತದೆ. ಸಾಲದ ಪರಿಣಾಮ ಧನಾತ್ಮಕವಾಗಿರುತ್ತದೆ. ಹೀಗೆ ದೊಡ್ಡಹಿಡುವಳಿಗಳನ್ನು ಹೊಂದಿರುವ ಶೇಕಡಾ ೫೨ ಲಿಂಗಾಯತ ಸಮುದಾಯವು ಸಹಕಾರ ಸಂಘಗಳಿಂದ ಅಧಿಕ ಸಾಲಸೌಲಭ್ಯವನ್ನು ಪಡೆದಿದ್ದಾರೆ. ಸಹಕಾರ ಸಂಘಗಳಿಂದ ಸಾಲಸೌಲಭ್ಯ ಪಡೆಯುವದರೊಂದಿಗೆ ಸರ್ಕಾರಗಳ ಸಾಲಮನ್ನ ಯೋಜನೆಯ ಲಾಭವನ್ನು ಇವರು ನಿರಂತರವಾಗಿ ಪಡೆದಿದ್ದಾರೆ. ಸಾಲ ಮರುಪಾವತಿ ಸಾಮರ್ಥ್ಯವನ್ನು ಆಧರಿಸಿ ವಾಣಿಜ್ಯಬ್ಯಾಂಕುಗಳು ಸಾಲಸೌಲಭ್ಯ ಪೂರೈಸುತ್ತವೆ. ದೊಡ್ಡಹಿಡುವಳಿಗಳನ್ನು ಹೊಂದಿದ್ದು ಆದಾಯ ಉತ್ತಮವಾಗಿರುವವರಿಗೆ ವಾಣಿಜ್ಯ ಬ್ಯಾಂಕುಗಳು ಸಾಲ ನೀಡಲು ಆಸಕ್ತಿವಹಿಸುತ್ತವೆ. ವಾಣಿಜ್ಯ ಬ್ಯಾಂಕುಗಳಿಂದ ಅಧಿಕ ಪ್ರಮಾಣದ ಸಾಲ ಸೌಲಭ್ಯಪಡೆದಿರುವುದು ಲಿಂಗಾಯತ ಸಮುದಾಯವೆಂಬುದು ಗಮನಿಸಬೇಕಾದ ಅಂಶ. ವಾಣಿಜ್ಯ ಬ್ಯಾಂಕುಗಳು ನೀಡುವ ರಿಯಾಯಿತಿ ಬಡ್ಡಿ ಸೌಲಭ್ಯ ಮತ್ತು ಸಾಲ ಸರಿಯಾದ ಸಮಯಕ್ಕೆ ಮರು ಪಾವತಿ ಮಾಡಿದ್ದಕ್ಕೆ ನೀಡುವ ಉತ್ತೇಜನ ಸೌಲಭ್ಯವನ್ನು ಈ ಜಾತಿಯವರೆ ಪಡೆಯುತ್ತಿದ್ದಾರೆ. ಹೀಗೆ ಪಡೆದ ಸಾಲ ಮತ್ತು ತಮ್ಮ ಮಿಗುತೆ ಆದಾಯಗಳಿಂದ ಮತ್ತಷ್ಟು ಹೊಸ ಭೂಮಿ ಖರೀದಿಸುವ ಸಂಪತ್ತು-ಆಸ್ತಿ ವೃದ್ಧಿಸಿಕೊಂಡವರು ಈ ಸಮುದಾಯದವರೇ. ಇದರಿಂದ ಅವರ ಆರ್ಥಿಕ ಸಾಮಾಜಿಕ ರಾಜಕೀಯ ಪ್ರಭಾವವೂ ಹೆಚ್ಚಾಗಿದೆ ಎನ್ನಬಹುದು.

ಹೀಗೆ ಭೂಹಿಡುವಳಿಗೂ-ಆರ್ಥಿಕ ಪರಿಸ್ಥಿಯ ಸುಧರಣೆಗೂ ಸಂಬಂದವಿದೆ ಎನ್ನಬಹುದು. ವುಳ್ಳವರು ಅಭಿವೃದ್ಧಿಯ ಫಲಗಳನ್ನೂ ನಿರಂತರವಾಗಿ ಪಡೆಯುತ್ತಿದ್ದಾರೆ. ಹೀಗೆ ಸಂಘಟಿತ ವಲಯದ ಹಣಕಾಸು ಸೌಲಭ್ಯಗಳು ಪ್ರಬಲ ವರ್ಗಗಳ ಪಾಲಾಗುತ್ತಿವೆ. ದುರ್ಬಲ ವರ್ಗಗಳು ಸಂಘಟಿತ ಹಣಕಾಸು ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗುತ್ತಿಲ್ಲ. ಅದೇ ರೀತಿ ಸರ್ಕಾರದ ಅಭಿವೃದ್ಧಿ ಯೋಜನೆಗಳು ಮತ್ತು ಸಾರ್ವಜನಿಕ ಹೂಡಿಕೆಗಳ ಪ್ರಯೋಜನಗಳನ್ನು ಇವರು ಪಡೆಯಲಾಗುತ್ತಿಲ್ಲ. ದುರ್ಬಲ ವರ್ಗಗಳು ಅವಕಾಶಗಳಿಂದ ವಂಚಿತರಾಗಿ ಅಂಚಿನಲ್ಲಿ ಬದುಕುತ್ತಿದ್ದಾರೆ. ನಿರ್ಲಕ್ಷಕ್ಕೆ ಒಳಗಾಗಿದ್ದಾರೆ. ಈ ವರ್ಗಗಳನ್ನು ಸಮಾಜದ ಅಂಚಿನಿಂದ ಕೇಂದ್ರಕ್ಕೆ ತರುವ ಹೊಣೆಗಾರಿಕೆ ಸರ್ಕಾರದ ಮೇಲಿದೆ ಈ ನಿಟ್ಟಿನಲ್ಲಿ ಪ್ರಾಮಾಣಿಕ ಪ್ರಯತ್ನಗಳು ಆಗಬೇಕಾಗಿದೆ.

### ೪.೧೧. ಸಾಲದ ಅಗತ್ಯ

ಆರ್ಥಿಕ ಅಭಿವೃದ್ಧಿಯಲ್ಲಿ ಹಣಕಾಸಿನ ಪಾತ್ರದ ಬಗ್ಗೆ ಅರ್ಥಶಾಸ್ತ್ರಜ್ಞರು ನಿರಂತರವಾಗಿ ಚರ್ಚಿಸುತ್ತಾ ಬಂದಿದ್ದಾರೆ. ಆಧುನಿಕ ಹಣಕಾಸು ಆರ್ಥಿಕತೆಯಲ್ಲಿ ಅರ್ಥ ವ್ಯವಸ್ಥೆಯ ಸುಲಲಿತ ಕಾರ್ಯಾಚರಣೆ ಮತ್ತು ಅಭಿವೃದ್ಧಿ ದೃಷ್ಠಿಯಿಂದ ಹಣಕಾಸಿನ ಪಾತ್ರ ನಿರ್ಲಕ್ಷಿಸುವಂತಿಲ್ಲ. ಉದ್ಯೋಗ ಮತ್ತು ಉತ್ಪನ್ನ ಹೆಚ್ಚಳದಲ್ಲಿ ಭೌತಿಕ ಸಂಪನ್ಮೂಲಗಳಂತೆ, ಸರ್ಕಾರದ ಮನೋಭಾವ, ಸಾಲನೀತಿಗಳು ಹಾಗೂ ಹಣಕಾಸು ವ್ಯವಸ್ಥೆಯು ಮುಖ್ಯವಾದುದು. ಆರ್ಥಿಕ ಚಟುವಟಿಕೆಗಳು ಮತ್ತು ಅಭಿವೃದ್ಧಿಯ ವೇಗವನ್ನು ಪ್ರೇರೆಪಿಸುವಲ್ಲಿ ಸಂಘಟಿತ ಹಣಕಾಸು ವ್ಯವಸ್ಥೆ ಮಹತ್ವದ ಕೊಡುಗೆ ನೀಡಬಲ್ಲದು. ಕೃಷಿಕರಿಗೆ, ಕೃಷಿ ಹೂಡಿಕೆದಾರರಿಗೆ ಸರಿಯಾದ ಕಾಲಕ್ಕೆ, ಸರಿಯಾದ ಪ್ರಮಾಣದಲ್ಲಿ ಹಣಕಾಸು ಲಭಿಸಬೇಕು. ಈ ಮೂಲಕ ಇವರಲ್ಲಿ ಉದ್ಯಮಶೀಲ ಮನೋಭಾವ ಬೆಳೆಸುವ ಅಗತ್ಯವಿದೆ. (ಶಂಪೀಟರ್ ೧೯೩೪:೧೦೬) ಹಣಕಾಸ ಅಭಿವೃದ್ಧಿ ಚಕ್ರಕ್ಕೆ ಬಳಸುವ ಲೂಬ್ರಿಕೆಂಟ್ ಇದ್ದಂತೆ. ಹಣಕಾಸು ಸಮಗ್ರ ಅಭಿವೃದ್ಧಿಯ ದೃಷ್ಟಿಯಿಂದ ವಲಯವಾರು, ಪ್ರಾದೇಶಿಕವಾಗಿ ಹಾಗೂ ವ್ಯಯುಕ್ತಿಕವಾಗಿ ಎಲ್ಲಾ ಚಟುವಟಿಕೆಗಳಿಗೂ ಕಾಲಕ್ಕೂ ಲಭಿಸುವಂತಿರಬೇಕು. ಹಣಕಾಸು ಆರ್ಥಿಕ ಮತ್ತು ಇತರೇ ಸಮಗ್ರ ಬೆಳವಣಿಗೆಯಲ್ಲಿ ಬದಲಾವಣೆ ತರಬಲ್ಲದು. ಆದರೆ ಸಾಲ ಸೌಲಭ್ಯಗಳು ಸಮಾಜದ ಎಲ್ಲಾ ವರ್ಗಗಳಿಗೂ ಬದುಕನ್ನು ಸುಧಾರಿಸಬಲ್ಲ ಎಲ್ಲಾ ಚಟುವಟಿಕೆಗಳು ಲಭಿಸಬೇಕು. ಭೌತಿಕ ಸಂಪನ್ಮೂಲಗಳನ್ನು ಹೊಂದಿರುವ ಉಳ್ಳವರಿಗೆ ಮಾತ್ರ ಹಣಕಾಸು ಸೌಲಭ್ಯಗಳು ಲಭಿಸುವಂತಿದ್ದರೆ ಸಂಪನ್ಮೂಲಗಳನ್ನು ಹೊಂದಿಲ್ಲದವರು ನಿರ್ಲಕ್ಷಿತರಾಗುತ್ತಾರೆ. ಸಂಘಟಿತ ಹಣಕಾಸು ವ್ಯವಸ್ಥೆ ಸಂಪನ್ಮೂಲರಹಿತ ವರ್ಗಗಳನ್ನು ಒಳಗೊಳ್ಳವಂತಿರಬೇಕು. ಸರ್ಕಾರ ಪೂರೈಸುವ ಕಡಿಮೆ ಬಡ್ಡಿ ಹಾಗೂ ಸಹಾಯಧನ ಆಧಾರಿತ ಸಾಲ ಸೌಲಭ್ಯಗಳು ಎಲ್ಲಾ ವರ್ಗ, ಎಲ್ಲಾ ಪ್ರದೇಶಗಳಿಗೂ ದೊರೆತರೆ ಸಮಾನ ಅಭಿವೃದ್ಧಿ ಸಾಧ್ಯವಾಗುತ್ತದೆ.

## ೪.೧೨. ಸಾಲ ಅಗತ್ಯವಿರುವ ಚಟುವಟಿಕೆಗಳು

| ಸಾಲ ಸೌಲಭ್ಯ ಅಗತ್ಯವಿರುವ ಉದ್ದೇಶಗಳು | | | |
|---|---|---|---|
| ವಿವಿದ ಬೆಳೆಗಳು | ತಾಲ್ಲೂಕು (ಎ) | ತಾಲ್ಲೂಕು (ಬಿ) | ಒಟ್ಟು |
| ಕೃಷಿ ಅಥವಾ ಸಾಗುವಳಿ | ೯೦ | ೧೨೭ | ೨೧೭ |
| ಕೃಷಿಯೇತರ (ಸೇವಾ ವಲಯ, ವಾಪಾರ, ಸ್ವ ಉದ್ದೋಗ) | ೧೦ | ೩ | ೧೩ |
| ಅನಭೋಗ | ೩೩ | ೩೪ | ೬೯ |
| ಒಟ್ಟು | ೧೩೩ | ೧೬೪ | ೩೦೯ |

ಮೂಲ: ಕ್ಷೇತ್ರ ಕಾರ್ಯ, ತಾಲ್ಲೂಕು ಎ– ಸಿಂಧನೂರು ಬಿ–ದೇವದುರ್ಗ

ಶೇಕಡಾ ೧೦೦ರಷ್ಟು ಜನರು ಸಾಲದ ಅಗತ್ಯವಿದೆ ಎಂದಿದ್ದಾರೆ. ಜಿಲ್ಲೆಯ ಎರಡೂ ತಾಲ್ಲೂಕುಗಳಲ್ಲಿ ಸಂದರ್ಶಿಸಲ್ಪಟ್ಟ ಎಲ್ಲರೂ ತಮಗಿರುವ ಸಾಲದ ಅಗತ್ಯವನ್ನು ವ್ಯಕ್ತಪಡಿಸಿದರು. ಶೇಕಡಾ ೬೮ರಷ್ಟು ರೈತರಿಗೆ ಕೃಷಿ ಉದ್ದೇಶಕ್ಕೆ ಸಾಲದ ಅಗತ್ಯವಿದೆ. ಶೇಕಡಾ ೨೨ರಷ್ಟು ಜನರಿಗೆ ಕೃಷಿ, ಕೃಷಿಪೂರಕ ಮತ್ತು ಕೃಷಿಯೇತರ ಚಟುವಟಿಕೆಗಳಿಗೆ ಸಾಲದ ಅಗತ್ಯವಿದೆ. ಅತೀ ಸಣ್ಣ ರೈತರು, ಸಣ್ಣರೈತರು, ದೊಡ್ಡರೈತರಿಗೆ ಕೃಷಿ ಅಥವಾ ಸಾಗುವಳಿ ಚಟುವಟಿಕೆಗೆ ಸಾಲ ಅವಶ್ಯಕತೆ ಇದೆ. ಇಲ್ಲಿ ಎಸ್‌ಸಿ/ಎಸ್‌ಟಿ, ಹಿಂದುಳಿದ ವರ್ಗಗಳು, ಲಿಂಗಾಯತ ಎಲ್ಲಾ ಜಾತಿಗಳ ಜನರಿಗೂ ಹಣಕಾಸು ಬೇಕಾಗಿದೆ. ಶೇಕಡಾ ೫ರಷ್ಟು ಜನರಿಗೆ ಸ್ವ ಉದ್ಯೋಗ ಟೈಲರಿಂಗ್, ವ್ಯಾಪಾರ, ಇತ್ಯಾದಿ ಉದ್ದೇಶಗಳಿಗೆ ಹಣಕಾಸು ಅಗತ್ಯವಿದೆ. ಕೃಷಿಕಾರ್ಮಿಕರು ಭೂರಹಿತ ಕಾರ್ಮಿಕರಿಗೆ ಅನುಭೋಗದ ಉದ್ದೇಶಗಳಿಗೆ ಹಣಕಾಸು ಅಗತ್ಯವಿದೆ. ಇವರಿಗೆ ಉತ್ಪಾದಕ ಚಟುವಟಿಕೆಗಳಲ್ಲಿ ತೊಡಗಿ ಯೋಗ್ಯ ಬದುಕನ್ನು ರೂಪಿಸಿಕೊಳ್ಳುವ ಇಚ್ಛೆ ಮತ್ತು ಒಲವುಗಳಿವೆ. ಆದರೆ ಈ ಚಟುವಟಿಕೆಗಳನ್ನು ಕೈಗೊಳ್ಳಲು ಪೂರಕ ಆರ್ಥಿಕ ಹಿನ್ನೆಲೆಗಳಿಲ್ಲ. ಇವರಿಗೆ ದಿನನಿತ್ಯದ ಜೀವನ ನಿರ್ವಹಣೆಗೆ ಹಣಕಾಸಿನ ನೆರವು ಸಾಲದ ಅಗತ್ಯವಿದೆ. ಆಹಾರ, ಆರೋಗ್ಯ ಉದ್ದೇಶಗಳಿಗೆ ಮುಖ್ಯವಾಗಿ ಹಣಕಾಸಿನ ಅವಶ್ಯಕತೆ ಇದೆ. ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಕಾಳಜಿ ಇದ್ದರೂ ದೀರ್ಘಕಾಲದವರೆಗೂ ಶಿಕ್ಷಣಕೊಡಿಸುವ ಸಾಮರ್ಥ್ಯ ಮತ್ತು ಉತ್ಸಾಹಗಳು ಈ ವರ್ಗಗಳಿಗಳಿಗಿಲ್ಲ. ಹಾಗಾಗಿ ಶೈಕ್ಷಣಿಕ ಉದ್ದೇಶಗಳಿಗಿಂತ ದೈನಂದಿನ ಬದುಕಿನ ಅನುಭೋಗದ ಕಾರ್ಯಗಳಿಗೆ ಸಾಲದ ಅಗತ್ಯವಿದೆ. ಅನುಭೋಗದ ಉದ್ದೇಶಗಳಿಗೆ ಶೇಕಡಾ ೨೮ ಸಾಲ ಅಗತ್ಯವಿದೆ ಎನ್ನಲಾಗಿದೆ. ಸಾಲದ ಅವಶ್ಯಕತೆ ಇದ್ದರೂ ಈ ವರ್ಗಗಳಿಗೆ ಸಂಘಟಿತ ಹಣಕಾಸು ಮೂಲದಿಂದ ಸಾಲ ಸೌಲಭ್ಯದೊರೆಯುವುದಿಲ್ಲ. ಸಂಘಟಿತ ಮೂಲದಿಂದ ಅಂದರೆ ಸಾರ್ವಜನಿಕ ಬ್ಯಾಂಕುಗಳಿಂದ ನಮಗೆ ಸಾಲ ದೊರೆಯುತ್ತವೆ ಎಂಬ ಭರವಸೆ ನಂಬಿಕೆಗಳು ಈ ವರ್ಗಗಳಿಗಿಲ್ಲ. ಬ್ಯಾಂಕುಗಳು

ಬಡತನ ನಿರ್ಮೂಲನೆ, ಆರ್ಥಿಕ ಅಭಿವೃದ್ಧಿಗೆ ಆ ಮೂಲಕ ಗ್ರಾಮೀಣ ಅಭಿವೃದ್ಧಿಗೆ ಪೂರಕವಾಗುವಂತೆ ಸಾಲ ಸೌಲಭ್ಯ ಒದಗಿಸುತ್ತವೆ. ಅಭಿವೃದ್ಧಿಗೂ ಬ್ಯಾಂಕುಗಳು ಪೂರೈಸುವ ಹಣಕಾಸಿಗೂ ಸಂಬಂಧವಿದೆ. ಈ ಸಮಾಜದ ಅಸ್ಥಿತ್ವದ ಭಾಗವಾದ ನಮಗೂ ಸಾಲಗಳು ದೊರೆಯುತ್ತದೆ ಎಂಬ ಭಾವನೆಯೇ ಈ ವರ್ಗದ ಜನರಿಗಿಲ್ಲ. ಕಾರಣ ಬ್ಯಾಂಕುಗಳ ಭದ್ರತೆಯ ಆಧಾರದ ಮೇಲೆ ಸಾಲ ನೀಡುವುದರಿಂದ ತಮ್ಮ ಹಣಕಾಸು ಆವಶ್ಯಕತೆಗಳನ್ನು ಪೂರೈಸಿಕೊಳ್ಳಲು ಬ್ಯಾಂಕುಗಳನ್ನು ಸಂಪರ್ಕಿಸಬಹುದು ಎಂಬ ವಿಶ್ವಾಸವಿಲ್ಲ ಇವರಿಗಿಲ್ಲ. ಅಸಂಘಟಿತ ಹಣಕಾಸು ಮಾರುಕಟ್ಟೆಯಿಂದಲೂ ಈ ವರ್ಗಗಳಿಗೆ ಸಾಲ ದೊರೆಯುತ್ತಿಲ್ಲ. ಅಸಂಘಟಿತ ಖಾಸಗೀ ಮೂಲವು ಬಡ್ಡಿ ಸಮೇತ ಹಿಂದಿರುಗಿ ಬರುವಂತಿದ್ದರೆ ಮಾತ್ರ ಸಾಲ ನೀಡುತ್ತದೆ. ಖಾಸಗೀ ಹಣಕಾಸು ಮಾರುಕಟ್ಟೆಯು ತಮ್ಮ ಹಣಕ್ಕೆ ಭದ್ರತೆ ಇಲ್ಲದೆ ಸಾಲ ನೀಡುವುದಿಲ್ಲ. ಅಸಂಘಟಿತ ವಲಯವು ಸಾಲ ಪೂರೈಸುವುದು ಕೃಷಿ ಚಟುವಟಿಕೆಗಳ ಆಧಾರದ ಮೇಲೆಯೇ. ಸಾಗುವಳಿಗೆ ಅಗತ್ಯದ ಸಾಮಗ್ರಿಗಳಾದ ಬಿತ್ತನೆ ಬೀಜ, ಗೊಬ್ಬರ, ಕೀಟನಾಶಕಗಳು ಇತ್ಯಾದಿ ರೂಪದಲ್ಲಿ ಸಾಲ ಪೂರೈಸುತ್ತವೆ. ಈ ದೃಷ್ಟಿಯಿಂದ ಕೃಷಿ ಕಾರ್ಮಿಕರು ಭೂರಹಿತರಿಗೆ ಎರಡೂ ಮೂಲಗಳಿಂದ ಸಾಲದೊರೆಯುತ್ತಿಲ್ಲ. ಸಾಲದ ಉದ್ದೇಶವನ್ನು ಕೆಳಗಿನ ಕೋಷ್ಟಕದಿಂದ ತಿಳಿದುಕೊಳ್ಳಬಹುದು. ಎರಡೂ ತಾಲ್ಲೂಕುಗಳ ಮಾಹಿತಿಯನ್ನು ಕ್ರೋಡಿಕರಿಸಿ ಮೇಲಿನ ವಿಶ್ಲೇಷಣೆ ನೀಡಲಾಗಿದೆ.

ಕೃಷಿ ಕಾರ್ಮಿಕರು ಭೂರಹಿತ ಕಾರ್ಮಿಕರಲ್ಲಿ ಶೇಕಡಾ ೩೧ ದುಡಿಮೆಗಾರರಿಗೆ ತುಂಡು ಭೂಮಿ ಇದ್ದು ಕೃಷಿ ಚಟುವಟಿಕೆ ಕೈಗೊಳ್ಳುವ ಆಸಕ್ತಿ ಇದೆ. ಇದಕ್ಕೆ ಸಾಲದ ಅವಶ್ಯಕತೆಯೂ ಇದೆ. ಆದರೆ ಭೂ ದಾಖಲೆಗಳು ಇವರ ಪೂರ್ವಿಕರ ಹೆಸರಿನಲ್ಲಿದ್ದ ಪ್ರಸ್ತುತ ಕುಟುಂಬದ ಸದಸ್ಯರ ಹೆಸರಲ್ಲಿ ಇಲ್ಲ. ಈ ಕಾರಣದಿಂದ ಸಾಲ ಪಡೆದು ಕೃಷಿ ಮಾಡುವ ಆಸಕ್ತಿ ವ್ಯಕ್ತಪಡಿಸಿದರೂ ಸಾಲದೊರೆಯುವ ಅವಕಾಶಗಳು ಇಲ್ಲ. ಅದೇ ಶೇಕಡಾ ೬೯ರಷ್ಟು ದುಡಿಮೆಗಾರರು ಭೂರಹಿತರಾಗಿದ್ದಾರೆ. ಇವರಿಗೆ ಭೂಮಿಯೇ ಇಲ್ಲ. ಇವರು ಯಾವುದೇ ಮೂಲದಿಂದ ಸಾಲ ಪಡೆಯುವ ಅವಕಾಶಗಳಿಲ್ಲದೆ ನಿರ್ಲಕ್ಷಿತ ವರ್ಗವಾಗಿದ್ದು. ಸಮಾಜದ ಅಂಚಿನಲ್ಲಿ ಬದುಕುತ್ತಿದ್ದಾರೆ. ಅಂಚಿನಿಂದ ಕೇಂದ್ರಕ್ಕೆ ಬರುವ ತವಕವಿದ್ದರೂ ಅವಕಾಶಗಳು ಇಲ್ಲ.

### ೪.೧೩. ಸಾಲ ಪೂರೈಕೆಯಾದ ಮೂಲಗಳು

ಜನರು ತನ್ನ ವಿವಿಧ ಉದ್ದೇಶಗಳು, ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳಿಗೆ ಸಾಲ ಪಡೆಯುತ್ತಾರೆ. ಸಾಲವನ್ನು ಸಂಘಟಿತ ಮತ್ತು ಅಸಂಘಟಿತ ಮೂಲಗಳೆರಡರಿಂದಲೂ ಸಾಲ ಪಡೆಯುತ್ತಾರೆ. ಗ್ರಾಮೀಣ ಪ್ರದೇಶಗಳಲ್ಲಿ ಇಂದಿಗೂ ಅಸಂಘಟಿತ ಹಣಕಾಸು ಮಾರುಕಟ್ಟೆ ಹೆಚ್ಚು ಸಕ್ರಿಯವಾಗಿದೆ. ಪ್ರಭಾವಶಾಲಿಯಾಗಿದೆ. ಕೃಷಿಗೆ ಬೇಕಾದ ಹಣಕಾಸನ್ನು ಅಸಂಘಟಿತ ಮಾರುಕಟ್ಟೆ ಪೂರೈಸುತ್ತದೆ. ಈ ಮಾರುಕಟ್ಟೆ ರೈತರಿಗೆ ಉತ್ಪಾದನೆಗೆ ಬೇಕಾದ ಬೀಜ ಗೊಬ್ಬರ ಕ್ರಿಮಿನಾಶಗಳನ್ನು ಸಾಲದ ರೂಪದಲ್ಲಿ ಸಾಗುವಳಿಯ ಪ್ರಾರಂಭಲ್ಲಿ ಪೂರೈಸುತ್ತದೆ. ಪೂರೈಸುವಾಗ ಬೆಳೆಯನ್ನು–

ಬೆಳೆದ ಕೃಷಿ ಉತ್ಪನ್ನ ತಮಗೆ ನೀಡಬೇಕು ಎಂಬ ಷರತ್ತಿನ ಮೇರೆಗೆ ಉತ್ಪಾದನ ಸಾಮಾಗ್ರಿಗಳನ್ನು ಪೂರೈಸುತ್ತಾರೆ. ರಾಯಚೂರು ಜಿಲ್ಲೆಯಲ್ಲಿ ಈ ಮಾರುಕಟ್ಟೆ ಹೆಚ್ಚು ಕಾರ್ಯಶೀಲವಾಗಿದ್ದು ವ್ಯವಸ್ಥಿವಾಗಿ ಕಾರ್ತನಿರ್ವಹಿಸುತ್ತದೆ. ಉತ್ಪಾದನಾ ಹೂಡುವಳಿಗಳನ್ನು ಪೂರೈಸುವ ಈ ವ್ಯಾಪಾರಿಗಳು ನಗರ ಕೇಂದ್ರಗಳಲ್ಲಿ ವಾಸಿಸುತ್ತಾರೆ. ಸಿಂಧನೂರು ಮತ್ತು ಜಿಲ್ಲಾಕೇಂದ್ರ ರಾಯಚೂರಿನಿಂದ ತಮ್ಮ ವ್ಯವಹಾರಗಳನ್ನು ನಿರ್ವಹಿಸುತ್ತಾರೆ. ಉತ್ಪಾದನೆಗೆ ಬೇಕಾದ ಸಾಮಾಗ್ರಿಗಳು ಹೂಡುವಳಿಗಳ ಜೊತೆಗೆ ಸಾಮಾಜಿಕ ಕಾರ್ಯಗಳು, ಅನುಭೋಗದ ಉದ್ದೇಶಗಳಿಗೆ ನಗದು ರೂಪದಲ್ಲಿ ಸಹ ಸಾಲ ನೀಡುತ್ತಾರೆ. ಯಾವ ಮೂಲದಿಂದ ಸಾಲ ಪೂರೈಕೆಯಾಗುತ್ತದೆ. ಆ ಮೂಲಗಳು ಯಾವುವು? ಎಂಬುದನ್ನು ಕೆಳಗಿನ ಕೋಷ್ಟಕದಲ್ಲಿ ವಿಶ್ಲೇಷಿಸಲಾಗಿದೆ.

**ಸಾಲ ಪೂರೈಕೆಯಾದ ಮೂಲಗಳು**

| ಸಾಲ ಪೂರೈಕೆಯಾದ ಮೂಲಗಳು | | | | |
|---|---|---|---|---|
| ಸಾಲ ವಿವಿಧ ಮೂಲಗಳು | ತಾಲ್ಲೂಕು(ಎ) | ತಾಲ್ಲೂಕು (ಬಿ) | ಒಟ್ಟು | |
| | | | ಸಂಖ್ಯೆ | ಶೇಕಡಾ |
| ಸಂಘಟಿತ ಹಣಕಾಸು ಮಾರುಕಟ್ಟೆ | ೨೭ | ೬೪ | ೯೧ | ೨೮.೫೨ |
| ಅಸಂಘಟಿತ ಹಣಕಾಸು ಮಾರುಕಟ್ಟೆ | ೫೨ | ೫೩ | ೧೦೫ | ೩೨.೨೯ |
| ಯಾವ ಮೂಲದಿಂದಲೂ ಸಾಲ ಪಡೆಯದವರು | ೫೬ | ೬೭ | ೧೨೩ | ೩೮.೪೭ |
| ಒಟ್ಟು | ೧೩೫ | ೧೮೪ | ೩೧೯ | ೧೦೦ |

**ಮೂಲ:** ಕ್ಷೇತ್ರ ಕಾರ್ಯ, ತಾಲ್ಲೂಕು ಎ–ಸಿಂಧನೂರು ಬಿ–ದೇವದುರ್ಗ

ಆರ್‌ಬಿಐ ಹಣಕಾಸು ಮಾರುಕಟ್ಟೆಯನ್ನು ಸಂಘಟಿತ ಮತ್ತು ಅಸಂಘಟಿತ ಹಣಕಾಸು ವಲಯಗಳಾಗಿ ವರ್ಗೀಕರಿಸಿದೆ. ಸಂಘಟಿತ ಹಣಕಾಸು ವಲಯ, ಸರ್ಕಾರ ವಾಣಿಜ್ಯ ಬ್ಯಾಂಕುಗಳು, ಸಹಕಾರ ಸಂಸ್ಥೆಗಳು ಮತ್ತು ಗ್ರಾಮೀಣ ಬ್ಯಾಂಕುಗಳನ್ನು ಒಳಗೊಂಡಿದೆ. ಅಸಂಘಟಿತ ವಲಯವು, ಭೂಮಾಲೀಕರು, ದಲ್ಲಾಳಿಗಳು, ಖಾಸಗೀ ಲೇವಾದೇವಿಗಳು, ಸಾಹುಕಾರರು, ವಾಪಾರಸ್ಥರು, ಸ್ನೇಹಿತರು ಮತ್ತು ಸಂಬಂಧಿಗಳನ್ನು ಒಳಗೊಂಡಿದೆ. ಮೇಲೆ ತಿಳಿಸಿದ ಸಂಘಟಿತ ವಲಯದ ಹಣಕಾಸು ಸಂಸ್ಥೆಗಳನ್ನು ಸಾರ್ವಜನಿಕ ವಲಯದ ಬ್ಯಾಂಕುಗಳೆನ್ನಲಾಗುತ್ತದೆ.[೮] ಒಟ್ಟಾರೆ ಶೇಕಡಾ ೨೮.೫೨ರಷ್ಟು ಜನ ಮಾತ್ರ ಸಂಘಟಿತ ಮೂಲದಿಂದ ಸಾಲ ಪಡೆದಿದ್ದಾರೆ. ಸಿಂಧನೂರು ತಾಲ್ಲೂಕಿನಲ್ಲಿ (ಎ) ಶೇಕಡಾ ೨೦ರಷ್ಟು ರೈತರು ಮಾತ್ರ ಬ್ಯಾಕು ಸಂಘಟಿತ ಮೂಲದಿಂದ ಸಾಲ ಪಡೆದಿದ್ದಾರೆ. ದೇವದುರ್ಗದಲ್ಲಿ (ಬಿ) ತಾಲ್ಲೂಕಿನಲ್ಲಿ ಶೇಕಡಾ ೩೪.೭೮ರಷ್ಟು ಜನ ಈ ಮೂಲದಿಂದ

ಸಾಲ ಪಡೆದಿದ್ದಾರೆ. ಎರಡೂ ತಾಲ್ಲೂಕುಗಳಿಂದ ಶೇಕಡಾ ೭೧.೪೭ರಷ್ಟು ಜನ ಸಂಘಟಿತ ಮೂಲ/ಸಾರ್ವಜನಿಕ ಬ್ಯಾಂಕುಗಳಿಂದ ಸಾಲ ಸೌಲಭ್ಯ ಪಡೆದಿಲ್ಲ. ತಾಲ್ಲೂಕು ಎ ನಲ್ಲಿ ಶೇಕಡಾ ೮೦ರಷ್ಟು ಜನ ಮತ್ತು ತಾಲ್ಲೂಕು ಬಿ ನಲ್ಲಿ ಶೇಕಡಾ ೬೫.೨ರಷ್ಟು ಜನ ಸಂಘಟಿತ ವಲಯದ ಸಾಲಸೌಲಭ್ಯಗಳಿಂದ ಹೊರಗುಳಿದಿದ್ದಾರೆ. ತಾಲ್ಲೂಕು ಎ ನಲ್ಲಿ ಶೇಕಡಾ ೩೮.೫೧ರಷ್ಟು ಜನ ಹಾಗೂ ತಾಲ್ಲೂಕು ಬಿ ನಲ್ಲಿ ಶೇಕಡಾ ೨೮.೮೦ ಖಾಸಗಿ ಮೂಲದಿಂದ ಸಾಲಸೌಲಭ್ಯವನ್ನು ಪಡೆದಿದ್ದಾರೆ. ತಾಲ್ಲೂಕು ಎ ನಲ್ಲಿ ಶೇಕಡಾ ೪೧.೪೮ರಷ್ಟು ಹಾಗೂ ತಾಲ್ಲೂಕು ಬಿ ನಲ್ಲಿ ಶೇಕಡಾ ೩೬ರಷ್ಟು ಜನ ಯಾವುದೇ ಮೂಲದಿಂದ ಪಡೆದಿಲ್ಲ. ಒಟ್ಟಾರೆ ಎರಡೂ ತಾಲ್ಲೂಕುಗಳಿಂದ ಶೇಕಡಾ ೩೨.೯ರಷ್ಟು ಜನ ಅಸಂಘಟಿತ ಹಣಕಾಸು ಮಾರುಕಟ್ಟೆಯಿಂದ ಸಾಲ ಪಡೆದಿದ್ದಾರೆ. ಹಾಗೂ ಒಟ್ಟಾಗಿ ಶೇಕಡಾ ೩೮.೪೭ರಷ್ಟು ಜನ ಯಾವುದೇ ಮೂಲದಿಂದ ಸಾಲ ಸೌಲಭ್ಯ ಪಡೆದಿಲ್ಲ. ಅಸಂಘಟಿತ ಮಾರುಕಟ್ಟೆಯಿಂದ ಪಡೆದ ಸಾಲ (ಶೇಕಡಾ ೩೨.೯) ಸಂಘಟಿತ ಮೂಲದಿಂದ ಪಡೆದ ಸಾಲಕ್ಕಿಂತ (ಶೇಕಡಾ ೨೮.೫೨) ಅಧಿಕವಾಗಿದೆ. ಸರ್ಕಾರ, ಮೇಲ್ಮಟ್ಟದ ಮಟ್ಟದ ಹಣಕಾಸು ಸಂಸ್ಥೆಗಳು ಸಂಘಟಿತ ಹಣಕಾಸು ವಲಯದ ಬೆಳವಣಿಗೆ ಹಲವು ನೀತಿಗಳನ್ನು ಅನುಷ್ಠಾನಕ್ಕೆ ತಂದಿದೆ. ರಿಯಾಯಿತಿ ಬಡ್ಡಿ ದರದಲ್ಲಿ, ಸಹಾಯಧನ ಆಧಾರಿತ ಸಾಲಸೌಲಭ್ಯಗಳನ್ನು ಪೂರೈಸುತ್ತಿದ್ದರೂ ಅಸಂಘಟಿತ ಹಣಕಾಸು ಮೂಲ ಇಂದಿಗೂ ಗ್ರಾಮೀಣ ಪ್ರದೇಶಗಳಲ್ಲಿ ಪ್ರಬಲವಾಗಿದೆ. ಅಧಿಕಬಡ್ಡಿದರದ ಮೂಲಕ ಗ್ರಾಮೀಣ ಜನರನ್ನು ಶೋಷಿಸುತ್ತದೆ ಎಂದು ಈ ವಲಯ ಪರಿಗಣಿತವಾಗಿದ್ದರೂ ಬಹುತೇಕರು ತಮ್ಮ ಸಾಲದ ಅವಶ್ಯಕತೆಯನ್ನು ಈ ಮೂಲದಿಂದಲೇ ಪೂರೈಸಿಕೊಳ್ಳುತ್ತಿದ್ದಾರೆ. ಗ್ರಾಮೀಣ ಭಾಗದ ದುರ್ಬಲ ವರ್ಗಗಳ ಜನರು ಸಂಘಟಿತ ಹಣಕಾಸು ವ್ಯವಸ್ಥೆಯ ಸಾಲ ಸೌಲಭ್ಯಗಳಿಂದ ಹೊರಗುಳಿದಿದ್ದಾರೆ. ಅಸಂಘಟಿತ ಹಣಕಾಸು ಮಾರುಕಟ್ಟೆ ಮೇಲೆ ಜನರು ಹೆಚ್ಚು ಅವಲಂಬಿತರಾದಷ್ಟು ಸಮಸ್ಯೆಗಳು ಹೆಚ್ಚುತ್ತವೆ ಎನ್ನಬಹುದು.

## ೪.೧೪. ವಿವಿಧ ಮೂಲಗಳಿಂದ ಸಾಲ ಪಡೆದವರ ಜಾತಿವಾರು ವರ್ಗೀಕರಣ

| ಸಾಲ ವಿವಿಧ ಮೂಲಗಳು | ಸಾಲಗಳನ್ನು ಪಡೆದ ಜಾತಿವಾರು ವರ್ಗೀಕರಣ | | | | | | | | | |
|---|---|---|---|---|---|---|---|---|---|---|
| | ತಾಲ್ಲೂಕು(ಎ) | | | | ತಾಲ್ಲೂಕು(ಬಿ) | | | | ಒಟ್ಟು | |
| | ಪ.ಜಾ. ಪ.ಪಂ | ಹಿಂದುಳಿದ ವರ್ಗಗಳು | ಲಿಂಗಾಯತ | ಒಟ್ಟು | ಪ.ಜಾ. ಪ.ಪಂ | ಹಿಂದುಳಿದ ವರ್ಗಗಳು | ಲಿಂಗಾಯತ | ಒಟ್ಟು | ಸಂಖ್ಯೆ | ಶೇಕಡಾ |
| ಸಂಘಟಿತ ಹಣಕಾಸು ಮಾರುಕಟ್ಟೆ | ೧೧ | ೭ | ೧೦ | ೨೭ | ೧೭ | ೧೨ | ೩೫ | ೬೪ | ೯೧ | ೨೮.೫೨ |
| ಅಸಂಘಟಿತ ಹಣಕಾಸು ಮಾರುಕಟ್ಟೆ | ೩೭ | ೮ | ೭ | ೫೨ | ೯ | ೨೪ | ೨೦ | ೫೩ | ೧೦೫ | ೩೨.೨೯ |
| ಯಾವ ಮೂಲದಿಂದಲೂ ಸಾಲ ಪಡೆಯದವರು | ೩೫ | ೩ | ೩ | ೪೧ | ೪೭ | ೨೨ | ೧೩ | ೮೨ | ೧೨೩ | ೩೮.೪೭ |

ಮೂಲ: ಕ್ಷೇತ್ರಕಾರ್ಯ, ತಾಲ್ಲೂಕು ಎ-ಸಿಂಧನೂರು ಬಿ-ದೇವದುರ್ಗ. ಪ.ಜಾ-ಪರಿಶಿಷ್ಟ ಜಾತಿ. ಪ.ಪಂ-ಪರಿಶಿಷ್ಟ ಪಂಗಡ

ಒಟ್ಟಾರೆಯಾಗಿ ಎರಡೂ ತಾಲ್ಲೂಕುಗಳನ್ನು ಕ್ರೋಡೀಕರಿಸಿ ವಿಶ್ಲೇಷಿಸುವುದಾದರೆ ಒಟ್ಟು ಸಂದರ್ಶಿಸಲ್ಪಟ್ಟವರಲ್ಲಿ (೧೭೦) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಲ್ಲಿ ಸಂಘಟಿತ ವಲಯದಿಂದ ಸಾಲ ಪಡೆದವರ ಪ್ರಮಾಣ ಶೇಕಡಾ ೧೬.೪೭ ಮಾತ್ರ, ಸಂದರ್ಶಿತ ಲಿಂಗಾಯಿತ ಜಾತಿಯಲ್ಲಿ (೭೩) ಸಾರ್ವಜನಿಕ ಬ್ಯಾಂಕುಗಳಿಂದ ಸಾಲ ಪಡೆದವರ ಪ್ರಮಾಣ ಶೇಕಡಾ ೬೧.೬೪ ಹಿಂದುಳಿದ ವರ್ಗಗಳು ಶೇಕಡಾ ೨೫ ೧೯/೭೬ರಷ್ಟು ಜನ ಮೇಲೆ ತಿಳಿಸಿದ ಈ ಮೂಲದಿಂದ ಸಾಲ ಪಡೆದಿದ್ದಾರೆ. ಆದರೆ ಸಾಲ ಪಡೆದ ೯೧ ಜನರಲ್ಲಿ ಶೇ ೩೦.೭೬ರಷ್ಟು ಪರಿಶಿಷ್ಟ ಜಾತಿ ಮತ್ತು ಪಂಗಡದವರು, ಶೇ ೨೦.೮೭ರಷ್ಟು ಹಿಂದುಳಿದ ವರ್ಗದವರು ಹಾಗು ಶೇ ೪೯.೪೫ರಷ್ಟು ಲಿಂಗಾಯತ ಜಾತಿಯವರು ಸಂಘಟಿತ ಮೂಲದಿಂದ ಸಾಲ ಸೌಲಭ್ಯ ಪಡೆದಿದ್ದಾರೆ. ಎರಡೂ ತಾಲ್ಲೂಕುಗಳಿಂದ ಶೇಕಡಾ ೩೩ರಷ್ಟು ಜನ ಅಸಂಘಟಿತ ಮಾರಕಟ್ಟೆಯಿಂದ ಸಾಲ ಪಡೆದಿದ್ದು ಇದರಲ್ಲಿ ಶೇಕಡಾ ೪೯.೫೨ರಷ್ಟು ಜನ ಸಿಂದನೂರು ತಾಲ್ಲೂಕು (ಎ) ಹಾಗೂ ೫೦.೪೭ರಷ್ಟು ಜನ ದೇವದುರ್ಗ ತಾಲ್ಲೂಕು (ಬಿ) ನಲ್ಲಿ ಖಾಸಗಿ ಲೇವಾದೇವಿಗಳಿಂದ ಸಾಲ ಪಡೆದುಕೊಂಡಿದ್ದಾರೆ. ಶೇಕಡಾ ೩೩ರಷ್ಟು ಜನ ತಾಲ್ಲೂಕು ಎ ನಲ್ಲಿ ಹಾಗೂ ಶೇಕಡಾ ೬೬.೬೬ ಜನ ತಾಲ್ಲೂಕು ಬಿ ನಲ್ಲಿ ಹಾಗೂ ಒಟ್ಟಾಗಿ ಶೇಕಡಾ ೩೮ರಷ್ಟು ಜನ ಯಾವ ಮೂಲದಿಂದಲೂ ಸಾಲ ಪಡೆದಿಲ್ಲ. ಸಂಘಟಿತ ಹಣಕಾಸು ವಲಯದಿಂದ ಸಾಲ ಪಡೆದವರು ಒಟ್ಟಾರೆಯಾಗಿ ಲಿಂಗಾಯತ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಇವರು ಆರ್ಥಿಕ, ಸಾಮಾಜಿಕ ರಾಜಕೀಯವಾಗಿ ಪ್ರಬಲರಾಗಿದ್ದಾರೆ. ಇದು ಪ್ರಮುಖ ಭೂಮಾಲೀಕ ವರ್ಗವಾಗಿದೆ. ಹಿಂದೆ ತಿಳಿಸಿದಂತೆ ಈ ಸಮುದಾಯದವರು ಅತೀ ಹೆಚ್ಚು ಭೂಮಿಯನ್ನು ಹೊಂದಿದ್ದು ದೊಡ್ಡ ಹಿಡುವಳಿಗಳನ್ನು ಹೊಂದಿದ್ದಾರೆ. ಇವರಿಗೆ ಕೃಷಿ ಪ್ರಮುಖ ವೃತ್ತಿಯಾಗಿದ್ದು ಹೆಚ್ಚು ಕೃಷಿ ಆದಾಯ ಪಡೆಯುತ್ತಾರೆ. ಸಾರ್ವಜನಿಕ ಬ್ಯಾಂಕುಗಳು ಸಾಲ ನೀಡಲು ಆಧಿಕ ಭೂ ಹಿಡುವಳಿ ಹಾಗೂ ಸಾಲ ಪಡೆಯಲು ಇಚ್ಚಿಸುವವರ ಸಾಲ ಮರುಪಾವತಿ ಸಾಮರ್ಥ್ಯವನ್ನು ಪರಿಗಣಿಸುತ್ತವೆ. ಈ ಜಾತಿಯ ಆರ್ಥಿಕ ಪರಿಸ್ಥಿತಿ ಹಾಗೂ ರಾಜಕೀಯ ಪ್ರಭಾವಗಳಿಂದ ಸಂಘಟಿತ ಹಣಕಾಸು ಮೂಲದಿಂದ ಅಧಿಕ ಪ್ರಮಾಣದ ಸಾಲಸೌಲಭ್ಯ ಪಡೆಯುತ್ತಿದ್ದಾರೆ. ತಮ್ಮ ಈ ಸಾಮರ್ಥ್ಯದಿಂದ ಅಭಿವೃದ್ಧಿ ನೀತಿಯ ಫಲಗಳನ್ನು ಅಧಿಕ ಪ್ರಮಾಣದಲ್ಲಿ ಪಡೆಯುತ್ತಿದ್ದಾರೆ. ಪರಿಶಿಷ್ಟ ಜಾತಿ ಜನಾಂಗದವರು ಬಹುತೇಕರು ಭೂರಹಿತರು ಮತ್ತು ಕೃಷಿ ಕಾರ್ಮಿಕರಾಗಿದ್ದಾರೆ. ಇವರ ಭೂಹಿಡುವಳಿಗಳ ಪ್ರಮಾಣವು ಕಡಿಮೆ. ಇವರ ಪ್ರಸ್ತುತ ಆದಾಯವೂ ಕಡಿಮೆ. ಈ ವರ್ಗದ ಜನರು ಕೃಷಿಯೇತರ ಆದಾಯ ಚಟುವಟಿಕೆಗಳಲ್ಲಿ ತೊಡಗುವ ಪ್ರಮಾಣ ಕಡಿಮೆ. ಈ ವರ್ಗದ ಕೆಲವರು ತುಂಡು ಭೂಮಿ ಹೊಂದಿದ್ದರೂ ತಮ್ಮ ಹೆಸರುಗಳಲ್ಲಿ ಭೂ ದಾಖಲಾತಿಗಳು ಇಲ್ಲ. ತಮ್ಮ ದುರ್ಬಲ ಪರಿಸ್ಥಿತಿಯಿಂದ ಆರ್ಥಿಕ ಸಾಮಾಜಿಕವಾಗಿಯೂ ಹಿಂದುಳಿದಿದ್ದಾರೆ. ಸಾರ್ವಜನಿಕ ಬ್ಯಾಂಕುಗಳ ಸಾಲ ನಿಯಮ ಮತ್ತು ಸಾಲ ನೀತಿಗಳ ಪ್ರಕಾರ ಈ ವರ್ಗಗಳ ಬಹುತೇಕರು ಹಣಕಾಸು ಸಂಸ್ಥೆಗಳ ಸಾಲ ಸೌಲಭ್ಯ ಪಡೆಯಲು ಅರ್ಹರಾಗುವುದಿಲ್ಲ. ಈ ಕಾರಣಗಳಿಂದ ಸಂಘಟಿತ ಮೂಲದ ಸಾಲ ಸೌಲಭ್ಯಗಳಿಂದ

ಈ ವರ್ಗದ ಬಹುಸಂಖ್ಯಾತರು ಹೊರಗುಳಿದ್ದಾರೆ. ಹಿಂದುಳಿದ ವರ್ಗಗಳ ಜನರು ಒಟ್ಟಾರೆಯಾಗಿ ಶೇಕಡಾ ೨೧ರಷ್ಟು ಜನ ಸಂಘಟಿತ ಮೂಲದಿಂದ ಸಾಲಸೌಲಭ್ಯ ಪಡೆದಿದ್ದಾರೆ. ಇವರಲ್ಲಿ ಭೂಮಿ ಇದ್ದು ಸಾಮಾಜಿಕ, ಆರ್ಥಿಕವಾಗಿ ಉತ್ತಮ ಪರಿಸ್ಥಿತಿಯಲ್ಲಿರುವ ಸಾಲ ಪಡೆದಿದ್ದಾರೆ. ಎಸ್‌ಸಿ/ಎಸ್‌ಟಿಗಳು ಮೇಲೆ ಹೇಳಿದಂತೆ ಭೂರಹಿತರು ಕೃಷಿಕಾರ್ಮಿಕರಾಗಿರುವುದರಿಂದ ಪ್ರಾಥಮಿಕ ಸಹಕಾರ ಸಾಲ ಸಂಘಗಳಲ್ಲಿ ಸದಸ್ಯರಾಗವ ಅರ್ಹತೆಯೇ ಇವರಿಗಿಲ್ಲ. ಸದಸ್ಯರಾಗದ ಒರತು ಈ ಸಂಸ್ಥೆಗಳಿಂದ ಸಾಲ ಸಿಗುವುದೇ ಇಲ್ಲ. ಒಟ್ಟಾರೆಯಾಗಿ ಶೇಕಡಾ ೩೨ ಜನ ತಮ್ಮ ಸಾಲಕ್ಕಾಗಿ ಅಸಂಘಟಿತ ಸಾಲಮೂಲವನ್ನು ಅವಲಂಬಿಸಿದ್ದಾರೆ. ಈಗೆ ಜನ ಖಾಸಗೀ ಲೇವಾದೇವಿ ಮೂಲ ಅಥವಾ ಅಸಂಘಟಿತ ಹಣಕಾಸು ಮೂಲವನ್ನು ಅವಲಂಬಿಸಲು ಅನೇಕ ಕಾರಣಗಳಿವೆ. ಅವುಗಳಲ್ಲಿ ಪ್ರಮುಖವಾಗಿ ಸಾರ್ವಜನಿಕ ಬ್ಯಾಂಕುಗಳ ಸಾಲನೀತಿಗಳು, ಸಾಲ ನಿಯಮಗಳು, ಬ್ಯಾಂಕುಗಳ ಅಧಿಕಾರಿಗಳ ಧೋರಣೆ, ಕೃಷಿಕ್ಷೇತ್ರಕ್ಕೆ ನಿಗದಿತ ಸಾಲ ನೀಡಬೇಕೆಂಬ ನಿಯಮದಿಂದ ಬ್ಯಾಂಕುಗಳು ಸಣ್ಣ ಪ್ರಮಾಣದ ಸಾಲ ನೀಡಲು ಅನುಸರಿಸಬೇಕಾದ ಪ್ರಕ್ರಿಯೆ, ವ್ಯವಹಾರ ವೆಚ್ಚ, ಮರುಪಾವತಿ ಸಮಸ್ಯೆಗಳು, ಸಾಲ ಪಡೆಯಲು ಜನ ದಾಖಲೆಗಳನ್ನು ಹೊಂದಿಸಿಕೊಳ್ಳಲು ಮಾಡಬೇಕಾದ ಖರ್ಚು. ಈ ಹೀಗೆ ಹಲವು ಕಾರಣಗಳನ್ನು ಗುರುತಿಸಲಾಗಿದೆ. ಹೀಗೆ ಸಂಘಟಿತ ವಲಯದ ಸಂಕೀರ್ಣ ಸಾಲನೀತಿ ಹಾಗೂ ಅಸಂಘಟಿತ ಹಣಕಾಸು ವ್ಯವಸ್ಥೆಯ ಸರಳ ಸಾಲನೀತಿ–ನಿಯಮಗಳೇ ಪ್ರಮುಖ ಕಾರಣಗಳೆನ್ನಬಹುದು.

ಮೇಲಿನ ಕೋಷ್ಟಕದಲ್ಲಿ ತೋರಿಸಿರುವಂತೆ ಖಾಸಗೀ ಲೇವಾದೇವಿ ಮೂಲವನ್ನು ಅವಲಂಬಿಸಿರುವವರಲ್ಲಿ ಪರಿಶಿಷ್ಟ ಜಾತಿಜನಾಂಗಕ್ಕೆ ಸೇರಿದವರು ಮತ್ತು ಹಿಂದುಳಿದ ವರ್ಗಕ್ಕೆ ಸೇರಿದವರೇ ಅಧಿಕವಾಗಿದ್ದಾರೆ. ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವ ಪ್ರಬಲ ಜಾತಿಯಿಂದ ಪರಿಗಣಿತವಾಗಿರುವ ಲಿಂಗಾಯತ ಜಾತಿಯವರು ಅಸಂಘಟಿತ ಹಣಕಾಸು ಮೂಲವನ್ನು ಅವಲಂಬಿಸಿರುವುದು ಕಡಿಮೆ. ಆದರೂ ಎರಡೂ ತಾಲ್ಲೂಕುಗಳನ್ನು ಒಳಗೊಂಡು ಶೇಕಡಾ ೨೬ರಷ್ಟು ಲಿಂಗಾಯತ ಜಾತಿಯವರು ಖಾಸಗಿ ಲೇವಾದೇವಿ ಮೂಲದಿಂದ ಸಾಲ ಪಡೆದಿದ್ದಾರೆ. ಈ ಹಿಂದೆ ತಿಳಿಸಿದಂತೆ ಶೇಕಡಾ ೬೦.೨೭ ಲಿಂಗಾಯತ ಸಮುದಾಯದವರು ಸರ್ಕಾರದ, ಸಂಘಟಿತ ಹಣಕಾಸು ಮೂಲದಿಂದ ಸಾಲಸೌಲಭ್ಯವನ್ನು ರಿಯಾಯಿತಿ ಬಡ್ಡಿದರದಲ್ಲಿ ಪಡೆದಿದ್ದಾರೆ. ಸರ್ಕಾರದ ಸಾಲನೀತಿ, ಸಾಲ ಯೋಜನೆಗಳ ಪ್ರಯೋಜನವನ್ನು ಗರಿಷ್ಠ ಮಟ್ಟದಲ್ಲಿ ಪಡೆಯುತ್ತಿದ್ದಾರೆ. ಸರ್ಕಾರದ ಸಾಲ ನೀತಿ, ಸಾಲ ಯೋಜನೆಗಳ ಪ್ರಯೋಜನ ಗರಿಷ್ಠಮಟ್ಟದಲ್ಲಿ ಪಡೆಯುತ್ತಿದ್ದಾರೆ. ಶೇಕಡಾ ೨೬ರಷ್ಟು ಲಿಂಗಾಯತ ಜಾತಿಯವರು ಅಸಂಘಟಿತ ಮೂಲದಿಂದ ಸಾಲ ಪಡೆದರೂ ಪಡೆದ ಸಾಲವನ್ನು ಹಿಂದಿರುಗಿಸುವ ಸಾಮರ್ಥ್ಯವಿದ್ದು ಸಾಲ ಮರುಪಾವತಿ ಮಾಡುತ್ತಾರೆ. ಯಾವುದೇ ಬಾಕಿ ಉಳಿಸಿಕೊಳ್ಳುವುದಿಲ್ಲ. ಹೀಗಾಗಿ ಈ ಮೂಲದಿಂದ ಸಾಲ ಪಡೆದು ಹಿಂತಿರುಗಿಸಲಾಗದೆ ಅದರಿಂದಾಗುವ ಪ್ರಭಾವಕ್ಕೆ, ಋಣಾತ್ಮಕ ಪರಿಣಾಮಗಳ ಸುಳಿಗೆ ಸಿಲುಕುವುದಿಲ್ಲ. ಮೇಲಾಗಿ ಲಿಂಗಾಯತ ಜಾತಿಯವರು ಅಸಂಘಟಿತ ಮೂಲದಿಂದ ಸಾಲ ಪಡೆಯಲು ಕಾರಣ ತಮ್ಮ ಪ್ರಸ್ತುತ ಆದಾಯ ಕಡಿಮೆ ಇದ್ದು

ಸಂಘಟಿತ ಮೂಲದಿಂದ ನಿಗದಿತ ಸಮಯಕ್ಕೆ ನಿರೀಕ್ಷಿದ ಪ್ರಮಾಣದಲ್ಲಿ ಸಾಲ ದೊರೆಯದಿದ್ದಾಗ. ಎರಡೂ ತಾಲ್ಲೂಕುಗಳಿಂದ ಶೇಕಡಾ ೪೧.೪೦ರಷ್ಟು ಪರಿಶಿಷ್ಟ ಜಾತಿ ಪಂಗಡದವರು ಅಸಂಘಟಿತ ಮೂಲದಿಂದ ಸಾಲ ಪಡೆಯುತ್ತಾರೆ. ಶೇಕಡಾ ೧೬ರಷ್ಟು ಪರಿಶಿಷ್ಟರು ಸಂಘಟಿತ ಮೂಲದಿಂದ ಸಾಲ ಪಡೆಯುತ್ತಾರೆ ಎಂದು ಹೇಳಲಾದರು ಪಡೆದ ಸಾಲವನ್ನು ಉತ್ಪಾದಕ ಉದ್ದೇಶಗಳಿಗೆ ಅಂದರೆ ಕೃಷಿ ಉತ್ಪಾದನೆ ಮತ್ತು ಇತರೆ ಆದಾಯ ವೃದ್ದಿಸುವ ಕಾರ್ಯಗಳಿಗೆ ಬಳಕೆಯಾಗುವುದಿಲ್ಲ ಇದಕ್ಕೆ ಕಾರಣಗಳನ್ನು ಪ್ರತ್ಯೇಕವಾಗಿ ಮುಂದಿನ ಸಾಲದ ಬಳಕೆ ವಿಷಯದಲ್ಲಿ ಚರ್ಚಿಸಲಾಗಿದೆ. ಶೇಕಡಾ ೪೧ರಷ್ಟು ಪರಿಶಿಷ್ಟ ಜಾತಿ ಪಂಗಡದವರು ಖಾಸಗೀ ಸಾಲ ಮೂಲವನ್ನು ಅವಲಂಬಿಸಲು ಮುಖ್ಯವಾದ ಕಾರಣಗಳನ್ನು ಚರ್ಚಿಸುವುದು ಅಗತ್ಯ. ಪರಿಶಿಷ್ಟ ಜಾತಿ ಪಂಗಡದವರಲ್ಲಿ ಅತೀಸಣ್ಣ ರೈತರ ಸಂಖ್ಯೆ ಹೆಚ್ಚಾಗಿದೆ. ಇವರು ಬ್ಯಾಂಕುಗಳಿಂದ ಸಾಲ ಪಡೆಯಲು ಪ್ರಯತ್ನಸಿದರೂ ಸಾಲ ದೊರೆಯುವುದು ಸಹಕಾರ ಬ್ಯಾಂಕುಗಳಿಂದ ಮಾತ್ರ, ವ್ಯಾಪಾರ ವ್ಯವಹಾರಗಳಿಗೆ ಹೆಚ್ಚು ಆಧ್ಯತೆ ನೀಡುವ ಮತ್ತು ಲಾಭವನ್ನೇ ಪ್ರಮುಖ ಉದ್ದೇಶವಾಗಿಟ್ಟುಕೊಂಡು ಕಾರ್ಯನಿರ್ವಹಿಸುವ ವಾಣಿಜ್ಯಬ್ಯಾಂಕುಗಳು ಪರಿಶಿಷ್ಟರಿಗೆ ಸಾಲ ನೀಡಲು ಆಸಕ್ತಿ ತೋರುವುದಿಲ್ಲ. ಈ ರೀತಿಯ ಧೋರಣೆಯ ಕಾರಣ ಪರಿಣಾಮಗಳನ್ನು ಪ್ರತ್ಯೇಕವಾಗಿ ಮುಂದಿನ ಭಾಗದಲ್ಲಿ ವಿಶ್ಲೇಷಿಸಲಾಗಿದೆ. ಅದೇ ರೀತಿ ಶೇಕಡಾ ೩೨ರಷ್ಟು ಹಿಂದುಳಿದ ವರ್ಗಗಳು ತಮ್ಮ ಹಣಕಾಸು ಅಗತ್ಯಗಳನ್ನು ಅಸಂಘಟಿತ ಮೂಲದಿಂದ ಪಡೆದುಕೊಳ್ಳುತ್ತವೆ. ಇವರಲ್ಲಿ ಬಹುತೇಕರು ಸಣ್ಣ ಅತಿಸಣ್ಣ ರೈತವರ್ಗಗಳಿಗೆ ಸೇರಿದ್ದು ಇವರಲ್ಲಿ ದೊಡ್ಡ ರೈತರ ಪ್ರಮಾಣ ಕಡಿಮೆ. ಪರಿಶಿಷ್ಟರು ಹಾಗೂ ಹಿಂದುಳಿದ ವರ್ಗದವರು ಸಣ್ಣ ಅತೀಸಣ್ಣ ರೈತರ ಗುಂಪಿಗೆ ಸೇರಿರುವುದರಿಂದ ಬ್ಯಾಂಕಿನ ನಿಯಮದಂತೆ ತಮ್ಮ ಸಣ್ಣ ಭೂಹಿಡುವಳಿಗೆ ದೊರೆಯುವ ಅಥವಾ ನಿಗದಿಯಾಗಿರುವ ಸಾಲದ ಪ್ರಮಾಣ ಕಡಿಮೆ. ಒಂದು ವೇಳೆ ಸಾಲ ದೊರೆತರೂ ಸಹಕಾರ ಸಂಸ್ಥೆಗಳಿಂದ ಮಾತ್ರ. ಆದರೆ ಸಂಸ್ಥೆಗಳು ಅವುಗಳದೇ ಆದ ಆರ್ಥಿಕ ಸಂಪನ್ಮೂಲಗಳ ಸಮಸ್ಯೆಗಳನ್ನು ಹೊಂದಿವೆ. ಹಣಕಾಸು ನೆರವಿಗಾಗಿ ಸರ್ಕಾರವನ್ನು ಅವಲಂಬಿಸಿವೆ. ಹೀಗಾಗಿ ಈ ಸಂಸ್ಥೆಗಳಿಂದ ಸಾಲ ಬಿಡುಗಡೆಯಾವುದು, ಅನುಮೋದನೆ ದೊರೆಯುವುದು ವಿಳಂಬ. ಸಾಲದ ಪ್ರಮಾಣ ಅತ್ಯಂತ ಕಡಿಮೆ. ನಿಗದಿತ ಸಮಯಕ್ಕೆ ಅಂದರೆ ಕೃಷಿ ಉತ್ಪಾದನೆ ಸಮಯದಲ್ಲಿ ಸಾಲ ದೊರೆಯುವುದಿಲ್ಲ. ಈ ರೀತಿಯ ಸಮಸ್ಯೆಗಳಿಂದ ದುರ್ಬಲ ವರ್ಗಗಳು ತಮ್ಮ ಸಾಲದ ಅವಶ್ಯಕತೆಗಳಿಗಾಗಿ ಖಾಸಗೀ ಲೇವಾದೇವಿ ಮೂಲವನ್ನು ಅವಲಂಭಿಸುತ್ತಾರೆ. ಸಂಘಟಿತ ಹಣಕಾಸು ವಲಯದಿಂದ ಸಾಲ ಪಡೆಯಲಾಗದ ಶೇಕಡಾ ೭೧.೪೭ರಷ್ಟು ಜನರ ಸಾಲ ಅಗತ್ಯಗಳನ್ನು ಪರಿಗಣಿಸಬೇಕಾದ ಮತ್ತು ಸಾಲ ಸೌಲಭ್ಯ ವಂಚಿತ ವರ್ಗಗಳನ್ನು ಸಂಘಟಿತ ಸಾಲ ವ್ಯವಸ್ಥೆಯ ವ್ಯಾಪ್ತಿಗೆ ಒಳಪಡಿಸುವ ಅಥವಾ ಈ ವರ್ಗಗಳನ್ನು ಒಳಗೊಳ್ಳುವ ಸಾಲನೀತಿಯನ್ನು ಅನುಷ್ಠಾನ ಗೊಳಿಸಬೇಕು. ಇಲ್ಲದಿದ್ದಲ್ಲಿ ೧೨ನೇ ಪಂಚವಾರ್ಷಿಕ ಯೋಜನೆಯ ಅಥವಾ ಕೇಂದ್ರ ಸರ್ಕಾರದ ಇತ್ತೀಚಿನ ಬಹು ಚರ್ಚಿತ ಒಳಗೊಳ್ಳುವ ಅಭಿವೃದ್ಧಿ ತಂತ್ರ ಸಾರ್ಥಕ ಪಡೆಯುವುದಿಲ್ಲ. ಕಾರಣ ಹಣಕಾಸು ಒಳಗೊಳ್ಳುವಿಕೆ ಸಮಗ್ರ ಆರ್ಥಿಕ ಅಭಿವೃದ್ಧಿಯ ಅಂತರ್ಗತ ಭಾಗವಾಗಿದೆ.

ಶೇಕಡಾ ೩೮ರಷ್ಟು ಜನ ಎರಡೂ ಮೂಲಗಳ ಸಾಲ ಸೌಲಭ್ಯಗಳಿಂದ ಹೊರಗುಳಿದಿದ್ದು ಇವರಲ್ಲಿ ಪರಿಶಿಷ್ಟರ ಪ್ರಮಾಣ ಶೇಕಡಾ ೬೬.೬೬ರಷ್ಟಿದೆ. ಅದೇ ರೀತಿ ಹಿಂದುಳಿದ ವರ್ಗಗಳ ಪ್ರಮಾಣ ಶೇ. ೧೩.೬೯ರಷ್ಟಿದೆ. ಯಾವ ಮೂಲದಿಂದಲೂ ಸಾಲ ಪಡೆಯದಿರುವವರಲ್ಲಿ ಅತೀಸಣ್ಣ ರೈತ ಮತ್ತು ಕೃಷಿಕಾರ್ಮಿಕ ಭೂರಹಿತ ಕಾರ್ಮಿಕರು ಹೆಚ್ಚಾಗಿದ್ದಾರೆ. ಎರಡೂ ಮೂಲಗಳು ಸಾಲಸೌಲಭ್ಯ ನೀಡುವಾಗ ಭದ್ರತೆಯನ್ನು ಪಡೆಯುತ್ತವೆ. ಸಂಘಟಿತ ಹಣಕಾಸು ವ್ಯವಸ್ಥೆ ಭೂಮಿಯನ್ನು ಭದ್ರತೆಯನ್ನಾಗಿ ಪರಿಗಣಿಸಿದರೆ, ಅಸಂಘಟಿತ ಹಣಕಾಸು ಮಾರುಕಟ್ಟೆ ಕೃಷಿ ಉತ್ಪನ್ನವನ್ನು-ಬೆಳೆಯನ್ನು ಪರಿಗಣಿಸುತ್ತದೆ. ಕೃಷಿಕಾರ್ಮಿಕ ಭೂರಹಿತರಿಗೆ ಭೂಮಿಯೂ ಇರುವುದಿಲ್ಲ. ಕೃಷಿ ಉತ್ಪಾದನೆಯೂ ಇರುವುದಿಲ್ಲ. ಇವರು ಭೂರಹಿತ ಅಥವಾ ಆಸ್ತಿರಹಿತ ವರ್ಗವಾಗಿದ್ದು ಬೆವರನ್ನೇ ಆಸ್ತಿಯಾಗಿ ಪರಿಗಣಿಸುತ್ತಾರೆ. ಬೆವರನ್ನು ಮಾರಿಕೊಂಡು ಬದುಕು ನಡೆಸುತ್ತಾರೆ.[೯] ಈ ವರ್ಗ ಉದ್ಯೋಗಕ್ಕಾಗಿ ವಲಸೆ ಹೋಗುತ್ತಾರೆ. ಪ್ರಸ್ತುತ ನನ್ನ ಅಧ್ಯಯನದಲ್ಲಿ ಶೇಕಡಾ ೨೮ರಷ್ಟು ಕೃಷಿ ಭೂರಹಿತ ಕಾರ್ಮಿಕರು ಕಂಡು ಬಂದಿದ್ದು ಇವರು ಯಾವುದೇ ಹಣಕಾಸು ಮೂಲದಿಂದ ಸಾಲಸೌಲಭ್ಯ ಪಡೆದಿಲ್ಲ.

**೪.೧೫. ಸಂಘಟಿತ ಮೂಲದಿಂದ ಪೂರೈಕೆಯಾದ ಸಾಲ ಹಂಚಿಕೆಯ ಜಾತಿವಾರು ವಿಶ್ಲೇಷಣೆ**

ಸಂಘಟಿತ ಹಣಕಾಸು ಮಾರುಕಟ್ಟೆಯಲ್ಲಿ ಪ್ರಮುಖವಾಗಿ ಸಾರ್ವಜನಿಕ ಬ್ಯಾಂಕುಗಳು ಕಾರ್ಯ ನಿರ್ವಹಿಸುತ್ತವೆ. ಇದರಲ್ಲಿ ಸಹಕಾರ ಸಂಸ್ಥೆಗಳ, ಪ್ರಾದೇಶಿಕ ಬಾಂಕುಗಳು ಹಾಗೂ ವಾಣಿಜ್ಯ ಬ್ಯಾಂಕುಗಳು ಪ್ರಮುಖವಾದುವು. ಈ ಸಂಸ್ಥೆಗಳು ಗ್ರಾಮೀಣ ಅಭಿವೃದ್ಧಿಗೆ ಪೂರಕವಾಗುವ ಚಟುವಟಿಕೆಗಳಿಗೆ ಹಣಕಾಸನ್ನು ಒದಗಿಸುತ್ತವೆ. ಕೃಷಿ, ಕೃಷಿ ಯೇತರ ಕ್ಷೇತ್ರಗಳಿಗೆ ಸಾಲ ಪೂರೈಸುತ್ತವೆ. ಆ ಮೂಲಕ ಕೃಷಿ ಉತ್ಪಾದನೆ ಹೆಚ್ಚಳ, ಆದಾಯ ವೃದ್ಧಿ, ಉದ್ಯೋಗವಕಾಶಗಳ ಹೆಚ್ಚಳ, ಆ ಮೂಲಕ ಗ್ರಾಮೀಣಾಭಿವೃದ್ಧಿ ಸಾಧಿಸಲು ಆರ್ಥಿಕವಾಗಿ ನೆರವಾಗುತ್ತವೆ. ಮೇಲಿನ ಉದ್ದೇಶಗಳ ಹಿನ್ನೆಲೆಯಲ್ಲಿ ಸ್ಥಾಪನೆಗೊಂಡ ಈ ಸಂಸ್ಥೆಗಳ ಪ್ರಸ್ತುತ ಕಾರ್ಯವಿಧಾನ ಮತ್ತು ಧೋರಣೆಯನ್ನು ಪರಿಶೀಲಿಸಬೇಕಾಗಿದೆ. ಸಹಕಾರ ಸಾಲ ಸಂಸ್ಥೆಗಳು ಗ್ರಾಮೀಣ ಪ್ರದೇಶಗಳಲ್ಲಿ ಸ್ವಾತಂತ್ರ್ಯ ಪೂರ್ವ ಮತ್ತು ನಂತರದಲ್ಲೂ ಸಾಲ ಪೂರೈಕೆಯಲ್ಲಿ ಮುಖ್ಯ ಪಾತ್ರವಹಿಸುತ್ತಿವೆ. ಆದರೆ ತಮ್ಮ ಹಣಕಾಸು ಸಂಪನ್ಮೂಲಗಳಾಗಿ ಸರ್ಕಾರವನ್ನೇ ಅವಲಂಬಿಸಿವೆ. ಬಹುತೇಕ ಸಂಸ್ಥೆಗಳ ಆರ್ಥಿಕಸ್ಥಿತಿ ಹದಗೆಟ್ಟಿದ್ದು ಅಸ್ತಿತ್ವ ಉಳಿಸಿಕೊಳ್ಳಲು ಒದ್ದಾಡುತ್ತಿವೆ. ಸ್ವಂತ ಬಂಡವಾಳ ಸಂಚಯನ ಮಾಡುವ ಸಾಮರ್ಥ್ಯವಿಲ್ಲದೆ ನಿಷ್ಕ್ರೀಯ ಹಂತ ತಲುಪಿವೆ. ಸಹಕಾರ ಸಂಸ್ಥೆಗಳು ಈ ಪರಿಸ್ಥಿತಿ ತಲುಪಲು ಸರ್ಕಾರಗಳ ನೀತಿಗಳೇ ಕಾರಣ ಎನ್ನಬಹುದು. ಈ ಸಂಸ್ಥೆಗಳ ಆರ್ಥಿಕ ಪರಿಸ್ಥತಿಯ ಸುಧಾರಣೆಗೆ ಸೂಕ್ತ ಸಲಹೆ ನೀಡಲು ಸರ್ಕಾರ ಹಲವು ಸಮಿತಿಗಳನ್ನು ರಚಿಸಿದೆ. ಈ ಸಮಿತಿಗಳ ವರದಿಗಳನ್ನು ಸರ್ಕಾರ ಸ್ವೀಕರಿಸಿದೆ. ಸಲಹೆಗಳನ್ನು ಒಪ್ಪಿ ಅನುಷ್ಠಾನಗೊಳಿಸಿದೆ. ಸರ್ಕಾರ ಸಹಕಾರ ಸಂಸ್ಥೆಗಳ ಬಲವರ್ಧನೆಗೆ ಹಲವು ಕ್ರಮಗಳನ್ನು ಕೈಗೊಂಡಿದೆ. ಆದಾಗ್ಯೂ ಸಹಕಾರ ಸಂಸ್ಥೆಗಳ ಆರ್ಥಿಕ ಪರಿಸ್ಥಿತಿ ಸುಧಾರಿಸಲಿಲ್ಲ. ಇವುಗಳ ಕಾರ್ಯವಿಧಾನ ಬದಲಾಗಲಿಲ್ಲ. ಇತ್ತೀಚಿನ ರಾಜ್ಯ ಸರ್ಕಾರಗಳ

ಸಾಲಮನ್ನಾ ಯೋಜನೆಗಳ ಅಡಿಯಲ್ಲಿ ಸರ್ಕಾರದಿಂದ ಬಂದ ಹಣದಿಂದ ಸಾಲ ವಿತರಿಸುವ ಕಾರ್ಯದಲ್ಲಿ ಮಾತ್ರ ತೊಡಗಿವೆ. ಇನ್ನಾವುದೇ ಗುಣಾತ್ಮಕ ಕಾರ್ಯಗಳು ಈ ಸಹಕಾರ ಸಂಸ್ಥೆಗಳಿಂದ ನಡೆಯುತ್ತಿಲ್ಲ. ನೀಡಿದ ಸಾಲವನ್ನು ಹಿಂತಿರುಗಿ ಪಡೆಯುವ, ರೈತರಿಗೆ ಕೃಷಿಗೆ ಅಗತ್ಯವಾದ ತಾಂತ್ರಿಕ ಮಾಹಿತಿ ನೀಡುವ, ಉತ್ಪಾದಕ ಕಾರ್ಯಗಳಿಗೆ ಮಾರ್ಗದರ್ಶನ ಮಾಡುವ, ಆದಾಯ ವೃದ್ಧಿ ಚಟುವಟಿಕೆಗಳಿಗೆ ಸಾಲ ನೀಡುವಂತಹ ಈ ಯಾವ ಕಾರ್ಯಗಳೂ ನಡೆಯುತ್ತಿಲ್ಲ. ಸಹಕಾರ ತತ್ವದ ಆಧಾರದ ಮೇಲೆ ಈ ಸಂಸ್ಥೆಗಳು ಸ್ಥಾಪನೆಗೊಂಡಿದ್ದರೂ ಈ ಸಂಸ್ಥೆಗಳ ನಿರ್ದೇಶಕರ ಸ್ವಜನ ಪಕ್ಷಪಾತ, ಸರ್ಕಾರಗಳ ಹತಿಯಾದ ರಾಜಕೀಯ ಹಸ್ತಕ್ಷೇಪಗಳಿಂದ ಈ ಬ್ಯಾಂಕುಗಳು ತಮ್ಮ ಮೂಲ ಆಶಯಗಳಿಗೆ ಪೂರಕವಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಇತ್ತೀಚಿನ ಅಧ್ಯಯನವೊಂದರ ಪ್ರಕಾರ ಗ್ರಾಮೀಣ ಕೃಷಿ ಮತ್ತು ಇತರೆ ಚಟುವಟಿಕೆಗಳಿಗೆ ಪೂರೈಕೆಯಾಗುವ ಸಾಲದ ಪ್ರಮಾಣದಲ್ಲಿ ಸಹಕಾರ ಸಂಸ್ಥೆಗಳ ಪಾಲು ಕಡಿಮೆಯಾಗಿದ್ದು ವಾಣಿಜ್ಯ ಬ್ಯಾಂಕುಗಳ ಪಾಲು ಗಣನೀಯವಾಗಿ ಹೆಚ್ಚಾಗಿದೆ. ೨೦೧೧-೨೦೧೨ರ ಅವಧಿಯಲ್ಲಿ ಕೃಷಿ ಕ್ಷೇತ್ರಕ್ಕೆ ಪೂರೈಕೆಯಾದ ಒಟ್ಟು ಸಾಲದ ಪ್ರಮಾಣದಲ್ಲಿ ಸಹಕಾರ ಸಂಸ್ಥೆಗಳ ಪಾಲು ಶೇಕಡಾ ೧೭ರಷ್ಟು ಆದರೆ ವಾಣಿಜ್ಯ ಬ್ಯಾಂಕುಗಳ ಪಾಲು ಶೇಕಡಾ ೭೮ರಷ್ಟು.[೧೦] ಗ್ರಾಮೀಣ ಸಾಲ ಪೂರೈಕೆಯಲ್ಲಿ ವಾಣಿಜ್ಯ ಬ್ಯಾಂಕುಗಳ ಪಾಲು ಹೆಚ್ಚಾಗಿರಿವುದನ್ನು ಆರ್‌ಬಿಐ ನ ವಾರ್ಷಿಕ ವರದಿಗಳಲ್ಲೂ ಕಾಣಬಹುದು.[೧೧] ಆದರೆ ವಾಣಿಜ್ಯ ಬ್ಯಾಂಕುಗಳು ಆರ್ಥಿಕವಾಗಿ ಪ್ರಬಲವಾಗಿರುವ ಸಮುದಾಯಗಳು, ದೊಡ್ಡ ಭೂಹಿಡುವಳಿದಾರರು ಹಾಗೂ ವ್ಯಾಪಾರಸ್ಥರಿಗೆ ಆಧ್ಯತೆ ನೀಡುವ ಮೂಲಕ ಶ್ರೀಮಂತರ ಬ್ಯಾಂಕುಗಳಾಗಿ ಕಾರ್ಯನಿರ್ವಹಿಸುತ್ತಿವೆ. ಲಾಭ ಗಳಿಕೆ ಇವುಗಳ ಮೂಲ ಉದ್ದೇಶವಾಗಿದೆ. ೧೯೯೨ರ ಆರ್ಥಿಕ ಸುಧಾರಣೆ ಮತ್ತು ಹಣಕಾಸು ಸುಧಾರಣೆಗಳ ನಂತರ ಗ್ರಾಮೀಣ ಪ್ರದೇಶದಲ್ಲಿ ಕಾರ್ಯ ನಿರ್ವಹಿಸುವ ಇವುಗಳ ಆಸಕ್ತಿ ಕ್ಷೀಣಿಸಿದೆ. ಇವುಗಳ ಶಾಖೆಗಳಲ್ಲಿ ಗಣನೀಯ ಕುಸಿತ ಕಂಡಿದೆ. ಇವುಗಳ ಸಾಲ ನೀಡಿಕೆ ಪ್ರಮಾಣ ಕುಸಿದಿದೆ. ೧೯೯೧ರ ನಂತರ ವಾಣಿಜ್ಯ ಬ್ಯಾಂಕುಗಳ ಸಾಲ ನೀಡಿಕೆ ಶೇಕಡಾ ೫೮ರಿಂದ ೩೬ಕ್ಕೆ ಕುಸಿದಿದೆ ಎನ್ನಲಾಗಿದೆ. ಗ್ರಾಮೀಣ ಭಾಗದಲ್ಲಿ ಕಾರ್ಯನಿರ್ವಹಿಸುವ ವಾಣಿಜ್ಯ ಬ್ಯಾಂಕುಗಳು ಸ್ಥಳೀಯ ಬಡವರ ದುರ್ಬಲರ ಭರವಸೆಯ ಬ್ಯಾಂಕುಗಳಾಗಿ ಉಳಿದಿಲ್ಲ. ದುರ್ಬಲ ವರ್ಗಗಳಿಗೂ ತಮಗೂ ಸಂಬಂದವಿಲ್ಲದಂತೆ ಕಾರ್ಯನಿರ್ವಹಿಸುತ್ತಿವೆ. ಕೇವಲ ಶ್ರೀಮಂತ ಕೃಷಿ ಬಂಡವಾಳಶಾಹಿಗಳು ಮತ್ತು ವಾಪರಸ್ಥರ, ಉದ್ಯಮಿಗಳ ಸಂಸ್ಥೆಗಳಾಗಿ ಕಾರ್ಯ ನಿರ್ವಹಿಸುತ್ತಿವೆ. ಅದೇರೀತಿ ಗ್ರಾಮೀಣ ಭಾಗದಲ್ಲಿ ಬಡತನ ರೇಖೆಗಿಂತ ಕೆಳಗಿರುವ ಕೃಷಿ ಕಾರ್ಮಿಕರು, ಅತೀಸಣ್ಣ ರೈತರಿಗೆ ಕಡಿಮೆ ಬಡ್ಡಿದರದಲ್ಲಿ ಸಾಲ ನೀಡುವ ಆಶಯದಿಂದಲೇ ಪ್ರಾದೇಶಿಕ ಗ್ರಾಮಿಣ ಬ್ಯಾಂಕುಗಳು ಸ್ಥಾಪನೆಗೊಂಡವು. ಆದರೆ ಈ ಬ್ಯಾಂಕುಗಳು ತಮ್ಮ ಮೂಲ ಉದ್ದೇಶಗಳನ್ನು ನಿರ್ಲಕ್ಷಿಸಿ ಲಾಭ ಗಳಿಕೆಗೆ ಪ್ರಯತ್ನಿಸುತ್ತಿವೆ. ಇವುಗಳು ಲಾಭಗಳಿಕೆಯ ಪೈಪೋಟಿಗೆ ಇಳಿದಿರುವುದರಿಂದ ಆರ್ಥಿಕ ಸಾಮಾಜಿಕವಾಗಿ ದರ್ಬಲ ವರ್ಗಗಳ ಅಭಿವೃದಿಯನ್ನು ಇವು ಪ್ರೋತ್ಸಾಹಿಸುತ್ತಿಲ್ಲ. ಈ ವರ್ಗಗಳ ಆರ್ಥಿಕ ಚಟುವಟಿಕೆಗಳಿಗೆ ಹಣಕಾಸಿನ ನೆರುವು ನೀಡುತ್ತಿಲ್ಲ ಎನ್ನಲಾಗಿದೆ.

೪.೧೬. ಸಂಘಟಿತ ಮೂಲದ ವಿವಿಧ ಹಣಕಾಸು ಸಂಸ್ಥೆಗಳಿಂದ ಪೂರೈಕೆಯಾದ ಸಾಲ ಹಂಚಿಕೆಯ ಜಾತಿವಾರು ವರ್ಗೀಕರಣ

| ಸಂಘಟಿತ ಮೂಲದ ವಿವಿಧ ಹಣಕಾಸು ಸಂಸ್ಥೆಗಳಿಂದ ಪೂರೈಕೆಯಾದ ಸಾಲ ಹಂಚಿಕೆಯ ಜಾತಿವಾರು ವರ್ಗೀಕರಣ | | | | | | | | | |
|---|---|---|---|---|---|---|---|---|---|
| ಹಣಕಾಸು ಸಂಸ್ಥೆಗಳು ಅಥವಾ ಸಾರ್ವಜನಿಕ ಬ್ಯಾಂಕುಗಳು | ತಾಲ್ಲೂಕು(ಎ) | | | | ತಾಲ್ಲೂಕು(ಬಿ) | | | | ಒಟ್ಟು |
| | ಪ.ಜಾ. ಪ.ಪಂ | ಹಿಂದುಳಿದ ವರ್ಗಗಳು | ಲಿಂಗಾಯತ | ಒಟ್ಟು | ಪ.ಜಾ. ಪ.ಪಂ | ಹಿಂದುಳಿದ ವರ್ಗಗಳು | ಲಿಂಗಾಯತ | ಒಟ್ಟು | ಸಂಖ್ಯೆ |
| ಪ್ರಾಥಮಿಕ ಕೃಷಿಸಾಲ ಸಹಕಾರ ಸಂಸ್ಥೆ | ೧೧ | ೭ | ೯ | ೨೭ | ೧೭ | ೧೨ | ೧೬ | ೪೫ | ೭೨ |
| ವಾಣಿಜ್ಯ ಬ್ಯಾಂಕುಗಳು | – | – | ೪ | ೪ | – | – | ೧೬ | ೧೬ | ೨೦ |
| ಒಟ್ಟು | ೧೧ | ೭ | ೧೩ | ೩೧ | ೧೭ | ೧೨ | ೩೨ | ೬೧ | ೯೨ |

ಮೂಲ: ಕ್ಷೇತ್ರಕಾರ್ಯ, ತಾಲ್ಲೂಕು ಎ–ಸಿಂಧನೂರು ಬಿ–ದೇವದುರ್ಗ. ಪ.ಜಾ–ಪರಿಶಿಷ್ಟ ಜಾತಿ. ಪ.ಪಂ–ಪರಿಶಿಷ್ಟ ಪಂಗಡ

ಸಿಂಧನೂರು ಮತ್ತು ದೇವದುರ್ಗ ತಾಲ್ಲೂಕುಗಳು ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ವರ್ಗಗಳು ಸ್ಥಳೀಯ ಬ್ಯಾಂಕುಗಳಾದ ಸಹಕಾರ ಸಂಘಗಳಿಂದ ಮಾತ್ರ ಸಾಲಸೌಲಭ್ಯ ಪಡೆದಿದ್ದಾರೆ. ವಾಣಿಜ್ಯ ಬ್ಯಾಂಕುಗಳಿಂದ ಲಿಂಗಾಯತ ಸಮುದಾಯದವರು ಹೆಚ್ಚಿನ ಸಾಲ ಪಡೆದಿದ್ದಾರೆ. ಸಿಂಧನೂರು ತಾಲ್ಲೂಕು ಜವಳಗೇರ ಹೋಬಳಿಯ ಸಿಂಡಿಕೇಟ್ ಬ್ಯಾಂಕ್‌ನಲ್ಲಿ ಲಿಂಗಾಯತ ಜಾತಿಯವರು ಅಧಿಕ ಪ್ರಮಾಣದಲ್ಲಿ ರಿಯಾಯತಿ ಬಡ್ಡಿ ದರದ ಸಾಲ ಪಡೆದಿದ್ದಾರೆ. ಇವರ ದೊಡ್ಡ ಭೂಹಿಡುವಳಿಗಳು, ಉತ್ತಮ ಆದಾಯ ಮತ್ತು ಆರ್ಥಿಕ ಸ್ಥಿತಿಗಳು ಹಾಗೂ ಮರುಪಾವತಿ ಸಾಮರ್ಥ್ಯವನ್ನು ಪರಿಗಣಿಸಿ ಸಿಂಡಿಕೇಟ್ ಬ್ಯಾಂಕು ಹೆಚ್ಚಿನ ಸಾಲ ನೀಡಿದೆ. ಹೀಗಾಗಿ ರಿಯಾಯತಿ ಬಡ್ಡಿದರದ ಸಾಲ ಸೌಲಭ್ಯಗಳ ಅನುಕೂಲ ಮತ್ತು ನಿಗದಿತ ಅವಧಿಯೊಳಗೆ ಸಾಲ ಮರುಪಾವತಿ ಮಾಡಿದ್ದರಿಂದ ಸರ್ಕಾರ ನೀಡುವ ಪ್ರೋತ್ಸಾಹ ಧನದ ಅನುಕೂಲವನ್ನು ಪಡೆದಿದ್ದಾರೆ. ದೊಡ್ಡ ಭೂಹಿಡುವಳಿ ಹಾಗೂ ದೊಡ್ಡ ಮಟ್ಟದ ಕೃಷಿ ಉತ್ಪಾಧನಾ ಚಟುವಟಿಕೆಗಳಿಂದ ಅಧಿಕ ಪ್ರಮಾಣದ ಬೆಳೆಸಾಲಗಳನ್ನ ಸಮಯಕ್ಕೆ ಸರಿಯಾಗಿ ಪಡೆದಿದ್ದಾರೆ. ನಿಗದಿತ ಸಮಯಕ್ಕೆ ನಿರೀಕ್ಷಿತ ಪ್ರಮಾಣದಲ್ಲಿ ಸಾಲ ಪಡೆದು ಅದನ್ನು ಉತ್ಪಾದಕ ಉದ್ದೇಶಕ್ಕೆ ಬಳಸಿಕೊಂಡಿರುವುದರಿಂದ ಸಾಲ ಸೌಲಭ್ಯದಿಂದ ಹೆಚ್ಚಿನ ಪ್ರಯೋಜನ ಪಡೆದಿದ್ದಾರೆ. ಹಾಗೂ ಅವರ ಆರ್ಥಿಕ ಪರಿಸ್ಥಿತಿಯಲ್ಲಿ ಸುಧಾರಣೆಯಾಗಿದೆ. ಇವರಲ್ಲಿ ಕೆಲವರು ತಮ್ಮ ಹೆಚ್ಚಾದ ಅದಾಯದಿಂದ ಹೊಸದಾಗಿ ಕೃಷಿ ಭೂಮಿಯನ್ನು ಖರೀದಿಸಿದ್ದಾರೆ. ತಮ್ಮ ಸಂಪತ್ತನ್ನು ವೃದ್ದಿಸಿಕೊಂಡಿದ್ದಾರೆ. ಇದರಿಂದ ತಮ್ಮ ಸಾಮಾಜಿಕ ಮತ್ತು ರಾಜಕೀಯ ಪ್ರಭಾವಗಳು ಹೆಚ್ಚಾಗಿವೆ ಎನ್ನಬಹುದು. ವಿಶೇಷ ಸಂಗತಿಯೆಂದರೆ ಲಿಂಗಾಯತ ಜಾತಿಯವರು ವಾಣಿಜ್ಯ ಬ್ಯಾಂಕು ಮತ್ತು ಸಹಕಾರ ಬ್ಯಾಂಕುಗಳೆರಡರಿಂದಲೂ ಸಾಲಸೌಲಭ್ಯ ಪಡೆದಿದ್ದಾರೆ. ಸಹಕಾರ ಸಂಸ್ಥೆಗಳಿಂದಲೂ ಅಧಿ ಪ್ರಮಾಣಕಲ್ಲಿ ಸಾಲ ಪಡೆದಿದ್ದಾರೆ. ಸರ್ಕಾರದ ಸಾಲಮನ್ನಾ ಸೌಲಭ್ಯವನ್ನು ಪಡೆದಿದ್ದಾರೆ. ವಾಣಿಜ್ಯ ಬ್ಯಾಂಕುಗಳ ಬಡ್ಡಿಮನ್ನಾ, ನಿಗದಿತ ಅವಧಿಗೆ ಮರುಪಾವತಿ ಮಾಡಿದ್ದರಿಂದ ಸರ್ಕಾರ ನೀಡುವ ಪ್ರೋತ್ಸಾಹ ಧನ ಹಾಗೂ ಸಹಕಾರ ಸಂಸ್ಥೆಗಳ ಸಾಲಮನ್ನ ಹೀಗೆ ಎಲ್ಲಾ ಅನುಕೂಲಗಳನ್ನು ಪಡೆದಿದ್ದಾರೆ. ಸಾಲವನ್ನು ಕೃಷಿ ಉತ್ಪಾದನೆಗೆ ಬಳಸಿಕೊಂಡಿದ್ದರಿಂದ ಉತ್ಪಾದನೆ ಹೆಚ್ಚಿ ಆದಾಯವೂ ಹೆಚ್ಚಾಗಿದೆ. ಹೀಗೆ ಸರ್ಕಾರದ ಸಾಲನೀತಿಗಳು ಮತ್ತು ಸಾಲಸೌಲಭ್ಯಗಳ ಯೋಜನೆಗಳು ಸಮಾಜದ ಪ್ರಬಲ ಸಮುದಾಯದ, ಜಾತಿಯ ಪಾಲಾಗಿರುವುದನ್ನು ಕಾಣಬಹುದು. ದುರ್ಬಲ ವರ್ಗಗಳು ಈ ಪ್ರಯೋಜನದಿಂದ ಹೊರಗುಳಿದರೆ ಸಮಾಜದಲ್ಲಿ ಅಸಮಾನತೆ ಹೆಚ್ಚುತ್ತದೆ. ಬಡತನ-ಅನ್ಯಾಯಗಳು ಮತ್ತಷ್ಟು ಹೆಚ್ಚಾಗುತ್ತವೆ. ಪ್ರಬಲರು ಸಮಾಜದ ಕೇಂದ್ರ ಭಾಗದ್ದು ಅಭಿವೃದ್ಧಿಯ ಮಂಚೂಣಿಯಲ್ಲಿರುತ್ತಾರೆ. ನಿರ್ಲಕ್ಷಿತರು ಅಭಿವೃದ್ಧಿಯ ಅನುಕೂಲದಿಂದ ಹೊರಗುಳಿದವರು ಅಂಚಿನಲ್ಲಿ ದುಸ್ಥಿತಿಯ ಬದುಕನ್ನು ನಡೆಸುತ್ತಾರೆ. ಈ ಪರಿಸ್ಥಿತಿಯಲ್ಲಿ ಸುಧಾರಣೆಯಾಗಬೇಕು. ಈ ಹಿನ್ನೆಲೆಯಲ್ಲಿ ಸರ್ಕಾರದ ಸಾಲನೀತಿಗಳು ಮತ್ತು ಅಭಿವೃದ್ಧಿ ನೀತಿಗಳು ರೂಪಿತವಾಗಬೇಕಾಗಿದೆ. ಸಮಾಜದ ಕೆಳವರ್ಗಗಳೆಂದು ಗುರುತಿಸಲ್ಪಟ್ಟಿರುವ ಪರಿಶಿಷ್ಟರು, ಹಿಂದುಳಿದ ವರ್ಗಗಳ ಸಹಕಾರ ಸಂಘಗಳಿಂದ ಮಾತ್ರ ಸಾಲ ಪಡೆಯಲು ಕಾರಣಗಳನ್ನು ವಿಶ್ಲೇಷಿಸುವುದಾದರೆ ವಾಣಿಜ್ಯ ಬ್ಯಾಂಕುಗಳು ಸಾಲ

ನೀಡುವಾಗ ಸಾಲ ಪಡೆಯುವವರ ಆರ್ಥಿಕ ಪರಿಸ್ಥಿತಿ, ಭೂಹಿಡುವಳಿಯ ಪ್ರಮಾಣ, ಸಾಲ ಮರುಪಾವತಿ ಸಾಮರ್ಥ್ಯವನ್ನು ಆಧಾರವಾಗಿಟ್ಟುಕೊಳ್ಳುತ್ತವೆ. ಅಲ್ಪಾವಧಿ ಬೆಳೆ ಸಾಲದ ಅರ್ಜಿಗಳನ್ನು ಕುಲಂಕುಶವಾಗಿ ಪರಿಶೀಲಿಸುತ್ತವೆ. ಕ್ಷೇತ್ರ ಬೇಟಿ ಮಾಡಿ ಸಾಲಪಡೆಯುವವರ ಸಾಲದ ಉದ್ದೇಶವನ್ನು ಪರಿಶೀಲಿಸುತ್ತವೆ. ಸಾಲ ಮಂಜೂರು ಮಾಡಿ ಸಾಲ ನಿಗದಿತ ಅವಧಿಯೊಳಗೆ ಮರುಪಾವತಿಯಾಗದಿದ್ದಲ್ಲಿ ಶಿಸ್ತು ಕ್ರಮಕೈಗೊಳ್ಳುತ್ತವೆ. ನಿರಂತರವಾಗಿ ನೋಟೀಸ್ ಜಾರಿ ಮಾಡುತ್ತವೆ. ನೋಟೀಸ್ ಜಾರಿ ಆದಾಗ್ಯೂ ಸಾಲ ಮರುಪಾವತಿ ಆದದಿದ್ದಲ್ಲಿ ಅಂತವರ ವಿರುದ್ಧ ಕೋರ್ಟ್‌ನಲ್ಲಿ ಕೇಸ್ ದಾಖಲಿಸುತ್ತಾರೆ. ಈ ರೀತಿಯ ಕ್ರಮ ಕೈಗೊಳ್ಳಲು ಬೇಕಾದ ದಾಖಲೆಗಳು ಮತ್ತು ಒಪ್ಪಿಗೆಯನ್ನು ಅರ್ಜಿದಾರರಿಂದ ಸಾಲ ಮಂಜೂರು ಮಾಡುವ ಮುಂಚೆಯೇ ಪಡೆಯಲಾಗಿರುತ್ತದೆ. ಸಾಲ ಪಡೆದವರು ನೋಟೀಸ್‌ನ್ನು ಗಂಭೀರವಾಗಿ ಪರಿಗಣಿಸದಿದ್ದರೂ ಕೋರ್ಟ್‌ಗೆ ಸುತ್ತಾಡುವ, ಕೋರ್ಟ್ ಮೆಟ್ಟಿಲತ್ತುವ ಬಗ್ಗೆ ಇಂದಿಗೂ ಅವರಿಗೆ ಭಯ ಮತ್ತು ಆತಂಕವಿದೆ. ಗುಂಪು ಚರ್ಚೆಯಲ್ಲಿ ತಿಳಿದುಬಂದಂತೆ ಕೋರ್ಟ್‌ಕೇಸನ್ನು ಜನ ಅಗೌರವವೆಂದು ಬಾವಿಸುತ್ತಾರೆ. ಹಾಗೆಯೇ ವಾಣಿಜ್ಯ ಬ್ಯಾಂಕುಗಳು ತಾವು ನೀಡುವ ಸಾಲಕ್ಕೆ ಅಧಿ ಬಡ್ಡಿದರ ವಿಧಿಸುತ್ತವೆ. ಈ ಬಡ್ಡಿದರ ವಾರ್ಷಿಕ ಶೇಕಡಾ ೯ ರಿಂದ ೧೧ರವರೆಗೂ ಇರುತ್ತದೆ. ಈ ಬಡ್ಡಿದರ ಸಹಕಾರ ಬ್ಯಾಂಕುಗಳಿಗಿಂತ ಅಧಿಕ ಹಾಗೂ ಪಡೆದ ಸಾಲವನ್ನು ಹಿಂದಿರುವುದು ಕಡ್ಡಾಯ. ಸಾಲದ ಮೇಲಿನ ಬಡ್ಡಿಯಲ್ಲಿ ಮಾತ್ರ ರಿಯಾಯಿತಿ ದೊರೆಯುತ್ತದೆ ವಿನಃ ಸಂಪೂರ್ಣ ಸಾಲಮನ್ನಾ ಸೌಲಭ್ಯ ದೊರೆಯುವುದಿಲ್ಲ. ದೇವದುರ್ಗ ತಾಲ್ಲೂಕಿನಲ್ಲಿ ಈ ರೀತಿಯ ನಾಲ್ಕು ಕೇಸುಗಳನ್ನು ದಾಖಲು ಮಾಡಿದ್ದಾರೆ. ಕೇಸಿನ ವಿವರಗಳು ದೊರೆಯಲಿಲ್ಲ. ಆದರೆ ಶಾಖಾ ವ್ಯವಸ್ಥಾಪಕರೊಂದಿಗೆ ಸಂದರ್ಶಿಸುವಾಗ ಈ ವಿಷಯ ತಿಳಿದುಬಂದಿತು. ಈ ಎಲ್ಲಾ ಕಾರಣಗಳಿಂದ ಪರಿಶಿಷ್ಟರು ಜಾತಿ ಮತ್ತು ಜನಾಂಗದರವರು ಹಾಗೂ ಹಿಂದುಳಿದ ವರ್ಗಗಳು ವಾಣಿಜ್ಯ ಬ್ಯಾಂಕುಗಳಿಂದ ಸಾಲ ಪಡೆಯಲು ಇಚ್ಚಿಸುವುದಿಲ್ಲ. ಪ್ರಯತ್ನಿಸುವುದೂ ಇಲ್ಲ. ಆದರೆ ಲಿಂಗಾಯತ ಜಾತಿಯವರು ವಾಣಿಜ್ಯ ಬ್ಯಾಂಕುಗಳ ಈ ಸಾಲ ನೀಡಿಕೆ ನಿಯಮಗಳನ್ನು ಪಾಲಿಸುತ್ತಾರೆ. ಪಾಲಿಸುವ ಸಾವರ್ಥ್ಯವೂ ಅವರಿಗೆ ಇದೆ. ಪರಿಶಿಷ್ಟರು ಜಾತಿ ಮತ್ತು ಜನಾಂಗದರವರು ಹಾಗೂ ಹಿಂದುಳಿದ ವರ್ಗಗಳು ವಾಣಿಜ್ಯ ಬ್ಯಾಂಕುಗಳ ಬದಲಾಗಿ ಸಹಕಾರ ಸಂಘಗಳಿಂದ ಸಾಲ ಪಡೆಯಲು ಇಚ್ಚಿಸುತ್ತಾರೆ. ಗ್ರಾಮಗಳಲ್ಲಿ ಪರಿಶಿಷ್ಟ ವರ್ಗದವರಿಗೆ ರಾಜಕೀಯ ಜಾಗೃತಿ ಇರುವುದರಿಂದ ಹಾಗೂ ಸಹಕಾರ ಸಂಸ್ಥೆಗಳಿಂದ ಪಡೆದ ಸಾಲವನ್ನು ತೀರಿಸುವ ಅವಶ್ಯಕತೆ ಇರುವುದಿಲ್ಲ. ಸಹಕಾರ ಸಂಘಗಳ ಸಾಲವನ್ನು ಸರ್ಕಾರಗಳು ಮನ್ನಾ ಮಾಡುತ್ತವೆ ಎಂಬ ಭಾವನೆ ಇದೆ. ವಿವಿಧ ರಾಜಕೀಯ ಪಕ್ಷಗಳು ಚುನಾವಣಾ ಪೂರ್ವದಲ್ಲಿ ನಮ್ಮ ಪಕ್ಷ ಅಧಿಕಾರಕ್ಕೆ ಬಂದರೆ ಸಹಕಾರ ಸಂಘಗಳಿಂದ ಪಡೆದ ಸಾಲವನ್ನು ಮನ್ನಾ ಮಾಡಲಾಗುತ್ತದೆ ಎಂದು ಘೋಷಿಸುತ್ತವೆ. ಹೀಗಾಗಿ ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಘಗಳ ನಿರ್ದೇಶಕರು, ಸದಸ್ಯರುಗಳು ಸಹಕಾರ ಸಂಸ್ಥೆಗಳಿಂದ ಸಾಲ ಪಡೆಯಲು ಪೈಪೋಟಿ ನಡೆಸುತ್ತಾರೆ. **'ಹುಚ್ಚು ಮುಂಡೆ ಮದ್ವೇಲಿ ಉಂಡೋನೆ ಜಾಣ'** ಎಂಬ ಗಾದೆಯಂತೆ ನಿರ್ದೇಶಕರು ತಮಗೆ, ತಮ್ಮ ಹಿಂಬಾಲಕರಿಗೆ, ರಾಜಕೀಯವಾಗಿ

ಸಕ್ರಿಯವಾಗಿರುವ ಪರಿಶಿಷ್ಟರು ಜಾತಿ ಮತ್ತು ಜನಾಂಗದ ಸದಸ್ಯರು ಸೇರಿ ಎಲ್ಲಾ ವರ್ಗದವರು ಸರ್ಕಾರದಿಂದ ಹಣಬಿಡುಗಡೆಯಾಗಿ ಬಂದಕೂಡಲೇ ಸಾಲ ಪಡೆದು ಬಿಡುತ್ತಾರೆ. ಈ ರೀತಿಯ ಧೋರಣೆಯಿಂದಲೇ ಸಹಕಾರ ಸಂಘಗಳು ಇಂದು ಸ್ವಂತ ಸಂಪನ್ಮೂಲಗಳನ್ನು ಕ್ರೋಡಿಕರಿಸಲಾಗಿದೆ ಆರ್ಥಿಕವಾಗಿ ದುಸ್ಥಿತಿಯಲ್ಲಿವೆ. ಸಹಕಾರ ಸಂಘಗಳಿಂದ ಸಾಲ ಪಡೆಯಲು ಭೂಮಿ ಇರಬೇಕಾದುದು ಕಡ್ಡಾಯವೆಂದು ಸಹಕಾರ ಸಂಘಗಳ ಕಾರ್ಯದರ್ಶಿಗಳು, ನಿರ್ದೇಶಕರು ಹೇಳುತ್ತಾರೆ. ಸಿಂಧನೂರು ತಾಲ್ಲೂಕಿನ ವಲ್ಕಂದಿನ್ನಿಯ ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಘದ ಕಾರ್ಯದರ್ಶಿ ನಾಗರಾಜ್, ಜವಲಗೇರ ಗ್ರಾಮದ ಕಾರ್ಯದರ್ಶಿ, ದೇವದುರ್ಗದ ತಾಲ್ಲೂಕಿನ ಜಾಲಹಳ್ಳಿ ಸಹಕಾರ ಸಂಘದ ಕಾರ್ಯದರ್ಶಿ ವೀರಭದ್ರಪ್ಪ ಹೀಗೆ ಹೇಳುತ್ತಾರೆ. ಜಮೀನು ಇದ್ದರೆ ಸಾಲದು ಭೂದಾಖಲಾತಿಗಳು ಅವರ ಹೆಸರಿನಲ್ಲಿ ಇರಬೇಕು. ಭೂಮಿ ಇದ್ದೂ ಖಾತೆ ಪಹಣೆ ಇದ್ದರೆ ಮಾತ್ರ ಸಂಘದ ಸದಸ್ಯರಾಗಬಹುದು. ಸಾಲ ಪಡೆಯುವಾಗ ವಾಣಿಜ್ಯ ಬ್ಯಾಂಕುಗಳಂತೆ ಸಹಕಾರ ಸಂಘಗಳಿಗೂ ಭೂದಾಖಲಾತಿಗಳನ್ನು ನೀಡಬೇಕು. ಇತ್ತೀಚಿನ ನಿಯಮದಂತೆ ದಾಖಲೆಗಳನ್ನು ಬ್ಯಾಂಕ್‌ಗೆ ನೀಡಿದರೆ ಸಾಲದು ಬ್ಯಾಂಕುಗಳ ಹೆಸರಿಗೆ ತಾಲ್ಲೂಕು ಉಪನೊಂದಾಣಾಧಿಕಾರಿ ಕಛೇರಿಯಲ್ಲಿ ಅಡವಿಡಬೇಕು. ಸಹಕಾರ ಸಂಸ್ಥೆಗಳ ಹೆಸರಿಗೆ ತಾಲ್ಲೂಕು ಕಛೇರಿಯಲ್ಲಿ ಮಾರ್ಟ್‌ಗೇಜ್ ಮಾಡಬೇಕು. ಈ ದಾಖಲಾತಿಗಳನ್ನು ಪಡೆಯಲು ಸಾಕಷ್ಟು ಖರ್ಚು ಭರಿಸಬೇಕಾಗುತ್ತದೆ. ಹಾಗೆಯೇ ಪಡೆದ ಸಾಲವನ್ನು ನಿಗದಿತ ಅವಧಿಗೆ ಸಹಕಾರ ಸಂಸ್ಥೆಗಳಿಗೆ ಮರುಪಾವತಿ ಮಾಡಬೇಕಾಗುತ್ತದೆ. ಈ ನೀತಿ ಇದ್ದಾಗ್ಯೂ ಸಾಲ ಮರುಪಾವತಿಸದ ಸುಸ್ಥಿತಿದಾರ ವಿರುದ್ಧ ಸಹಕಾರ ಸಂಸ್ಥೆಗಳು ಕ್ರಮ ಜರುಗಿಸುವಂತಿಲ್ಲ. ಸಹಕಾರ ಸಂಸ್ಥೆಗಳು ಇಂದು ವೋಟ್ ಬ್ಯಾಂಕ್‌ಗಳಾಗಿ ಪರಿವರ್ತನೆಗೊಂಡಿವೆ. ರಾಜಕೀಯ ಕಾರಣಗಳಿಗಾಗಿ ಸುಸ್ತಿದಾರರ ವಿರುದ್ಧ ಕ್ರಮ ತೆಗೆದುಕೊಳ್ಳುವುದಿಲ್ಲ. ಶಿಸ್ತು ಕ್ರಮ ಕೈಕೊಂಡ ನಿದರ್ಶನಗಳಾವುವು ಕಂಡುಬಂದಿಲ್ಲ. ಸಹಕಾರ ಸಂಸ್ಥೆಗಳ ನಿರ್ದೇಶಕರಿಗೆ ಸಹಕಾರ ತತ್ವಗಳ ಬಗ್ಗೆ ಅರಿವು ಇರುವುದಿಲ್ಲ. ಸಹಕಾರ ಸಿದ್ಧಾಂತದಲ್ಲಿ ನಂಬಿಕೆ ಇದ್ದು ರಾಜಕೀಯೇತರವಾಗಿ ಸಹಕಾರ ಸಂಸ್ಥೆಗಳನ್ನು ಮತ್ತು ಅವುಗಳ ಕಾರ್ಯವನ್ನು ಪರಿಗಣಿಸಬೇಕೆಂಬ ಆಶಯವೂ ನಿರ್ದೇಶಕರಿಗೆ ಇರುವುದಿಲ್ಲ. ನಿರ್ದೇಶಕರು ಸ್ಥಳೀಯವಾಗಿ ಗ್ರಾಮ ಮಟ್ಟದಲ್ಲಿ ಬೇರ ಬೇರೆ ರಾಜಕೀಯ ಪಕ್ಷಗಳನ್ನು ಪ್ರತಿನಿಧಿಸುತ್ತಾರೆ. ಇವರು ಸರ್ಕಾರದಿಂದ ಸಹಕಾರ ಸಂಸ್ಥೆಗಳಿಗೆ ಹಣ ಬರುವುದಕ್ಕೆ ಮುಂಚಿತವಾಗಿ ಅವರ ಹಿಂಬಾಲಕರು, ನಿಷ್ಠೆಯುಳ್ಳವರಿಗೆ, ಅವರ ಜಾತಿಯವರಿಗೆ ಸಾಲ ಕೊಡಿಸುತ್ತೇವೆಂದು ಭರವಸೆ ನೀಡುತ್ತಾರೆ ಎಂಬದು ವಲ್ಕಂದಿನ್ನಿಯ ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಘದ ಕೆಲವು ನಿರ್ದೇಶಕರೊಂದಿಗೆ ನಡೆಸಿದ ಅನೌಪಚಾರಿಕ ಚರ್ಚೆಯಲ್ಲಿ ತಿಳಿದುಬಂದಿತು. ವಾಣಿಜ್ಯ ಬ್ಯಾಂಕುಗಳಲ್ಲಿ ಸಾಲ ಪಡೆಯುವುದು ಕಷ್ಟ. ಈ ಬ್ಯಾಂಕುಗಳ ಸಾಲ ನೀಡಿಕೆ ನಿಯಮ ಸಂಕೀರ್ಣ. ಸಾಲ ಪಡೆಯಲು ಹೆಚ್ಚಿನ ಖರ್ಚು ಭರಿಸಬೇಕಾಗುತ್ತದೆ. ಭೂಮಿಯನ್ನು ಬ್ಯಾಂಕಿನ ಹೆಸರಿಗೆ ನೊಂದಾಯಿಸುವ ಖರ್ಚು. ಅಡಮಾನವಿಡುವ ಖರ್ಚು. ತಾಲ್ಲೂಕಿನ ನಿರ್ಧಿಷ್ಟ ಪ್ರದೇಶದ ಎಲ್ಲಾ ವಾಣಿಜ್ಯ ಬ್ಯಾಂಕುಗಳು ಮತ್ತು ಖಾಸಗಿ ಬ್ಯಾಂಕುಗಳಿಂದ ಸಾಲ ಬೇಬಾಕಿ ಪ್ರಮಾಣ ಪತ್ರ

ತರಬೇಕು. ಹಳ್ಳಿಯಿಂದ ತಾಲ್ಲೂಕು, ಹೋಬಳಿ ಕೇಂದ್ರಗಳಿಗೆ ಓಡಾಡ ಬೇಕು. ವಾಣಿಜ್ಯ ಬ್ಯಾಂಕುಗಳಿಂದ ಸಾಲ ಪಡೆಯುವುದು ಒಂದು ಪ್ರಕ್ರಿಯೆಯಾಗಿದ್ದು ಖರ್ಚುಗಳನ್ನು ಭರಿಸುತ್ತಾ ತಾಳ್ಮೆಯಿಂದ ನಿಂರಂತರವಾಗಿ ಪ್ರಯತ್ನಿಸಬೇಕು. ವಾಣಿಜ್ಯ ಬ್ಯಾಂಕುಗಳ ಸಾಲ ನೀತಿ ನಿಯಮಗಳು ವುಳ್ಳವರನ್ನು ಬೆಂಬಲಿಸುವ ಅವುಗಳ ಧೋರಣೆ, ಪಡೆದ ಸಾಲವನ್ನು ನಿಗದಿತ ಅವಧಿಯೊಳಗೆ ಹಿಂದಿರುಗಿಸಬೇಕಾದ ಆತಂಕಗಳು ಇತ್ಯಾದಿ ಕಾರಣಗಳಿಗಾಗಿ ಪರಿಶಿಷ್ಟ ವರ್ಗಗಳು, ಸಣ್ಣ ಅತಿಸಣ್ಣ ರೈತರು ವಾಣಿಜ್ಯ ಬ್ಯಾಂಕುಗಳಿಂದ ಸಾಲ ಪಡೆಯಲು ಪ್ರಯತ್ನಿಸುವುದೇ ಇಲ್ಲ. ಸಿಂದನೂರು ತಾಲ್ಲೂಕು ರಾಗಲಪರ್ವಿ ರೈತರೊಂದಿಗೆ ನಡೆಸಿದ ಅನೌಪಚಾರಿಕ ಗುಂಪು ಚರ್ಚೆಯಲ್ಲಿ ಈ ವಿಷಯಗಳು ಹೆಚ್ಚಾಗಿ ಚರ್ಚಿತಗೊಂಡವು. ಗುಂಪು ಚರ್ಚೆಯಲ್ಲಿ ದೊರೆತ ಮಾಹಿತಿ ಹಾಗೂ ಪ್ರಶ್ನಾವಳಿ ಮೂಲಕ ಸಂಗ್ರಹಿಸಿದ ಮಾಹಿತಿ ಆಧಾರದ ಮೇಲೆ ಮೇಲಿನ ವಿಶ್ಲೇಷಣೆಯನ್ನು ಮಾಡಲಾಗಿದೆ. ಲಿಂಗಾಯತ ಜಾತಿಯವರು ಎರಡು ರೀತಿಯ ಸಂಸ್ಥೆಗಳಿಂದ ಸಾಲ ಪಡೆದಿದ್ದಾರೆ.

**೪.೧೭. ಸಂಘಟಿತ ಹಣಕಾಸು ಮೂಲದಿಂದ ಸಾಲ ಪಡೆದ ರೈತ ವರ್ಗವಾರು ವಿಶ್ಲೇಷಣೆ**

| ಸಂಘಟಿತ ಹಣಕಾಸು ಮೂಲದಿಂದ ಸಾಲ ಪಡೆದ ರೈತವರ್ಗವಾರು ಹಂಚಿಕೆ | | | | |
|---|---|---|---|---|
| ವಿವಿಧ ವಿವಿದ ರೈತ ವರ್ಗಗಳು | ತಾಲ್ಲೂಕು (ಎ) | ತಾಲ್ಲೂಕು (ಬಿ) | ಒಟ್ಟು | |
| | | | ಸಂಖ್ಯೆ | ಶೇಕಡಾ |
| ಅತೀ ಸಣ್ಣ ರೈತರು | ೧೧ | ೧೬ | ೨೭ | ೨೯.೬೭ |
| ಸಣ್ಣ ರೈತರು | ೭ | ೧೨ | ೧೯ | ೨೦.೮೭ |
| ದೊಡ್ಡ ರೈತರು | ೧೦ | ೩೫ | ೪೫ | ೪೯.೪೫ |
| ಕೃಷಿ ಕಾರ್ಮಿಕ, ಭೂರಹಿತರು | ೦ | ೦ | ೦ | ೦ |
| ಒಟ್ಟು | ೨೮ | ೬೩ | ೯೧ | ೯೯.೯೯ |

ಮೂಲ: ಕ್ಷೇತ್ರ ಕಾರ್ಯ, ತಾಲ್ಲೂಕು ಎ– ಸಿಂಧನೂರು ಬಿ–ದೇವದುರ್ಗ.

ಈ ಅಧ್ಯಯನದಲ್ಲಿ ಸಣ್ಣ, ಅತೀಸಣ್ಣ ಹಾಗೂ ದೊಡ್ಡರೈತರು ಎಂದು ಮೂರು ವರ್ಗಗಳನ್ನು ಗರ್ತಿಸಲಾಗಿದೆ. ರಾಯಚೂರು ಜಿಲ್ಲೆಯ ಸಿಂಧನೂರು ಮತ್ತು ದೇವದುರ್ಗ ಎರಡೂ ತಾಲ್ಲೂಕುಗಳ ಒಟ್ಟು ಅತೀ ಸಣ್ಣ ರೈತರಲ್ಲಿ ಸಾಲ ಪಡೆದವರು ಶೇಕಡಾ ೨೯ರಷ್ಟು, ಅದೇ ರೀತಿ ಶೇಕಡಾ ೨೧ರಷ್ಟು ಸಣ್ಣರೈತರು ಹಾಗೂ ಶೇಕಡಾ ೫೦ರಷ್ಟು ದೊಡ್ಡ ರೈತರು ಸಂಘಟಿತ ಹಣಕಾಸು ಮೂಲದಿಂದ ಸಾಲಸೌಲಭ್ಯ ಪಡೆದಿದ್ದಾರೆ. ಸಂದರ್ಶಿಸಲ್ಪಟ್ಟ ಒಟ್ಟು ಜನರಲ್ಲಿ ಕೇವಲ ಶೇಕಡಾ ೨೮ರಷ್ಟು ಮಾತ್ರ ಸಾರ್ವಜನಿಕ ಬ್ಯಾಂಕುಗಳಿಂದ ಸಾಲ ಪಡೆದಿದ್ದಾರೆ. ಆದರೆ ಶೇಕಡಾ ೭೧.೪೭ ಸಂಘಟಿತ ಹಣಕಾಸು ಮೂಲ ಅಂದರೆ ಸಾರ್ವಜನಿಕ ಬ್ಯಾಂಕುಗಳಿಂದ ಸಾಲ ಸೌಲಭ್ಯ ಪಡೆದಿಲ್ಲ.

ಸಂಘಟಿತ ಮೂಲ ಅಂದರೆ ಬ್ಯಾಂಕುಗಳಿಂದ ಅತಿ ಹೆಚ್ಚು ಸಾಲ ಸೌಲಭ್ಯ ಪಡೆದವರು ದೊಡ್ಡ ರೈತರು. ಕೃಷಿ ಭೂರಹಿತ ಕಾರ್ಮಿಕರು ಸಂಘಟಿತ ಮೂಲದಿಂದ ಸಾಲ ಸೌಲಭ್ಯಗಳನ್ನು ಪಡೆದಿಲ್ಲ. ಸಂಘಟಿತ ಹಣಕಾಸು ವ್ಯವಸ್ಥೆಯ ಅಡಿಯಲ್ಲಿ ಬರುವ ಬ್ಯಾಂಕುಗಳ ಸಾಲ ನೀತಿ ಪ್ರಕಾರ ಕೃಷಿ, ಭೂರಹಿತ ಕಾರ್ಮಿಕರಿಗೆ ಸಾಲ ಪಡೆಯುವ ಅರ್ಹತೆ ಇಲ್ಲ. ಸಾಲ ಪಡೆಯಲು ಭದ್ರತೆ ನೀಡಬೇಕು. ಭೂಮಿಯೇ ಇಲ್ಲದ ಈ ವರ್ಗಗಳು ಬ್ಯಾಂಕುಗಳ ಹತ್ತಿರ ಹೋಗಲು ಸಾಧ್ಯವಿಲ್ಲ. ಸಾಲ ಬಡತನ ನಿರ್ಮೂಲನೆಯ ಸಾಧನವಾಗಿ ಕಾರ್ಯನಿರ್ವಹಿಸುತ್ತದೆ ಎನ್ನಲಾಗುತ್ತದೆ. ಆರ್ಥಿಕ ಪರಿಸ್ಥಿತಿಯ ಸುಧಾರಣೆ, ಸಾಮಾಜಿಕ ಪರಿವರ್ತನೆಯ ಪ್ರೇರಕವಾಗಬೇಕಾದ ಬ್ಯಾಂಕುಗಳು ಬಡವರ ಆಸ್ತಿರಹಿತ ವರ್ಗಗಳ ಹಣಕಾಸು ಅವಶ್ಯಕತೆಗಳನ್ನು ಎಂದಿಗೂ ಪರಿಗಣಿಸಿಲ್ಲ ಎನ್ನಬಹುದು. ರಿಯಾಯತಿ ಬಡ್ಡಿದರದಲ್ಲಿ ಗ್ರಾಮೀಣ ಜನರ ಸಾಲ ಅಗತ್ಯಗಳನ್ನು ಪೂರೈಸುವ ಅಸಂಘಟಿತ ಹಣಕಾಸು ಮಾರುಕಟ್ಟೆಯ ಹಿಡಿತವನ್ನು ತಗಿಸುವ ಉದ್ದೇಶದಿಂದಲೇ ಸ್ಥಾಪನೆಗೊಂಡ ಸಂಘಟಿತ ವಲಯದ ಹಣಕಾಸು ಸಂಸ್ಥೆಗಳು ಅಥವಾ ಬ್ಯಾಂಕುಗಳು ಈ ಉದ್ದೇಶಕ್ಕನುಗುಣವಾಗಿ ಕಾರ್ಯ ನಿರ್ವಹಿಸುತ್ತಿಲ್ಲ. ಸಾಲ ಸೌಲಭ್ಯಗಳು ಮಾತ್ರವಲ್ಲ ಇತರೆ ಅಭಿವೃದ್ಧಿ ಯೋಜನೆಗಳ ಫಲಗಳಿಂದ ವಂಚಿರಾಗಿರುವುದರಿಂದ ದುರ್ಬಲ ವರ್ಗಗಳ ಸಂಖ್ಯೆ ಅಂದರೆ ಮುಖ್ಯವಾಗಿ ಭೂರಹಿತರ ದುಡಿಮೆಗಾರರ ಸಂಖ್ಯೆ ಹೆಚ್ಚಾಗುತ್ತಾ ಬಂದಿರುವುದನ್ನು ಹಲವು ಅಧ್ಯಯನಗಳು ಹಾಗೂ ಜನಗಣತಿಗಳು ದೃಡಪಡಿಸಿವೆ. ಅತೀಸಣ್ಣ ರೈತರ ಬದುಕಿನ ದುಸ್ಥಿತಿ ಮತ್ತು ಜೀವನ ಸ್ಥಿತ್ಯಂತರಗಳ ಕುರಿತು ವಿಶ್ಲೇಷಣೆಗಳು ನಡೆದಿವೆ. ಇದು ಸಮಗ್ರ ಆರ್ಥಿಕ ಅಭಿವೃದ್ಧಿ ನೀತಿಗಳ ದೌರ್ಬಲ್ಯಗಳನ್ನು ತೋರಿಸುತ್ತದೆ. ಭೂಮಿ ಮತ್ತು ಬದುಕಿನ ಸಂಬಂಧವನ್ನು ಹಾಗೂ ಭೂಮಿ ಮತ್ತು ಸಾಲ ಸೌಲಭ್ಯಗಳಿಗಿರುವ ಸಂಬಂಧವನ್ನು ಭೂರಹಿತ ದುಡಿಮೆಗಾರರ ವಿಷಯ ಬಂದಾಗಲೆಲ್ಲಾ ಚರ್ಚಿಸಿದ್ದೇನೆ. ಭೂಮಿ ಇಲ್ಲದೆ ಭದ್ರತೆ ನೀಡಲು ಸಾದ್ಯವಾಗದೆ ಸಂಘಟಿತ ವಲಯದಿಂದ ದುರ್ಬಲ ವರ್ಗಗಳು ಸಾಲ ಪಡೆಯಲು ಸಾಧ್ಯವಾಗುತ್ತಿಲ್ಲ. ಭೂಮಿ, ಬಂಡವಾಳಗಳು ಸಮಾಜದಲ್ಲಿ ಯೋಗ್ಯ ಬದುಕನ್ನು ಕಟ್ಟಿಕೊಳ್ಳಲು ನೆರವಾಗುವುವು. ಇವು ಬದುಕಿಗೆ ಭರವಸೆಯನ್ನು ನೀಡಬಲ್ಲವು. ಆದರೆ ಈ ಸಂಪನ್ಮೂಲಗಳು ಕೆಲವರ ಸ್ವತ್ತಾಗಿವೆ. ಕೆಲವರ ಕೈಯಲ್ಲಿ ಕೇಂದ್ರಿಕರಣಗೊಂಡಿವೆ. ಎಲ್ಲಾ ವರ್ಗಗಳ ನಡುವೆ ಸಮಾನವಾಗಿ ಹಂಚಿಕೆಯಗಿಲ್ಲ. ಸಂಪತ್ತಿನ ಒಡೆತನದ ಅಸಮಾನತೆ ಸಮಾಜದದಲ್ಲಿ ಅನೇಕ ಸಮಸ್ಯೆಗಳನ್ನು ಸೃಷ್ಟಿಸುತ್ತದೆ ಎನ್ನಬಹುದು. ನನ್ನ ಈ ಅಧ್ಯಯನದಲ್ಲಿ ಕಂಡುಬಂದಂತೆ ಸಾರ್ವಜನಿಕ ಬ್ಯಾಂಕುಗಳಿಂದ ಸಾಲಸೌಲಭ್ಯ ಪಡೆಯಲ್ಲ ಪ್ರಮುಖ ಭದ್ರತೆ, ಆಧಾರವಾದ ಭೂಮಿಯು ಪ್ರಬಲ ಲಿಂಗಾಯತ ಜಾತಿಯ ಹಿಡಿತದಲ್ಲಿದೆ. ಭೂಮಿಯಂತಹ ಸಂಪನ್ಮೂಲದ ಒಡೆತನದ ಬಹುತೇಕ ಬಲಾಢ್ಯ ಸಮುದಾಯಗಳು ಹೊಂದಿವೆ. ಭೂಮಿ ಹೊಂದುವುದು ಎಲ್ಲಾ ವಿಧದ ಸಾಧನೆಗಳಿಗೂ ಅನಿವಾರ್ಯ. ಇಂದು ಕೂಡ ನಮ್ಮ ಸಮಾಜದ ಬಹುತೇಕರನ್ನು ಸಕಾರಾತ್ಮಕವಾಗಿ ಬದಲಾಯಿಸುವ ಸಾಧನ ಇದ್ದರೆ ಅದು ಭೂಮಿ ಮಾತ್ರ. ಸಕಾರಾತ್ಮಕ ರಾಜಕೀಯಕ್ಕೆ, ಆರ್ಥಿಕ ಅಭಿವೃದ್ಧಿಗೆ, ಸಾಮಾಜಿಕ ಪರಿವರ್ತನೆಗೆ ಸಮಾಜದ ಕೆಳವರ್ಗದ ಜನರು ಭೂಮಿ ಹೊಂದುವುದು

ಅನಿವಾರ್ಯ.[೭೨] ಆದರೆ ಭೂರಹಿತ ದುಡಿಮೆಗಾರರು ಭೂಮಿ ಹೊಂದುವುದು ಕಷ್ಟ. ಭೂರಹಿತ ದುಡಿಮೆಗಾರರಲ್ಲಿ ಬಹುತೇಕರು ಪರಿಶಿಷ್ಟ ಜಾತಿ ಪಂಗಡಗಳಿಗೆ ಸೇರಿದವರು. ಸಮಾಜದ ಕೆಲವರು ಭೂಮಿಯಂತಹ ಸಂಪನ್ಮೂಲಗಳನ್ನು ಗಳಿಸುವ ರೀತಿ ಹಾಗೂ ಸಂಪತ್ತನ್ನು ವೃದ್ಧಿಸಿಕೊಳ್ಳುವ ವಿಧಾನದ ಬಗ್ಗೆ ಚರ್ಚೆಗಳು ಅಧ್ಯಯನಗಳು ನಡೆದಿವೆ. ಚರ್ಚೆಗಳು ಅಧ್ಯಯನಗಳು ನಡೆಯುವ ಅಗತ್ಯವೂ ಇದೆ. ವ್ಯವಸ್ಥೆಯೆ ಹಲವರನ್ನು ಸಂಪನ್ಮೂಲ ರಹಿತರನ್ನಾಗಿಸಿದೆ ಎನ್ನಬಹುದು. ಐತಿಹಾಸಿಕವಾಗಿ ನೋಡುವುದಾದರೆ ಬಂಡವಾಳಶಾಹಿ ಭೂ ಮಾಲೀಕರು ಭೂರಹಿತರನ್ನು ಶಾಶ್ವತವಾಗಿ ಭೂರಹಿತ ವರ್ಗಗಳಾಗಿ ಬದುಕುವಂತೆ ಮಾಡಿದ್ದಾರೆ. ಬಂಡವಾಳಿಗರು ಶ್ರಮಿಕರನ್ನು ತಮ್ಮ ಏಳ್ಗೆಗಾಗಿ ದುಡಿಸಿಕೊಂಡಿದೆ. ಶ್ರಮಿಕರು ವ್ಯವಸ್ಥಿತವಾಗಿ ಶೋಷಣೆಗೆ ಒಳಗಾಗಿದ್ದಾರೆ. ದೊಡ್ಡ ಭೂಹಿಡುವಳಿಗಾರರು ಎಕರೆಗಟ್ಟಲೆ ಭೂಮಿಯನ್ನು ತಮ್ಮ ಸ್ವಾಧೀನದಲ್ಲಿ ಇಟ್ಟುಕೊಂಡು ದುಡಿಯುವ ಜನರನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡಿದ್ದರು.[೭೩] ಇಂದಿಗೂ ಈ ಪರಿಸ್ಥಿತಿ ಮುಂದುವರಿದಿದೆ. ಈ ಪರಿಸ್ಥಿತಿಯು ಸುಧಾರಿಸುವ ಅನಿವಾರ್ತತೆ ಇದೆ.

೪.೧೮. ಸಂಘಟಿತ ಮೂಲದಿಂದ ಸಾಲ ಪಡೆದ ವಿವಿಧ ರೈತವರ್ಗಗಳ ಜಾತಿವಾರು ವಿಶ್ಲೇಷಣೆ

| ಸಂಘಟಿತ ಹಣಕಾಸು ಮೂಲದಿಂದ ಸಾಲ ಪಡೆದ ರೈತವರ್ಗಗಳ ಜಾತಿವಾರು ವಿಶ್ಲೇಷಣೆ | | | | | | | | | | |
|---|---|---|---|---|---|---|---|---|---|---|
| ವಿವಿಧ ರೈತ ವರ್ಗಗಳು | ತಾಲ್ಲೂಕು(ಎ) | | | | ತಾಲ್ಲೂಕು(ಬಿ) | | | | ಒಟ್ಟಿ | |
| | ಪ.ಜಾ. ಪ.ಪಂ | ಹಿಂದುಳಿದ ವರ್ಗಗಳು | ಲಿಂಗಾಯತ | ಒಟ್ಟು | ಪ.ಜಾ. ಪ.ಪಂ | ಹಿಂದುಳಿದ ವರ್ಗಗಳು | ಲಿಂಗಾಯತ | ಒಟ್ಟು | ಸಂಖ್ಯೆ | ಶೇಕಡಾ |
| ಸಂಘಟಿತ ಹಣಕಾಸು ಮಾರುಕಟ್ಟೆ | ೧೧ | ೭ | ೧೦ | ೨೭ | ೧೭ | ೧೨ | ೩೫ | ೬೪ | ೯೧ | ೨೮.೫೨ |
| ಅತೀ ಸಣ್ಣ ರೈತರು | ೧೧ | – | – | ೧೧ | ೧೬ | – | – | ೧೬ | ೨೭ | ೨೯.೬೭ |
| ಸಣ್ಣ ರೈತರು | ೧ | ೬ | – | ೭ | ೨ | ೭ | ೩ | ೧೨ | ೧೯ | ೨೦.೮೭ |
| ದೊಡ್ಡ ರೈತರು | – | – | ೧೦ | ೧೦ | – | ೧ | ೩೪ | ೩೫ | ೪೫ | ೫೦.೦೦ |
| ಕೃಷಿ ಕಾರ್ಮಿಕ– ಭೂರಹಿತರು | – | – | – | – | – | – | – | – | – | – |
| ಒಟ್ಟು | ೧೨ | ೬ | ೧೦ | ೨೮ | ೧೮ | ೧೨ | ೩೭ | ೬೩ | ೯೧ | ೧೦೦.೫೪ |

ಮೂಲ: ಕ್ಷೇತ್ರ ಕಾರ್ಯ, ತಾಲ್ಲೂಕು ಎ–ಸಿಂಧನೂರು ಬಿ–ದೇವದುರ್ಗ.

ಸಂಘಟಿತ ಮೂಲದಿಂದ ಸಾಲ ಸೌಲಭ್ಯ ಪಡೆದಿರುವವರಲ್ಲಿ ಅತೀ ಕಡಿಮೆ ಪ್ರಮಾಣದಲ್ಲಿ ಸಾಲ ಪಡೆದವರು ಅತೀ ಸಣ್ಣ ರೈತರು. ಅಧ್ಯಯನದ ಒಟ್ಟಾರೆ ವಿಶ್ಲೇಷಣೆ ಪ್ರಕಾರ ರಾಯಚೂರು ಜಿಲ್ಲೆಯ ಎರಡೂ ತಾಲ್ಲೂಕುಗಳನ್ನು ಒಳಗೊಂಡಂತೆ ಶೇಕಡಾ ೨೯.೭೧ರಷ್ಟು ಅತೀ ಸಣ್ಣ ರೈತರು ಸಂಘಟಿತ ಹಣಕಾಸು ಮೂಲದಿಂದ ಸಾಲ ಸೌಲಭ್ಯ ಪಡೆದಿದ್ದಾರೆ. ಇವರಲ್ಲಿ ಬಹುತೇಕರು ಪರಿಶಿಷ್ಟ ಜಾತಿ ಮತ್ತು ಜನಾಂಗ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ್ದಾರೆ. ಅತೀ ಸಣ್ಣ ರೈತರಲ್ಲಿ ಶೇಕಡಾ ೬೨ರಷ್ಟು ಜನ ಪರಿಶಿಷ್ಟ ಜಾತಿ ಜನಾಂಗಕ್ಕೆ ಸೇರಿದ್ದಾರೆ. ಅತೀ ಸಣ್ಣ ರೈತರಲ್ಲಿ ಶೇಕಡಾ ೨೮ರಷ್ಟು ಹಿಂದುಳಿದ ವರ್ಗದವರು ಸಾಲಸೌಲಭ್ಯ ಪಡೆದಿದ್ದಾರೆ. ಅತೀ ಸಣ್ಣ ರೈತರೆಲ್ಲಾ ಸಹಕಾರ ಸಂಘಗಳಿಂದ ಮಾತ್ರ ಸಾಲ ಪಡೆದಿದ್ದಾರೆ. ಇವರಲ್ಲಿ ಭೂಮಿ ಹೊಂದಿದ್ದು ಭೂದಾಖಲೆಗಳು ಅವರ ಹೆಸರಿನಲ್ಲಿ ಇದ್ದವರು ಮಾತ್ರ ಸಾಲ ಪಡೆದಿದ್ದಾರೆ. ಪಡೆದ ಸಾಲದ ಪ್ರಮಾಣವು ಕಡಿಮೆ. ಆದರೆ ಸಂಘಟಿತ ಮೂಲದ ಬಹುಮುಖ್ಯ ಭಾಗವಾದ ವಾಣಿಜ್ಯ ಬ್ಯಾಂಕುಗಳಿಂದ ಇವರು ಸಾಲ ಸೌಲಭ್ಯಗಳನ್ನು ಪಡೆದಿಲ್ಲ. ಇದಕ್ಕೆ ಹಲವು ಕಾರಣಗಳಿವೆ. ಅವುಗಳನ್ನು ಮುಂದಿನ ಭಾಗಗಳಲ್ಲಿ ಚರ್ಚಿಸಲಾಗುವುದು. ಹಾಗಿಯೇ ಪ್ರಸ್ತುತ ವಾಣಿಜ್ಯ ಬ್ಯಾಂಕುಗಳು ಮಾತ್ರ ಗ್ರಾಮೀಣ ಭಾಗದಲ್ಲಿ ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳಿಗೆ ಅತೀ ಹೆಚ್ಚಿನ ಹಣಕಾಸನ್ನು ಪೂರೈಸುತ್ತಿವೆ. ಈ ಅಂಶವನ್ನು ಅನೇಕ ವರದಿ ಮತ್ತು ಅಧ್ಯಯನಗಳು ದೃಢಪಡಿಸಿದೆ. ಒಟ್ಟು ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಶೇಕಡಾ ೫೦ರಷ್ಟು ಕೃಷಿಸಾಲಗಳನ್ನು ಮಾತ್ರ ಪೂರೈಸಿದರೂ ೯೦ರ ಮಧ್ಯಭಾಗದಲ್ಲಿ ಸಹಕಾರ ಸಂಸ್ಥೆಗಳು ಕೃಷಿಗೆ ಸಾಲ ಒದಗಿಸುವ ಪ್ರಮುಖ ಸಂಸ್ಥೆಗಳಾಗಿದ್ದವು. ಆದರೆ ಕೃಷಿ ಕ್ಷೇತ್ರಕ್ಕೆ ವಾಣಿಜ್ಯ ಬ್ಯಾಂಕುಗಳು ಸಾಲ ಪೂರೈಸಲು ಪ್ರಾರಂಭಿಸಿದ ನಂತರ ಅದರಲ್ಲೂ ೨೦೦೩-೦೪ರ ನಂತರ ಕೃಷಿಸಾಲ ದ್ವಿಗುಣಗೊಂಡ ಪ್ರಕ್ರಿಯೆ ಪ್ರಾರಂಭವಾದ ನಂತರ ಇಂದಿಗೂ ದೇಶದಲ್ಲಿ ಕೃಷಿ ಕ್ಷೇತ್ರಕ್ಕೆ ಪೂರೈಕೆಯಾಗುವ ಒಟ್ಟು ಸಾಲದಲ್ಲಿ ೩/೪ ಸಾಲವನ್ನು ವಾಣಿಜ್ಯ ಬ್ಯಾಂಕುಗಳೇ ಪೂರೈಸುತ್ತಿವೆ. ಪ್ರಾದೇಶಿಕ ಬ್ಯಾಂಕುಗಳು ಶೇಕಡಾ ೧೦ರಷ್ಟನ್ನು ಮಾತ್ರ ಒದಗಿಸಿವೆ. ಒಟ್ಟು ಕೃಷಿ ಸಾಲ ಪೂರೈಕೆಯಲ್ಲಿ ಸಹಕಾರ ಸಂಘಗಳ ಪಾಲು ಕಡಿಮೆಯಾಗಿದೆ. ೨೦೧೧-೧೨ರಲ್ಲಿ ಸಹಕಾರ ಸಂಘಗಳ ಪಾಲು ಶೇಕಡಾ ೧೭ಕ್ಕೆ ಕುಸಿದಿದೆ. ೨೦೧೧-೧೨ರಲ್ಲಿ ಕೃಷಿ ಕ್ಷೇತ್ರಕ್ಕೆ ಪೂರೈಕೆಯಾದ ಸಂಘಟಿತ ಸಾಲ ಮೂಲದ ಒಟ್ಟು ಸಾಲ ೫.೧೧೦೪೯ ಲಕ್ಷ ಕೋಟಿಗಳು (೫.೧೧ ಲಕ್ಷ ಕೋಟಿ). ಇದರಲ್ಲಿ ಸಹಕಾರ ಸಂಘಗಳ ಪಾಲು ಶೇಕಡಾ ೧೭ ಅಂದರೆ ಒಟ್ಟು ಸಾಲದಲ್ಲಿ ಸಹಕಾರ ಸಂಘಗಳ ಪಾಲು ೮೭೬೩ಕೋಟಿ ಮಾತ್ರ. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳ ಪಾಲು ಕೇವಲ ಶೇಕಡಾ ೧೦ ರಿಂದ ೧೧ ಮಾತ್ರ. ಅಂದರೆ ೫೪೪೫೦ ಕೋಟಿ ಮಾತ್ರ. ಆದರೆ ವಾಣಿಜ್ಯ ಬ್ಯಾಂಕುಗಳ ಪಾಲು ಶೇಕಡಾ ೭೨ಕ್ಕೂ ಹೆಚ್ಚು ಅಂದರೆ ೩.೬೮೬೧೬ ಲಕ್ಷ ಕೋಟಿ (೩.೬೮ ಲಕ್ಷ ಕೋಟಿ).[೧೪]

ಗ್ರಾಮೀಣ ಸಾಲ ಪೂರೈಕೆಯಲ್ಲಿ ವಾಣಿಜ್ಯ ಬ್ಯಾಂಕುಗಳ ಪಾತ್ರ ಮತ್ತು ಪ್ರಭಾವವನ್ನು ಇದರಿಂದ ತಿಳಿದುಕೊಳ್ಳಬಹುದು. ಆದರೆ ಅತೀಸಣ್ಣ ರೈತರು ಈ ಬ್ಯಾಂಕುಗಳಿಂದ ಸಾಲ ಪಡೆದಿಲ್ಲ ಹಾಗೂ ಪಡೆಯುವ ಪ್ರಯತ್ನವನ್ನೇ ಮಾಡಿಲ್ಲ. ಸಂದರ್ಶನದಲ್ಲಿ ತಿಳಿದುಬಂದಂತೆ ಇವರು

ವಾಣಿಜ್ಯ ಬ್ಯಾಂಕುಗಳಿಂದ ಸಾಲ ಪಡೆಯಲು ಬಯಸುವುದಿಲ್ಲ. ಕಾರಣ ಈ ಬ್ಯಾಂಕುಗಳ ಧೋರಣೆ ಮತ್ತು ಸಂಕೀರ್ಣ ಸಾಲ ನಿಯಮ. ಸಂಘಟಿತ ಮೂಲದಿಂದ ಸಾಲ ಪಡೆದವರಲ್ಲಿ ದೊಡ್ಡ ರೈತರೇ ಹೆಚ್ಚಿನ ಪ್ರಮಾಣದಲ್ಲಿದ್ದಾರೆ. ಸಂಘಟಿತ ಮೂಲದಿಂದ ಸಾಲಸೌಲಭ್ಯ ಪಡೆದಿರುವ ಸಣ್ಣ ರೈತರ ಪ್ರಮಾಣ ಶೇಕಡಾ ೨೧ರಷ್ಟು. ಸಣ್ಣ ರೈತರಲ್ಲಿ ಹಿಂದುಳಿದ ಸಮುದಾಯದವರು ಹೆಚ್ಚಾಗಿದ್ದು ಶೇಕಡಾ ೬೪ರಷ್ಟು ಸಾಲಸೌಲಭ್ಯ ಪಡೆದಿದ್ದಾರೆ. ಸಣ್ಣ ರೈತರಲ್ಲಿ ಶೇಕಡಾ ೧೬ರಷ್ಟು ಲಿಂಗಾಯತ ಸಮುದಾಯದವರು ಸಹ ಇದ್ದಾರೆ. ಸಂಘಟಿತ ವಲಯದಿಂದ ಸಾಲಸೌಲಭ್ಯ ಪಡೆದಿರುವವರಲ್ಲಿ ಹೆಚ್ಚಿನವರು ದೊಡ್ಡ ರೈತರು. ಶೇಕಡಾ ೫೦ರಷ್ಟು ದೊಡ್ಡ ರೈತರು ಸಾಲ ಪಡೆದಿದ್ದಾರೆ ಕೋಷ್ಟಕ ೧೪ರಲ್ಲಿ ವಿಶ್ಲೇಷಿಸಿರುವಂತೆ ದೊಡ್ಡರೈತರಲ್ಲಿ ಬಹುತೇಕರು ಲಿಂಗಾಯತ ಸಮುದಾಯಕ್ಕೆ ಸೇರಿದ್ದು ಸಹಕಾರ ಸಂಘಗಳು ಮತ್ತು ವಾಣಿಜ್ಯ ಬ್ಯಾಂಕುಗಳೆರಡರಿಂದಲೂ ಸಾಲಸೌಲಭ್ಯ ಪಡೆದಿದ್ದಾರೆ. ಇವರ ಕೃಷಿ ಭೂಮಿ ದೊಡ್ಡ ಹಿಡುವಳಿಗಳಾಗಿದ್ದು ಭೂ ದಾಖಲೆಗಳು ಅವರ ಹೆಸರಿನಲ್ಲಿ ಇವೆ. ಸಹಕಾರ ಸಂಘಗಳಾಗಲಿ ವಾಣಿಜ್ಯ ಬ್ಯಾಂಕುಗಳಾಗಲಿ ಎರಡಕ್ಕೂ ಸಾಲಕ್ಕೆ ಸೂಕ್ತ ಭದ್ರತೆ ನೀಡುವ ಮತ್ತು ಪಡೆದ ಸಾಲವನ್ನು ಆದಾಯ ವೃದ್ಧಿ ಚಟುವಟಕೆಗಳಿಗೆ ಬಳಸಿಕೊಂಡು ಮರುಪಾವತಿ ಮಾಡುವ ಸಾಮರ್ಥ್ಯ ಇವರಿಗಿದೆ. ಹೀಗೆ ಸಂಪನ್ಮೂಲಗಳ ಒಡೆತನ ಮತ್ತು ಅವುಗಳನ್ನು ತಮ್ಮ ಅಭಿವೃದ್ಧಿಗೆ ಬಳಸಿಕೊಳ್ಳುವ ರೀತಿಯೇ ಇದಕ್ಕೆ ಪ್ರಮುಖ ಕಾರಣ ಎನ್ನಬಹುದು. ಇದರಿಂದ ಈ ಸಮುದಾಯದವರು ಸರ್ಕಾರದ ಸಾಲ ಯೋಜನೆಗಳ ಪ್ರಯೋಜನ ಪಡೆಯಲು ಬಹುತೇಕವಾಗಿ ನೆರವಾಗಿವೆ.

### ೪.೧೯. ಸಾಲ ಸೌಲಭ್ಯದ ಬಳಕೆ ಹಾಗೂ ಅದರ ಪರಿಣಾಮ

ಸಾಲ ಬಡತನ ನಿರ್ಮೂಲನೆಯ ಸಾಧನ ಹಾಗೂ ಕೃಷಿ ಉತ್ಪನ್ನದ ಹೆಚ್ಚಳಕ್ಕೆ ಅಗತ್ಯ. ಸಾಮಾಜಿಕ ಆರ್ಥಿಕ ಪರಿವರ್ತನೆಗೆ ಸಹಾಯಕಾರಿ. ಗ್ರಾಮೀಣ ಅಭಿವೃದ್ಧಿಗೆ ಪ್ರೇರಣೆ. ಇದು ಸಾಲದ ಬಗೆಗಿನ ಸಾಂಪ್ರದಾಯಿಕವಾದವಾದರೂ ಜಾಗತೀಕರಣದ ಸಂದರ್ಭದಲ್ಲೂ ಈ ವಾದವನ್ನು ತಳ್ಳಿಹಾಕಲು ಸಾಧ್ಯವಿಲ್ಲ. ಈ ಅಧ್ಯಯನದ ಕ್ಷೇತ್ರ ಕಾರ್ಯದಲ್ಲಿ ಕಂಡುಬಂದಂತೆ ಸಾಲ ಪಡೆದ ವರ್ಗ, ಸಾಲ ಪಡೆಯಲು ಕಾರಣವಾದ ಅಂಶಗಳು, ಸಾಲ ಬಳಕೆಯ ಪರಿಣಾಮಗಳನ್ನು ವಿಶ್ಲೇಷಿಸುವುದಾದರೆ ಸಾಲ ಪಡೆದ ವರ್ಗಗಳು ಆರ್ಥಿಕ ಮತ್ತು ಸಾಮಾಜಿಕವಾಗಿ ಪ್ರಬಲವಾದವು. ಭಾರತೀಯ ಸಂದರ್ಭದಲ್ಲಿ ಅಭಿವೃದ್ಧಿ ಪರಿಕಲ್ಪನೆ ಕುರಿತ ಚರ್ಚೆಗಳಲ್ಲಿ ಜಾತಿ ಮತ್ತು ವರ್ಗಗಳ ಪ್ರತ್ಯೇಕಿಸಿ ವಾದಿಸುವುದು ಅಪೂರ್ಣವಾದುದೆನ್ನಬಹುದು. ಈ ದೃಷ್ಟಿಯುಲ್ಲಿ ಅಭಿವೃದ್ಧಿಯ ಪ್ರೇರಕ ಮತ್ತು ಸಾಧನವೆನ್ನಲಾದ ಸರ್ಕಾರದ ಸಾಲಕಾರ್ಯಕ್ರಮಗಳು ಮತ್ತು ಸಾಲನೀತಿಗಳ ಲಾಭ ಪಡೆಯುತ್ತಿರುವವರು ಸಮಾಜದ ಪ್ರಬಲವರ್ಗವೆಂದೇ ಪರಿಗಣಿಸಲ್ಪಟ್ಟ-ಗುರುತಿಸಲ್ಪಟ್ಟ ಲಿಂಗಾಯತ ಸಮುದಾಯ. ಈ ಸಮುದಾಯದ ಬಹುತೇಕರು ದೊಡ್ಡ ರೈತರು. ಇವರು ದೊಡ್ಡ ಹಿಡುವಳಿಗಳನ್ನು ಹೊಂದಿರುವವರು. ಸಾಲ ಪಡೆಯಲು ಕಾರಣವಾದ ಅಂಶಗಳು ಎಷ್ಟು ಮುಖ್ಯವೋ ಪಡೆದ

ಸಾಲವನ್ನು ತಮ್ಮ ಆರ್ಥಿಕಾಭಿವೃದ್ಧಿಗಾಗಿ ಬಳಸಿಕೊಂಡು ಸಾಮಾಜಿಕ ಪರಿವರ್ತನೆ ಮತ್ತು ಪ್ರಗತಿ ಪ್ರಕ್ರಿಯೆಯಲ್ಲಿ ಬಲಾಢ್ಯ ಜಾತಿ, ವರ್ಗವಾಗಿ ಉಳಿಯುವ ಸಾಮರ್ಥ್ಯವೂ ಅಷ್ಟೇ ಮುಖ್ಯ. ಇದನ್ನು ಸಾಲಬಳಕೆಯ ಧನಾತ್ಮಕ ಪರಿಣಾಮವೆನ್ನಬಹುದು. ಈ ಹಿನ್ನೆಲೆಯಲ್ಲಿ ಸಂಪನ್ಮೂಲಗಳಾದ ಭೂಮಿ ಮತ್ತು ಬಂಡವಾಳದ ಒಡೆತನ ಪ್ರಮುಖವಾದದು. ಲಿಂಗಾಯತ ಸಮುದಾಯದವರಲ್ಲಿ ಆರ್ಥಿಕ ಚಟುವಟಿಕೆಗಳಲ್ಲಿ ನಿರಂತರವಾಗಿ ತೊಡಗಿರುವವರು. ದೊಡ್ಡ ಮಟ್ಟದ ಕೃಷಿ ಉತ್ಪಾದನೆಯಲ್ಲಿ ತೊಡಗುತ್ತಾರೆ. ಪ್ರಸ್ತುತ ನನ್ನ ಅಧ್ಯಯನದ ಪ್ರಕಾರ ಸಂಘಟಿತ ಹಣಕಾಸು ಮೂಲದಿಂದ ಸಾಲ ಪಡೆದವರಲ್ಲಿ ಶೇಕಡಾ ೫೦ರಷ್ಟು ಬಲಾಢ್ಯ ಲಿಂಗಾಯತ ಜಾತಿಯವರೇ. ಸಂಘಟಿತ ಹಣಕಾಸು ಮೂಲದಿಂದ ಕಡಿಮೆ ಸಾಲ ಪಡೆದವರೆಂದರೆ ಅತೀ ಸಣ್ಣರೈತರು. ಇವರಲ್ಲಿ ಬಹುತೇಕರು ಪರಿಶಿಷ್ಟ ಜಾತಿ, ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದವರು. ಸಂಘಟಿತ ವಲಯದಿಂದ ಲಿಂಗಾಯತ ಜಾತಿಯವರು ಸಾಲ ಪಡೆಯುವಂತಾಗಲು ಮತ್ತು ಪಡೆದದ್ದನ್ನು ತಮ್ಮ ಆರ್ಥಿಕ ಪ್ರಗತಿಗೆ ಬಳಸಿಕೊಳ್ಳುವಂತಾಗಲು ಮುಖ್ಯ ಕಾರಣ ಭೂಮಿ, ಇತರೆ ಪೂರಕ ಸಂಪನ್ಮೂಲಗಳ ಒಡೆತನ ಹಾಗೂ ಆರ್ಥಿಕ ರಾಜಕೀಯ ಪ್ರಭಾವ, ಮಾಹಿತಿ ಪಡೆಯುವಿಕೆ ಇತ್ಯಾದಿ. ಸರ್ಕಾರದ ಸಾರ್ವಜನಿಕ ಹೂಡಿಕೆಗಳಾದ ನೀರಾವರಿ, ಉಚಿತ ವಿದ್ಯುತ್ ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಯಿತು. ಈ ಮೂಲಕ ಅಭಿವೃದ್ಧಿ ಪ್ರಕ್ರಿಯಲ್ಲಿ ಸಕ್ರೀಯ ಪಾಲುದಾರರಾಗಿ ಸರ್ಕಾರದ ಆರ್ಥಿಕ ನೀತಿ ಮತ್ತು ಹೂಡಿಕೆಗಳ ಸಿಂಹಪಾಲು ಲಾಭವನ್ನು ಪಡೆದಿದ್ದಾರೆ. ಈ ವರ್ಗದ ಉತ್ತಮ ಆರ್ಥಿಕ ಮತ್ತು ಸಾಮಾಜಿಕ ರಾಜಕೀಯ ಪರಿಸ್ಥಿತಿ ಕಾರಣವಾದ ಸಂಪನ್ಮೂಲಗಳು ದುರ್ಬಲ ವರ್ಗಗಳಾದ ಪರಿಶಿಷ್ಟ ಜಾತಿ ಜನಾಂಗಗಳು, ಕೃಷಿ ಕಾರ್ಮಿಕ ಭೂರಹಿತರಿಗೆ ವರ್ಗಗಳಿಗೆ ದೊರೆಯಬೇಕು. ಅವರು ಅಭಿವೃದ್ಧಿ ಪ್ರಕ್ರಿಯೆಯ ಲಾಭ ಪಡೆಯಬೇಕು. ಇಲ್ಲದಿದ್ದಲ್ಲಿ ಅವರು ಅಭಿವೃದ್ಧಿಯ ಲಾಭದಿಂದ ಹೊರಗುಳಿಯಬೇಕಾಗುತ್ತದೆ. ಈ ದೃಷ್ಟಿಯಲ್ಲಿ ಸಾಲ ಸೌಲಭ್ಯ ಪಡೆಯಲು ಸಾದ್ಯವಾಗದೇ ಇರುವ ವರ್ಗಗಳಾದ ಕೃಷಿಕಾರ್ಮಿಕರು, ಭೂರಹಿತ ದುಡಿಮೆಗಾರರು ಸಾಲಸೌಲಭ್ಯ ಪಡೆಯುವ ಅರ್ಹತೆ ಹೊಂದಬೇಕು. ಆರ್ಥಿಕ ಮತ್ತು ಸಾಮಾಜಿ ಪರಿವರ್ತನೆಗೆ ಅನುಕೂಲವಾಗುವಂತೆ ಆರ್ಥಿಕ ವ್ಯವಸ್ಥೆಯಲ್ಲಿ ಮೂಲಭೂತ ಬದಲಾವಣೆಗಳಾಗ ಬೇಕಾಗಿದೆ. ಈ ಬದಲಾವಣೆಗೆ ಸರ್ಕಾರಗಳು ಪ್ರಾಮಾಣಿಕವಾಗಿ ಗಂಭೀರವಾಗಿ ಪ್ರಯತ್ನಿಸಬೇಕು. ಇದಕ್ಕೆ ಪೂರಕವಾದ ನೀತಿಗಳನ್ನು ರೂಪಿಸಿ ಬದ್ಧತೆಯಿಂದ ಅನಷ್ಠಾನಗೊಳಿಸ ಬೇಕು. ಇಲ್ಲದಿದ್ದರೆ ಪ್ರಬಲರೇ ಅಭಿವೃದ್ಧಿ ಹೊಂದುತ್ತಾ ದುರ್ಬಲರು ಹಿಂದುಳಿದು ದುಸ್ಥಿತಿಗೆ ತಲುಪುತ್ತಾರೆ. ಸಮಾಜದಲ್ಲಿ ಅನ್ಯಾಯ ಅಸಮಾನತೆ ಹೆಚ್ಚಾಗುತ್ತದೆ. ಬಡತನ, ಅಸಮಾನತೆ, ಅನ್ಯಾಯ ಹಾಗೂ ಬಡತನದಲ್ಲಿರುವ ದುರ್ಬಲ ಜನರ ಹೆಚ್ಚಳ ಯಾವ ಪ್ರಗತಿಪರ ಸಮಾಜವನ್ನು ಪ್ರಶ್ನಿಸುವಂತಹುದೇ? ಹೀಗೆ ಒಂದು ವರ್ಗ ಅಭಿವೃದ್ಧಿ ಹೊಂದುವುದು ಎಲ್ಲಾ ಅವಕಾಶ ಸೌಲಭ್ಯಗಳನ್ನು ಬಾಚಿಕೊಂಡು ಮತ್ತಷ್ಟು ಬಲಾಢ್ಯರಾಗುವುದು, ಇನ್ನೊಂದು ವರ್ಗ ಅಭಿವೃದ್ಧಿಯಿಂದ ಹೊರಗುಳಿಯುವುದು, ವಂಚಿತ ವರ್ಗವಾಗಿಯೇ ಉಳಿಯುವುದು ಎಂದಿಗೂ ಅಭಿವೃದ್ಧಿ ಎನಿಸಿಕೊಳ್ಳುವುದಿಲ್ಲ. ಈ ರೀತಿಯ ಅಸಮಾನತೆ ಇನ್ನಷ್ಟು ಬಡವರನ್ನು

ಸೃಷ್ಟಿಸುತ್ತದೆ. ಹೆಚ್ಚಿನ ಸಂಖ್ಯೆಯ ಬಡವರ ಸೃಷ್ಟಿ ದೇಶವೊಂದರ ಸರ್ಕಾಗಳ ಅಭಿವೃದ್ಧಿ ನೀತಿಗಳ ವೈಪಲ್ಯವೇ ಸರಿ. ಮೇಲೆ ತಿಳಿಸಿದಂತೆ ಸಮಾಜದ ಕೆಲವು ವರ್ಗಗಳು ಸಂಘಟಿತ ಹಣಕಾಸು ವಲಯದ ಸಾರ್ವಜನಿಕ ಬ್ಯಾಂಕುಗಳಿಂದ ಸಾಲ ಸೌಲಭ್ಯ ಪಡೆಯಲಾಗದೇ ಇರುವುದು ಅಭಿವೃದ್ಧಿಯ ಪ್ರತಿಫಲದಿಂದ ಈ ವರ್ಗಗಳು ಹೊರಗಳಿದಂತೆ ಅಥವಾ ವಂಚಿತರಾದಂತೆ ಎಂದು ಪರಿಗಣಿಸ ಬೇಕಾಗುತ್ತದೆ. ಬಡರನ್ನು ಸಾಲ ಪಡೆಯಲು ಅರ್ಹರನ್ನಾಗಿಸುವ ಮತ್ತು ಸಾಲ ಬಳಸಿಕೊಳ್ಳುವ ಸಾಮರ್ಥ್ಯವನ್ನು ವೃದ್ಧಿಸಲು ಸರ್ಕಾರ ಪೂರಕವಾದ ಸಂಘಟಿತ ಹಣಕಾಸು ವಲಯದ ಸಾಲನೀತಿ ಮತ್ತು ಸಮಾಜದ ಮೂಲ ಭೂತ ವ್ಯವಸ್ಥೆಯಲ್ಲಿ ಸುಧಾರಣೆ ತರಬೇಕಾಗಿದೆ.[೧೫]

ಪ್ರಸ್ತುತ ಅಧ್ಯಯನದ ವಿಶ್ಲೇಷಣೆಯಂತೆ ಸಂಘಟಿತ ಸಾಲ ಮೂಲದಿಂದ ಸಾಲ ಪಡೆದವಲ್ಲಿ ಶೇಕಡಾ ೫೦ರಷ್ಟು ಲಿಂಗಾಯತರಾಗಿದ್ದು ಇವರು ದೊಡ್ಡಹಿಡುವಳಿದಾರರು. ಇದರಲ್ಲಿ ಬಹುತೇಕರು ದೊಡ್ಡ ಭೂಮಾಲೀಕರಾಗಿದ್ದಾರೆ. ಇವರು ಸಹಕಾರ ಸಂಘ ಮತ್ತು ವಾಣಿಜ್ಯ ಬ್ಯಾಂಕು ಎರಡರಿಂದಲೂ ಸಾಲ ಸೌಲಭ್ಯ ಪಡೆದಿದ್ದಾರೆ. ಪಡೆದ ಸಾಲವನ್ನು ಕೃಷಿ ಉತ್ಪಾದನೆ ಮತ್ತು ಇತರೇ ಕೃಷಿಯೇತರ ಆದಾಯವೃದ್ಧಿ ಕಾರ್ಯಗಳಿಗೆ ಬಳಸಿಕೊಂಡಿದ್ದಾರೆ. ಇವರು ಅಲ್ಪಾವಧಿ ಬೆಳೆ ಸಾಲಗಳನ್ನು ಪಡೆದಿದ್ದಾರೆ. ತಮ್ಮ ಹೆಸರಲ್ಲಿ ಭೂ ದಾಖಲಾತಿಗಳನ್ನು ಹೊಂದಿದ್ದಾರೆ. ಇದರಿಂದ ಸಹಜವಾಗಿ ೧೫–೨೦ ವರ್ಷಗಳ ಹಿಂದೆ ಸಹಕಾರ ಸಂಘಗಳ ಸದಸ್ಯರಾಗಿ ನಿರಂತರ ಸಾಲಸೌಲಭ್ಯಗಳನ್ನು ಪಡೆಯುತ್ತಿದ್ದಾರೆ. ಎರಡೆರಡು ಸಾರಿ ಸಹಕಾರ ಸಂಘಗಳಿಂದ ಸಾಲಮನ್ನಾ ಸೌಲಭ್ಯ ಪಡೆದಿದ್ದಾರೆ. ತಾವು ಪಡೆದ ಸಾಲವನ್ನು ಆದಾಯದಾಯಕ ಚಟುವಟಿಕೆಗಳಿಗೆ ಬಲಸಿಕೊಂಡು ಆರ್ಥಿಕವಾಗಿ ಉತ್ತಮರಾಗುತ್ತಾ ಬಂದಿದ್ದಾರೆ. ಸಾಮಾಜಿಕ ಸ್ಥಾನಮಾನಗಳನ್ನು ಉತ್ತಮ ಪಡಿಸಿಕೊಂಡು ರಾಜಕೀಯವಾಗಿಯೂ ಸಕ್ರಿಯರಾಗಿದ್ದಾರೆ. ತಮ್ಮ ಉತ್ತಮ ಆರ್ಥಿಕ ಸಾಮಾಜಿಕ ಪರಿಸ್ಥಿತಿಯಿಂದ ಮಕ್ಕಳಿಗೆ ಉತ್ತಮ ಶೈಕ್ಷಣಿಕ ಸೌಲಭ್ಯಗಳನ್ನು ಕೊಡಿಸುತ್ತಿದ್ದಾರೆ. ಇವರ ಮಕ್ಕಳು ಆಧುನಿಕ ಶಿಕ್ಷಣ ಪಡೆಯುತ್ತಿದ್ದಾರೆ. ಸಂದರ್ಶನದ ಸಮಯದಲ್ಲಿ ತಿಳಿದುಬಂದಂತೆ ಸಾಲ ಪಡೆದ ಲಿಂಗಾಯತ ಸಮುದಾಯದಲ್ಲಿ ಶೇಕಡಾ ೧೪ರಷ್ಟು ಜನ ತಮ್ಮ ಹೆಚ್ಚುವರಿ ಆದಾಯದಿಂದ ಹೊಸದಾಗಿ ಜಮೀನು ಖರೀದಿಸಿದ್ದಾರೆ. ತಮ್ಮ ಆಸ್ತಿಯನ್ನು ಹೆಚ್ಚಿಸಿಕೊಂಡಿದ್ದಾರೆ. ಮತ್ತಷ್ಟು ಶ್ರೀಮಂತರಾಗುತ್ತಿದ್ದಾರೆ. ಹೀಗೆ ಈ ವರ್ಗ ಮತ್ತಷ್ಟು ಶ್ರೀಮಂತರಾಗುವಲ್ಲಿ ಸಂಘಟಿತ ಮೂಲದಿಂದ ತಾವು ಪಡೆದ ಸಾಲದ ಪಾತ್ರವನ್ನು ನಿರ್ಲಕ್ಷಿಸುವಂತಿಲ್ಲ. ಇವರು ದೊಡ್ಡಭೂಹಿಡುವಳಿಗಾರರಾಗಿರುವುದರಿಂದ ವಾಣಿಜ್ಯ ಬ್ಯಾಂಕುಗಳಿಂದ ಹೆಚ್ಚಿನ ಪ್ರಮಾಣದಲ್ಲಿ ಸಾಲ ಪಡೆದಿದ್ದಾರೆ. ದೊಡ್ಡಹಿಡುವಳಿ, ದೊಡ್ಡಮಟ್ಟದ ಕೃಷಿಉತ್ಪಾದನಾ ಚಟುವಟಿಕೆಗಳಿಂದ ದೊಡ್ಡ ಪ್ರಮಾಣದ ಸಾಲ ಪಡೆಯಲು ಸಾದ್ಯವಾಗಿದೆ. ಕೆಲವರು ವಾಣಿಜ್ಯ ಬ್ಯಾಂಕುಗಳಿಂದ ೩ ಲಕ್ಷದವರೆಗೂ ಸಾಲ ಪಡೆದಿದ್ದಾರೆ. ಈ ಸಾಲದ ಮೇಲೆ ಸರ್ಕಾರ ನೀಡುವ ಬಡ್ಡಿ ರಿಯಾಯಿತಿ, ಬಡ್ಡಿ ಮನ್ನಾ ಅನುಕೂಲವನ್ನು ಪಡೆದಿದ್ದಾರೆ. ನಿಗದಿತ ಸಮಯಕ್ಕೆ ಸಾಲ ಮರುಪಾವತಿ ಮಾಡದ್ದರಿಂದ ದೊರೆಯುವ ಸರ್ಕಾರದ ಪ್ರೋತ್ಸಾಹ ಧನವನ್ನು ಪಡೆದಿದ್ದಾರೆ. ಇವರಲ್ಲಿ ಶೇಕಡಾ ೧೨ರಷ್ಟು ಜನ ತಮ್ಮ ಚಿನ್ನದ ಒಡವೆಗಳನ್ನು ರಾಷ್ಟ್ರೀಕೃತ

ಬ್ಯಾಂಕುಗಳಲ್ಲಿ ಭದ್ರತೆಯಾಗಿಟ್ಟು ಶೇಕಡಾ ೪ರ ಬಡ್ಡಿದರದಲ್ಲಿ ಸಾಲಸೌಲಭ್ಯ ಪಡೆದಿದ್ದಾರೆ. ಭೂದಾಖಲಾತಿ ತಮ್ಮ ಹೆಸರಿನಲ್ಲಿದ್ದು ಜಮೀನಿನ ಖಾತೆ ಪಹಣಿಗಳನ್ನು ಚಿನ್ನದೊಂದಿಗೆ ಬ್ಯಾಂಕಿಗೆ ನೀಡಿ ಸಾಲ ಪಡೆಯಲಾಗುತ್ತದೆ. ಇದನ್ನು ಕೃಷಿಯ ಚಿನ್ನದ ಸಾಲವೆಂದೇ ಕರೆಯಲಾಗುತ್ತದೆ. ಬ್ಯಾಂಕುಗಳಿಂದ ಸಾಲ ಪಡೆದು, ಪಡೆದ ಸಾಲವನ್ನು ತಮ್ಮ ಅಭಿವೃದ್ಧಿಗೆ ಬಳಸಿಕೊಳ್ಳುವಲ್ಲಿ ಸ್ಥಿರಾಸ್ಥಿಗಳ ಪಾತ್ರವನ್ನು ಇಲ್ಲಿ ಮನಗಾಣಬಹುದು. ಈ ಹಿನ್ನೆಲೆಯಲ್ಲಿ ಸಮಾಜದ ಯಾವ ವರ್ಗಗಳು ಸರ್ಕಾರದ ಸಾಲ ಯೋಜನೆಗಳ ಸೌಲಭ್ಯ ಪಡೆಯುತ್ತಾರೆ. ಅದಕ್ಕೆ ಪೂರಕವಾದ ಅಂಶಗಳು ಏನೆಂಬುದನ್ನು ಇದರಿಂದ ತಿಳಿಯಬಹುದು. ಹೀಗೆ ಸಮಾಜದ ಒಂದು ವರ್ಗ ಸಾಲ ಪಡೆಯುವ ಅರ್ಹತೆ ಸಾಮರ್ಥ್ಯವನ್ನು ಹೊಂದಿದ್ದು ಅಭಿವೃದ್ಧಿ ಹೊಂದುತ್ತಿದ್ದರೆ, ಉಳಿದ ವರ್ಗಗಳು ಈ ಅರ್ಹತೆ ಮತ್ತು ಸಾಮರ್ಥ್ಯಗಳಿಲ್ಲದೆ ಹಣಕಾಸು ಸೌಲಭ್ಯದಿಂದ ವಂಚಿತರಾಗುವುದನ್ನು ನೋಡಬಹುದು. ಅಭಿವೃದ್ಧಿ ಪ್ರಕ್ರಿಯೆಯ ಫಲ ಪಡೆಯಲು ಸಾಧ್ಯವಾಗದ, ಆ ಅರ್ಹತೆ ಮತ್ತು ಅವಕಾಶಗಳಿಲ್ಲದಿರುವುದನ್ನು ಸಾಮರ್ಥ್ಯ ವಂಚನೆ ಎಂದು ಅಮರ್ತ್ಯಸೇನ್ ವಾದಿಸುತ್ತಾರೆ.[೧೬] ಹಲಮ ಅಭಿವೃದ್ಧಿಯ ಅವಕಾಶಗಳಿಂದ ವಂಚಿತರಾದರೆ ಅದು ಅಭಿವೃದ್ಧಿಯೇ ಅಲ್ಲ. ಅಭಿವೃದ್ಧಿ ಎಲ್ಲರನ್ನೂ ಒಳಗೊಳ್ಳಬೇಕು. ಜನರು ಕೇವಲ ಅಭಿವೃದ್ಧಿಯನ್ನು ಸ್ವೀಕರಿಸುವ ಫಲಾನುಭವಿಗಳು ಮಾತ್ರವಲ್ಲ ಅವರು ಅದರ ಕರ್ತೃಗಳು. ಆದರೆ ಇಂದು ಅಭಿವೃದ್ಧಿಯು ಸಮಾಜದ ಎಲ್ಲಾ ವರ್ಗಗಳನ್ನು, ಎಲ್ಲಾ ಸಾಮಾಜಿಕ ಗುಂಪುಗಳನ್ನು, ಎಲ್ಲಾ ಲಿಂಗಗಳನ್ನು, ಎಲ್ಲಾ ಪ್ರದೇಶಗಳನ್ನು ಒಳಗೊಳ್ಳುವ ರೀತಿಯುಲ್ಲಿ ನಡೆಯುತ್ತಿಲ್ಲ. ಅದು ಕೇವಲ ಕೆಲವು ವರ್ಗಗಳು ಮತ್ತು ಕೆಲವು ಸಾಮಾಜಿಕ ಗುಂಪುಗಳಲ್ಲಿ ಕೇಂದ್ರೀಕರಣಗೊಳ್ಳುವ ಪ್ರವೃತ್ತಿಹೊಂದಿದೆ.[೧೭]

ಪಡೆದ ಸಾಲವನ್ನು ಉತ್ಪಾದಕ ಉದ್ದೇಶಗಳಿಗೆ ಬಳಸಿಕೊಂಡಾಗ ಅದರ ಪರಿಣಾಮ ಧನಾತ್ಮಕವಾಗಿರುತ್ತವೆ. ಕೃಷಿ ಸಾಲವನ್ನು ಕೃಷಿ ಉತ್ಪಾದನಾ ಉದ್ದೇಶಗಳಗೆ ಬಳಸಿಕೊಂಡರೆ ಫಲಾನುಭವಿಗಳ ಆರ್ಥಿಕ ಸ್ಥಿತಿ ಸುಧಾರಿಸುತ್ತದೆ. ಆದಾಯ ಹೆಚ್ಚಿ ಅವರ ಜೀವನ ಮಟ್ಟ ಸಹ ಸುಧಾರಿಸುತ್ತದೆ. ಪ್ರಸ್ತುತ ಅಧ್ಯಯನದ ವಿಶ್ಲೇಷಣೆ ಪ್ರಕಾರ ಲಿಂಗಾಯತ ಸಮುದಾಯದವರು ಸಾಲವನ್ನು ಯಾವ ಉದ್ದೇಶಕ್ಕೆ ಪಡೆದಿದ್ದಾರೋ ಅದೇ ಉದ್ದೇಶಕ್ಕೆ ಬಳಸಿದೊಂಡಿದ್ದರಿಂದ ಅವರ ಆರ್ಥಿಕ ಸಾಮಾಜಿಕ ಪರಿಸ್ಥಿತಿಯಲ್ಲಿ ಸುಧಾರಣೆಯಗಿದೆ. ಇವರು ನಿರಂತರವಾಗಿ ಸಂಘಟಿತ ಹಣಕಾಸು ವಲಯದಿಂದ ಅಂದರೆ ಸಾರ್ವಜನಿಕ ಬ್ಯಾಂಕುಗಳಿಂದ ರಿಯಾಯತಿ ಬಡ್ಡಿದರದ ಸಾಲ ಸೌಲಭ್ಯಗಳನ್ನು ಪಡೆಯುತ್ತಾ ಬಂದಿದ್ದಾರೆ. ಇದನ್ನು ಕೃಷಿ ಉತ್ಪಾದನೆಗೆ ಬಳಸಿಕೊಂಡಿದ್ದಾರೆ. ಆದಾಯ ಹೆಚ್ಚಾದರೆ ಉಳಿತಾಯ ಸಾಮರ್ಥ್ಯ ಸಹ ಹೆಚ್ಚುತ್ತದೆ. ಈ ಜಾತಿಯವರು ತಮ್ಮ ಹೆಚ್ಚುವರಿ ಆದಾಯ ಮತ್ತು ಉಳಿತಾಯದಿಂದ ಹೊಸದಾಗಿ ಆಸ್ತಿ ಖರೀದಿಸಿದ್ದಾರೆ. ಸಂಪತ್ತು ಶೇಕರಿಸಿದ್ದಾರೆ. ಈ ಸಮುದಾಯದವರು ಸಂಘಟಿತ ಮತ್ತು ಅಸಂಘಟಿತ ಎರಡೂ ಮೂಲಗಳಿಂದ ಸಾಲ ಪಡೆದಿದ್ದಾರೆ. ಶೇಕಡಾ ೫೫-೫೬ರಷ್ಟು ಲಿಂಗಾಯತ ಜಾತಿಯ ದೊಡ್ಡ ರೈತರು ಬ್ಯಾಂಕುಗಳಿಂದ ಸಾಲ ಪಡೆದಿದ್ದಾರೆ. ರಾಯಚೂರು ಜಿಲ್ಲೆಯಲ್ಲಿ ಅಸಂಘಟಿತ ಹಣಕಾಸು ಮೂಲದ ಪ್ರಬಲ

ಲೇವಾದೇವಿಗಾರರೆಂದೇ ಗುರುತಿಸಲ್ಪಡುವ ಹಾಗೂ ಕೃಷಿ ಉತ್ಪಾದನೆಗೆ ಅಗತ್ಯವಾದ ಹೂಡುವಳಿಗಳನ್ನು ಪೂರೈಸುವ ಮತ್ತು ಅಗತ್ಯವಿದ್ದಾಗಲೆಲ್ಲಾ ನಗದು ಸಾಲವನ್ನು ಪೂರೈಸುವ ವ್ಯಾಪಾರಸ್ಥರಿಂದಲೂ ಲಿಂಗಾಯತ ಜಾತಿಯ ರೈತರು ಸಾಲಗಳನ್ನು ಪಡೆದಿದ್ದಾರೆ. ಇವರು ಸಂಘಟಿತ ಮೂಲದಿಂದ ಸಾಲ ಸೌಲಭ್ಯ ಪಡೆಯುತ್ತಿದ್ದರೂ ಅಸಂಘಟಿತ ಮೂಲದಿಂದ ಸಾಲ ಪಡೆಯಲು ಕಾರಣ ಸಾಲದ ಅಗತ್ಯ ಅಥವಾ ಸಾಲದ ಬೇಡಿಕೆ. ಇವರಿಗೆ ಅಗತ್ಯವಿರುವ ಸಾಲದ ಬೇಡಿಕೆ ಮತ್ತು ಪೂರೈಕೆಗಳ ನಡುವಿನ ಅಂತರವಿದೆ. ಅಗತ್ಯವಿದ್ದಷ್ಟು ಸಾಲವನ್ನು ಒಂದೇ ಮೂಲದಿಂದ ಪಡೆಯಲು ಸಾಧ್ಯವಿಲ್ಲದಿದ್ದಾಗ ಕೊರತೆಯನ್ನು ಬೇರೊಂದು ಮೂಲದಿಂದ ತುಂಬಿಕೊಳ್ಳುತ್ತಾರೆ. ಇವರು ಅಸಂಘಟಿತ ಸಾಲ ಮರುಕಟ್ಟೆಯಿಂದ ಸಾಲ ಪಡೆದು ಅದನ್ನು ಕೃಷಿ ಉತ್ಪಾದನೆಗೆ ಬಳಸಿಕೊಳ್ಳುತ್ತಾರೆ. ಬೆಳೆ ಬಂದು ಮಾರಾಟವಾದ ನಂತರ ಸಾಲವನ್ನು ಹಿಂತಿರುಗಿಸುತ್ತಾರೆ. ಕೆಲವೊಮ್ಮೆ ಇವರು ಕೃಷಿ ಉತ್ಪಾದನೆ ಬರುವವರೆಗೂ ಇವರು ಕಾಯುವುದಿಲ್ಲ. ಕಾಯುವ ಅಗತ್ಯವೂ ಇರುವುದಿಲ್ಲ. ಪಡೆದ ಸಾಲವನ್ನು ಹಿಂತಿರುಗಿಸುವ ಸಾಮರ್ಥ್ಯ ಇವರಿಗಿದೆ. ಇದರಿಂದ ಇವರು ಅಸಂಘಟಿತ ಸಾಲ ಮಾರುಕಟ್ಟೆಯ ಸಾಲ ಸುಳಿಗೆ ಸಿಲುಕುವುದಿಲ್ಲ. ಹಾಗಾಗಿ ಅಸಂಘಟಿತ ಮಾರುಕಟ್ಟೆಯ ಯಾವುದೇ ಋಣಾತ್ಮಕ ಪರಿಣಾಮಗಳೂ ಇವರು ಸಿಲುಕುವುದಿಲ್ಲ. ಈ ಮೂಲದಿಂದ ಪಡೆದ ಸಾಲವನ್ನು ಕೃಷಿ ಉತ್ಪಾದನೆ ಮತ್ತು ಆದಾಯವೃದ್ಧಿ ಚಟುವಟಿಕೆಗಳಲ್ಲಿ ತೊಡಗಿಸುವುದರಿಂದ ಇವರ ಆದಾಯ ವೃದ್ಧಿಸುವ ಅವಕಾಶಗಳು ಹೆಚ್ಚಾಗಿವೆ. ಆದರೆ ಆದಾಯ ಹೆಚ್ಚಿಸಿವ ಸಾಧ್ಯತೆಗಳು ಕಡಿಮೆ ಅಥವಾ ಇಲ್ಲದಿದ್ದಾಗ ಬಡ್ಡಿಗೆ ಬಡ್ಡಿ ಸಾಲಕ್ಕೆ ಸಾಲ ಬೆಳೆದು ಋಣಾತ್ಮಕ ಪರಿಣಾಮ ಬೀರುವ ಸಾಧ್ಯತೆಗಳೇ ಹೆಚ್ಚು. ಆ ರೀತಿಯ ಪರಿಣಾಮಗಳಿಗೆ ಈ ವರ್ಗಗಳು ಒಳಗಾಗುವುದಿಲ್ಲ. ಈ ವರ್ಗದವರು ಸಹಕಾರ ಸಂಘಗಳಿಂದಲೂ ಸಾಲಸೌಲಭ್ಯ ಪಡೆದಿದ್ದಾರೆ. ಈ ಸಾಲಗಳನ್ನು ತಮ್ಮ ಅಭಿವೃದ್ಧಿಗೆ ಬಳಸಿಕೊಂಡಿದ್ದಾರೆ. ಸಹಕಾರ ಸಂಘಗಳ ಮೂಲಕ ಸರ್ಕಾರದಿಂದ ದೊರೆಯುವ ಸಾಲ ಮನ್ನಾ ಸೌಲಭ್ಯವನ್ನು ಪಡೆದಿದ್ದಾರೆ. ಸಹಕಾರ ಸಂಘಗಳ ಕಾರ್ಯಗಳಲ್ಲಿ ಸರ್ಕಾರದ ಮಧ್ಯಪ್ರವೇಶ ಹೆಚ್ಚಿ ಸಹಕಾರ ಸಂಘಗಳು ರಾಜಕೀಯಗೊಂಡಿರುವುದರಿಂದ ಈ ಸಂಸ್ಥೆಗಳು ಇಂದು ಸರ್ಕಾರದ ಸಾಲ ವಿತರಿಸುವ ಕೇಂದ್ರಗಳಾಗಿವೆ. ಸಹಕಾರ ತತ್ವದ ಪರಿಕಲ್ಪನೆಯಲ್ಲಿ ಈ ಸಂಸ್ಥೆಗಳು ಕಾರ್ಯನಿರ್ವಹಿಸಲಾಗದ ಪರಿಸ್ಥಿತಿ ನಿರ್ಮಾಣವಾಗಿರುವುದು ನೀತಿ ರೂಪಿಸುವ ಮತ್ತು ಅನುಷ್ಠಾನಗೊಳಿಸುವ ವ್ಯವಸ್ಥೆಯ ವೈಫಲ್ಯವೆನ್ನಬಹುದು. ಶ್ರೀಮಂತ ಭೂಮಾಲೀಕರು ಈ ಸಂಸ್ಥೆಗಳಿಂದ ಅನುಕೂಲ ಪಡೆಯುತ್ತಾರೆ. ಈ ಸಂಸ್ಥೆಗಳ ಸಿದ್ಧಾಂತ, ಆಚರಣೆ ಹಾಗೂ ಅವುಗಳ ಬೆಳವಣಿಗೆ ಬಗ್ಗೆ ಅವರಿಗೆ ಯಾವುದೇ ಆಸಕ್ತಿ ಇಲ್ಲ. ಪಡೆದ ಸಾಲವನ್ನು ಹಿಂದುರುಗಿಸದೇ ಈ ಸಂಸ್ಥೆಗಳ ಸಂಪನ್ಮೂಲ ಕೊರತೆ ಎದುರಿಸುತ್ತಾ ನಷ್ಟಕ್ಕೆ ಸಿಲುಕಿವೆ. ಆರ್ಥಿಕವಾಗಿ ದಿವಾಳಿ ಅಂಚಿನಲ್ಲಿ ನಿಂತಿವೆ. ಈ ಸಂಸ್ಥೆಗಳ ಪ್ರಸ್ತುತ ಪರಿಸ್ಥಿತಿಗೆ ಶ್ರೀಮಂತರು ಮತ್ತು ಸರ್ಕಾರವೇ ಕಾರಣ ಎನ್ನಬಹುದು. ಇದರಿಂದ ಹೊಸದಾಗಿ ಸಾಲ ಪಡೆಯಲು ಇಚ್ಛಿಸುವ ಜನರು ಮತ್ತು ಸಮಾಜದ ಎಲ್ಲಾ ವರ್ಗಗಳು ಸಹಕಾರ ಸಂಸ್ಥೆಗಳಿಂದ ಸಾಲ ಪಡೆದು ಅಭಿವೃದ್ಧಿ ಹೊಂದುವ ಮತ್ತು ತಮ್ಮ ಆರ್ಥಿಕ ಸಾಮಾಜಿಕ ಪರಿಸ್ಥಿತಿ ಸುಧಾರಿಸಿಕೊಳ್ಳುವ

ಅವಕಾಶಗಳಿಂದ ವಂಚಿತರಾಗಿದ್ದಾರೆ ಎನ್ನಬಹುದು. ಈ ಸಂಸ್ಥೆಗಳಲ್ಲಿ ಭೂಮಿ ಇದ್ದು ತಮ್ಮ ಹೆಸರಲ್ಲಿ ಭೂದಾಖಲೆಗಳಿದ್ದರೆ ಮಾತ್ರ ಸದಸ್ಯರಾಗಬಹುದು. ಈ ಭೂಮಿ ಮತ್ತು ದಾಖಲೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಹೊಂದಿರುವವರು ಪ್ರಬಲ ಜಾತಿಯವರು. ಈ ಸಂಸ್ಥೆಗಳಿಂದ ಹೆಚ್ಚು ಲಾಭ ಪಡೆಯಿವವರು ಇವರೇ. ಈ ದೃಷ್ಟಿಯಿಂದ ಪರಿಗಣಿಸುವುದಾದರೆ ಈ ಸಂಸ್ಥೆಗಳು ಇರುವದೇ ಬಲಾಢ್ಯ ಸಮುದಾಯಗಳ ಏಳ್ಗೆಗೆ ಎನ್ನಬಹುದು. ಸರ್ಕಾರವೂ ಇದನ್ನೇ ಪೋಷಿಸಿ ಪ್ರೋತ್ಸಾಹಿಸು ವಂತಿದೆ. ಇಲ್ಲದಿದ್ದಲ್ಲಿ ಸರ್ಕಾರ ತನ್ನ ಪ್ರಯತ್ನ ಮತ್ತು ಸಾಲನೀತಿಗಳ ಮೂಲಕ ಈ ಸಂಸ್ಥೆಗಳು ಸಮಾಜದ ಎಲ್ಲಾ ವರ್ಗಗಳ ಪ್ರಗತಿಗೆ ಶ್ರಮಿಸುವ ತಳಮಟ್ಟದ ಸಂಸ್ಥೆಗಳಾಗಿ ಕಾರ್ಯನಿರ್ವಹಿಸುವಂತೆ ಆಡಳಿತಾತ್ಮಕ ಮತ್ತು ನೀತಿಮಟ್ಟದ ಬದಲಾವಣೆಗಳನ್ನು ತರಬಹುದಿತ್ತು. ೧೯೭೦ರ ದಶಕದಲ್ಲಿ ಸಂಘಟಿತ ಸಾಲ ಪೂರೈಕೆ ವ್ಯವಸ್ಥೆಯಲ್ಲಿ ಸಹಕಾರ ಸಂಘಗಳ ಪಾಲು ಶೇಕಡಾ ೭೯.೫ರಷ್ಟಿತ್ತು, ೨೦೦೧-೦೨ರ ಹೊತ್ತಿಗೆ ಇದು ಶೇಕಡಾ ೪೪ಕ್ಕೆ ಕುಸಿಯಿತು.[೧೮] ೨೦೧೨-೧೩ರ ಹೊತ್ತಿಗೆ ಇದು ಶೇಕಡಾ ೧೭ಕ್ಕೆ ಕುಸಿದಿದೆ. ಸಹಕಾರ ಸಂಘಗಳು ಇದೇ ದಿಕ್ಕಿನಲ್ಲಿ ಮುಂದುವರೆದರೆ ಗ್ರಾಮೀಣ ಭೂ ಅಭಿವೃದ್ಧಿ ಬ್ಯಾಂಕುಗಳು ಪ್ರಸ್ತುತ ದಿವಾಳಿ ಹಂತಕ್ಕೆ ತಲುಪಿ ಮುಚ್ಚುವಂತಹ ಪರಿಸ್ಥಿತಿಗೆ ಸಹಕಾರ ಸಂಘಗಳು ತಲುಪುತ್ತವೆ. ಸರ್ಕಾರ ಸಹಕಾರ ಸಂಸ್ಥೆಗಳ ಬಗ್ಗೆ ತನ್ನ ಧೋರಣೆ ಮತ್ತು ಸಾಲ ನೀತಿಗಳನ್ನು ಬದಲಾಯಿಸಿಕೊಳ್ಳದಿದ್ದರೆ ಸಹಕಾರ ಸಂಘಗಳ ಸುಧಾರಣೆಗೆ ಎಷ್ಟೇ ಸಂಪನ್ಮೂಗಳನ್ನು ನೀಡಿದರೂ ಪರಿಸ್ಥಿತಿ ಸುಧಾರಿಸದೇ ಇರಬಹುದು.

**ಕೊನೆ ಟಿಪ್ಪಣಿಗಳು**

೧. ಎನ್. ರಂಗಸ್ವಾಮಿ ಮತ್ತು ಪಿ.ಕೆ. ತ್ರಿಪಾಟಿ (೨೦೧೩). *ಸ್ಟ್ರಕ್ಚರಲ್ ಚೇಂಜಸ್ ಇನ್ ಕರ್ನಾಟಕಾಸ್ ಎಕಾನಮಿ, ವರ್ಕಿಂಗ್ ಪೇಪರ್ ಸೀರಿಸ್ ನಂಬರ್ ೨,* ಯುಜಿಸಿ ಸೆಂಟರ್ ಫಾರ್ ದಿ ಸ್ಟಡಿ ಆಫ್ ಸೋಷಿಯಲ್ ಎಕ್ಸ್‌ಕ್ಲೂಷನ್ ಅಂಡ್ ಇನ್‌ಕ್ಲೂಷಿವ್ ಪಾಲಿಸಿ, ಬೆಂಗಳೂರು ವಿಶ್ವವಿದ್ಯಾಲಯ, ಪು. ೩-೩೦

೨. ರಾಮಣ್ಣ ಹವಳೆ ದಲಿತ ಸಮುದಾಯದ ಬದುಕಿನ ದುಸ್ಥಿತಿಯನ್ನು ಎಲ್ಲಿ ವಿಶ್ಲೇಷಿಸಿದ್ದಾರೆ. *ಹೈದರಾಬಾದ್ ಸಂಸ್ಥಾನ ವಿಮೋಚನೆಯಲ್ಲಿ ರಾಯಚೂರು ಜಿಲ್ಲೆಯ ಹೋರಾಟ.* ಎನ್‌ಜಿವೊ ಕಾಲೋನಿ, ರಾಯಚೂರು, ೨೦೧೦, ಪು. ೩೦-೪೦

೩. ದುಡಿಮೆಗಾರ ಅಥವಾ ಶ್ರಮಿಕ ವರ್ಗದಲ್ಲಿ ಬಹುತೇಕರು ದಲಿತರು ಎಂದು ಅಮರೇಶ್ ನುಗಡೋಣಿ ವಾದಿಸುತ್ತಾರೆ. *ಹೈದರಾಬಾದ್ ಕರ್ನಾಟಕದ ಹಾಡು ಪಾಡು,* ಅಮರೇಶ್ ನುಗಡೋಣಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೩. ಪು.೪೦-೪೩

೪. ಟಿ.ಆರ್. ಚಂದ್ರಶೇಖರ್ ಕರ್ನಾಟಕದ ರಾಜ್ಯದ ಕೃಷಿ ಬಿಕ್ಕಟ್ಟುಗಳನ್ನು ಚರ್ಚಿಸುತ್ತಾ, ಗುಲ್ಬರ್ಗಾ ವಿಭಾಗದಲ್ಲಿ ಮತ್ತು ರಾಜ್ಯ ಮಟ್ಟದಲ್ಲಿ ದುಡಿಮೆಗಾರರ ಸ್ಥಿತಿ ಗತಿಗಳನ್ನು ವಿಶ್ಲೇಷಿಸಿದ್ದಾರೆ. ಕರ್ನಾಟಕದ ರಾಜ್ಯದ ದುಡಿಮೆಗಾರರ ಸ್ಥಿತಿಗತಿಗಳ ಸಧಾರಣೆಗೆ ಸರ್ಕಾರ ಏನು ಮಾಡುಬಹುದು ಎಂಬುದಕ್ಕೆ ಪರಿಹಾರಗಳನ್ನು ಚರ್ಚಿಸಿದ್ದಾರೆ. ಮಹಿಳಾ ದುಸ್ಥಿತಿಯ ಆಯಾಮಗಳನ್ನು ಇಲ್ಲಿ ವಿಶ್ಲೇಷಿಸಿದ್ದಾರೆ. *ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯ*, ಗಾಯತ್ರಿ ಪ್ರಕಾಶನ, ಬಳ್ಳಾರಿ, ೨೦೧೪, ಪು. ೯–೧೦೩

೫. ಅದೇ.

೬. ಟಿ.ಆರ್. ಚಂದ್ರಶೇಖರ್ (೨೦೧೪). ಗುಲಬರ್ಗಾ ವಿಭಾಗದ ಆರು ಜಿಲ್ಲೆಗಳ ಅಭಿವೃದ್ಧಿ ಮತ್ತು ಸಂವಿಧಾನದ  ಪರಿಚ್ಛೇದ ೩೭೧ (ಜೆ); ನಮ್ಮ ಮುಂದಿರುವ ಸವಾಲುಗಳು, ಕನ್ನಡ ವಿಶ್ವ ವಿದ್ಯಾಲಯದ ಅಭಿವೃದ್ಧಿ ಅದ್ಯಯನ ವಿಭಾಗ ೨೦೧೪, ಜನವರಿ ೨೮ ಮತ್ತು ೨೯ ರಂದು ಗುಲಬರ್ಗಾದಲ್ಲಿ ಏರ್ಪಡಿಸಿದ್ದ ಕಾರ್ಯಾಗಾರದ ಆಶಯ ಭಾಷಣ, ಪು. ೧–೧೨

೭. ಕೃಷಿ ಕಾರ್ಮಿಕರು ಬಡತನ ಪರಿಸ್ಥಿತಿಗೆ ತಲುಪುವ ಮತ್ತು ದುಸ್ಥಿಯ ಬದುಕನ್ನು ನಡೆಸುವ ಬಗೆಯನ್ನು ವಿಶ್ಲೇಷಿಸಿಲಾಗಿದೆ. ಇಪಿಡಬ್ಲ್ಯೂ *ರಿಸರ್ಚ್ ಫೌಂಡೇಶನ್, ಅಗ್ರಿಕಲ್ಚರಲ್ ಲೇಬರ್; ಗೆಟಿಂಗ್ ಪೂರರ್*, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ೧೪ ಅಕ್ಟೋಬರ್ ೧೯೭೮, ಪು. ೧೭೨೬–೧೯೨೭. ನೋಡಿ.

೮. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ (೨೦೧೧). ವಾರ್ಷಿಕ ವರದಿ ೨೦೧೧, ಆರ್‌ಬಿಐ, ಮುಂಬಯಿ, ಪು, ೧೦೨–೧೦೩.

೯. ಸಿ.ಟಿ. ಕುರಿಯನ್ ಸಮಾಜವನ್ನು ವಿವಿಧ ವರ್ಗಗಳಾಗಿ ವರ್ಗೀಕರಿಸಿದ್ದಾರೆ. ಇಲ್ಲಿ ಬಂಡವಾಳಶಾಹಿ ಭೂಮಾಲೀಕರನ್ನು ಮೊದಲ ವರ್ಗವೆಂದು, ಕೃಷಿ ಕಾರ್ಮಿಕರನ್ನು ಸಮಾಜದ ಕೊನೆಯ ವರ್ಗವಾಗಿ ಪರಿಗಣಿಸಿ ಇವರ ಬೆವರೇ (ಲೇಬರ್) ಅಥವಾ ಶ್ರಮವೇ ಇವರಿಗೆ ಬಂಡವಾಳ, ಬೆವರೇ ಇವರ ಬದುಕಿನ ಅಧಾರ. ಇವರು ಸಂಪನ್ಮೂಲ ರಹಿತ ವರ್ಗವೆಂದು ಚರ್ಚಿಸಿದ್ದಾರೆ. ದಿ ಎಕಾನಮಿ–ಅನ್ ಇಂಟರ್‌ಪ್ರಿಟೇಟಿವ್ ಇನ್‌ಟ್ರೊಡಕ್ಷನ್, ಸೆಜ್ ಪಬ್ಲಿಕೇಷನ್, ನ್ಯೂಡಿಲ್ಲಿ, ೧೯೯೨, ಪು:೩೪೯–೩೧೩ ನ್ನು ನೋಡಿ

೧೦. ಪ್ರಕಾಶ್ ಭಕ್ಷಿಯವರು ಕೃಷಿ ಕ್ಷೇತ್ರಕ್ಕೆ ಪೂರೈಕೆಯಾದ ಒಟ್ಟು ಸಾಲದಲ್ಲಿ ಸಂಘಟಿತ ಹಣಕಾಸು ವಲಯದ ಸಾರ್ವಜನಿಕ ಬ್ಯಾಂಕುಗಳ ಪಾಲಗಳ ವಿವರವನ್ನು ಇಲ್ಲಿ ನೀಡಿದ್ದಾರೆ. *ರಿಪೋರ್ಟ್ ಆಫ್ ದಿ ಎಕ್ಸ್‌ಪರ್ಟ್ ಕಮಿಟಿ ಟು ಎಕ್ಸಮೈನ್ ತ್ರಿ ಟಯರ್ ಕೋ ಅಪರೇಟಿವ್ ಕ್ರೆಡಿಟ್ ಸ್ಟ್ರಕ್ಚರ್*, ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ, ಸೆಂಟ್ರಲ್ ಆಫೀಸ್, ಮುಂಬೈ, ೨೦೧೩, ಪು. ೬–೭

೧೧. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ (೨೦೧೩). ವಾರ್ಷಿಕ ವರದಿ ೨೦೧೩, ಆರ್‌ಬಿಐ, ಮುಂಬೈ, ಪು.೮೨

೧೨. ಡಾ. ಚಂದ್ರ ಪೂಜಾರಿ ಎಂ., ಕರ್ನಾಟಕದಲ್ಲಿ ಭೂಮಿಯ ಒಡೆತನದ ಜಾತಿವಾರು ವಿಶ್ಲೇಷಣೆ, ಭೂ ಸಂಪತ್ತಿನ ಕೇಂದ್ರಿಕರಣ ಸೃಷ್ಟಿಸುವ ಅಂತರಗಳು, ಸಾಮಾಜಿಕ ಆರ್ಥಿಕ ಪರಿವರ್ತನೆಯಲ್ಲಿ ಭೂಮಿಯ ಮಹತ್ವ, ಹಿಂದಿನ ಭೂ ಸುಧಾರಣೆಗಳ ಅನುಷ್ಠಾನದ ವೈಪಲ್ಯಗಳು, ಮತ್ತೊಮ್ಮೆ ಭೂ ಸುಧಾರಣೆಯನ್ನು ಜಾರಿಗೊಳಿಸಬೇಕಾದ ಅನಿವಾರ್ಯತೆಗಳನ್ನು ಇವರು ವಿಶ್ಲೇಷಿಸಿದ್ದಾರೆ. *ಯಾಕೀಗ ಭೂಮಿ ಪ್ರಶ್ನೆ?* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪು.೮-೩೫ ನೋಡಿ

೧೩. ಮುಜಾಫರ್ ಅಸ್ಸಾದಿ ಬಂಡವಾಳಶಾಹಿ ಭೂಮಾಲೀಕರು ಹೇಗೆ ಶ್ರಮಿಕರು ಭೂರಹಿತ ವರ್ಗವಾಗಿ ರೂಪುಗೊಂಡರು, ಶ್ರಮಿಕರನ್ನು ಭೂಮಾಲೀಕರು ಹೇಗೆ ಶೋಷಿಸಿದರು ಎಂಬ ಐತಿಹಾಸಿಕ ಹಿನ್ನೆಲೆಯನ್ನು ವಿಶ್ಲೇಷಿಸಿದ್ದಾರೆ. *ಕರ್ನಾಟಕದಲ್ಲಿ ಐಡೆಂಟಿಟಿ ರಾಜಕೀಯ ರೈತ, ರೈತ ಹೋರಾಟ ಹಾಗೂ ಸಾಮಾಜಿಕ ಚಳುವಳಿ,* ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೦೯, ಪು. ೨೬-೨೯ ನೋಡಿ

೧೪. ಪ್ರಕಾಶ್ ಭಕ್ಷಿಯವರು ಕೃಷಿ ಕ್ಷೇತ್ರಕ್ಕೆ ಪೂರೈಕೆಯಾದ ಒಟ್ಟು ಸಾಲದಲ್ಲಿ ಸಂಘಟಿತ ಹಣಕಾಸು ವಲಯದ ಸಾರ್ವಜನಿಕ ಬ್ಯಾಂಕುಗಳ ಪಾಲಗಳ ವಿವರವನ್ನು ಇಲ್ಲಿ ನೀಡಿದ್ದಾರೆ. *ರಿಪೋರ್ಟ್ ಆಫ್ ದಿ ಎಕ್ಸ್‌ಪರ್ಟ್ ಕಮಿಟಿ ಟು ಎಕ್ಸಮೈನ್ ತ್ರಿ ಟಯರ್ ಕೋ ಅಪರೇಟಿವ್ ಕ್ರೆಡಿಟ್ ಸ್ಟ್ರಕ್ಚರ್,* ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ, ಸೆಂಟ್ರಲ್ ಆಫೀಸ್, ಮುಂಬೈ, ೨೦೧೩, ಪು. ೬-೭ ನೋಡಬಹುದು

೧೫. ಎಮ್.ಎಲ್. ದಂತವಾಲ, ಬಡರನ್ನು ಸಾಲ ಪಡೆಯಲು ಅರ್ಹರನ್ನಾಗಿಸುವ ಮತ್ತು ಸಾಲ ಬಳಸಿಕೊಳ್ಳುವ ಸಾಮರ್ಥ್ಯವನ್ನು ವೃದ್ಧಿಸಬೇಕು ಎಂದು ವಾದಿಸಿದ್ದಾರೆ. *ಡೈಲಮಾಸ್ ಆಫ್ ಗ್ರೋತ್; ಇಂಡಿಯಾಸ್ ಎಕ್ಸ್‌ಪೀರಿಯನ್ಸ್,* ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ/ಲಂಡನ್, ೧೯೯೬, ಪು.೨೯೫-೩೧೧ ನೋಡಬಹುದು

೧೬. ಅಮರ್ತ್ಯಸೇನ್ ಜನರು ಅವಕಾಶಗಳಿಂದ ವಂಚಿತರಾದರೆ ಅವರ ಅಭಿವೃದ್ಧಿ ಹೊಂದುವ ಸಾಮರ್ಥ್ಯದಿಂದಲೇ ವಂಚಿಸಲ್ಪಟ್ಟವರಾಗುತ್ತಾರೆ. ಮನುಷ್ಯನ ಸಾಮಾಜಿಕ ಆರ್ಥಿಕ ಅಭಿವೃದ್ಧಿಯಲ್ಲಿ ಅವಕಾಶಗಳು ಮುಖ್ಯವೆಂದು ಪ್ರತಿಪಾದಿಸುತ್ತಾರೆ. *ಹವ್ ಇಸ್ ಇಂಡಿಯಾ ಡುಯಿಂಗ್; ಇಲ್ಲಿ ದಿಲಿಪ್ ಕೆ. ಬಸು ಮತ್ತು ರಿಚರ್ಡ್ ಸಿಸನ್ (ಸಂ) ಸೋಸಿಯಲ್ ಅಂಡ್ ಎಕನಾಮಿಕ್ ಡೆವಲಪ್‌ಮೆಂಟ್,* ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ/ಲಂಡನ್, ೧೯೮೬, ಪು. ೩೨-೩೬ ನೋಡಿ

೧೭. ಒಳಗೊಳ್ಳುವ ಅಭಿವೃದ್ಧಿ ಎಂದರೇನು, ಇದು ಸಮಾಜದ ಯಾವ ವರ್ಗಗಳನ್ನು ಒಳಗೊಳ್ಳುತ್ತದೆ, ಯಾರನ್ನು ಹೊರಗಿಡುತ್ತದೆ ಎಂಬುದನ್ನು ಟಿ.ಆರ್ ಚಂದ್ರಶೇಖರ್ ವಿಶ್ಲೇಷಿಸಿದ್ದಾರೆ. *ಜನರನ್ನು ಒಳಗೊಳ್ಳುವ ಅಭಿವೃದ್ಧಿ–ಹೈದರಾಬಾದ್ ಕರ್ನಾಟಕ*, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೯, ಪು.೧–೨೦ ನೋಡಿ.

೧೮. ರಾಕೇಶ್ ಮೋಹನ್ ಕೃಷಿ ಸಾಲ ವ್ಯವಸ್ಥೆಯ ಇತಿಹಾಸ, ಪ್ರಸ್ತುತ ಸಮಸ್ಯೆಗಳು, ಸಂಘಟಿತ ಹಣಕಾಸು ವಲಯದ ಕಾರ್ಯವೈಖರಿ ಮತ್ತು ಕೃಷಿ ಸಾಲ ವ್ಯವಸ್ಥೆಯ ಭವಿಷ್ಯವನ್ನು ಕುರಿತು ಇಲ್ಲಿ ವಿಶ್ಲೇಷಿಸಿದ್ದಾರೆ. *ಅಗ್ರಿಕಲ್ಚರಲ್ ಕ್ರೆಡಿಟ್ ಇನ್ ಇಂಡಿಯಾ; ಸ್ಟೇಟಸ್, ಇಶ್ಯೂಸ್ ಅಂಡ್ ಫ್ಯೂಚರ್ ಅಜೆಂಡಾ*, ಆರ್‌ಬಿಐ ಬುಲೆಟಿನ್, ನವಂಬರ್, ಮುಂಬೈ, ೨೦೦೫, ಪು. ೯೯೮ ನೋಡಬಹುದು.

ಅಧ್ಯಾಯ ಐದು

# ಅಸಂಘಟಿತ ಮೂಲದ ಸಾಲಗಳು

ಗ್ರಾಮೀಣ ಭಾಗದಲ್ಲಿ ಇಂದಿಗೂ ಅಸಂಘಟಿತ ಹಣಕಾಸು ಮಾರುಕಟ್ಟೆಗಳು ಸಕ್ರೀಯವಾಗಿವೆ ಎಂಬುದನ್ನು ಇತ್ತೀಚಗೆ ಕರ್ನಾಟಕದಲ್ಲಿ ನಡೆದ ನೂರಾರು ರೈತ ಆತ್ಮಹತ್ಯೆಗಳು ಹೇಳುತ್ತಿವೆ. ಎ.ಆರ್. ವಾಸವಿರವರ ಪ್ರಾಯೋಗಿಕ ಅಧ್ಯಯನವೊಂದು ೧೯೯೯ರಲ್ಲಿ ಬೀದರ್ ಜಿಲ್ಲೆಯಲ್ಲಿ ನಡೆದ ಸರಣಿ ರೈತರ ಆತ್ಮಹತ್ಯೆಗಳ ಹಿಂದಿನ ಕಾರಣಗಳಲ್ಲಿ ಅಸಂಘಟಿತ ಮೂಲದ ಸಾಲಗಳ ಪಾತ್ರವೂ ಇದ್ದದ್ದನ್ನು ಚರ್ಚಿಸಿತ್ತು. ಹಲವು ಅಧ್ಯಯನಗಳು (ಹೆಚ್. ಎಸ್. ಶೈಲೇಂದ್ರ:೧೯೯೨) (ಜಯಶಿಲನ್ ನಟರಾಜನ್: ೨೦೧೦), (ಸಂಜಯ್ ಸಿಂಗ್ ರಾಥೋರ್: ೨೦೦೪), (ವಿ.ಕೆ.ಆರ್.ವಿ. ರಾವ್:೧೯೭೭) ಮತ್ತು (ಎಸ್.ಎನ್. ತ್ರಿಪತಿ: ೨೦೦೮), ಮತ್ತು ಸರ್ಕಾರ ವರದಿಗಳ (ಆರ್‌ಬಿಐ: ೨೦೧೧, ೨೦೧೨ ಮತ್ತು ೨೦೧೩) ಪ್ರಕಾರ ಗ್ರಾಮೀಣ ಸಾಲ ಪೂರೈಕೆ ವ್ಯವಸ್ಥೆ ವಿಸ್ತರಣೆಗೊಂಡಿತು. ಸಾಲ ಸಂಸ್ಥೆಗಳ ಶಾಖೆಗಳು ವಿಸ್ತರಣೆಗೊಂಡವು. ಸರ್ಕಾರ ಗ್ರಾಮೀಣ ಪ್ರದೇಶಗಳನ್ನು ಸುಧಾರಿಸಲು ಸಾಕಷ್ಟು ಪ್ರಮಾಣದಲ್ಲಿ ಕೃಷಿ ಕ್ಷೇತ್ರಕ್ಕೆ ರಿಯಾಯಿತಿ ಬಡ್ಡಿದರದಲ್ಲಿ ಹಣಕಾಸು ಪೂರೈಸಿತು. ಸಾಲ ಪೂರೈಕೆ ಪ್ರಮಾಣ ಹೆಚ್ಚಾಯಿತು. ಗ್ರಾಮೀಣ ಅಭಿವೃದ್ಧಿಯಲ್ಲಿ ಸಂಘಟಿತ ಸಾಲ ಸಂಸ್ಥೆಗಳು ಪ್ರಮುಖ ಪಾತ್ರವಹಿಸುತ್ತವೆ ಆದರೆ ಗ್ರಾಮೀಣ ಪ್ರದೇಶದ ಸಾಕಷ್ಟು ಕುಟುಂಬಗಳು ಇಂದಿಗೂ ಸಂಘಟಿತ ವ್ಯವಸ್ಥೆಯ ಸಾಲ ಸೌಲಭ್ಯಗಳಿಂದ ಹೊರಗುಳಿದಿವೆ. ಸಾರ್ವಜನಿಕ ಬ್ಯಾಂಕುಗಳ ಮೂಲಕ ಕೃಷಿ ಕ್ಷೇತ್ರಕ್ಕೆ ಅಪಾರ ಪ್ರಮಾಣದ ಸಾಲ ನೀಡಿದೆ ಎನ್ನಲಾಗಿದೆ. ೧೯೯೧ರವರೆಗೆ ೧೬೫.೨ ಬಿಲಿಯನ್ ಸಾಲವನ್ನು ಪೂರೈಸಲಾಗಿದೆ. ಈ ಸಾರ್ವಜನಿಕ ಬ್ಯಾಂಕುಗಳು ೨೦೦೪ ಸೆಪ್ಟೆಂಬರ್ ೩೦ರ ವರೆಗೂ ೪೩.೦೫ ದಶಲಕ್ಷ ಕಿಸಾನ್ ಸಾಲಪತ್ರಗಳನ್ನು ವಿತರಿಸಿದ್ದು ಇದರ

ಒಟ್ಟು ಸಾಲ ಪ್ರಮಾಣ ೨.೦ ಲಕ್ಷ ಕೋಟಿಗಳು ಎನ್ನಲಾಗಿದೆ. ೨೦೧೧-೧೨ರಲ್ಲಿ ೪.೭೫೦ ಬಿಲಿಯನ್‌ನಷ್ಟು ಸಾಲ ಪೂರೈಸುವುದಾಗಿ ಕೇಂದ್ರ ಸರ್ಕಾರ ಬಜೆಟ್‌ನಲ್ಲಿ ಘೋಷಿಸಿತು. ೫೧೧೦ ಬಿಲಿಯನ್‌ನಷ್ಟು ಸಾಲ ವಿತರಿಸಿ ಸಾಧನೆ ಮಾಡಲಾಗಿದೆ. ಕೃಷಿಗೆ ಪೂರೈಕೆಯಾಗುವ ಈ ಸಾಲವನ್ನು ಸಾರ್ವಜನಿಕ ಬ್ಯಾಂಕುಗಳ ಮೂಲಕ ವಿತರಿಸಲಾಗಿದೆ. ಸಾರ್ವಜನಿಕ ಬ್ಯಾಂಕುಗಳಲ್ಲಿ ಸಹಕಾರ ಸಂಘಗಳು, ವಾಣಿಜ್ಯ ಬ್ಯಾಂಕುಗಳು ಮತ್ತು ಗ್ರಾಮೀಣ ಬ್ಯಾಂಕುಗಳು ಮುಖ್ಯವಾದವು. ಅದೇ ರೀತಿ ೨೦೧೨-೧೩ಕ್ಕೆ ೫೭೫೦ ಬಿಲಿಯನ್ ಕೋಟಿ ಸಾಲ ನೀಡುವ ಗುರಿ ಇಟ್ಟುಕೊಳ್ಳಲಾಗಿದೆ.[೧] ೨೦೧೩-೧೪ಕ್ಕೆ ೭ಲಕ್ಷ ಕೋಟಿ ಗುರಿ ಇಟ್ಟು ಕೊಳ್ಳಲಾಗಿದೆ.[೨] ೨೦೧೪-೧೫ಕ್ಕೆ ೮ಲಕ್ಷ ಕೋಟಿ ಗುರಿ ಇಟ್ಟು ಕೊಳ್ಳಲಾಗಿದೆ ಹೀಗೆ ಸರ್ಕಾರ ಬೃಹತ್ ಪ್ರಮಾಣದ ಸಾಲವನ್ನು ಕೃಷಿ ಕ್ಷೇತ್ರಕ್ಕೆ ಪೂರೈಸುತ್ತಿದೆ. ಹೀಗಾಗಿ ಅಸಂಘಟಿತ ಅಂದರೆ ಖಾಸಗೀ ಲೇವಾದೇವಿದಾರರ, ಭೂಮಾಲೀಕರ ಹಾಗೂ ವ್ಯಾಪಾರಸ್ಥರು ನೀಡುವ ಸಾಲ ಪ್ರಮಾಣವು ಗಣನೀಯವಾಗಿ ಕಡಿಮೆಯಾಗಿದೆ ಎನ್ನಲಾಗಿದೆ ಆದರೆ ಸಂಘಟಿತ ಮೂಲದಿಂದ ಪೂರೈಕೆಯಾದ ಈ ಸಾಲಗಳನ್ನು ಮತ್ತು ಅವುಗಳ ಪ್ರಯೋಜನವನ್ನು ಸಮಾಜದ ಯಾವ ವರ್ಗಗಳು ಪಡೆದವು? ಇದರಿಂದ ಗ್ರಾಮೀಣ ಬಡತನ ನಿವಾರಣೆಯಾಯಿತೆ? ಎಂಬುದೇ ಪ್ರಶ್ನೆ?

ಪ್ರಸ್ತುತ ಅಧ್ಯಯನದ ಪ್ರಕಾರ ಇಂದಿಗೂ ಅಸಂಘಟಿತ ಮಾರುಕಟ್ಟೆ ಗ್ರಾಮೀಣ ಸಾಲ ಪೂರೈಕೆಯಲ್ಲಿ ಪ್ರಭಾವಿಯಾಗಿದ್ದು ಹೆಚ್ಚಿನ ಪ್ರಮಾಣದಲ್ಲಿ ಸಾಲ ಪೂರೈಸುತ್ತಿದೆ. ಅಧ್ಯಯನ ಗ್ರಾಮಗಳಲ್ಲಿ ರೈತರಿಗೆ ಸ್ಥಳೀಯ ವ್ಯಾಪಾರಸ್ಥರು ಬಿತ್ತನೆ ಬೀಜ, ರಸ ಗೊಬ್ಬರ, ಔಷಧಿಗಳನ್ನು ಪೂರೈಸುತ್ತಿದ್ದು ಖಾಸಗೀ ಲೇವಾದೇವಿ ವ್ಯವಹಾರದಲ್ಲಿ ಸಕ್ರೀಯವಾಗಿದ್ದಾರೆ. ಇವರೆಲ್ಲರು ಸಿಂಧನೂರು, ಪೋತ್ನಾಳ್, ದೇವದುರ್ಗ, ಶಿರವಾರ ಮತ್ತು ರಾಯಚೂರು ಜಿಲ್ಲಾ ಕೇಂದ್ರಗಳು ಹೀಗೆ ತಾಲ್ಲೂಕು, ವಾಣಿಜ್ಯ ಕೇಂದ್ರಗಳು ಮತ್ತು ಜಿಲ್ಲಾ ಕೇಂದ್ರಗಳಲ್ಲಿ ನೆಲೆಸಿದ್ದಾರೆ. ಈ ಅಧ್ಯಾಯದಲ್ಲಿ ಅತೀಸಣ್ಣ, ಸಣ್ಣ, ಮತ್ತು ಕೃಷಿ ಕಾರ್ಮಿಕರ-ಭೂರಹಿತ ಕಾರ್ಮಿಕರು, ವರ್ಗಗಳು ಸಂಘಟಿತ ಸಾಲ ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗದೆ ಇರುವುದಕ್ಕೆ ಕಾರಣಗಳು, ಭೂರಹಿತ ದಡಿಮೆಗಾರರು ಭೂಮಿ ಅಥವಾ ಸಂಪನ್ಮೂಲರಹಿತ ವರ್ಗವಾಗಿ ಪರಿವರ್ತನೆಗೊಂಡಿದ್ದರ ಹಿನ್ನೆಲೆಯನ್ನು ಚರ್ಚಿಸಲಾಗಿದೆ.

ಜವಾಬ್ದಾರಿಯುತ ಸಾಲ ವ್ಯವಸ್ಥೆಯಲ್ಲಿ ಸಾಲದ ಲಭ್ಯತೆ ಒಂದು ಪ್ರಮುಖ ಅಂಶ. ಬಡತನ ನಿರ್ಮೂಲನೆಯಲ್ಲಿ ಸಾಲದ ಪೂರೈಕೆ ಬೇಡಿಕೆ ಪ್ರಮುಖವಾದವು. ಸಂಘಟಿತ ಹಣಕಾಸು ವ್ಯವಸ್ಥೆಯಡಿ ಸಮಾಜದ ಎಲ್ಲಾ ವರ್ಗಗಳಿಗೂ ಸಾಲ ಲಭಿಸುವಂತಾಗಬೇಕು. ಸಿಂಧನೂರು ಮತ್ತು ದೇವದುರ್ಗ ಎರಡೂ ತಾಲ್ಲೂಕುಗಳಿಂದ ಶೇಕಡಾ ೧೫ರಷ್ಟು ಪರಿಶಿಷ್ಟ ಜಾತಿ ಜನಾಂಗದವರು ಮಾತ್ರ ಸಂಘಟಿತ ಮೂಲದಿಂದ ಸಾಲ ಪಡೆದಿದ್ದಾರೆ. ಅದರಲ್ಲೂ ಇವರೆಲ್ಲಾ ಸಹಕಾರ ಸಂಘಗಳಿಂದ ಮಾತ್ರ ಸಾಲ ಪಡೆದಿದ್ದಾರೆ. ವಾಣಿಜ್ಯ ಬ್ಯಾಂಕುಗಳಿಂದ ಯಾವೊಬ್ಬ ಪರಿಶಿಷ್ಟ ಜಾತಿ ಜನಾಂಗದ ರೈತ ಸಾಲ ಸೌಲಭ್ಯ ಪಡೆದಿಲ್ಲ. ವಾಣಿಜ್ಯ ಬ್ಯಾಂಕುಗಳ ಕಠಿಣ ಸಾಲ ನೀತಿ, ಅಧಿಕಾರಿಗಳ

ಮನೋಭಾವದಿಂದ ಈ ವರ್ಗದ ರೈತರು ಪ್ರಮುಖ ಸಾರ್ವಜನಿಕ ಬ್ಯಾಂಕಾದ ವಾಣಿಜ್ಯ ಬ್ಯಾಂಕುಗಳಿಂದ ಸಾಲ ಪಡೆಯಲು ಸಾಧ್ಯವಾಗಿಲ್ಲ. ಸಂದರ್ಶಿಸಲ್ಪಟ್ಟ ಪರಿಶಿಷ್ಟ ಜಾತಿ ಜನಾಂಗದಲ್ಲಿ ಬಹುತೇಕರು ಅತೀಸಣ್ಣ ರೈತರ ಗುಂಪಿಗೆ ಸೇರಿದ್ದು ಕೃಷಿ ಚಟುವಟಿಕೆಗಳಿಂದ ಉತ್ತಮ ಆದಾಯ ಪಡೆಯುತ್ತಿಲ್ಲ. ಕೃಷಿ ದುಭಾರಿ ಕಸುಬಾಗಿದೆ. ಕೃಷಿ ಉತ್ಪಾದನಾ ವೆಚ್ಚಗಳು ಹೆಚ್ಚಾಗಿವೆ. ಸಹಕಾರ ಸಂಸ್ಥೆಗಳಿಂದ ದೊರಯುವ ಸಾಲಗಳು ಕೃಷಿ ಚಟುವಟಿಕೆಗಳು ನಡೆಯುವ ಸಮಯದಲ್ಲಿ ಸಿಗುವುದಿಲ್ಲ ಹಾಗೂ ಕಡಿಮೆ ಪ್ರಮಾಣದಲ್ಲಿರುವುದರಿಂದ ಪರಿಶಿಷ್ಟರು ಕೃಷಿ ಚಟುವಟಿಕೆಗಳಿಗೆ ಖಾಸಗೀ ಮೂಲಗಳಿಂದ ಸಾಲ ಪಡೆಯುತ್ತಾರೆ. ಸಂದರ್ಶನದಲ್ಲಿ ತಿಳಿದುಬಂದಂತೆ ಈ ವರ್ಗದ ಶೇಕಡಾ ೯೯ರಷ್ಟು ರೈತರಿಗೆ ಸಾಲ ಸೌಲಭ್ಯದ ಅವಶ್ಯಕತೆ ಇದೆ. ಸಾಲಕ್ಕೆ ಬೇಡಿಕೆ ಇದೆ. ಆದರೆ ಸಾಲ ಪೂರೈಕೆ ಮಾತ್ರ ಕಡಿಮೆ. ಸಂಘಟಿತ ಮೂಲದ ಸಾಲ ಪೂರೈಕೆ ವ್ಯವಸ್ಥೆಯಿಂದ ಈ ವರ್ಗಗಳಿಗೆ ದೊರೆಯುವ ಸಾಲ ಅತ್ಯಂತ ಕಡಿಮೆ. ವಾಣಿಜ್ಯ ಬ್ಯಾಂಕುಗಳು ಈ ವರ್ಗಗಳ ಸಾಲ ಅಗತ್ಯಗಳನ್ನು ನಿರ್ಲಕ್ಷಿಸುತ್ತವೆ. ಆದರೆ ಪ್ರಸ್ತುತ ಸಂಘಟಿತ ಹಣಕಾಸು ಪೂರೈಕೆ ವ್ಯವಸ್ಥೆಯಲ್ಲಿ ಅತೀ ಹೆಚ್ಚು ಸಾಲ ಪೂರೈಕೆ ಮಾಡುವ ಸಂಸ್ಥೆಗಳೇ ವಾಣಿಜ್ಯ ಬ್ಯಾಂಕುಗಳು ಮಾತ್ರ.

ಸಹಕಾರ ಸಂಘಗಳು ಪೂರೈಸುವ ಸಾಲ ಆದಾಯ ವೃದ್ಧಿಸುವ ಅಥವಾ ಕೃಷಿ ಉತ್ಪಾದನೆಗೆ ಪೂರಕವಾಗುವಂತೆ ದೊರೆಯುವುದಿಲ್ಲ. ಈ ಸಂಸ್ಥೆಗಳಿಂದ ದೊರೆಯುವ ಸಾಲದ ಪ್ರಮಾಣ ಕಡಿಮೆ ಹಾಗೂ ಉತ್ಪಾದನಾ ಚಟುವಟಿಕೆಗಳು ನಡೆಯುವ ಅವಧಿಯಲ್ಲಿ ದೊರೆಯುವುದಿಲ್ಲ. ಹೀಗಾಗಿ ಈ ಸಂಸ್ಥೆಗಳಲ್ಲಿ ದೊರೆಯುವ ಸಾಲವನ್ನು ಪರಿಶಿಷ್ಟ ಜಾತಿ ಪಂಗಡ ಮತ್ತು ಹಿಂದುಳಿದ ವರ್ಗಗಳು ತಮ್ಮ ಅಭಿವೃದ್ಧಿಗೆ ಬಳಸಿಕೊಳ್ಳುವ ಅವಕಾಶವಿಲ್ಲ. ಈ ಸಂಸ್ಥೆಗಳಿಂದ ಪಡೆದ ಸಾಲವನ್ನು ತಮ್ಮ ಕೌಟುಂಬಿಕ ಮತ್ತು ಸಾಮಾಜಿಕ ಚಟುವಟಿಕೆಗಳಿಗೆ ಬಳಸಿಕೊಳ್ಳುವಂತಾಗಿದೆ. ಈ ವರ್ಗಗಳು ಸಂಘಟಿತ ಸಾಲ ಮೂಲದಿಂದ ಪಡೆದ ಸಾಲವನ್ನು ಆದಾಯ ಹೆಚ್ಚಿಸುವ ಚಟುವಟಿಕೆಗಳಿಗೆ ಬಳಸಿಕೊಂಡು, ತಮ್ಮ ಆದಾಯವನ್ನು ಹೆಚ್ಚಿಸಿಕೊಂಡು ಸಾಮಾಜಿಕ ಆರ್ಥಿಕ ಪರಿಸ್ಥಿತಿಯನ್ನು ಆ ಮೂಲಕ ಜೀವನ ಮಟ್ಟವನ್ನು ಸುಧಾರಿಸಿಕೊಳ್ಳುವ ಅವಕಾಶಗಳೇ ಇಲ್ಲದಂತಾಗಿದೆ. ಹೀಗೆ ದುರ್ಬಲ ವರ್ಗಗಳು ವಾಣಿಜ್ಯ ಬ್ಯಾಂಕುಗಳಿಂದ ಸಾಲ ಸೌಲಭ್ಯ ಪಡೆಯಲು ಸಾಧ್ಯವಿಲ್ಲ. ಸಹಕಾರ ಸಂಘಗಳಿಂದ ಪಡೆದ ಸಾಲದಿಂದ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವಂತಿಲ್ಲ. ಆದರೆ ಸಾಲದ ಅಗತ್ಯವಿದೆ. ಇದರಿಂದ ಈ ವರ್ಗಗಳು ತಮ್ಮ ಉತ್ಪಾದನಾ ಅವಶ್ಯಕತೆಗೆ ಅಗತ್ಯದ ಸಾಲವನ್ನು ಅಸಂಘಟಿತ ಮೂಲದಿಂದ ಪಡೆಯುವಂತಾಗಿದೆ. ಅತೀಸಣ್ಣ, ಸಣ್ಣ ಮತ್ತು ದೊಡ್ಡ ರೈತರು, ಲಿಂಗಾಯತ, ಪರಿಶಿಷ್ಟರು ಮತ್ತು ಹಿಂದುಳಿದ ವರ್ಗಗಳು ಎಲ್ಲರಿಗೂ ಸಾಲದ ಅಗತ್ಯವಿದ್ದು ಸಾಲದ ಬೇಡಿಕೆಗಳು ಅಧಿಕವಾಗಿರುವುದರಿಂದ ಬೇಡಿಕೆಗೆ ಅನುಗುಣವಾಗಿ ಸಂಘಟಿತ ಮೂಲದಿಂದ ಸಾಲಗಳನ್ನು ಪಡೆಯಲು ಸಾಧ್ಯವಿಲ್ಲ. ಹೀಗಾಗಿ ಈ ಎಲ್ಲಾ ವರ್ಗಗಳು ತಮ್ಮ ಹೆಚ್ಚುವರಿ ಸಾಲಕ್ಕಾಗಿ ಅಸಂಘಟಿತ ಮೂಲವನ್ನು ಇಂದಿಗೂ ಅವಲಂಭಿಸಿದ್ದಾರೆ. ಆದರೂ ಸರ್ಕಾರದ ವರದಿಗಳ ಪ್ರಕಾರ ಗ್ರಾಮೀಣ ಭಾಗಗಳಲ್ಲಿ ಸಂಘಟಿತ ವ್ಯವಸ್ಥೆಯ ಸಾಲ ನೀಡಿಕೆ ಪ್ರಮಾಣದಲ್ಲಿ

೧೯೫೦-೫೭ರ ಅವಧಿಗೂ ಪ್ರಸ್ತುತ ಅವಧಿಗೂ ಅಗಾಧ ಸುದಾರಣೆಯಾಗಿದೆ. ಗ್ರಾಮೀಣ ಸಾಗುವಳಿ ಕುಟುಂಬಗಳು ವಿವಿಧ ಮೂಲಗಳಿಂದ ಪಡೆಯುವ ಸಾಲದ ಪಾಲಿನಲ್ಲಿ ಅಸಂಘಟಿತ ಮಾರುಕಟ್ಟೆಯ ಪಾಲು ೧೯೫೦-೫೧ರಲ್ಲಿ ೯೨.೭ರಷ್ಟಿತ್ತು. ಇದು ೧೯೯೧ರ ಹೊತ್ತಿಗೆ ಶೇಕಡಾ ೩೦ಕ್ಕೆ ಇಳಿಯಿತು. ಸಂಘಟಿತ ಸಾಲದ ಪಾಲು ೧೯೫೧ರಲ್ಲಿ ಶೇಕಡಾ ಕೇವಲ ೭.೩ರಷ್ಟಿದ್ದದ್ದು ೧೯೯೧ರ ಹೊತ್ತಿಗೆ ಶೇಕಡಾ ೬೬.೩ಕ್ಕೆ ಹೆಚ್ಚಿತು ಎನ್ನಲಾಗಿದೆ.[೩] ಆದರೆ ಮೇಲೆ ಚರ್ಚಿಸಿದಂತೆ ಸಮಾಜದ ದರ್ಬಲ ಪ್ರಬಲ ಎಲ್ಲಾ ವರ್ಗಗಳು ಅಸಂಘಟಿತ ಸಾಲ ವ್ಯವಸ್ಥೆಯಿಂದ ಸಾಲ ಪಡೆಯುವಂತಹ ಪರಿಸ್ಥಿತಿ ಇದೆ. ಆದರೆ ಈ ಮೂಲದ ಸಮಸ್ಯೆಗಳು ಮತ್ತು ಋಣಾತ್ಮಕ ಪರಿಣಾಮಗಳ ಸುಳಿಗೆ ಪ್ರಬಲ ವರ್ಗಗಳು ಸಿಲುಕುವುದಿಲ್ಲ. ಆದರೆ ದುರ್ಬಲ ವರ್ಗಗಳು ಈ ಮೂಲದ ಸಾಲ ಸುಳಿಗೆ ಸಿಲುಕುತ್ತವೆ. ಈ ಕುಟುಂಬಗಳು ಸಾಲ ತೀರಿಸಲಾಗದೆ ಭೂಮಿಯನ್ನು ಕಳೆದುಕೊಂಡು ದುಸ್ಥಿತಿಗೆ ಸಿಲುಕುವಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ಸಂಘಟಿತ ಸಾಲ ವ್ಯವಸ್ಥೆಯಿಂದ ಲಭ್ಯವಿರುವ ಸಾಲವನ್ನು ಬಳಸಿಕೊಳ್ಳಲು ಅನುಕೂಲವಾಗುವಂತೆ ಬಡವರ, ದುರ್ಬಲ ವರ್ಗಗಳ ಆದಾಯ ಗಳಿಸುವ ಸಾಮರ್ಥ್ಯವನ್ನು ಬಲಪಡಿಸುವಂತಾಗಬೇಕು, ಅವರ ಕೌಶಲ್ಯವನ್ನು ಹೆಚ್ಚಿಸುವಂತಾಗಬೇಕು, ಆಸ್ತಿ-ಸ್ವತ್ತುಗಳನ್ನು ಗಳಿಸಿಕೊಳ್ಳುವಂತೆ ಅವರನ್ನು ಬಲಪಡಿಸಬೇಕು. ಈ ನಿಟ್ಟಿನಲ್ಲಿ ಸಮಾಜದ ಮೂಲಭೂತ ಆರ್ಥಿಕ ವ್ಯವಸ್ಥೆಯನ್ನು ಸುಧಾರಿಸಬೇಕು. ಸಮಾಜದ ಮೂಲ ಬದಲಾವಣೆಗೆ ಬೇಕಾದ ಗಂಭೀರ ದೃಡಪ್ರಯತ್ನವನ್ನು ಸರ್ಕಾರ ಮಾಡಬೇಕಾಗಿದೆ.

ಈ ಅಧ್ಯಯನದ ವಿಶ್ಲೇಷಣೆ ಪ್ರಕಾರ ರೈತರು ಸಂಘಟಿತ ಸಾಲ ವ್ಯವಸ್ಥೆಯಿಂದ ಪಡೆದಿರುವ ಒಟ್ಟಾರೆ ಸಾಲ ಪ್ರಮಾಣಕ್ಕಿಂತ ಅಸಂಘಟಿತ ಮಾರುಕಟ್ಟೆಯಿಂದ ಪಡೆದಿರುವ ಸಾಲ ಪ್ರಮಾಣವು ಹೆಚ್ಚಾಗಿದೆ. ಸಿಂಧನೂರು ಮತ್ತು ದೇವದುರ್ಗ ಎರಡೂ ತಾಲ್ಲೂಕಿನಿಂದ ಶೇಕಡಾ ೩೩ರಷ್ಟು ರೈತರು ಖಾಸಗೀ ಅಸಂಘಟಿತ ಸಾಲ ಮಾರುಕಟ್ಟೆಯಿಂದ ಸಾಲ ಪಡೆದಿದ್ದಾರೆ. ಇದರಲ್ಲಿ ಶೇಕಡಾ ೪೯ರಷ್ಟು ಸಿಂಧನೂರು ತಾಲ್ಲೂಕಿನ ರೈತರು ಅಸಂಘಟಿತ ಮಾರುಕಟ್ಟೆಯಿಂದ ಸಾಲ ಪಡೆದಿದ್ದಾರೆ. ಶೇಕಡಾ ೫೧ರಷ್ಟು ರೈತರು ದೇವದುರ್ಗ ತಾಲ್ಲೂಕಿನಲ್ಲಿ ಅಸಂಘಟಿತ ಸಾಲ ಮಾರುಕಟ್ಟೆಯಿಂದ ಸಾಲ ಪಡೆದಿದ್ದಾರೆ. ಸಿಂಧನೂರು ತಾಲ್ಲೂಕಿನ ರಾಗಲಪರ್ವಿ ಮತ್ತು ಯಾಪಲಪರ್ವಿ ಗ್ರಾಮಗಳ ಕುಟುಂಬಗಳು ಹತ್ತಿರದ ಉದ್ಬಾಳ್ ಪಟ್ಟಣ, ಸಿಂಧನೂರು ತಾಲ್ಲೂಕು ಕೇಂದ್ರ ಮತ್ತು ರಾಯಚೂರು ಜಿಲ್ಲಾ ವ್ಯಾಪಾರ ವಾಣಿಜ್ಯ ಕೇಂದ್ರಗಳಲ್ಲಿ ನೆಲೆಸಿರುವ ವ್ಯಾಪಾರಸ್ಥರಿಂದ ಸಾಲ ಪಡೆದುಕೊಳ್ಳುತ್ತಾರೆ. ದೇವದುರ್ಗ ತಾಲ್ಲೂಕಿನಲ್ಲಿ ಹೇರುಂಡಿ ಮತ್ತು ಜಾಲಹಳ್ಳಿ ಗ್ರಾಮಗಳ ಭೂ ಮಾಲಿಕರು ಹಾಗೂ ವ್ಯಾಪಾರಸ್ಥರಿಂದ ಸಾಲ ಪಡೆದುಕೊಳ್ಳುತ್ತಾರೆ. ಈ ವ್ಯಾಪಾರಸ್ಥರು ಇನ್ಪುಟ್ ಸಪ್ಲೆಯರ್ಸ್ ಎಂದೇ ಕರೆಯಲ್ಪಡುತ್ತಾರೆ.

ಸಂಘಟಿತ ಸಾಲ ವ್ಯವಸ್ಥೆಯ ಸುಧಾರಣೆಗೆ ಸರ್ಕಾರ ಮತ್ತು ಆರ್‌ಬಿಐ ನಿರಂತರ ಪ್ರಯತ್ನ ಮಾಡಿವೆ. ತನ್ನ ಸಾಲನೀತಿ ಮತ್ತು ಕಾರ್ಯಕ್ರಮಗಳ ಮೂಲಕ ಸಂಘಟಿತ ಹಣಕಾಸು ವಲಯವನ್ನು

ಬಲಪಡಿಸುವ ಪ್ರಯತ್ನ ಮಾಡಿವೆ. ಈ ವಲಯದ ಸಾಂಸ್ಥಿಕ ಬೆಳವಣಿಗೆಗೆ ಬೇಕಾದ ಪೂರಕ ಕಾನೂನುಗಳನ್ನು ಜಾರಿಗೆ ತಂದಿದೆ. ಹಲವು ತಜ್ಞರ ಸಮಿತಿಗಳನ್ನು ರಚಿಸಿ ಅವರ ಶಿಪಾರಸ್ಸುಗಳನ್ನು ಅನುಷ್ಠಾನಗೊಳಿಸಿವೆ. ಈ ನಿಟ್ಟಿನಲ್ಲಿ ಸಾಲ ವಿತರಿಸಲು ಮತ್ತು ಸಾಲ ನೀತಿಗಳನ್ನು ರೂಪಿಸಲು ವಿವಿಧ ಸ್ತರಗಳಲ್ಲಿ ಅನೇಕ ಸಂಸ್ಥೆಗಳನ್ನು ಸ್ಥಾಪಿಸಲಾಗಿದೆ. ಸ್ವಾತಂತ್ರದ ನಂತರ ಭಾರತದ ಗ್ರಾಮೀಣ ಸಾಲ ವ್ಯವಸ್ಥೆಗೆ ಸಂಬಂಧಿಸಿದ ಹಲವು ಸಮಿತಿಗಳ ವರದಿಗಳು ಗ್ರಾಮೀಣ ಸಾಲ ಪೂರೈಕೆ ವಲಯವನ್ನು ಸುಧಾರಿಸುವ ಅಥವಾ ಅದಕ್ಕೆ ಹೊಸ ರೂಪ ಕೊಡುವ ಪ್ರಯತ್ನದಲ್ಲಿ ಇಡೀ ವ್ಯವಸ್ಥೆಯನ್ನು ಸಂಕೀರ್ಣಗೊಳಿಸಿವೆ ಎನ್ನಬಹುದು. ಸ್ವಾತಂತ್ರ್ಯ ನಂತರದ ಗ್ರಾಮೀಣ ಹಣಕಾಸಿನ ವಿಶ್ಲೇಷಣೆ ೧೯೫೪ರಲ್ಲಿ ಆರ್‌ಬಿಐ ರಚಿಸಿದ ಅಖಿಲ ಭಾರತ ಗ್ರಾಮೀಣ ಸಾಲ ಸಮೀಕ್ಷೆಯಿಂದ ಪ್ರಾರಂಭವಾಯಿತು. ಈ ಸಮೀಕ್ಷೆಯ ಪ್ರಕಾರ ಸಾಗುವಳಿದಾರರು ಪಡೆದ ಒಟ್ಟು ಸಾಲದಲ್ಲಿ ಶೇಕಡಾ ೯೩ರಷ್ಟನ್ನು ಖಾಸಗೀ ಹಣಕಾಸು ಸಂಸ್ಥೆಗಳು ಪೂರೈಸಿದವು. ಇದರಲ್ಲಿ ಸಣ್ಣ ಸಾಗುವಳಿದಾರರು ಅಸಂಘಟಿತ ಹಣಕಾಸು ಮಾರುಕಟ್ಟೆಯಿಂದ ಸಾಲ ಪಡೆದುಕೊಳ್ಳುತ್ತಿದ್ದರು. ದೊಡ್ಡ ಸಾಗುವಳಿದಾರರು ಸಂಘಟಿತ ಸಾಲ ಮೂಲದಿಂದ ಸಾಲ ಸೌಲಭ್ಯ ಪಡೆದುಕೊಳ್ಳುತ್ತಿದ್ದರು. ಆದರೆ ದಶಕಗಳ ನಂತರವೂ ಗ್ರಾಮೀಣ ಸಾಲ ಪೂರೈಕೆ ವ್ಯವಸ್ಥೆಯಲ್ಲಿ ಅಸಂಘಟಿತ ಹಣಕಾಸು ಮೂಲವು ಪ್ರಬಲವಾಗಿ ಉಳಿದಿದೆ. ಇಂದಿಗೂ ದೊಡ್ಡಸಾಗುವಳಿದಾರರು ಆರ್ಥಿಕ ಸಮಾಜಿಕವಾಗಿ ಪ್ರಬಲ ರಾಗಿರಿರುವ ವರ್ಗಗಳೇ ಸಂಘಟಿತ ಮೂಲದಿಂದ ಸಾಲ ಪಡೆಯುತ್ತಿದ್ದಾರೆ. ಸಣ್ಣ, ಅತೀಸಣ್ಣ ಹಿಡುವಳಿದಾರರಲ್ಲಿ ಬಹುತೇಕರು ಸಂಘಟಿತ ಹಣಕಾಸು ಮೂಲದಿಂದ ಹೊರಗುಳಿದಿದ್ದಾರೆ. ತಮ್ಮ ಸಣ್ಣ ಮೊತ್ತದ ಸಾಲಕ್ಕಾಗಿ ಲೇವಾದೇವಿಗಳನ್ನು ಅವಲಂಬಿಸಿದ್ದಾರೆ. ಜಾಗತೀಕರಣದ ಸಂದರ್ಭದಲ್ಲಿ ಜನರ ಅವಶ್ಯಕತೆಗಳನ್ನು ಮಾರುಕಟ್ಟೆಯೇ ಪೂರೈಸುತ್ತದೆ ಎನ್ನಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ನೋಡುವುದಾದರೆ ದುರ್ಬಲ ವರ್ಗಗಳು ಆರ್ಥಿಕವಾಗಿ ಅಶಕ್ತರಾದವರು ತಮ್ಮ ಸಾಲದ ಅವಶ್ಯಕತೆಗಳನ್ನು ಮುಕ್ತ ಮಾರುಕಟ್ಟೆಯಿಂದಲೇ ಪಡೆಯುವಂತಾಗಿದೆ. ಜಾಗತೀಕರಣದಂತಹ ಆರ್ಥಿಕ ಉದಾರೀಕರಣ ಮತ್ತು ಆರ್ಥಿಕ ಸುಧಾರಣೆಯಿಂದ ಬಲಾಢ್ಯರು ಮಾತ್ರ ಲಾಭ ಪಡೆಯುತ್ತಿದ್ದಾರೆ. ಇಂತಹ ಅವಕಾಶಗಳನ್ನು ಬಳಸಿಕೊಂಡ ಪ್ರಬಲರು ಶ್ರೀಮಂತರಾಗುತ್ತಿದ್ದಾರೆ. ಬಡವರು, ಕೃಷಿ ಕಾರ್ಮಿಕರು, ಭೂರಹಿತರು, ಸಣ್ಣಸಾಗುವಳಿದಾರರು ಅಸಂಘಟಿತ ಮೂಲವನ್ನೇ ತಮ್ಮ ಸಾಲಗಳಿಗೆ ಅವಲಂಭಿಸುವಂತಾಗಿ ದುಬಾರಿ ಬಡ್ಡಿಗಳನ್ನು ಪಾವತಿಸುತ್ತಿದ್ದಾರೆ. ಪಡೆದ ಸಾಲವನ್ನು ತೀರಿಸಲಾಗದೇ ಸಾಲ ಬಾದೆಯಲ್ಲಿ ಸಿಲುಕಿ ಆತ್ಮಹತ್ಯೆ ದಾರಿ ಹಿಡಿಯತೊಡಗಿದ್ದಾರೆ.

ಗ್ರಾಮೀಣ ಹಣಕಾಸು ವಲಯದಲ್ಲಿ ಸಂಘಟಿತ ಸಾಲ ಮೂಲವನ್ನು ಸುಧಾರಿಸುವ ನಿಟ್ಟಿನಲ್ಲಿ ಸ್ವಾತಂತ್ರ್ಯ ನಂತರ ಸರ್ಕಾರ ಕೈಗೊಂಡ ಹಲವು ಕ್ರಮಗಳೆಂದರೆ, ೧೯೫೪ರ ಅಖಿಲ ಭಾರತ ಸಾಲ ಸಮೀಕ್ಷೆ, ೧೯೫೫ ಸ್ಟೇಟ್ ಬ್ಯಾಂಕ್ ಸ್ಥಾಪನೆ, ೧೯೬೬ ಗ್ರಾಮೀಣ ಸಾಲ ಪರಿಶೀಲನಾ ಸಮಿತಿ, ೧೯೬೬ ಸಣ್ಣ ರೈತರ ಅಭಿವೃದ್ಧಿ ಸಂಸ್ಥೆ, ೧೯೬೯ ವಾಣಿಜ್ಯ ಬ್ಯಾಂಕುಗಳ (೧೪) ರಾಷ್ಟ್ರೀಕರಣ ೧೯೭೧ ರಾಷ್ಟ್ರೀಯ ಕೃಷಿ ಆಯೋಗದ ಸ್ಥಾಪನೆ, ೧೯೭೫ ಪ್ರಾದೇಶಿಕ ಗ್ರಾಮೀಣ

ಬ್ಯಾಂಕುಗಳ ಸ್ಥಾಪನೆ- ವರ್ಕಿಂಗ್ ಗ್ರೂಪ್ ಆಫ್ ರೂರಲ್ ಬ್ಯಾಂಕು, ೧೯೭೯ ಕೃಷಿ ಸಾಂಸ್ಥಿಕ ಸಾಲ ಮತ್ತು ಗ್ರಾಮೀಣಾಭಿವೃದ್ಧಿಗೆ ಸಂಬಂಧಿಸಿದ ಆರ್‌ಬಿಐ ನ ಸಮಿತಿ, ೧೯೮೨ ನಬಾರ್ಡ್ ಸ್ಥಾಪನೆ, ೧೯೮೬ರ ಕುಸ್ರೋ ಸಮಿತಿ, ೧೯೯೮ ಗುಪ್ತ ಸಮಿತಿ, ೨೦೦೫ ಪ್ರೊ. ವೈದ್ಯನಾಥನ್ ಸಮಿತಿ. ಆದರೆ ಹಲವು ಸಮಿತಿಗಳ ವರದಿಗಳು ಕೃಷಿ ಸಂಘಟಿತ ಸಾಲ ವ್ಯವಸ್ಥೆಯನ್ನು ಸಂಕೀರ್ಣಗೊಳಿಸಿದವು ಎನ್ನಬಹುದು. ಇದರಿಂದ ಬಹುಸಂಸ್ಥೆ ವಿಧಾನ ಆಚರಣೆಗೆ ಬಂದಿತು. ಹಲವು ಸಮಸ್ಯೆಗಳನ್ನು ಸೃಷ್ಟಿಯಾದವು.[೪] ವಾಣಿಜ್ಯ ಬ್ಯಾಂಕುಗಳ ರಾಷ್ಟ್ರೀಕರಣಕ್ಕೆ ಮುಂಚೆ ಸಂಘಟಿತ ಸಾಲ ಪೂರೈಕೆಯಲ್ಲಿ ಸಹಕಾರಿ ಬ್ಯಾಂಕುಗಳು ರೈತರ ಹಣಕಾಸು ಅಗತ್ಯಗಳನ್ನು ಪೂರೈಸುತ್ತಿದ್ದವು. ರೈತರ ಸಾಲದ ಬೇಡಿಕೆಯನ್ನು ಪೂರ್ಣವಾಗಿ ಪೂರೈಸಲು ಸಾಧ್ಯವಾಗದಿದ್ದರೂ ಭಾರತದ ಗ್ರಾಮೀಣ ಪ್ರದೇಶಗಳಲ್ಲಿ ಒಂದು ಸಾಮಾಜಿಕ ಪರಿಣಾಮ ಬೀರಿದ್ದವು. ೨೦೦೫ರ ಮಾರ್ಚ್ ೩೧ಕ್ಕೆ ದೇಶದಾದ್ಯಂತ ೧೦೮೭೭೯ ಸಹಕಾರಿ ಸಂಸ್ಥೆಗಳಿದ್ದು ಸಾಲ ಪಡೆದವರ ಸಂಖ್ಯೆ ೪.೫ ಕೋಟಿ ಇದ್ದು, ೧೨.೭೪ ಕೋಟಿ ಸದಸ್ಯರಿದ್ದರು. ಹೀಗಾಗಲೆ ಚರ್ಚಿಸಿದಂತೆ ಸಹಕಾರಿ ಬ್ಯಾಂಕುಗಳ ಸಾಲ ಬಾಕಿ ಹೆಚ್ಚಾಗಿತ್ತು. ನೀಡಿದ ಸಾಲವನ್ನು ವಸೂಲಿ ಮಾಡುವುದು ಈ ಸಂಸ್ಥೆಗಳ ಕರ್ತವ್ಯ. ಸಂಪನ್ಮೂಲ ಸಂಗ್ರಹಿಸಿ ಸಂಸ್ಥೆಯ ಆರ್ಥಿಕ ಚಟುವಟಿಕೆಗಳು ಹಾಗೂ ತನ್ನ ಹಣಕಾಸು ವ್ಯವಹಾರಗಳನ್ನು ಸಕ್ರೀಯವಾಗಿ ನಡೆಸುವ ಮೂಲಕ ಸಮಾಜದ ಇಲ್ಲಾ ವರ್ಗಗಳು ಮತ್ತು ಸಂಸ್ಥೆಯ ಎಲ್ಲಾ ಸದಸ್ಯರ ಸಾಲ ಅಗತ್ಯಗಳನ್ನು ಪೂರೈಸುವುದು ಈ ಸಂಸ್ಥೆಯ ಜವಾಬ್ದಾರಿ. ಆಂತರಿಕವಾಗಿ ಸಂಪನ್ಮೂಲಗಳಿಲ್ಲದೆ ಬಾಹ್ಯ ಸಂಪನ್ಮೂಲಗಳ ಅವಲಂಬನೆ ಹೆಚ್ಚಿನ ಈ ಸಂಸ್ಥೆಗಳ ಆರ್ಥಿಕ ಸ್ಥಿತಿ ಹದಗೆಟ್ಟಿತು.[೫] ಈ ನಿಟ್ಟಿನಲ್ಲಿ ಸಹಕಾರಿ ಸಂಸ್ಥೆಗಳನ್ನು ಬಲಪಡಿಸಲು ೨೦೦೫ರಲ್ಲಿ ವೈದ್ಯನಾಥನ್ ಸಮಿತಿ ರಚಿಸಲಾಯಿತು. ಇಂದಿಗೂ ಸಹಕಾರ ಸಂಸ್ಥೆಗಳಿಂದ ಶ್ರೀಮಂತ ಭೂಮಾಲೀಕರು ಹಾಗೂ ಪ್ರಭಾವಿ ಸದಸ್ಯರು ಮಾತ್ರ ಹೆಚ್ಚಿನ ಪ್ರಯೋಜನ ಪಡೆಯುತ್ತಾರೆ. ಎರಡು ತಾಲ್ಲೂಕುಗಳ ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಸ್ಥೆಗಳಲ್ಲಿ ೧೫-೨೦ ವರ್ಷಗಳಿಂದ ಸದಸ್ಯತ್ವ ಪಡೆದಿರುವ ಪ್ರಬಲ ಲಿಂಗಾಯತರು ಹೆಚ್ಚು ಸಾಲ ಪಡೆದಿದ್ದಾರೆ. ಆದರೆ ಸಾಲ ಮರುಪಾವತಿ ಮಾಡಿರುವ ಪ್ರಮಾಣ ಕಡಿಮೆ. ಸರ್ಕಾರದ ಸಾಲಮನ್ನಾ ಯೋಜನೆಯ ಗರಿಷ್ಠ ಲಾಭ ಪಡೆದಿರುವವರು ಇವರೆ.

ಸಂಘಟಿತ ಬ್ಯಾಂಕುಗಳ ಪಾತ್ರದ ವಿಸ್ತರಣೆಯಿಂದ ಅಸಂಘಟಿತ ಹಣಕಾಸು ಮಾರುಕಟ್ಟೆಗಳ ಮಹತ್ವ ಕಡಿಮೆಯಾಗಿದ್ದರೂ ಭಾರತದ ಆರ್ಥಿಕತೆಯಲ್ಲಿ ಇಂದಿಗೂ ಖಾಸಗೀ ಹಣಕಾಸು ಮಾರುಕಟ್ಟೆ ತನ್ನ ಶಕ್ತಿ ಪ್ರಭಾವವನ್ನು ಉಳಿಸಿಕೊಂಡು ಬಂದಿದೆ. ಅಸಂಘಟಿತ ಮಾರುಕಟ್ಟೆಗಳು ಕೃಷಿಗೆ ಬೇಕಾದ ಪೂರಕ ಹೂಡುವಳಿಗಳು ಮತ್ತು ನಗದು ಹಣಕಾಸು ಪೂರೈಸುತ್ತಿವೆ. ವಿಶ್ವದ ಎಲ್ಲಾ ಭಾಗಗಳಲ್ಲೂ ಭಾರತವನ್ನು ಒಳಗೊಂಡು ಈ ಮಾರುಕಟ್ಟೆಗಳು ಸಕ್ರೀಯವಾಗಿವೆ. ಈ ಮೂಲವು ಅಗತ್ಯವಿದ್ದ ಸಂದರ್ಭಗಳಲ್ಲಿ ಕೂಡಲೇ ಸಾಲ ನೀಡುತ್ತದೆ. ಈ ಮಾರುಕಟ್ಟೆಗಳ ಸಾಲ ಪೂರೈಕೆ ನಿಯಮಗಳು ಸಂಘಟಿತ ವ್ಯವಸ್ಥೆಗಿಂತ ಸರಳ. ಅಸಂಘಟಿತ ಸಾಲ ಮಾರುಕಟ್ಟೆ ಇಂದಿಗೂ ಪ್ರಬಲವಾಗಿರಲು ಸಂಘಟಿತ ವಲಯದ ಸಂಕೀರ್ಣ ಸಾಲ ನಿಯಮಗಳೇ ಕಾರಣವೆನ್ನಬಹುದು.

ಅಧ್ಯಯನದಿಂದ ತಿಳಿದು ಬಂದಂತೆ ಅಸಂಘಟಿತ ಮಾರುಕಟ್ಟೆಗಳಲ್ಲಿ ಸಾಂಪ್ರದಾಯಿಕ ಲೇವಾದೇವಿಗಳಿಗಿಂತ ಕೃಷಿ ಉತ್ಪಾದನೆಗೆ ಬೇಕಾದ ಹೂಡುವಳಿಗಳಾದ ಬೀಜ, ಗೊಬ್ಬರ ಮತ್ತು ಕ್ರಿಮಿನಾಶಕಗಳನ್ನು ಸಾಲದ ರೂಪದಲ್ಲಿ ಪೂರೈಸುವ ವ್ಯಾಪಾರಸ್ಥರು ಹೆಚ್ಚು ಕ್ರಿಯಾಶೀಲರಾಗಿದ್ದಾರೆ. ನಗರ, ಪಟ್ಟಣಗಳಲ್ಲಿ ವಾಸಿಸುವ ಈ ವ್ಯಾಪಾರಸ್ಥರು ಅನುಸರಿಸುವ ಸಾಲ ಪೂರೈಕೆ ನಿಯಮಗಳು ಸರಳ. ಆದರೆ ಸಾಲ ಪಡೆಯುವವರು ಸಾಗುವಳಿದಾರರಾಗಿರಬೇಕು. ಇವರು ಭೂಮಿ ಇತರ ಸ್ಥಿರಾಸ್ಥಿತಿಗಳನ್ನು ಆಧಾರವಾಗಿಟ್ಟುಕೊಂಡೇ ಸಾಲ ನೀಡುತ್ತಾರೆ. ಅಗತ್ಯವಿದ್ದಾಗಲೆಲ್ಲಾ ಸಾಲ ನೀಡುತ್ತಾರೆ. ಇವರು ರೈತರಿಗೆ ಇವರ ಸಾಲ ಪೂರೈಕೆಯ ಮೇಲೆ ಹೆಚ್ಚು ಭರವಸೆ ಇದೆ. ನಿಶ್ಚಿತವಾಗಿ ಸಾಲ ದೊರೆಯುತ್ತದೆ ಎಂಬ ಖಾತ್ರಿ ಇದೆ. ಆದರೆ ಇಲ್ಲಿ ಸಾಲ ಪಡೆಯುವವರು ಸಣ್ಣ ಮತ್ತು ಅತಿ ಸಣ್ಣ ರೈತರೇ ಹೆಚ್ಚು. ಸಣ್ಣ ಮತ್ತು ಅತಿ ಸಣ್ಣ ರೈತರಲ್ಲಿ ಬಹುತೇಕರು ಪರಿಶಿಷ್ಟ ಜಾತಿ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದವರು. ವ್ಯಾಪಾರಸ್ಥರು ನೀಡುವ ಸಾಲದ ಮೇಲಿನ ಬಡ್ಡಿದರ ಸಾಲ ಪಡೆಯುವವರ ತುರ್ತು ಅಗತ್ಯ, ಉದ್ದೇಶಗಳು ಅಥವಾ ಸಂದರ್ಭಗಳನ್ನು ಅವಲಂಭಿಸಿವೆ. ಸಾಮಾನ್ಯವಾಗಿ ವಾರ್ಷಿಕ ಶೇಕಡಾ ೩೬ರಷ್ಟು ಬಡ್ಡಿ ವಿಧಿಸುತ್ತಾರೆ. ಸಾಲ ಪಡೆಯುವ ಅವಧಿ ಒಂದು ವರ್ಷವಿದ್ದರೆ ಬಡ್ಡಿ ಶೇಕಡಾ ೩೬ರಷ್ಟಿರುತ್ತದೆ. ಒಂದು ವೇಳೆ ಸಾಲ ಪಡೆಯುವ ಅವಧಿ ೬ ತಿಂಗಳು ಅದಕ್ಕೂ ಕಡಿಮೆ ಇದ್ದರೆ ಬಡ್ಡಿ ಪ್ರಮಾಣ ಮಾಸಿಕ ಶೇಕಡಾ ೧೦, ವಾರ್ಷಿಕ ಲೆಕ್ಕದಲ್ಲಿ ಶೇಕಡಾ ೧೨೦ರಷ್ಟಾಗುತ್ತದೆ. ವ್ಯಾಪಾರಸ್ಥರು ಕೃಷಿ ಉತ್ಪಾದನೆ ಉದ್ದೇಶ ಮತ್ತು ಅನುಭೋಗ, ವಿವಾಹ, ಹಬ್ಬ, ಜಾತ್ರೆ ಇತ್ಯಾದಿ ಸಾಮಾಜಿಕ ಉದ್ದೇಶಗಳಿಗೂ ಸಾಲ ನೀಡುತ್ತಾರೆ. ಸಾಲ ನೀಡುವಾಗ ಕೃಷಿ ಉತ್ಪನ್ನ ನಮಗೆ ನೀಡಬೇಕೆಂಬ ಷರತ್ತು ವಿಧಿಸುತ್ತಾರೆ. ಈ ಅಧ್ಯಯನದ ಕ್ಷೇತ್ರ ಕಾರ್ಯದ ಪ್ರಕಾರ ಕರ್ನಾಟಕದ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕು ಜಾಲಹಳ್ಳಿ ಹೋಬಳಿಯ ಹೇರುಂಡಿ ಗ್ರಾಮದಲ್ಲಿ ಸಣ್ಣ ಮತ್ತು ಅತಿ ಸಣ್ಣ ರೈತರು ಭೂ ಮಾಲೀಕರಿಂದ ಸಾಲ ಪಡೆಯುತ್ತಾರೆ. ಭೂ ಮಾಲೀಕರು ಸಾಮಾಜಿಕ, ಆರ್ಥಿಕವಾಗಿ ಪ್ರಬಲವಾಗಿರುವ ವರ್ಗವೆಂದು ಗುರುತಿಸಲ್ಪಟ್ಟಿರುವ ಲಿಂಗಾಯತ ಜಾತಿಗೆ ಸೇರಿದ್ದಾರೆ. ಗ್ರಾಮದ ಕೃಷಿಕಾರ್ಮಿಕರು ಮತ್ತು ಭೂರಹಿತ ದುಡಿಮೆಗಾರರಿಗೆ ಸಂಘಟಿತ ವಲಯದ ಸಹಕಾರ ಬ್ಯಾಂಕುಗಳು, ವಾಣಿಜ್ಯ ಬ್ಯಾಂಕುಗಳಿಂದ ಸಾಲ ಪಡೆಯುವ ಅರ್ಹತೆಯೇ ಇಲ್ಲ. ಕಾರಣ ಈ ಸಂಸ್ಥೆಗಳಿಂದ ಸಾಲ ಪಡೆಯಲು ಭೂಮಿ ಹೊಂದಿರುವುದು ಕಡ್ಡಾಯ. ಭದ್ರತೆ ಇಲ್ಲದೆ ಸಾಲ ಸೌಲಭ್ಯಗಳನ್ನು ನಿರೀಕ್ಷಸುವಂತಿಲ್ಲ. ಭೂಮಿ ಬಂಡವಾಳದಂತಹ ಉತ್ಪಾದಕ ಸಂಪನ್ಮೂಲಗಳಿಲ್ಲದೆ ಆಸ್ತಿ ರಹಿತ ದುರ್ಬಲ ವರ್ಗಗಳು ಸಂಘಟಿತ ಹಣಕಾಸು ಮೂಲದಿಂದ ಸಾಲ ಸೌಲಭ್ಯಗಳನ್ನು ಪಡೆಯಲಾಗದೇ ದಶಕಗಳಿಂದ ಹೊರಗುಳಿದಿದ್ದಾರೆ. ಈ ವರ್ಗಗಳು ಜೀವನ ನಿರ್ವಹಣೆಗಾಗಿ ತಮ್ಮ ಅಸ್ತಿತ್ವ ಉಳಿಸಿಕೊಳ್ಳಲು ಗ್ರಾಮಗಳಲ್ಲಿ ಜೀವನೋಪಾಯದ ಮಾರ್ಗಗಳಿಲ್ಲದೆ ನಗರಗಳಿಗೆ ವಲಸೆ ಹೋಗುತ್ತಾರೆ. ನಿಕೃಷ್ಟ, ದುಸ್ತಿಯ ಬದುಕನ್ನು ನಡೆಸುತ್ತಾ ಬದುಕಿನ ಕೆಳಮಟ್ಟದಲ್ಲಿದ್ದಾರೆ. ಕೃಷಿಕಾರ್ಮಿಕರು, ಭೂರಹಿತ ದುಡಿಮೆಗಾರ ವರ್ಗಗಳಲ್ಲಿ ಬಹುತೇಕರು ಪರಿಶಿಷ್ಟ ಜಾತಿ ಮತ್ತು ಪಂಗಡದವರು.

ಸಣ್ಣ ಮತ್ತು ಅತಿ ಸಣ್ಣ ರೈತರ ಕೃಷಿ ಭೂಹಿಡುವಳಿಗಳು ಸಣ್ಣ ಪ್ರಮಾಣದಲ್ಲಿರುವುದರಿಂದ ಸಂಘಟಿತ ಮೂಲದಿಂದ ಹಣಕಾಸು ದೊರೆತರೂ ಸಾಲ ನಿಯಮಗಳ ಪ್ರಕಾರ ಸಣ್ಣ ಮೊತ್ತದ ಸಾಲ ಮಾತ್ರ ದೊರೆಯುತ್ತವೆ. ಹೀಗೆ ಸಣ್ಣ ಮೊತ್ತದ ಸಾಲ ಮತ್ತು ಸಾಲದ ಮಂಜೂರಾತಿಯಲ್ಲಿನ ವಿಳಂಬ ನೀತಿಯಿಂದ ರೈತರು ತಮ್ಮ ಕೃಷಿ ಮತ್ತು ಇತರೇ ಉದ್ದೇಶಗಳಿಗೆ ಭೂಮಾಲೀಕರು ಮತ್ತು ವ್ಯಾಪಾರಸ್ಥರಿಂದ ಸಾಲ ಪಡೆಯುತ್ತಾರೆ. ವ್ಯಾಪಾರಸ್ಥರು ಸಾಲವನ್ನು ನಗದು ಮತ್ತು ಕೃಷಿ ಉತ್ಪಾದನೆಗೆ ಬೇಕಾದ ಹೂಡುವಳಿಗಳನ್ನು ಸಾಲದ ರೂಪದಲ್ಲಿ ಪೂರೈಸುತ್ತಾರೆ. ಸಣ್ಣ ಮತ್ತು ಅತಿ ಸಣ್ಣ ಹಿಡುವಳಿದಾರರಿಗೆ ಸಂಘಟಿತ ಮೂಲದಿಂದ ಸಾಲ ದೊರೆಯುವಂತ್ತಿದ್ದರೆ ಅದು ಸಹಕಾರಿ ಸಂಘಗಳಿಂದ ಮಾತ್ರ ಆದರೆ ಸಹಕಾರ ಸಂಘಗಳು ನಿರೀಕ್ಷಿತ ಪ್ರಮಾಣದಲ್ಲಿ ಮತ್ತು ಸಕಾಲಕ್ಕೆ ಸಾಲ ನೀಡುವುದಿಲ್ಲ. ಸ್ಥಳೀಯ ಮಟ್ಟದ ಸಹಕಾರ ಸಂಘಗಳಿಗೆ ಸ್ವಂತವಾದ ದುಡಿಯುವ ಬಂಡವಾಳ, ಸಂಪನ್ಮೂಲಗಳಿಲ್ಲದೆ ಆರ್ಥಿಕ ನೆರವಿಗಾಗಿ ಸರ್ಕಾರವನ್ನೇ ಅವಲಂಬಿಸಿರುವುದರಿಂದ ಸರ್ಕಾರ ಹಣಕಾಸನ್ನು ಬಿಡುಗಡೆಗೊಳಿಸಿದಾಗ ಮಾತ್ರ ತನ್ನ ಸದಸ್ಯರಿಗೆ ನೀಡುತ್ತವೆ. ಸರ್ಕಾರದಿಂದ ಬಂದ ಹಣವನ್ನು ಸಂಘಗಳು ಸಾಲದ ರೂಪದಲ್ಲಿ ಸದಸ್ಯರುಗಳಿಗೆ ಹಂಚುತ್ತವೆ. ಹೀಗೆ ಹಂಚುವಾಗ ಬಲಾಢ್ಯ ಸಮುದಾಯಗಳು ಹೆಚ್ಚಿನ ಸಾಲ ಪಡೆಯುತ್ತಾರೆ. ಸರ್ಕಾರಗಳು ಸಹಕಾರ ಸಂಘಗಳನ್ನು ರಾಜಕೀಯ ಉದ್ದೇಶಗಳಿಗೆ ಬಳಸಿಕೊಳ್ಳುವುದರಿಂದ ಚುನಾವಣೆಗಳು ಹತ್ತಿರವಿದ್ದಾಗ ಹೆಚ್ಚಿನ ಹಣಕಾಸನ್ನು ನೀಡುತ್ತದೆ. ಈ ಹಿನ್ನೆಲೆಯಲ್ಲಿ ಸಹಕಾರ ಸಂಘಗಳಿಂದ ಎಷ್ಟು? ಯಾವಾಗ? ಸಾಲ ದೊರೆಯುತ್ತದೆ ಎಂಬ ಬರವಸೆ ಇರುವುದಿಲ್ಲ. ಕೆಲವರಿಗೆ ಮಾತ್ರ ದೊರೆಯುವ ಸಹಕಾರ ಸಂಘಗಳ ಸಾಲವನ್ನು ಉತ್ಪಾದಕ ಉದ್ದೇಶಗಳಿಗೆ ಬಳಸಿಕೊಂಡು ಆದಾಯ ವೃದ್ಧಿಸಿಕೊಳ್ಳುವ ಮತ್ತು ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಿಕೊಳ್ಳುವ ಸಾಧ್ಯತೆಗಳಾಗಲಿ ಅವಕಾಶಗಳಾಗಲಿ ಇರುವುದಿಲ್ಲ. ಹಾಗೆಯೇ ರಾಷ್ಟ್ರೀಕೃತ ಬ್ಯಾಂಕುಗಳು ದೊಡ್ಡ ಹಿಡುವಳಿದಾರರಿಗೆ, ಕೃಷಿ ಉತ್ಪಾದನೆ ಅಧಿಕವಾಗಿರುವವರಿಗೆ ಹಾಗೂ ಮರುಪಾವತಿ ಸಾಮರ್ಥ್ಯ ಉಳ್ಳವರಿಗೆ ಮಾತ್ರ ಸಾಲ ಪೂರೈಸುತ್ತವೆ. ಉಳ್ಳವರ ಹಿತ ಕಾಯುತ್ತವೆ ಎನ್ನಬಹುದು. ಹೆರುಂಡೆ ಗ್ರಾಮದ ಲಿಂಗಾಯತ ಜಾತಿಯವರು ಮಾತ್ರ ರಾಷ್ಟ್ರೀಕೃತ ಬ್ಯಾಂಕುಗಳಿಂದ ಹಾಗೂ ಸಹಕಾರ ಸಂಘಗಳೆರಡರಿಂದಲೂ ಸಾಲಸೌಲಭ್ಯ ಪಡೆದಿದ್ದಾರೆ. ಗ್ರಾಮದ ೫೫ ಲಿಂಗಾಯತ ಕುಟುಂಬಗಳಲ್ಲಿ ೪೦ ಕುಟುಂಬಗಳು ಅಂದರೆ ಶೇಕಡಾ ೮೫ ರಷ್ಟು ಲಿಂಗಾಯತ ಕುಟುಂಬಗಳು ಜಾಲಹಳ್ಳಿ ಪ್ರಾಥಮಿಕ ಕೃಷಿ ಸಾಲ ಸಹಕಾರ ಸಂಘ ಮತ್ತು ಜಾಲಹಳ್ಳಿಯ ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ ಬ್ಯಾಂಕಿನಿಂದ ಸಾಲ ಪಡೆದಿದ್ದಾರೆ. ಇತರೆ ಯಾವುದೇ ಜಾತಿಗಳು ವರ್ಗಗಳು, ಪರಿಶಿಷ್ಟ ಜಾತಿ ಜನಾಂಗ ಮತ್ತು ಹಿಂದುಳಿದ ವರ್ಗಗಳು ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳಿಂದ ಸಾಲ ಸೌಲಭ್ಯ ಪಡೆದಿಲ್ಲ. ಈ ಜಾತಿಗಳಲ್ಲಿ ಬಹುತೇಕರು ಸಣ್ಣ ಮತ್ತು ಅತಿ ಸಣ್ಣ ಹಿಡುವಳಿದಾರರಾಗಿದ್ದಾರೆ. ಇವರ ಕೃಷಿ ಉತ್ಪಾದನಾ ಚಟುವಟಿಕೆಗಳು ಸಣ್ಣ ಪ್ರಮಾಣದಲ್ಲಿದ್ದು ಉತ್ಪಾದಕತೆ ಅಥವಾ ಇಳುವರಿ ಪ್ರಮಾಣವೂ ಕಡಿಮೆ. ಇವರು ವಾಣಿಜ್ಯಬ್ಯಾಂಕುಗಳಿಂದ ಸಾಲ ಪಡೆಯಲು ಸಾಧ್ಯವಾಗುತ್ತಿಲ್ಲ. ವಾಣಿಜ್ಯ ಬ್ಯಾಂಕುಗಳು ತಾವು ನೀಡುವ ಅಲ್ಪಾವಧಿ ಬೆಳೆ ಸಾಲಗಳ ಮೇಲೆ

ಅಧಿಕ ಬಡ್ಡಿ ವಿಧಿಸುತ್ತವೆ. ಈ ಬ್ಯಾಂಕುಗಳಿಂದ ಪಡೆದ ಸಾಲ ಮನ್ನಾ ಆಗುವ ಸಾದ್ಯತೆಗಳು ಕಡಿಮೆ. ನಿಗದಿತ ಅವಧಿಯೊಳಗೆ ಸಾಲ ಮರುಪಾವತಿ ಮಾಡಬೇಕಾದ ಒತ್ತಡ ಇರುತ್ತದೆ. ನಿಗದಿತ ಅವಧಿಯೊಳಗೆ ಸಾಲ ಮರುಪಾವತಿಯಾಗದಿದ್ದಲ್ಲಿ ನೋಟೀಸ್ ನೀಡಿ ಈ ಬ್ಯಾಂಕುಗಳು ಕೋರ್ಟ್‌ನಲ್ಲಿ ಕೇಸ್ ದಾಖಲಿಸುತ್ತವೆ. ಗ್ರಾಮೀಣ ಭಾಗದಲ್ಲಿ ಸಾಲಬಾಕಿಯ ಕೋರ್ಟ್ ಪ್ರಕರಣಗಳನ್ನು ರೈತರು ಜನ ಸಾಮಾಜಿಕವಾಗಿ ಇಂದಿಗೂ ಅಗೌರವವೆಂದು ಬಾವಿಸುತ್ತಾರೆ. ಈ ಎಲ್ಲಾ ಕಾರಣಗಳಿಂದ ಗ್ರಾಮೀಣ ದುರ್ಬಲ ವರ್ಗಗಳು, ಕುಟುಂಬಗಳು ತಮ್ಮ ಹಣಕಾಸು ಅಗತ್ಯಗಳಿಗೆ ಅಸಂಘಟಿತ ಮೂಲವನ್ನೇ ಅವಲಂಭಿಸಿವೆ. ಸಂಘಟಿತ ಸಾಲ ವ್ಯವಸ್ಥೆ ಬಡವರಿಗೆ ಎಟುಕದ ಮೂಲವಾಗಿಯೇ ಇಂದಿಗೂ ಉಳಿದಿದೆ.

ಗ್ರಾಮೀಣ ಅಸಂಘಟಿತ ಮಾರುಕಟ್ಟೆಯ ಪ್ರಭಾವಿ ಮೂಲವಾಗಿ ಕಾರ್ಯನಿರ್ವಹಿಸುತ್ತಿರುವವರೆಂದರೆ ಸ್ಥಳೀಯ ವ್ಯಾಪಾರಸ್ಥರು. ಕೃಷಿ ಉತ್ಪಾದನೆಗೆ ಬೇಕಾದ ಹೂಡುವಳಿ ಪೂರೈಕೆ ಮಾಡುವುದರಿಂದ ಇವರನ್ನು ಹೂಡುವಳಿ ಪೂರೈಕೆದಾರರು ಅಥವಾ ಇನ್ಪುಟ್ ಸಪ್ಲೆಯರ್ಸ್ ಎನ್ನಲಾಗುತ್ತದೆ. ರಾಯಚೂರು ಜಿಲ್ಲೆಯಲ್ಲಿ ಹೂಡುವಳಿ ಪೂರೈಕೆದಾರರು ಅಥವಾ ವ್ಯಾಪಾರಸ್ಥರು ವ್ಯವಸ್ಥಿತವಾಗಿ ಬಡ್ಡಿ ವ್ಯವಹಾರ ಮತ್ತು ಹಣಕಾಸು ವ್ಯವಹಾರಗಳನ್ನು ನಿರ್ವಹಿಸುತ್ತಾರೆ. ಇವರು ತಮ್ಮದೇ ಆದ ಮದ್ಯವರ್ತಿಗಳನ್ನು ಹೊಂದಿರುತ್ತಾರೆ. ರೈತರ ಬಗ್ಗೆ ಮಧ್ಯವರ್ತಿಗಳು ನೀಡುವ ಮಾಹಿತಿ ಆಧರಿಸಿ ಸಾಲ ನೀಡುತ್ತಾರೆ. ಸಾಲ ಪಡೆಯುವ ರೈತರ ಬಗ್ಗೆ ವ್ಯಾಪಾರಸ್ಥರಿಗೂ ಮಾಹಿತಿ ಇರುತ್ತದೆ. ರೈತರ ಬಗ್ಗೆ ಮಾಹಿತಿಗಳಿರುವುದರಿಂದ ಹೆಚ್ಚಿನ ದಾಖಲಾತಿಗಳನ್ನು ಪಡೆಯುವುದಿಲ್ಲ. ಒಪ್ಪಂದ ಪತ್ರ ಮಾತ್ರ ಪಡೆಯುತ್ತಾರೆ ಎಂಬುದು ತಿಳಿದುಬಂದಿತು. ಆದರೆ ಸಾಲ ಹಿಂದಿರುಗಿ ಪಡೆಯುವಾಗ ಕಠಿಣ ನಿಲುವು ತಾಳುತ್ತಾರೆ. ಇವರ ಸರಳ ನಿಯಮಗಳಿಂದಾಗಿ ಸಣ್ಣ ಮತ್ತು ಅತಿ ಸಣ್ಣ ರೈತರು ತಮ್ಮ ಸಾಲದ ಅಗತ್ಯಗಳಿಗಾಗಿ ಅಸಂಘಟಿತ ಮಾರುಕಟ್ಟೆಯಿಂದ ಸಾಲ ಪಡೆಯಲು ಇಚ್ಚಿಸುತ್ತಾರೆ. ಸಾಲ ದೊರೆಯುತ್ತದೆ ಎಂಬ ನಂಬಿಕೆಯೂ ಇರುವುದರಿಂದ ಅಸಂಘಟಿತ ಮೂಲವನ್ನು ಅವಲಂಬಿಸುತ್ತಾರೆ. ಪ್ರತಿವರ್ಷ ನಿರಂತರವಾಗಿ ರೈತರು ವ್ಯಾಪಾರಸ್ಥರಿಂದ ಸಾಲ ಪಡೆಯುತ್ತಾರೆ. ಕೃಷಿಯಲ್ಲಿ ಅನಿಶ್ಚಿತತೆ ಸಾಮಾನ್ಯ ಸಂಗತಿ. ಕೃಷಿಯಿಂದ ನಿರೀಕ್ಷಿತ ಉತ್ಪನ್ನ ಮತ್ತು ಆದಾಯ ಬಯಸುವಂತಿಲ್ಲ. ರೈತರು ಷರತ್ತಿನಂತೆ ತಾವು ಬೆಳೆದ ಉತ್ಪನ್ನವನ್ನು ವ್ಯಾಪಾರಸ್ಥರಿಗೆ ಮಾರುತ್ತಾರೆ. ಆದರೆ ಪಡೆದ ಸಾಲ ಮತ್ತು ಮಾರಿದ ಕೃಷಿ ಉತ್ಪನ್ನದ ನಡುವೆ ಅಂತರವಿರುತ್ತದೆ. ಅಂದರೆ ತಮ್ಮ ಉತ್ಪನ್ನ ಪ್ರಮಾಣಕ್ಕಿಂತ ಪಡೆದ ಸಾಲದ ಪ್ರಮಾಣ ಹೆಚ್ಚಾಗಿರುತ್ತದೆ. ಈಗಾಗಿ ಪ್ರತಿ ವರ್ಷ ಸಾಲ ಪೂರ್ಣಗೊಳ್ಳದೆ ಬಾಕಿ ಉಳಿಯುತ್ತದೆ. ಈಗೆ ನಾಲ್ಕೈದು ವರ್ಷಗಳಲ್ಲಿ ಬಡ್ಡಿಗೆ ಬಡ್ಡಿ ಸಾಲಕ್ಕೆ ಸಾಲ ಬೆಳೆದಿರುತ್ತದೆ. ಸಾಲ ನೀಡಿದ ವ್ಯಾಪರಸ್ಥರು ಸಾಲಬಾಕಿ ಇರುವ ರೈತರನ್ನು ಸಾಲ ಮರುಪಾವತಿಸುವಂತೆ ಒತ್ತಾಯಿಸುತ್ತಾರೆ. ರೈತರು ಸಾಲ ಹಿಂತಿರುಗಿಸಲು ಸಾಧ್ಯವಾಗದೆ ಆತಂಕಕ್ಕೆ ಒಳಗಾಗುತ್ತಾರೆ. ಸಾಲ ತೀರಿಸಲೇಬೇಕಾದ ಹಾಗೂ ಜೀವನ ನಿರ್ವಹಣೆ ಮಾಡಬೇಕಾದ ಒತ್ತಡಕ್ಕೆ ಒಳಗಾಗುತ್ತಾರೆ. ಇಂತಹ ಪರಿಸ್ಥಿತಿಯಲ್ಲೂ ವ್ಯಾಪಾರಸ್ಥರು ತಮ್ಮ ಜಮೀನುಗಳನ್ನು ಮಾರಿ ಸಾಲ ತೀರಿಸುವಂತೆ

ರೈತರ ಮೇಲೆ ನಿತಂತರ ಒತ್ತಡ ಹೇರುತ್ತಾರೆ. ವ್ಯಾಪಾರಸ್ಥರು ರೈತರ ಜಮೀನುಗಳನ್ನು ಪಡೆಯಲು ಬಯಸುವುದಿಲ್ಲ. ರೈತರು ಹೇಳುವಂತೆ ಇಂದಿನ ವ್ಯಾಪಾರಸ್ಥರು ಸಾಲ ಹಿಂದಿರುಗಿಸದ ರೈತರ ಭೂಮಿಗಳನ್ನು ಪಡೆಯುವುದಿಲ್ಲ. ಗ್ರಾಮಗಳಲ್ಲಿ ಈ ಭೂಮಿಗಳನ್ನು ನಿರ್ವಹಿಸುವುದು ಕಷ್ಟ ಹಾಗೂ ಲಾಭದಾಯಕವೂ ಅಲ್ಲ. ಇಂತಹ ಭೂಮಿಗಳಲ್ಲಿ ಸಾಗುವಳಿ ಮಾಡಲು ಇಚ್ಚಿಸುವುದಿಲ್ಲ. ವ್ಯಾಪಾರಸ್ಥರು ಭೂಮಿ ಮೇಲಿನ ಈ ರೀತಿಯ ಬಂಡವಾಳ ಹೂಡಿಕೆ ವ್ಯರ್ಥವೆಂದು ಭಾವಿಸುತ್ತಾರೆ. ಸಾಲವನ್ನು ನಗದು ರೂಪದಲ್ಲಿ ಹಿಂದಿರುಗಿ ಪಡೆಯಲು ಬಯಸುತ್ತಾರೆ. ರೈತರು ವ್ಯಾಪಾರಸ್ಥರ ಒತ್ತಡ ಸಹಿಸುವ ಸಾಮರ್ಥ್ಯವಿಲ್ಲದ ಜಮೀನುಗಳನ್ನು ಮಾರಿ ಸಾಲ ತೀರಿಸುತ್ತಾರೆ. ಭೂಮಿ ಕಳೆದುಕೊಂಡ ನೋವು, ಹತಾಶೆ ಮತ್ತು ಅಭದ್ರತೆಗೆ ಒಳಗಾಗುತ್ತಾರೆ. ಸಾಮಾಜಿಕ ಮತ್ತು ಮಾನಸಿಕ ಒತ್ತಡಕ್ಕೆ ಒಳಗಾಗುತ್ತಾರೆ. ಈ ಪರಿಸ್ಥಿತಿ ಅವರ ಬದುಕನ್ನು ಕೈಚಲ್ಲುವಂತೆ ಮಾಡುತ್ತದೆ. ಇದು ಆತ್ಮಹತ್ಯೆಗೆ ಪ್ರೇರಣೆಯಾಗಬಹುದು. ವಸಾಹತು ಕಾಲ ಹಾಗೂ ಸ್ವಾತಂತ್ರ್ಯ ಪೂರ್ವದಲ್ಲಿ ರೈತರು ಸಾಲ ತೀರಿಸಲು ಅಸಮರ್ಥರಾದಾಗ ಭೂಮಿಯನ್ನು ಒಪ್ಪಿಸುತ್ತಿದ್ದರು. ಈ ಮೂಲಕ ಸಾಲ ನೀಡಿದವರು ಭೂಮಾಲೀಕರಾತ್ತಿದ್ದರು. ಗ್ರಾಮದ ಲೇವಾದೇವಿಗಾರರು ಮತ್ತು ಶ್ರೀಮಂತರು ಸಾಲ ನೀಡುವಾಗ ಭೂಮಿಯನ್ನು ಆಧಾರವಾಗಿಟ್ಟುಕೊಂಡು ಹೆಚ್ಚಿನ ಬಡ್ಡಿದರದಲ್ಲಿ ಸಾಲ ನೀಡುತ್ತಾರೆ. ಸಾಲ ಮರುಪಾವತಿಯಾಗದಿದ್ದಾಗ ಭೂಮಿಯನ್ನು ವಶಪಡಿಸಿಕೊಳ್ಳಲಾಗುತ್ತದೆ. ಉತ್ತರ ಪ್ರದೇಶದ ಪಾಲಂಪುರ್ ಗ್ರಾಮದ ಪಕ್ಕದಲ್ಲಿ ಹರಿಕೇರ ಎಂಬ ಗ್ರಾಮದಲ್ಲಿ ವಿಷ್ಣುಭಟ್ ಎಂಬ ಶ್ರೀಮಂತ ಬ್ರಾಹ್ಮಣನು ಹೃದಯಹೀನನು, ದುರಾಸೆ, ಹಣಕ್ಕಾಗಿ ಹಪಹಪಿಸುವವನು. ಸಾಲ ನೀಡುವಾಗ ಲಿಖಿತ ದಾಖಲಾತಿಗಳೊಂದಿಗೆ ತಾನು ಕೊಟ್ಟ ಸಾಲಕ್ಕೆ ತೊಂದರೆಯಾಗದಂತೆ ಕೋರ್ಟ್‌ಗೂ ಹೋಗಲೂ ಅವಕಾಶವಿರುವಂತೆ ಭೂಮಿಯನ್ನು ಅಡವಿಟ್ಟುಕೊಂಡು ಸಾಲ ನೀಡುತ್ತಿದ್ದನು. ಈ ರೀತಿಯಲ್ಲಿ ಸಾಕಷ್ಟು ಭೂಮಿ ಪಡೆದು ಬಡವರನ್ನು ಶೋಷಣೆ ಮಾಡಲಾಗಿದೆ.[೬] ಈಗ ಪರಿಸ್ಥಿತಿ ಬದಲಾಗಿದೆ. ಭೂಮಿಗೆ ಬದಲಾಗಿ ನಗದು ಹಣಕ್ಕಾಗಿ ಒತ್ತಾಯಿಸುವುದಿದೆ. ವ್ಯಾಪಾರಸ್ಥರು ರೈತರಿಗೆ ಸಾಲ ನೀಡುವುದು ಬಿತ್ತನೆಗೆ ಮೊದಲು. ವ್ಯಾಪಾರಸ್ಥರು ರೈತರನ್ನು ಒಂದು ರೀತಿಯ ಶೋಷಣೆಯ ಚೌಕಟ್ಟಿಗೆ ಒಳಪಡಿಸುತ್ತಾರೆ. ಹೀಗಾಗಿ ತಾವು ಮಾಡಿದ ಸಾಲಕ್ಕಾಗಿ ರೈತರು ಒಂದೋ ಭೂಮಿಯನ್ನು ಮಾರಬೇಕು ಇಲ್ಲವೇ ವ್ಯಾಪಾರಸ್ಥರ, ಲೇವಾದೇವಿಗಳ ಶೋಷಣೆಯ ಚೌಕಟ್ಟಿಗೆ ಸಿಲುಕಬೇಕು. ಇಲ್ಲಿರುವ ಇಕ್ಕಟ್ಟು ಎಂದರೆ ಭೂಮಿಯನ್ನು ಮಾರುವಂತಿಲ್ಲ. ಯಾಕೆಂದರೆ ಗ್ರಾಮೀಣ ಬದುಕಿನಲ್ಲಿ ಭೂಮಿ ರೈತರಿಗೆ ಅಸ್ತಿತ್ವ ಪ್ರಶ್ನೆ. ಮತ್ತೊಂದೆಡೆ ಸಾಲದ ಹೊರೆ. ಇವೆರಡರ ನಡುವೆ ರೈತ ತನ್ನ ರೈತಾಪಿ ಅಸ್ತಿತ್ವವನ್ನು ಕಳೆದುಕೊಳ್ಳುವ ಭಯ ನಿರಂತರವಾಗಿರುತ್ತದೆ. ಭೂಮಿ ಮಾರುವುದಾದರೆ ರೈತನಿಗೆ ತನ್ನ ಅಸ್ತಿತ್ವವನ್ನೇ ಕಳೆದುಕೊಂಡಂತೆ, ಹಳ್ಳಿಗಾಡಿನ ರೈತರಿಗೆ ಭೂಮಿ ಕಳೆದುಕೊಳ್ಳುವುದು ನೋವು ವೈಯುಕ್ತಿತವಲ್ಲದೆ ಸಾಮಾಜಿಕವೂ ಹೌದು. ಭೂಮಿಯನ್ನು ಉಳಿಸಿ ಕೊಳ್ಳುವುದರ ಪ್ರಯತ್ನದೊಂದಿಗೆ ಸಾಲ ಮತ್ತು ಬೆಲೆ ಕುಸಿತಗಳು ರೈತರನ್ನು ಆತ್ಮಹತ್ಯೆಗೆ ಪ್ರೇರೇಪಿಸುತ್ತದೆ.[೭] ಪಂಜಾಬಿನಲ್ಲಿ ನಡೆಸಿದ ಪ್ರಯೋಗಿಕ ಅಧ್ಯಯನವೊಂದರ ಪ್ರಕಾರ ರೈತನ ಆತ್ಮಹತ್ಯೆಗೆ ಪ್ರೇರೇಪಿಸುವ

ಹಲವು ಕಾರಣಗಳಲ್ಲಿ ಖಾಸಗೀ ಮೂಲದಿಂದ ಪಡೆದ ಸಾಲದ ಮೇಲಿನ ಅಧಿಕ ಬಡ್ಡಿಗಳು ಮುಖ್ಯ ಕಾರಣ ಎನ್ನಲಾಗಿದೆ. ಕೃಷಿ ಕೂಲಿ ಕಾರ್ಮಿಕರು, ಸಣ್ಣ ಮತ್ತು ಅತಿ ಸಣ್ಣ ರೈತರು ಆತ್ಮಹತ್ಯೆಯ ಮುಖ್ಯ ಬಲಿಪಶುಗಳು. ಆತ್ಮಹತ್ಯೆ ಘಟನೆಗಳಿಂದ ತರುಣ ಮಹಿಳೆಯರು ವಿಧವೆಯಾದರು ಮತ್ತು ಮಕ್ಕಳು ಶಾಲೆ ತೊರೆದರು.೪

ರಾಯಚೂರು ಜಿಲ್ಲೆ ಸಿಂಧನೂರು ತಾಲ್ಲೂಕಿನ ರಾಗಲ ಪರ್ವಿಗ್ರಾಮದಲ್ಲಿ ರೈತರೊಂದಿಗೆ ನಡೆಸಿದ ಅನೌಪಚಾರಿಕ ಚರ್ಚೆಯಲ್ಲಿ ಭೂಮಿ ಮಾರಿ ಸಾಲ ತೀರಿಸಿದ ಉದಾಹರಣೆಗಳು ಕಂಡುಬಂದವು. ಭೂಮಿ ಕಳೆದುಕೊಳ್ಳುವ ಈ ಸಂಗತಿ ಗ್ರಾಮದ ರೈತರಲ್ಲಿ ಅಸಹನೆ ಮೂಡಿಸಿದೆ. ಭೂಮಿ ಕಳೆದುಕೊಳ್ಳುವ ಈ ಸಂಗತಿ ಆಕ್ರೋಶವನ್ನು ಮೂಡಿಸಿರುವುದು ಕಂಡುಬಂದಿತು. ಆದರೆ ಭೂಮಿ ಕಳೆದುಕೊಂಡವರಲ್ಲಿ ಬಹುತೇಕರು ಪರಿಶಿಷ್ಟ ಜಾತಿ ಜನಾಂಗದವರಾಗಿದ್ದು ದುರ್ಬಲ ವರ್ಗದ ಜನರಾಗಿದ್ದರು. ಮೇಲ್ವರ್ಗದ ಲಿಂಗಾಯತ ಸಮುದಾಯದವರಿಗೆ ಈ ವಿಷಯ ತೀರಾ ವಿಶೇಷ ಮತ್ತು ವಿಭಿನ್ನವಾಗಿ ಕಂಡುಬಂದಿಲ್ಲ. ಭೂಮಿ ಕಳೆದುಕೊಂಡವರು ಭೂರಹಿತ ಕಾರ್ಮಿಕರಾಗಿ ಪರಿವರ್ತನೆಗೊಂಡು ಉದ್ಯೋಗಕ್ಕಾಗಿ ನಗರಗಳಿಗೆ ವಲಸೆ ಹೋಗುತ್ತಿದ್ದಾರೆ. ಬದುಕಿನ ಜೀವನೋಪಾಯ ಗಳ ಅವಕಾಶವಿಲ್ಲದೇ ಕುಟುಂಬ ಸಮೇತ ವಲಸೆ ಹೋಗುತ್ತಿದ್ದಾರೆ. ದುಸ್ಥಿತಿಯ ಬದುಕನ್ನು ನಡೆಸುತ್ತಿದ್ದಾರೆ. ಹೀಗೆ ಭೂಮಿ ಕಳೆದುಕೊಂಡು ಸಾರ್ವಜನಿಕ ಬ್ಯಾಂಕುಗಳು ಮತ್ತು ವ್ಯಾಪಾರಸ್ಥರಿಂದಲೂ ಸಾಲ ಪಡೆಯಲು ಭದ್ರತೆಗಳನ್ನು ನೀಡಲಾಗದೆ ಸಾಲ ಪಡೆಯುವ ಆಧಾರ ಮತ್ತು ಅರ್ಹತೆಗಳನ್ನೇ ಕಳೆದುಕೊಂಡಿದ್ದಾರೆ. ಬದುಕಲು ಅವಕಾಶಗಳು ಮತ್ತು ಸಂಪನ್ಮೂಲಗಳಿಲ್ಲದೆ ದರ್ಬಲರಾಗಿ ಸಾಲ ಸೌಲಭ್ಯಗಳು ಮಾತ್ರವಲ್ಲದೆ ಸರ್ಕಾರದ ಅಭಿವೃದ್ಧಿಯ ಯೋಜನೆಗಳು ಹಾಗೂ ಸಾರ್ವಜನಿಕ ಹೂಡಿಕೆಗಳ ಪ್ರಯೋಜನಗಳಿಂದ ಶಾಶ್ವತವಾಗಿ ಹೊರಗುಳಿಯುವಂತಾಗಿದೆ. ಸಮಾಜದಲ್ಲಿ ಬಹುಸಂಖ್ಯಾತರ ಜನರು ಇಂತಹ ದುರ್ಬಲ ವರ್ಗಗಳಿಗೆ ಸೇರಿದ್ದಾರೆ.

ಸಂಘಟಿತ ಹಣಕಾಸು ವಲಯದಿಂದ ಸಾಲಸೌಲಭ್ಯಗಳು ಕೆಲವರಿಗೆ ದೊರೆಯುವುದು ಹಲವರಿಗೆ ದೊರೆಯದೇ ಇರುವುದು ಯಾವ ನೀತಿ? ಯಾವ ಅಭಿವೃದ್ಧಿ? ಸಾಲಸೌಲಭ್ಯಗಳ ನೆರವಿನಿಂದ ಜನರು ತಮ್ಮ ಆರ್ಥಿಕ ಸಾಮಾಜಿಕ ಪರಿಸ್ಥಿತಿ ಸಧಾರಿಸಿಕೊಳ್ಳುವುದನ್ನು ಅಭಿವೃದ್ಧಿಯ ಭಾಗವೆಂದೇ ಪರಿಗಣಿಸಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ನೋಡಿದಾಗ ಅಭಿವೃದ್ಧಿ ಎಲ್ಲಾ ಜನರನ್ನು ಒಳಗೊಂಡಿದೆಯೇ? ಎಂಬ ಪ್ರಶ್ನೆಗಳು ಉದ್ಭವಿಸದೇ ಇರುವುದಿಲ್ಲ. ಸಂಘಟಿತ ಮೂಲದ ಸಾಲ ಸೌಲಭ್ಯಗಳು ಸಮಾಜದ ಎಲ್ಲಾ ವರ್ಗಗಳಿಗೂ ದೊರಕಬೇಕು. ಹಣಕಾಸು ಸೌಲಭ್ಯಗಳು ಅಥವಾ ಹಣಕಾಸು ಸುಧಾರಣಾ ಪ್ರಕ್ರಿಯೆ ಎಲ್ಲಾ ಜನರನ್ನು ಒಳಗೊಳ್ಳಬೇಕು. ಜಾಗತೀಕರಣದ ಸಂದರ್ಭದಲ್ಲಿ ಬಲಾಢ್ಯರು ಅಭಿವೃದ್ಧಿಯ ಎಲ್ಲಾ ಅವಕಾಶಗಳನ್ನು ಮತ್ತು ಲಾಭಗಳನ್ನು ಪಡೆಯುತ್ತಾ ಮತ್ತಷ್ಟು ಬಲಾಢ್ಯರಾಗುತ್ತಿದ್ದರೆ, ಇವುಗಳಿಂದ ವಂಚಿತರಾದವರು ಮತ್ತಷ್ಟು ಶೋಷಿತ ದುಸ್ಥಿತಿಯ ಬದುಕಿಗೆ ದೂಡಲ್ಪಡುತ್ತಿದ್ದಾರೆ.

ಈ ರೀತಿಯ ಅಸಮಾನತೆ ಬದುಕುವ ಅವಕಾಶಗಳು ಮತ್ತು ಜೀವನೋಪಾಯಮಾರ್ಗಗಳಿಲ್ಲದೇ ಇರುವ ಸಮಾಜದ ಕೆಳಸ್ತರದ ಜನರನ್ನು ಬಡತನಕ್ಕೆ ತಳ್ಳುತ್ತವೆ. ಬಡತನದ ಹೆಚ್ಚಳ, ದುಸ್ತಿಯ ಬದುಕು ಯಾವುದೇ ದೇಶದ ಸಮಾಜದ ಅಭಿವೃದ್ಧಿ ಪ್ರಕ್ರಿಯೆ ಮತ್ತು ನೀತಿಗಳನ್ನು ಪ್ರಶ್ನಿಸುವಂತಹುದೇ? ಕಳೆದ ಮೂರು ಜನಗಣತಿ ಅವಧಿಯಲ್ಲಿ ಕೃಷಿ ಕೂಲಿ ಕಾರ್ಮಿಕರ ಸಂಖ್ಯೆ ೭೪.೬ ಮಿಲಿಯನ್ (೧೯೯೧) ನಿಂದ ೧೦೬.೮ ಮಿಲಿಯನ್‌ಗೆ (೨೦೦೧) ಮತ್ತು ೧೪೪ ಮಿಲಿಯನ್‌ಗೆ (೨೦೧೧) ಹೆಚ್ಚಳವಾಗಿದೆ. ಪ್ರಗತಿಯ ಪಾಲು ನಿರ್ಲಕ್ಷಿತ ವರ್ಗಗಳನ್ನು ತಲುಪಿದ್ದರೆ ಆಸ್ತಿರಹಿತರ ಅಥವಾ ಕೂಲಿ ಕಾರ್ಮಿಕರ ಸಂಖ್ಯೆ ಹೆಚ್ಚಾಗುವ ಬದಲು ಕಡಿಮೆಯಾಗಬೇಕಿತ್ತು. ಆದರೆ ಇದಕ್ಕೆ ವಿರುದ್ಧವಾದ ಪ್ರಕ್ರಿಯೆ ನಡೆದಿದೆ. ಸಮಗ್ರ ಆರ್ಥಿಕ ಅಭಿವೃದ್ಧಿ ನೀತಿ ಅಥವಾ ತಂತ್ರಗಳು ಪ್ರಗತಿಯ ಪಾಲನ್ನು ಕೆಳವರ್ಗದ ಜನಕ್ಕೆ ತಲುಪಿಸುತ್ತವೆ. ಸಮಾಜದ ಎಲ್ಲಾ ಪ್ರದೇಶಗಳ, ಎಲ್ಲಾ ವರ್ಗಗಳ ಜನರ ಹಿತಾಸಕ್ತಿ ಕಾಪಾಡುತ್ತವೆ. ಜೀವನ ಸುಧಾರಣೆಗೆ ಅವಕಾಶ ಮಾಡಿಕೊಡುತ್ತವೆ. ಅವಕಾಶಗಳು ಎಲ್ಲಾ ಜನರಿಗೆ ಸಿಗುವಂತೆ ಮಾಡುತ್ತವೆ. ಅಸಮಾನತೆ ಕಡಿಮೆಯಾಗುತ್ತದೆ. ಅಭಿವೃದ್ಧಿ ಎಲ್ಲರನ್ನೂ ಒಳಗೊಳ್ಳುತ್ತದೆ ಎಂದು ಸಮರ್ಥಿಸಲಾಗುತ್ತದೆ. ಆದರೆ ಅಧ್ಯಯನಗಳು ಮತ್ತು ಅಂಕಿಅಂಶಗಳು ಇದಕ್ಕೆ ವಿರುದ್ಧವಾಗಿ ವಾದಿಸುತ್ತವೆ. ಒಂದು ವೇಳೆ ಈ ವಾದಕ್ಕೆ ಪೂರಕವಾದ ನಿದರ್ಶನಗಳಿದ್ದರೆ ಅದನ್ನು ಒಪ್ಪಿಕೊಳ್ಳಬಹುದಿತ್ತು. ಉದ್ಯೋಗಾವಕಾಶಗಳನ್ನು ಹೆಚ್ಚಿಸಿ ಬಡತನ ನಿರ್ಮೂಲನೆ ಮಾಡುವ ಮತ್ತು ದೇಶದ ಆರ್ಥಿಕ ಸ್ಥಿತಿಯನ್ನು ಸಧಾರಿಸುವ ಆಶಯದಿಂದಲೇ ೯೦ರ ದಶಕದಲ್ಲಿ ತಂದ ಆರ್ಥಿಕ ಮತ್ತು ಹಣಕಾಸು ಸುಧಾರಣೆಗಳು ಆ ರೀತಿಯ ಯಾವುದೇ ಆಶಯಗಳನ್ನು ಈಡೇರಿಸಿಲ್ಲ ಎಂಬುದನ್ನು ಅನೇಕ ಅಧ್ಯಯನಗಳು ದೃಡಪಡಿಸಿವೆ. ಎಲ್‌ಪಿಜಿ ಅಭಿವೃದ್ಧಿ ತಂತ್ರದಿಂದ ಬಡತನ ಮತ್ತು ನಿರುದ್ಯೋಗ ಹೆಚ್ಚಾಗಿವೆ ಎನ್ನಲಾಗಿದೆ. ೧೯೯೦ರ ಹಣಕಾಸು ಸುಧಾರಣೆಗಳು ಸಹ ಪ್ರಬಲ ವರ್ಗಗಳ ಹಿತಾಸಕ್ತಿಯನ್ನು ಕಾಪಾಡಿವೆ ಎನ್ನಬಹುದು. ಭೂಒಡೆತನ, ಜಾತಿ, ಲಿಂಗ, ಶಿಕ್ಷಣ ಸಾಕ್ಷರತೆ ಅಥವಾ ಮಾಹಿತಿ ಪಡೆಯುವ ತಿಳುವಳಿಕೆ, ವೃತ್ತಿ ಇತ್ಯಾದಿಗಳು ಬಡತನದ ಮೇಲೆ ಪರಿಣಾಮ ಬೀರುತ್ತವೆ. ಯಾವುದೇ ರೀತಿಯ ಆಸ್ತಿ–ಶಿಕ್ಷಣ–ಕೌಶಲ್ಯ ಇಲ್ಲದ ಜನರು ಕೂಲಿ ಆಧಾರಿತ ಉದ್ಯೋಗಗಳಲ್ಲಿ ಹೆಚ್ಚಾಗಿ ತೊಡಗಿದ್ದಾರೆ ಎನ್ನಬಹುದು. ಸಮಾಜದ ಕೆಲವು ವರ್ಗಗಳಲ್ಲಿ ಬಡತನ ಪ್ರಮಾಣ ಹೆಚ್ಚು. ಅಂತಹ ವರ್ಗಗಳೆಂದರೆ ಪರಿಶಿಷ್ಟ ಜಾತಿ ಮತ್ತು ಪಂಗಡಗಳು. ಸಂಪನ್ಮೂಲ ಅಥವಾ ಆಸ್ತಿಯಲ್ಲಿನ ಅಸಮಾನತೆ ಮತ್ತು ಆದಾಯ ಹಂಚಿಕೆಯಲ್ಲಿನ ಅಸಮಾನತೆ ಬಡತನಕ್ಕೆ ಮುಖ್ಯ ಕಾರಣವಾಗುತ್ತವೆ. ಮಹಿಳಾ ಮುಖ್ಯಸ್ಥರಿರುವ ಕುಟುಂಬಗಳಲ್ಲಿ ಬಡತನದ ಪ್ರಮಾಣ ಇನ್ನೂ ಹೆಚ್ಚಾಗಿರುತ್ತದೆ. ಇದು ಮಹಿಳೆ ಮತ್ತು ಮಕ್ಕಳ ಮೇಲೆ ವ್ಯತಿರಿಕ್ತ ಪರಿಣಾಮ ಬೀರುತ್ತದೆ. ೧೯೯೧ರ ಆರ್ಥಿಕ ನೀತಿಗಳು ಮತ್ತು ಆರ್ಥಿಕ ಸುಧಾರಣೆ ಅವಕಾಶಗಳನ್ನು ಸೃಷ್ಟಿಸುವ ಮತ್ತು ಬಡತನ ಕಡಿಮೆ ಮಾಡುವಂತಹ ನೇರ ಉದ್ದೇಶವನ್ನು ಹೊಂದಿರದೇ ಮಾರುಕಟ್ಟೆ ಉದಾರೀಕರಣಗೊಳಿಸುವುದು. ವಿದೇಶಿ ಹೂಡಿಕೆಗೆ ಸಂಬಂಧಿಸಿದ ನಿರ್ಬಂಧಗಳನ್ನು ತೆಗೆದುಹಾಕಿ ಮುಕ್ತ ಅವಕಾಶಗಳನ್ನು ಕಲ್ಪಿಸುವುದು ಮತ್ತು ರಫ್ತನ್ನು ಉತ್ತೇಜಿಸುವುದಾಗಿತ್ತು. ಪ್ರಮುಖವಾಗಿ ಕೃಷಿ

ಕ್ಷೇತ್ರದಲ್ಲೂ ಉದ್ಯೋಗ ಅವಕಾಶಗಳನ್ನು ಹೆಚ್ಚಿಸಿದರೆ ಬಡತನ ಪ್ರಮಾಣ ಕಡಿಮೆಯಾಗುವುದು ಮತ್ತು ಆರ್ಥಿಕ ಬೆಳವಣಿಗೆಯ ಫಲ ಅಥವಾ ಪ್ರಯೋಜನ ಎಲ್ಲರಿಗೂ ಲಭಿಸುತ್ತದೆ ಎಂದು ನಂಬಲಾಗಿತ್ತು. ಆದರೆ ಉದ್ಯೋಗಾವಕಾಶಗಳು ಸೃಷ್ಟಿಯಾಗುವ ಬದಲು ಕಡಿಮೆಗೊಂಡವು. ಅದೇ ರೀತಿ ಬಡತನ ಪ್ರಮಾಣವು ಗ್ರಾಮೀಣ ಪ್ರದೇಶಗಳಲ್ಲಿ ಹೆಚ್ಚಾಯಿತು. ಅದೇ ರೀತಿ ೧೯೯೧ರ ಹಣಕಾಸು ವ್ಯವಸ್ಥೆಯ ಖಾಸಗೀಕರಣ ಗ್ರಾಮೀಣ ಸಾಲಗಳನ್ನು ಅಗಾಧ ಪ್ರಮಾಣದಲ್ಲಿ ಕಡಿತಗೊಳಿಸಿತು. ಇದು ಗ್ರಾಮೀಣಾಭಿವೃದ್ಧಿಯ ಸಾಧ್ಯತೆಗಳ ಮೇಲೆ ವ್ಯತಿರಿಕ್ತ ಪರಿಣಾಮ ಬೀರಿತು.[೯] ಬಡತನ ಹೆಚ್ಚಾದ್ದರಿಂದ ಗ್ರಾಮೀಣ ಆರ್ಥಿಕತೆಯಲ್ಲಿ ಕೃಷಿ ಕೂಲಿ ಕಾರ್ಮಿಕರ ಸಂಖ್ಯೆ ಹೆಚ್ಚಳವಾಗಿದೆ. ರಾಷ್ಟ್ರೀಯ ಕಾರ್ಮಿಕ ಆಯೋಗದ ಪ್ರಕಾರ ೧೯೫೧–೨೦೦೧ರ ಅವಧಿಯಲ್ಲಿ ಕೃಷಿ ಕೂಲಿ ಕಾರ್ಮಿಕರ ಪ್ರಮಾಣ ಶೇಕಡಾ ೧೯.೭೨ರಿಂದ ಶೇಕಡಾ ೨೯.೬ಕ್ಕೆ ಹೆಚ್ಚಳವಾಗಿದೆ. ಕರ್ನಾಟಕದಲ್ಲೂ ಇದರ ಪ್ರಮಾಣ ಹೆಚ್ಚಾಗಿದೆ.[೧೦] ಹೀಗೆ ಬಡತನ, ನಿರುದ್ಯೋಗ, ಕೃಷಿಕೂಲಿ ಕಾರ್ಮಿಕರ ಸಂಖ್ಯೆಯ ಹೆಚ್ಚಳ, ಸಾಲ ಸೌಲಭ್ಯವಂಚಿತರ ಹೆಚ್ಚಳ ಮತ್ತು ಅಸಂಘಟಿತ ಹಣಕಾಸು ಮಾರುಕಟ್ಟೆಗಳ ಪ್ರಾಬಲ್ಯ ದೇಶವೊಂದರ ಅಥವಾ ಸಮಾಜವೊಂದರ ಹಣಕಾಸು ಸುಧಾರಣೆ ಅಥವಾ ಆರ್ಥಿಕಾಭಿವೃದ್ಧಿ ಸುಧಾರಣೆಯ ವೈಫಲ್ಯವೆನ್ನಬಹುದು. ಗ್ರಾಮೀಣ ಪ್ರದೇಶಗಳಲ್ಲಿ ಅನೇಕ ಸಮಸ್ಯೆಗಳಿರುವುದನ್ನು ಕಾಣಬಹುದು. ಅದೇ ರೀತಿ ಗ್ರಾಮೀಣ ಸಾಲ ವ್ಯವಸ್ಥೆಯಲ್ಲೂ ಸಮಸ್ಯೆ ಸವಾಲುಗಳಿವೆ. ಗ್ರಾಮೀಣ ಸಾಲ ವ್ಯವಸ್ಥೆಯ ಭಾಗವಾಗಿ ಸಮಾಜದ ಕೆಲವು ನಿರ್ದಿಷ್ಟ ವರ್ಗಗಳು ಅನುಭವಿಸುವ ಸಾಲ ಸೌಲಭ್ಯದಲ್ಲಿನ ಅಸಮಾನತೆ ಪ್ರಮುಖವಾದುದು. ಈ ಅಸಮಾನತೆಯ ಲಿಂಗಸಂಬಂಧಿ ಆಯಾಮವನ್ನು ಪರಿಗಣಿಸುವುದಾದರೆ ಮಹಿಳಾ ಮುಖ್ಯಸ್ಥ ಕುಟುಂಬಗಳು ಪುರುಷರಿಗೆ ಹೋಲಿಸಿದರೆ ಕಡಿಮೆ ಹಣಕಾಸು ಸೌಲಭ್ಯಗಳನ್ನು ಹೊಂದಿವೆ. ಇವರು ಪುರುಷರಂತೆ ಸಮಾನ ಆರ್ಥಿಕ ಚಟುವಟಿಕೆಗಳಲ್ಲಿ ತೊಡಗಿದ್ದರೂ ಸಾಲ ಸೌಲಭ್ಯಗಳು ಲಭಿಸುವುದಿಲ್ಲ.[೧೧] ಹಣಕಾಸು ಒಳಗೊಳ್ಳುವಿಕೆ ಪ್ರಕ್ರಿಯೆ ಎಲ್ಲಾ ರಾಜ್ಯಗಳಲ್ಲಿ ಪ್ರಗತಿಯಲ್ಲಿದ್ದರೂ ಬಹುತೇಕ ಕುಟುಂಬಗಳು ಅಥವಾ ಹೆಚ್ಚಿನ ಸಂಖ್ಯೆಯ ಕುಟುಂಬಗಳು ಹಣಕಾಸಿನ ಸೌಲಭ್ಯಕ್ಕಾಗಿ ಅಸಂಘಟಿತ ಸಾಲ ಮಾರುಕಟ್ಟೆಯನ್ನು ಅವಲಂಭಿಸಿದೆ. ರಾಯಚೂರು ಜಿಲ್ಲೆಯ ದೇವದುರ್ಗ, ಸಿಂಧನೂರು ತಾಲ್ಲೂಕಿನ ಕ್ರಮವಾಗಿ ಹೇರೆಂಡೆ ಮತ್ತು ರಾಗಲಪರ್ವಿ ಗ್ರಾಮಗಳ ನಿದರ್ಶನವನ್ನು ಈಗಾಗಲೇ ವಿಶ್ಲೇಷಿಸಲಾಗಿದೆ. ಈ ಗ್ರಾಮಗಳ ದುರ್ಬಲ ವರ್ಗಗಳು ತಮ್ಮ ಸಾಲಗಳನ್ನು ಅಸಂಘಟಿತ ಮೂಲಗಳಿಂದ ಪೂರೈಸಿ ಕೊಳ್ಳುತ್ತಿದ್ದಾರೆ. ಸಂಘಟಿತ ಮೂಲದ ಸಾಲ ಸೌಲಭ್ಯಗಳಿಂದ ಹೊರಗುಳಿದಿದ್ದಾರೆ. ಈ ಎರಡೂ ಗ್ರಾಮಗಳ ಭೂರಹಿತ ಕಾರ್ಮಿಕ, ಕೃಷಿ ದುಡಿಮೆಗಾರರು ಸಂಪನ್ಮೂಲ ಶಿಕ್ಷಣಗಳಿಲ್ಲದೆ ಒಟ್ಟಾರೆ ಆಸ್ತಿರಹಿತ ವರ್ಗಗಳಾಗಿ ಸಂಘಟಿತ ಅಸಂಘಟಿತ ಸಾಲ ಮೂಲಗಳೆರಡರಿಂದಲೂ ಸಾಲ ಪಡೆಯಲಾಗದೆ ವಂಚಿತರಾಗಿದ್ದಾರೆ. ದುರ್ಬಲ ವರ್ಗಗಳು ಜಾತಿ ದೃಷ್ಟಿಯಿಂದ ಹೇಳುವುದಾದರೆ ಪರಿಶಿಷ್ಟ ಜಾತಿ, ಪಂಗಡ ಮತ್ತು ಹಿಂದುಳಿದ ವರ್ಗಗಳೂ ಸಾಲನೀತಿಗಳು ಹಾಗೂ ಅಭಿವೃದ್ಧಿ ಪ್ರಯೋಜನಗಳಿಂದ ಹೇಗೆ ವಂಚಿತರಾಗಿ ಸಮಾಜದ ಅಂಚಿನಲ್ಲಿ ಬದುಕು ನಡೆಸುತ್ತಿದ್ದಾರೆ ಎಂಬುದನ್ನು ಅರ್ಥ ಮಾಡಿಕೊಳ್ಳಬಹುದು.

ದುರ್ಬಲ ಮಹಿಳೆಯರು ಸಂಘಟಿತ ಸಾಲ ವ್ಯವಸ್ಥೆಯಿಂದ ಹೇಗೆ ವಂಚಿತರಾಗಿದ್ದಾರೆ ಎಂಬುದಕ್ಕೆ ಸಿಂಧನೂರು ತಾಲ್ಲೂಕಿನ ರಾಗಲಪರ್ವಿಯ ಶರಣಮ್ಮ ಗಂಡ ಭೀಮಪ್ಪರ ನಿದರ್ಶನ ನೋಡಬಹುದು. ಶರಣಮ್ಮ ವಿಧವೆ. ಸಣ್ಣ ಗುಡಿಸಲಿನಾಕಾರದ ಎಂಚಿನ ಮನೆಯಲ್ಲಿ ವಾಸಿಸುತ್ತಿದ್ದಾರೆ. ಇವರ ಊರು ರಾಗಲಪರ್ವಿ. ಒಂದು ಗಂಡು ಮಗುವಿದೆ. ಸರ್ಕಾರಿ ಶಾಲೆಯಲ್ಲಿ ೩ನೇ ತರಗತಿ ಓದುತ್ತಿದೆ. ಶರಣಮ್ಮ ಗಂಡ ಹನುಮಂತ ೩೫ ವರ್ಷದವರಾಗಿದ್ದು ಗಂಡನನ್ನು ಕಳೆದುಕೊಂಡು ೫ ವರ್ಷವಾಗಿದೆ. ಸಗಣಿಯಿಂದ ಸಾರಿಸಿದ ತನ್ನ ಮನೆಯಲ್ಲಿ ಒಲಿಗೆ ಯಂತ್ರ ಒಂದೇ ಇವರ ಬದುಕಿನ ಆಧಾರ. ಭೂಮಿ ಇಲ್ಲ. ಅಂಗವಿಕಲೆ ಆಗಿರುವ ಇವರು ತನ್ನ ಎಡಗಾಲನ್ನು ಸಮರ್ಥವಾಗಿ ನಡೆದಾಡಲು ಬಳಸಲಾಗುವುದಿಲ್ಲ. ತಿಂಗಳಿಗೆ ಗರಿಷ್ಠವೆಂದರೆ ಸಾವಿರ ರೂ. ಸಂಪಾದನೆ. ಸಾವಿರ ರೂ. ನಿಂದಲೇ ತನ್ನ ಮತ್ತು ಮಗನ ಖರ್ಚುಗಳನ್ನು ಬರಿಸುತ್ತಾರೆ. ೫ ವರ್ಷಗಳ ಹಿಂದೆ ಗ್ರಾಮದ ಭೂಮಾಲೀಕರೊಬ್ಬರಿಂದ ಪಡೆದ ೫೦೦೦ ರೂ ಸಾಲವನ್ನು ಇಂದಿಗೂ ತೀರಿಸಲು ಸಾಧ್ಯವಾಗಿಲ್ಲ. ತಾನು ಗಳಿಸುವ ಮಿತ ಆದಾಯದಲ್ಲಿ ಬಡ್ಡಿ ನೀಡಿ ಉಳಿದುದನ್ನು ತನ್ನ ಜೀವನ ನಿರ್ವಹಣೆಗೆ ಬಳಸಿಕೊಳ್ಳುತ್ತಾರೆ. ಇವರಿಗೆ ಸಾಲದ ಅಗತ್ಯವಿದೆ. ಒಂದು ಟೈಲರಿಂಗ್ ಶಾಪ್ ಪ್ರಾರಂಭಿಸಿ ತನಗಿರುವ ಹೊಲಿಗೆ ಕೌಶಲ್ಯದಿಂದ ಬದುಕನ್ನು ಉತ್ತಮಗೊಳಿಸಿಕೊಳ್ಳುವ ಉತ್ಸಾಹ ಇಚ್ಛೆ ಇವರ ಬಯಕೆ ಇದೆ. ಹಣಕಾಸು ಸಹಾಯಕ್ಕಾಗಿ ಎದುರುನೋಡುತ್ತಿದ್ದಾರೆ. ತನ್ನ ಹೊಲಿಗೆ ಯಂತ್ರ ಮತ್ತು ಹೊಲಿಗೆ ಕೌಶಲ್ಯದ ಆಧಾರದ ಮೇಲೆಯೇ ೫೦೦೦ರೂ ಗಳನ್ನು ಸಾಲ ಪಡೆದಿದ್ದಾರೆ. ಸಾಲ ನೀಡಿದ ಭೂ ಮಾಲೀಕರು ಬಡ್ಡಿ ನೀಡದಿದ್ದರೂ ಪರವಾಗಿಲ್ಲ ಆದರೆ ೫೦೦೦ ಅಸಲನ್ನು ನೀಡುವಂತೆ ಒತ್ತಾಯಿಸುತ್ತಾರೆ. ಪ್ರತಿ ಸಾರಿ ಅವರು ಒತ್ತಾಯಿಸುವಾಗ ಮಾನಸಿಕ ತಳಮಳಕ್ಕೆ ಒಳಗಾಗುತ್ತಾರೆ. ತನ್ನ ಅಸಹಾಯಕತೆ ಬಗ್ಗೆ ತನಗೆ ಅತೃಪ್ತಿ ಇದೆ. ಜನ ತನ್ನನ್ನು ನೋಡುವ ರೀತಿಯ ಬಗ್ಗೆ ಆತಂಕವಿದೆ. ಸಾಮಾಜಿಕ ನೋವಿಗೆ ಒಳಗಾಗಿದ್ದಾರೆ. ಆದರೆ ಬದುಕುವ ಆಸೆ ಇದೆ. ಮಗನನ್ನು ಓದಿಸಿ ದೊಡ್ಡವನನ್ನಾಗಿ ಮಾಡುವ ಆಕಾಂಕ್ಷೆ ಇದೆ. ಭೂಮಿ, ಶಿಕ್ಷಣ ಎರಡೂ ಇಲ್ಲದ ಆಸ್ತಿ ರಹಿತ ಶರಣಮ್ಮನ ಕುಟುಂಬ ಸಂಘಟಿತ ಸಾಲ ಮೂಲದಿಂದ ಸಾಲ ಪಡೆಯುವ ಯಾವ ಅರ್ಹತೆ ಇಲ್ಲ. ಸಾಧ್ಯತೆಗಳೂ ಇಲ್ಲ. ಆದಾಯ ಮತ್ತು ಆಸ್ತಿ ಅಸಮಾನತೆಗೆ ಶರಣಮ್ಮನ ಕುಟುಂಬ ಒಂದು ನಿದರ್ಶನ. ಹೋರಾಟದ ಬದುಕನ್ನು ನಿರ್ವಹಿಸುತ್ತಿರುವ ಈ ಮಹಿಳೆ ಸಮಾಜದ ಅಂಚಿನಲ್ಲಿದ್ದಾರೆ ಎನ್ನಬಹುದು. ಅಭಿವೃದ್ಧಿಯ ಯಾವ ಪ್ರಯೋಜನೆಗಳನ್ನು ಪಡೆಯಲಾಗದೇ ಅವಕಾಶ ವಂಚಿತರಾಗಿ ಬದುಕುತ್ತಿದ್ದಾರೆ. ದೇಶದ ಅಭಿವೃದ್ಧಿ ಫಲದಿಂದ ಹೊರಗಿದ್ದು ಅಂಚಿನಲ್ಲಿರುವ ಶರಣಮ್ಮ ನಂತಹವರನ್ನು ಸರ್ಕಾರದ ಹಣಕಾಸು ನೀತಿ ಮತ್ತು ಸುಧಾರಣಾ ಪ್ರಕ್ರಿಯೆಗಳು ಒಳಗೊಳ್ಳುವವೆ? ಪ್ರಗತಿ ಪ್ರಕ್ರಿಯೆಯಿಂದ ಹೊರಗುಳಿದ ನಿರ್ಲಕ್ಷಿತ ವಿಧವಾ ಮಹಿಳಾ ವರ್ಗವನ್ನು ಸರ್ಕಾರದ ಸಾಲನೀತಿ ಮತ್ತು ಅಭಿವೃದ್ಧಿ ನೀತಿಗಳು ಹೇಗೆ ಪರಿಗಣಿಸುವುವು ಎಂಬುದೇ ಪ್ರಶ್ನೆ? ಸಮಾಜದ ಕೆಳ ವರ್ಗವೆಂದೇ ಪರಿಗಣಿತವಾಗಿರುವ ಆಸ್ತಿ ಆದಾಯದಂತಹ ಆರ್ಥಿಕ ಸಂಪನ್ಮೂಲಗಳು ಹಾಗೂ ಸಾಮಾಜಿಕ ತಾರತಮ್ಯಕ್ಕೆ ನಿದರ್ಶನವಾದ

ಶರಣಮ್ಮ ಪರಿಶಿಷ್ಟ ಜಾತಿಗೆ ಸೇರಿದ್ದಾರೆ. ಇಂತಹ ಲಕ್ಷಾಂತರ ಮಹಿಳೆಯರ ಬದುಕುವ ಮತ್ತು ಅಭಿವೃದ್ಧಿ ಹೊಂದುವ ಹಕ್ಕುಗಳನ್ನು ತಾವು ಅನುಭವಿಸುವಂತಹ ವ್ಯವಸ್ಥೆ ರೂಪಿಸುವುದು ಸರ್ಕಾರದ ಆದ್ಯತೆಯಲ್ಲವೆ? ಸರ್ಕಾರದ ಅಭಿವೃದ್ಧಿ ನೀತಿಯಲ್ಲಿ ಈ ವರ್ಗದ ಜನರ ಹಿತಾಸಕ್ತಿಗಳು ಆದ್ಯತೆಯ ಸಂಗತಿಗಳಾಗಿರುವುದಿಲ್ಲ. ಈ ಬಗೆಯ ದುಸ್ಥಿತಿಯಿಂದ ಮಹಿಳೆಯರು ಹೆಚ್ಚಿನ ಹಿಂಸೆ ಅನುಭವಿಸುತ್ತಾರೆ. ನಮ್ಮ ಕಳೆದ ೫೦ ವರ್ಷಗಳ ಅನುಭವವೆಂದರೆ ಕರ್ನಾಟಕದಲ್ಲಿ ಅಭಿವೃದ್ಧಿಯು ಸಮಾಜದ ಪ್ರಬಲ ಜನತೆಯನ್ನು ಒಳಗೊಂಡಂತೆ ನಿರ್ಲಕ್ಷಿತ ಪರಿಶಿಷ್ಟ ಜಾತಿ ಮತ್ತು ಜನಾಂಗದ ಜನತೆಯನ್ನು ಒಳಗೊಳ್ಳುತ್ತಿಲ್ಲ. ಈ ಬಗೆಯ ಪ್ರಬಲ ಮತ್ತು ನಿರ್ಲಕ್ಷಿತರ ನಡುವಿನ ಬಿರುಕು ಒಂದು ದೃಷ್ಟಿಯಿಂದ ನಮ್ಮ ಪರಂಪರೆಯ ಕೊಡುಗೆಯಾಗಿದೆ. ನಮ್ಮ ಪರಂಪರೆಯಲ್ಲಿ ಶಿಷ್ಟರು ಅಭಿವೃದ್ಧಿಯ ಒಳಗಣದವರಾದರೆ ಪರಿಶಿಷ್ಟರು ಹೊರಗಣದವರು.[೨] ಅಭಿವೃದ್ಧಿಯ ತಳ ಮಟ್ಟದಲ್ಲಿರುವವರೆಂದರೆ ದುರ್ಬಲ ವರ್ಗಗಳು, ಅತೀ ಸಣ್ಣ, ಸಣ್ಣ ರೈತರು, ಕೃಷಿ ಕಾರ್ಮಿಕರು ಭೂರಹಿತ ದುಡಿಮೆಗಾರರು, ಮಹಿಳೆಯರು, ವಿಧವೆಯರು. ಇವರಲ್ಲಿ ಬಹುತೇಕರು ಪರಿಶಿಷ್ಟ ಜಾತಿ ಮತ್ತು ಜನಾಂಗ ಹಾಗೂ ಹಿಂದುಳಿದ ವರ್ಗಗಳ ಜನರು. ಸಂಘಟಿತ ಸಾಲ ಮೂಲದಿಂದ ವಂಚಿತರಾಗಿರುವವರು ಈ ವರ್ಗಗಳೇ. ಮಹಿಳೆಯರು ಸಂಘಟಿತ ಸಾಲಮೂಲದಿಂದ ಸಾಲ ಸೌಲಭ್ಯ ಪಡೆಯಲು ಸಾಧ್ಯವಾಗದೇ ವಂಚಿತರಾದ್ದಾರೆ ಎಂದರೆ ಅಭಿವೃದ್ಧಿ ಹೊಂದುವ ಹಕ್ಕಿನಿಂದ ಅವರು ವಂಚಿತರಾದಂತೆ. ಅಭಿವೃದ್ಧಿಯನ್ನು ಹಕ್ಕು ಎನ್ನುವುದಾದರೆ ಸಾಲ ಪಡೆಯುವ ಹಕ್ಕು ಮಹಿಳೆಯರಿಗಿಲ್ಲವೇ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಹೇರಂಡಿ ಗ್ರಾಮದ ಬಸಯ್ಯ ತಂದೆ ಹನುಮಯ್ಯ ಎಸ್‌ಸಿ ಜಾತಿಗೆ ಸೇರಿದ್ದಾರೆ. ಭೂಮಿ ಇಲ್ಲ. ಕೂಲಿಯೇ ಬದುಕಿನ ಆಧಾರ. ಶ್ರಮವೇ ಸಂಪತ್ತು. ಕುಟುಂಬದ ಒಟ್ಟು ಸದಸ್ಯರು ನಾಲ್ಕು ಜನ. ಇವರೆಲ್ಲಾ ಬೆಂಗಳೂರಿಗೆ ಉದ್ಯೋಗಕ್ಕಾಗಿ ವಲಸೆ ಹೋಗುತ್ತಾರೆ. ಅಭದ್ರತೆ ಅಸಹಾಯಕತೆ, ಅವಮಾನಗಳು ಸದಾ ಇವರನ್ನು ಕಾಡುತ್ತವೆ. ಮಕ್ಕಳು ಶಿಕ್ಷಣದಿಂದಾಗಿ ವಂಚಿತರಾಗಿದ್ದಾರೆ. ವಾಸಕ್ಕೆ ಯೋಗ್ಯ ಮನೆ ಇಲ್ಲ. ವರ್ಷಕ್ಕೆ ಕನಿಷ್ಠ ಆರು ತಿಂಗಳು ಕೂಲಿಗಾಗಿ ವಲಸೆ ಹೋಗುತ್ತಾರೆ. ಯೋಗ್ಯ ಬದುಕನ್ನು ಕಟ್ಟಿಕೊಳ್ಳಲು ನಿರಂತರ ಹೋರಾಟ ಮಾಡುತ್ತಾರೆ. ಬದುಕ ಬೇಕೆಂಬ ಹಂಬಲ, ಮಕ್ಕಳಿಗೆ ಬದುಕನ್ನು ಕಟ್ಟಿ ಕೊಡುವ ಕಾಳಜಿ, ಕಾತುರ ಇದೆ. ಆದರೆ ಇವರಿಗೆ ಬ್ಯಾಂಕು ಮತ್ತು ಖಾಸಗಿ ಲೇವಾದೇವಿ ಮಾರುಕಟ್ಟೆ ಎರಡರಿಂದಲೂ ಸಾಲ ದೊರೆಯುವುದಿಲ್ಲ. ಹೇರಂಡಿ ಗ್ರಾಮದಲ್ಲಿ ಅತಿ ಹೆಚ್ಚು ಕೃಷಿ ಕಾರ್ಮಿಕ ಮತ್ತು ಭೂರಹಿತ ಕಾರ್ಮಿಕರಿರುವುದು ಪರಿಶಿಷ್ಟ ಜಾತಿಯಲ್ಲಿ. ದುಸ್ತಿತಿಯ ಬದುಕನ್ನು ನಡೆಸುತ್ತಿರುವ ಇವರು ಸಮಾಜದ ಅಂಚಿನಲ್ಲಿ ಜೀವನ ನಡೆಸುತ್ತಿದ್ದಾರೆ. ಜಯರಾಮಪ್ಪ ತಂದೆ ನೆಡಪಣ್ಣ ಮದನಹಳ್ಳಿ ಗ್ರಾಮದ ಕೂಲಿ ಕಾರ್ಮಿಕ. ಬೆವರೇ ಇವರ ಆಸ್ತಿ. ಕೂಲಿ ವೃತ್ತಿಯನ್ನು ಅವಲಂಬಿಸಿದ್ದಾರೆ. ಬುಡಗ ಜಂಗಮ–ಅಲೆಮಾರಿ ಜನಾಂಗಕ್ಕೆ ಸೇರಿದ್ದಾರೆ. ಸರ್ಕಾರದ ಪ್ರಕಾರ ಇವರು ಪರಿಶಿಷ್ಟ ಜಾತಿಗೆ ಸೇರಿದ್ದಾರೆ. ಇವರು ಅನಕ್ಷರಸ್ಥರು. ವಿವಾಹಿತರು. ಹೆಂಡತಿ ಮತ್ತು ಮಗನ ಜೊತೆ ಗ್ರಾಮದಲ್ಲಿ ವಾಸಿಸುತ್ತಿದ್ದಾರೆ. ಭೂಮಿ ಇಲ್ಲಿ. ಆಸ್ತಿ ರಹಿತ ಕುಟುಂಬ. ಸರ್ಕಾರದ ಜನತಾ ಮನೆಯಲ್ಲಿ ವಾಸ. ಬ್ಯಾಂಕಿನ ಸಾಲ ಬೇಡ.

ಬೇಕೆಂದರೂ ಸಾಲ ಸಿಗುವುದಿಲ್ಲ. ಕಾರಣ ಸಾಲ ಪಡೆಯಲು ಬ್ಯಾಂಕಿಗೆ ಭದ್ರತೆ ನೀಡಬೇಕು. ಅದು ಸಾಧ್ಯವಿಲ್ಲ. ಸಾಲ ಬೇಡವೆನ್ನಲು ಕಾರಣ ಕೂಲಿ. ಕೂಲಿಯಿಂದ ಕಡಿಮೆ ಆದಾಯ ಬರುತ್ತದೆ. ಸಾಲ ತೀರಿಸಲು ಸಾಧ್ಯವಿಲ್ಲ. ಆದರೆ ಇವರು ಕೂಲಿ ಕೆಲಸಕ್ಕೆ ಹೋಗುವ ಭೂ ಮಾಲೀಕರಿಂದ ಸಾಲ ಪಡೆಯುತ್ತಾರೆ. ಬಡ್ಡಿ ಇಲ್ಲ. ಮುಂಗಡವಾಗಿ ಹಣಪಡೆಯುತ್ತಾರೆ. ಇವರಿಂದ ಸಾಲ ಪಡೆಯುವುದರಿಂದ ಯಾವುದೇ ಸಮಸ್ಯೆ ಇಲ್ಲಿಯವರೆಗೂ ಅನುಭವಿಸಿಲ್ಲ. ಕಾರಣ ಸಾಲ ಪಡೆದು ತಪ್ಪದೇ ಕೂಲಿ ಮಾಡಿ ಸಾಲ ತೀರಿಸುತ್ತಾರೆ. ವಿಶ್ವಾಸ ಉಳಿಸಿಕೊಳ್ಳುತ್ತೇವೆ. ಈ ರೀತಿಯ ಸಾಲದಿಂದ ಕುಟುಂಬದ ವಿವಾಹ, ಹುಟ್ಟಿದ ಹಬ್ಬ, ನೆಂಟರ ಸತ್ಕಾರ, ಇತ್ಯಾದಿ ಉದ್ದೇಶಗಳಿಗೆ ಸಾಲ ಪಡೆಯಲಾಗುತ್ತದೆ. ದುರ್ಬಲ ಜನರು ತಮ್ಮ ಸಣ್ಣ ಸಾಲಗಳಿಗೆ ಖಾಸಗೀ ಮೂಲವನ್ನು ಅವಲಂಬಿಸಿರುವುದನ್ನು ಈ ಪ್ರಕರಣದ ಮೂಲಕ ಅರ್ಥ ಮಾಡಿಕೊಳ್ಳ ಬಹುದು. ಈ ಹಿನ್ನೆಲೆಯಲ್ಲಿ ನೋಡಿದಾಗ ಬ್ಯಾಂಕಿಂಗ್ ಸುಧಾರಣೆಗಳು ಮತ್ತು ಸಾಲ ನೀತಿಗಳು ಇಂತಹ ವರ್ಗಗಳ ಜನರನ್ನು ಒಳಗೊಳ್ಳಬೇಕಾಗಿಲ್ಲವೇ?

ಭೂಮಿ ಹಾಗೂ ಇನ್ನಿತರ ಯಾವುದೇ ರೀತಿಯ ಉತ್ಪಾದಕ ಸಂಪನ್ಮೂಲಗಳು–ಆಸ್ತಿಗಳಿಲ್ಲದೇ ಇರುವ ಕೃಷಿ ಕಾರ್ಮಿಕರು ಭೂರಹಿತ ದುಡಿಮೆಗಾರರು ಸಂಘಟಿತ ಹಣಕಾಸು ವ್ಯವಸ್ಥೆಯ ಸಾರ್ವಜನಿಕ ಬ್ಯಾಂಕುಗಳಿಂದ ಸಾಲ ಪಡೆಯಲು ಸಾದ್ಯವೇ ಇಲ್ಲ. ಕಾರಣ ಈ ಬ್ಯಾಂಕುಗಳು ಸಾಲ ನೀಡಲು ಪರಿಗಣಿಸುವ ಆಧಾರವೇ ಭೂಮಿ ಅಥವಾ ಇತರೆ ಸ್ತಿರಾಸ್ಥಿ. ಅದರಲ್ಲು ಕೃಷಿಯೋಗ್ಯ ಭೂಮಿ. ರಾಜ್ಯಮಟ್ಟದಲ್ಲಿ ಭೂರಹಿತ ದಿನಗೂಲಿ ದುಡಿಮೆಗಾರರ ಪ್ರಮಾಣ ಶೇಕಡಾ ೨೬.೪೫ರಷ್ಟಿದೆ. ರಾಜ್ಯಮಟ್ಟದ ಒಟ್ಟು ದುಡಿಮೆಗಾರರಲ್ಲಿ ಪರಿಶಿಷ್ಟರ ಪ್ರಮಾಣ ಶೇಕಡಾ ೧೬.೮೬. ಇದರಲ್ಲಿ ಮಹಿಳೆಯ ಪ್ರಮಾಣ ಅಧಿಕವಾಗಿದೆ.[೧೩] ದುಸ್ಥಿತಿ, ಅಭದ್ರತೆ, ಅಸಮಾನತೆ, ಅನಕ್ಷರತೆಗಳ ದುಷ್ಪರಿಣಾಮಗಳು ನಿರ್ಲಕ್ಷಿತ ಪರಿಶಿಷ್ಟ ಜನತೆಯ ಮೇಲೆ ಅಧಿಕವಾಗಿವೆ. ಮಹಿಳೆರ ಮೇಲಿನ ಇವುಗಳ ಪರಿಣಾಮ ಇನ್ನೂ ಘೋರವಾಗಿರುತ್ತದೆ.

ಈ ಅಧ್ಯಯನದ ವಿಶ್ಲೇಷಣೆಯಂತೆ ಶೇಕಡಾ ೨೮.೫೨ ಸಾಗುವಳಿದಾರರು ಸಂಘಟಿತ ಹಣಕಾಸು ಮೂಲದಿಂದ ಸಾಲ ಸೌಲಭ್ಯ ಪಡೆದಿದ್ದಾರೆ. ಶೇಕಡಾ ೭೧.೪೮ರಷ್ಟು ರೈತರು ಈ ಮೂಲದ ಸಾಲ ಸೌಲಭ್ಯದಿಂದ ಹೊರಗುಳಿದಿದ್ದಾರೆ. ಶೇಕಡಾ ೭೧ರಲ್ಲಿ ಶೇಕಡಾ ೨೮ರಷ್ಟು ಕೃಷಿ ಕಾರ್ಮಿಕರು ಮತ್ತು ಭೂರಹಿತ ಕಾರ್ಮಿಕರಿದ್ದು ಯಾವುದೇ ಮೂಲದಿಂದ ಸಾಲ ಪಡೆದಿಲ್ಲ. ಸಂಪನ್ಮೂಲ ಮತ್ತು ಶಿಕ್ಷಣ ರಹಿತರಾದ ಈ ವರ್ಗಗಳಿಗೆ ವಲಸೆಯು ಜೀವನೋಪಾಯದ ಮಾರ್ಗ. ಇವರಲ್ಲಿ ಬಹುತೇಕರು ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಸೇರಿದ್ದು ದುಸ್ಥಿತಿಯ ಬದುಕನ್ನು ನಡೆಸುತ್ತಿದ್ದಾರೆ. ಅಭಿವೃದ್ಧಿಯ ತಳಭಾಗದಲ್ಲಿದ್ದಾರೆ. ಅಭದ್ರತೆ ಅಸಮಾನತೆ, ಅನಾರೋಗ್ಯ, ಅನಕ್ಷರತೆಗಳಿಂದ ಜೀವನ ದೂಡುತ್ತಿದ್ದಾರೆ. ಭವಿಷ್ಯದ ಬಗ್ಗೆ ಸದಾ ಆತಂಕ ಹೊಂದಿದ್ದಾರೆ. ಹೀಗೆ ಈ ವರ್ಗಗಳನ್ನು ಹೊರಗಿಟ್ಟ ಹಣಕಾಸು ಸುಧಾರಣೆಯನ್ನು ಸುಧಾರಣೆ ಎನ್ನಬಹುದೇ? ಈ

ದೃಷ್ಟಿಯಲ್ಲಿ ಸುಧಾರಣೆಯೆಂಬ ಪರಿಕಲ್ಪನೆಯನ್ನು ಮರು ವ್ಯಾಖ್ಯಾಯಿನಿಸುವ ಅಗತ್ಯವಿಲ್ಲವೇ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಹಲವರನ್ನು ಹೊರಗಿಟ್ಟು ಕೆಲವರನ್ನು ಒಳಗೊಳ್ಳುವ ಅಭಿವೃದ್ಧಿ, ಅದು ಅಭಿವೃದ್ಧಿಯೇ?

ಈ ಅಧ್ಯಯನದ ವಿಶ್ಲೇಷಣೆಯ ಪ್ರಕಾರ ಶೇಕಡಾ ೩೮ರಷ್ಟು ಜನರು ಯಾವ ಮೂಲದಿಂದಲೂ ಸಾಲ ಪಡೆದೇ ಇಲ್ಲ. ಇದರಲ್ಲಿ ಶೇಕಡಾ ೩೯ರಷ್ಟು ಸಿಂಧನೂರು ಮತ್ತು ಶೇಕಡಾ ೬೬ರಷ್ಟು ದೇವದುರ್ಗ ತಾಲ್ಲೂಕಿನ ಜನ ಯಾವ ಮೂಲದಿಂದಲೂ ಸಾಲ ಸೌಲಭ್ಯ ಪಡೆದಿಲ್ಲ. ಮೇಲೆ ತಿಳಿಸಿದ ಯಾವ ಮೂಲದಿಂದಲೂ ಸಾಲ ಪಡೆಯದ ಶೇಕಡಾ ೩೮ರಷ್ಟು ಜನರಲ್ಲಿ ಭೂರಹಿತ ದುಡಿಮೆಗಾರರು ಮತ್ತು ಕೃಷಿ ಕಾರ್ಮಿಕರಿದ್ದಾರೆ. ಭೂಮಿ ಕೌಶಲ್ಯ ಶಿಕ್ಷಣ ಯಾವ ಆಧಾರಗಳು ಇಲ್ಲದಿರುವುದೇ ಇವರು ಎರಡೂ ಮೂಲಗಳಿಂದ ಸಾಲ ಪಡೆಯಲು ಸಾಧ್ಯವಾಗದೇ ಇರುವುದಕ್ಕೆ ಕಾರಣಗಳು ಎನ್ನಬಹುದು. ಇದರಲ್ಲಿ ಕೆಲವರು ಸಾಲ ಪಡೆದರೆ ತೀರಿಸಲು ಸಾದ್ಯವಾಗುವುದೇ ಇಲ್ಲ ಎಂಬ ಕಾರಣದಿಂದ ಸಾಲ ಪಡೆಯುವ ಇಚ್ಚೆಯೇ ಹೊಂದಿಲ್ಲ. ಇನ್ನು ಕೆಲವರು ಆಸ್ತಿ ಇದ್ದರೂ ದಾಖಲಾತಿಗಳು ಅವರ ಪೂರ್ವಿಕರ ಹೆಸರಲ್ಲಿದ್ದು ಅವರ ಸಾವಿನ ನಂತರ ದಾಖಲೆಗಳನ್ನು ತಮ್ಮ ಹೆಸರುಗಳಿಗೆ ವರ್ಗಾಯಿಸಿಕೊಂಡಿಲ್ಲ. ದೇವದುರ್ಗ ತಾಲ್ಲೂಕಿನ ಹೇರುಂಡಿ ಗ್ರಾಮದ ಆದಮ್ಮ ಗಂಡ ಹನುಮಯ್ಯ ಹಾಗೂ ರಂಗಪ್ಪ ತಂದೆ ಶಿವಪ್ಪ ಕ್ರಮವಾಗಿ ಅರ್ಧ ಎಕರೆ ಮತ್ತು ಹದಿನೆಂಟು ಗುಂಟೆ ತುಂಡು ಭೂಮಿ ಹೊಂದಿದ್ದಾರೆ. ಆದರೆ ಮೂಲ ದಾಖಲೆಗಳು ಇವರ ಹೆಸರಿನಲ್ಲಿ ಇಲ್ಲ. ಸಹಕಾರ ಸಂಘಗಳಿಂದ ಸಾಲ ಪಡೆಯಲು ತುಂಬಾ ಸಮಯ ತೆಗೆದುಕೊಳ್ಳುತ್ತದೆ. ಅರ್ಜಿ ಸಲ್ಲಿಸಿದ ನಂತರ ಎರಡು ವರ್ಷಗಳವರೆಗೂ ಕಾಯಬೇಕಾಗುತ್ತದೆ. ಆದರೆ ಸಾಲ ದೊರೆಯುವ ಬರವಸೆ ಮಾತ್ರ ಇಲ್ಲ. ವಾಣಿಜ್ಯ ಬ್ಯಾಂಕುಗಳ ಸಂಕೀರ್ಣ ಸಾಲ ನೀತಿಗಳಿಂದ ಜನರು ಬ್ಯಾಂಕುಗಳಿಂದ ಸಾಲ ಪಡೆಯಲು ಇಚ್ಚಿಸುವುದಿಲ್ಲ. ಸಿಂಧನೂರು ಮತ್ತು ದೇವದುರ್ಗ ತಾಲ್ಲೂಕಿನ ಶೇಕಡಾ ೬೬.೬೬ರಷ್ಟು ಪರಿಶಿಷ್ಟರು ಯಾವ ಮೂಲದಿಂದ ಸಾಲ ಪಡೆಯಲಾಗದೆ ಸಂಘಟಿತ ಮೂಲದ ಹಣಕಾಸು ಸೇವೆಗಳಿಂದ ವಂಚಿತರಾಗಿದ್ದಾರೆ.

### ೫.೧. ಸಾಲ ಸಂಸ್ಥೆಗಳ ಬಗ್ಗೆ ಜನರ ಅಭಿಪ್ರಾಯ

ಸಂಘಟಿತ ಸಾಲ ಸಂಸ್ಥೆಗಳಿಂದ ಸಾಲ ಸೌಲಭ್ಯ ಪಡೆಯುವ ಬಗ್ಗೆ ಜನರ ದೃಷ್ಟಿಕೋನವನ್ನು ಪರಿಗಣಿಸಬೇಕಾಗಿತ್ತದೆ. ಇಲ್ಲಿ ಸಂಘಟಿತ ಸಾಲ ವ್ಯವಸ್ಥೆಯ ಪ್ರಮುಖ ಹಣಕಾಸು ಸಂಸ್ಥೆಗಳೆಂದರೆ ಸಹಕಾರ ಸಂಘಗಳು ಮತ್ತು ವಾಣಿಜ್ಯ ಬ್ಯಾಂಕುಗಳು. ಗ್ರಾಮೀಣ ಸಾಲ ಪೂರೈಕೆಯಲ್ಲಿ ಈ ಎರಡೂ ಬ್ಯಾಂಕುಗಳು ಮುಖ್ಯ ಪಾತ್ರ ವಹಿಸುತ್ತವೆ. ಈ ಎರಡೂ ಸಂಸ್ಥೆಗಳಿಂದ ಸಂಘಟಿತ ಸಾಲ ಸೌಲಭ್ಯಗಳನ್ನು ಪಡೆಯುವವರು ಹಾಗೂ ಕೇವಲ ಒಂದು ಸಂಸ್ಥೆಯಿಂದ ಸಾಲ ಪಡೆಯುವವರು ಎಂದು ಭಾಗಗಳಾಗಿ ವಿಂಗಡಿಸಲಾಗಿದೆ. ಸಂದರ್ಶನದಲ್ಲಿ ಕಂಡುಬಂದಂತೆ ಸಂಘಟಿತ ಸಾಲ ವ್ಯವಸ್ಥೆಯಿಂದ ಸಾಲ ಸೌಲಭ್ಯ ಪಡೆದವರಲ್ಲಿ ಶೇಕಡಾ ೪೯.೫೮ರಷ್ಟು ಲಿಂಗಾಯುತ ಜಾತಿಯವರು.

ಇವರು ಸಹಕಾರ ಸಂಸ್ಥೆಗಳು ಮತ್ತು ವಾಣಿಜ್ಯ ಬ್ಯಾಂಕುಗಳೆರಡರಿಂದಲೂ ಸಾಲ ಪಡೆದಿದ್ದಾನೆ. ಶೇಕಡಾ ೪೧ರಷ್ಟು ಲಿಂಗಾಯತ ಜಾತಿಯವರು ಸಹಕಾರ ಸಂಘಗಳಿಂದ ಸಾಲ ಸೌಲಭ್ಯ ಪಡೆದಿದ್ದಾರೆ. ಶೇಕಡಾ ೩೦ರಷ್ಟು ಪರಿಶಿಷ್ಟರು ಸಹಕಾರ ಸಂಘದಿಂದ ಮಾತ್ರ ಸಾಲ ಪಡೆದಿದ್ದಾರೆ. ಇವರೆಲ್ಲಾ ಅತಿ ಸಣ್ಣ ರೈತರಾಗಿದ್ದು ಕಡಿಮೆ ಭೂಹಿಡುವಳಿ ಹೊಂದಿದ್ದಾರೆ. ವಾಣಿಜ್ಯ ಬ್ಯಾಂಕಿನಿಂದ ಪರಿಶಿಷ್ಟ ಜಾತಿ ಮತ್ತು ಜನಾಂಗದವರು ಸಾಲ ಸೌಲಭ್ಯ ಪಡೆದಿಲ್ಲ. ಆದೇ ರೀತಿ ಶೇ೨೩ರಷ್ಟು ಹಿಂದುಳಿದ ಜಾತಿಯ ಜನರು ಸಹಕಾರ ಸಂಘದಿಂದ ಸಾಲವನ್ನು ಪಡೆದಿದ್ದಾರೆ. ಇವರು ಸಹ ವಾಣಿಜ್ಯ ಬ್ಯಾಂಕುಗಳಿಂದ ಸಾಲ ಸೌಲಭ್ಯ ಪಡೆದಿಲ್ಲ. ಭೂ ಹಿಡುವಳಿಗೂ ಪಡೆಯುವ ಸಾಲ ಸೌಲಭ್ಯಕ್ಕೂ ಸಂಬಂಧವಿದೆ. ಲಿಂಗಾಯಿತ ಜಾತಿಯ ಜನರ ಭೂಹಿಡುವಳಿಗಳು ದೊಡ್ಡ ಪ್ರಮಾಣ ದಲ್ಲಿರುವುದರಿಂದ ವಾಣಿಜ್ಯ ಬ್ಯಾಂಕುಗಳಿಂದ ಮೂರರಿಂದ ನಾಲ್ಕು ಲಕ್ಷದವರೆಗೂ ಸಿಂಧನೂರಿನ ಜವಳಗೇರಾ ಹೋಬಳಿಯ ಸಿಂಡಿಕೇಟ್ ಬ್ಯಾಂಕು ಹಾಗೂ ದೇವದುರ್ಗ ತಾಲ್ಲೂಕು ಜಾಲಹಳ್ಳಿ ಸ್ಟೇಟ್ ಬ್ಯಾಂಕಿನಿಂದ ಸಾಲ ಸೌಲಭ್ಯ ಪಡೆದಿದ್ದಾರೆ. ಗುಂಪು ಚರ್ಚೆಯಲ್ಲಿ ಇವರು ತಿಳಿಸಿದಂತೆ ವಾಣಿಜ್ಯ ಬ್ಯಾಂಕುಗಳಿಂದ ಪಡೆಯುವ ಸಾಲದಿಂದ ಸಾಗುವಳಿ ಪ್ರಮಾಣ ಮತ್ತು ಉತ್ಪನ್ನ ಪ್ರಮಾಣಗಳು ಹೆಚ್ಚಿಸಲು ಸಾಧ್ಯವಾಗಿದೆ. ಈ ಮೂಲಕ ಬಡ್ಡಿ ರಿಯಾಯಿತಿ ಸಾಲ ಮತ್ತು ಸರಿಯಾದ ಸಮಯಕ್ಕೆ ಮರುಪಾವತಿಸಿದ್ದಕ್ಕೆ ದೊರೆಯುವ ಪ್ರೋತ್ಸಾಹ ಧನ ಸಹ ಪಡೆದಿದ್ದಾರೆ. ಇದರಿಂದ ಈ ಸಮುದಾಯದ ಕೃಷಿ ಆದಾಯ ಹೆಚ್ಚಾಗಿದೆ. ಈ ಕುಟುಂಬಗಳ ಉಳಿತಾಯ ಹೆಚ್ಚಾಗಿದೆ. ಹೆಚ್ಚು ಅದಾಯ ಮತ್ತು ಉಳಿತಾಯದಿಂದ ಬ್ಯಾಂಕಿನ ಸಾಲ ಹಿಂದಿರುಗಿಸುವ ಹಾಗೂ ಈ ರೀತಿಯ ನಿರಂತರ ಸಾಲ ಪಡೆದು ಕೃಷಿ ಉತ್ಪಾದಕ ಉದ್ದೇಶಕ್ಕೆ ಬಳಸಿಕೊಳ್ಳುವ ಪ್ರಕ್ರಿಯೆಯಿಂದ ಹೆಚ್ಚುವರಿ ಸಂಪನ್ಮೂಲ ಸೃಷ್ಟಿಸಿಕೊಳುಲು ಅಥವಾ ಸಂಗ್ರಹಿಸಿಕ್ಕೊಳ್ಳಲು ಸಾಧ್ಯವಾಗಿದೆ. ಹೊಸದಾಗಿ ಭೂಮಿ ಖರೀದಿಸಿದ್ದಾರೆ. ಆಸ್ತಿ ಹೆಚ್ಚಿಸಿ ಕೊಂಡಿದ್ದಾರೆ. ಇದರಿಂದ ಈ ಜಾತಿಯ ಜನರ ಆರ್ಥಿಕ ಪರಿಸ್ಥಿತಿ ಸುಧಾರಿಸಿದೆ. ಮಕ್ಕಳಿಗೆ ಉತ್ತಮ ಶೈಕ್ಷಣಿಕ ಸೌಲಭ್ಯ ಕೊಡಿಸಲು ಸಾಧ್ಯವಾಗಿದೆ. ಜೀವನ ಮಟ್ಟ ಸುಧಾರಣೆಗೊಂಡಿದೆ. ಸಮಾಜದಲ್ಲಿ ಇವರ ಸ್ಥಾನಮಾನಗಳು ಉತ್ತಮಗೊಂಡಿವೆ. ಆದರೆ ಈ ಅವಕಾಶ ಸಹಕಾರ ಸಂಘಗಳಿಂದ ಸಾಲ ಸೌಲಭ್ಯ ಪಡೆಯುವ ಪರಿಶಿಷ್ಟ ಮತ್ತು ಹಿಂದುಳಿದ ಜನಾಂಗಗಳಿಗೆ ಇಲ್ಲವಾಗಿದೆ. ಕಾರಣ ಸಹಕಾರ ಸಂಘಗಳ ಆರ್ಥಿಕ ದುಸ್ಥಿತಿಯಿಂದ–ದುರ್ಬಲ ಹಣಕಾಸು ಪರಿಸ್ಥಿತಿಯಿಂದ ಈ ಸಂಸ್ಥೆಗಳು ನೀಡುವ ಸಾಲ ಕಡಿಮೆ ಹಾಗೂ ತುಂಬಾ ವಿಳಂಬ ವಾಗುತ್ತದೆ. ಸಾಲಗಳು ದೊರೆಯುತ್ತವೆ ಎಂಬ ಭರವಸೆಯೇ ಎಲ್ಲ ಎನ್ನತ್ತಾರೆ ಜನರು. ಕಾರಣ ಈ ಸಂಘಗಳು ತಮ್ಮ ಸಂಪನ್ಮೂಲಕ್ಕೆ ಸರ್ಕಾರವನ್ನು ಅವಲಂಬಿಸಿವೆ. ಪ್ರಬಲ ಲಿಂಗಾಯಿತ ಜಾತಿಯವರು ಈ ಸಂಘಗಳಿಂದ ಸಾಲ ಮನ್ನಾ ಸೌಲಭ್ಯವನ್ನು ಪಡೆದಿದ್ದಾರೆ. ಅತೀ ಹೆಚ್ಚು ಸಾಲ ಮನ್ನಾ ಅನುಕೂಲ ಪಡೆದಿರುವುದು ಈ ವರ್ಗಗಳೇ. ಆದರೆ ಚರ್ಚೆಯ ಸಂದರ್ಭದಲ್ಲಿ ತಿಳಿದು ಬಂದಂತೆ ಪಡೆದ ಸಾಲವನ್ನು ಮರುಪಾವತಿಸುವ ಅಸಕ್ತಿ ಇವರಲ್ಲಿ ಕಂಡುಬಂದಿಲ್ಲ. ಕಾರಣ ಅಡಳಿತ ಪಕ್ಷದ ಸರ್ಕಾರಗಳು ಉಳಿದ ಸಾಲಗಳನ್ನು ಮನ್ನಾ ಮಾಡಬಹುದೆಂಬ ಭಾವನೆ ಮತ್ತು

ನಿರೀಕ್ಷೆ. ಹೀಗೆ ದೊಡ್ಡ ಭೂಹಿಡುವಳಿದಾರಾಗಿರುವ ಪ್ರಬಲ ಜಾತಿಗಳ ಜನರೆ ವಾಣಿಜ್ಯ ಬ್ಯಾಂಕುಗಳಿಂದ ಹೆಚ್ಚಿನ ಸಾಲ ಪಡೆಯುತ್ತಾರೆ. ಎ.ಕೆ. ಸಿಂಗ್‌ರು ಇದೇ ಅಭಿಪ್ರಾಯ ಕೊಡುತ್ತಾರೆ. ಅವರ ಪ್ರಕಾರ ವಾಣಿಜಬ್ಯಾಂಕುಗಳ ಹಣಕಾಸು ದೊಡ್ಡ ರೈತರು ಹಾಗೂ ಮದ್ಯಮ ರೈತರ ಪಾಲಾಗುತ್ತದೆ. ಈ ಬ್ಯಾಂಕುಗಳ ಹಣಕಾಸು ಸೌಲಭ್ಯಗಳನ್ನು ಹೆಚ್ಚಿನ ಪ್ರಮಾಣದಲ್ಲಿ ದೊಡ್ಡ ರೈತರು ಪಡೆಯುತ್ತಾರೆ.[೧೪]

ನಿರ್ಲಕ್ಷಿತ ಪರಿಶಿಷ್ಟ ಜಾತಿ ಮತ್ತು ಜನಾಂಗದ ಜನರು ವಾಣಿಜ್ಯ ಬ್ಯಾಂಕುಗಳು ಶ್ರೀಮಂತರಿಗೆ ಸಾಲ ಸೌಲಭ್ಯ ನೀಡುತ್ತವೆ ಎಂದು ಅಬಿಪ್ರಾಯಪಟ್ಟರು. ಇವರು ವಾಣಿಜ್ಯ ಬ್ಯಾಂಕುಗಳು ತಮಗೆ ಹಣಕಾಸು ಪೂರೈಸುತ್ತವೆ ಎಂಬ ಯಾವುದೆ ಭಾವನೆ ಅಥವಾ ನಂಬಿಕೆ ಇಲ್ಲ ಅಂದು ತಿಳಿಸಿದರು. ಈ ಬ್ಯಾಂಕುಗಳ ಸಾಲ ನೀತಿಗಳು ಸಂಕೀರ್ಣವಾಗಿವೆ. ಈ ಬ್ಯಾಂಕುಗಳ ಸಾಲ ನಿಯಮಗಳು ದುರ್ಬಲ ವರ್ಗಗಳಿಗೆ ಪೂರಕವಾಗಿಲ್ಲವೆಂದು ಅಬಿಪ್ರಾಯ ಪಟ್ಟರು. ಅದೇ ರೀತಿ ಹಿಂದುಳಿದ ವರ್ಗಗಳಲ್ಲಿ ಶೇ. ೨೮ರಷ್ಟು ಜನರು ವಾಣಿಜ್ಯ ಬ್ಯಾಂಕುಗಳು ಸಾಲ ಅಗತ್ಯಗಳಿರುವ ಜನರಿಗೆ ಸಾಲ ಸೌಲಭ್ಯ ನೀಡುವುದಿಲ್ಲ ಎಂದರು. ದೇವದುರ್ಗ ತಾಲ್ಲೂಕಿನ ಬಹುತೇಕ ಪರಿಶಿಷ್ಟರು ಮತ್ತು ಹಿಂದುಳಿದವರು ವಾಣಿಜ್ಯ ಬ್ಯಾಂಕುಗಳು ಹಾಗೂ ಈ ಬ್ಯಾಂಕುಗಳ ಅಧಿಕಾರಿಗಳ ವರ್ತನೆ ಬಗ್ಗೆ ಅಸಹನೆ ವ್ಯಕ್ತಪಡಿಸಿದರು. ವಾಣಿಜ್ಯ ಬ್ಯಾಂಕುಗಳು ತಾಲ್ಲೂಕು ಕೇಂದ್ರಗಳು ಮತ್ತು ಹೋಬಳಿ ಅಥವಾ ವಾಣಿಜ್ಯ ಕೇಂದ್ರಗಳಲ್ಲಿ ಸ್ಥಾಪನೆಗೊಂಡಿರುತ್ತವೆ. ಅದರಂತೆ ದೇವದುರ್ಗ ತಾಲ್ಲೂಕು ಹೇರುಂಡೆ ಗ್ರಾಮದ ಜನರು ವಾಣಿಜ್ಯ ಬ್ಯಾಂಕಿನ ಅಂತರ ದೂರವೆಂದು ಭಾವಿಸಿದರು. ವಾಣಿಜ್ಯ ಬ್ಯಾಂಕುಗಳು ಲಾಭಗಳಿಕೆಗೆ ಅಧ್ಯತೆ ನೀಡುತ್ತವೆ. ಇದರಿಂದ ಗ್ರಾಮೀಣ ಜನತೆಯ ಮುಖ್ಯವಾಗಿ ಸಣ್ಣ, ಅತಿ ಸಣ್ಣ ಮತ್ತು ಭೂರಹಿತ ಕಾರ್ಮಿಕರನ್ನು ನಿರ್ಲಕ್ಷಿಸುತ್ತವೆ.

ಕಾರ್ಪೊರೇಟರ್‌ಗಳಿಗೆ, ಶ್ರೀಮಂತ ರೈತರಿಗೆ, ಬಂಡವಾಳಶಾಹಿ ಕೃಷಿಕರಿಗೆ ಹೆಚ್ಚು ಹೆಚ್ಚು ಹಣಕಾಸು ಪೂರೈಸುವ, ಅವರ ಸಾಲ ಅಗತ್ಯಗಳನ್ನು ಪೂರೈಸಲು ಅಸಕ್ತಿವಹಿಸುವ ವಾಣ್ಯಿಜ್ಯ ಬ್ಯಾಂಕುಗಳು ಬಡವರ, ಕೂಲಿ ಕಾರ್ಮಿಕರು, ಅತೀ ಸಣ್ಣ ರೈತವರ್ಗಗಳ ಹಣಕಾಸು ಅಗತ್ಯಗಳನ್ನು ಪೂರೈಸಲು ಆಸಕ್ತಿ ವಹಿಸುವುದಿಲ್ಲ. ಶ್ರೀಮಂತರು ಸಾಲ ಮರುಪಾವತಿಸುತ್ತಾರೆ ಬಡವರಿಗೆ ಈ ಸಾಮರ್ಥ್ಯ ಇರುವುದಿಲ್ಲ ಎಂಬ ಕಲ್ಪನೆ. ಆದರೆ ಇಂದು ಶ್ರೀಮಂತರಿಗೆ ನೀಡಿರುವ ಸಾಲ ಹಿಂತಿರುಗಿ ಬರದೆ ಅನುತ್ಪಾದಕ ಆಸ್ತಿ ಅಥವಾ ಅನುತ್ಪಾದಕ ಸಾಲವಾಗಿ ಪರಿವರ್ತನೆಗೊಂಡಿದೆ. ಈಗಾಗಲೇ ಸಹಕಾರ ಪರಿಕಲ್ಪನೆಯ ಭಾಗವಾದ ಭೂ ಅಭಿವೃದ್ಧಿ ಬ್ಯಾಂಕುಗಳು ಅಪಾರ ಪ್ರಮಾಣದಲ್ಲಿ ಶ್ರೀಮಂತರು, ದೊಡ್ಡ ರೈತರಿಗೆ ನೀಡಿದ ಸಾಲ ಹಿಂದಿರುಗಿ ಬರದೆ ಈ ಬ್ಯಾಂಕುಗಳು ಆರ್ಥಿಕ ಸಂಕಷ್ಟಕ್ಕೆ ಸಿಲುಕಿ ದೀವಾಳಿಯಾಗಿವೆ. ಸಹಕಾರ ಸಂಘಗಳ ಸ್ಥಿತಿಯು ಇದರಿಂದ ಹೊರತಾಗಿಲ್ಲ. ಸಹಕಾರ ಸಂಘಗಳಿಂದ ಹೆಚ್ಚಿನ ಪ್ರಮಾಣದಲ್ಲಿ ಸಾಲ ಪಡೆದವರು ಬಹುತೇಕರು ಬಲಾಢ್ಯ ಜಾತಿಯವರೇ ಆಗಿದ್ದು ಸಾಲವನ್ನು ಮರುಪಾವತಿಸದೇ ಈ ಸಂಘಗಳು ಸಹ ದೀವಾಳಿ ಅಂಚಿನಲ್ಲಿ ನಿಂತಿವೆ. ೨೦೧೧ರ ಮಾರ್ಚ್ ತನಕ ದೇಶದ ೨೭ ಸಾರ್ವಜನಿಕ ವಲಯದ ಬ್ಯಾಂಕುಗಳ

ವಸೂಲಾಗದ ಸಾಲ ೨.೪೫.೮೦೯ ಲಕ್ಷ ಕೋಟಿ. ಸಾರ್ವಜನಿಕ ರಂಗದ ಬ್ಯಾಂಕುಗಳ ಅನುತ್ಪಾದಕ ಆಸ್ತಿಯ ಪ್ರಮಾಣ ೨೦೧೪ ಮಾರ್ಚ್‌ವರೆಗೆ ಶೇ೪.೪೭ ಎನ್ನಲಾಗಿದೆ.[೧೫]

ಆಸ್ತಿವುಳ್ಳವರು, ಶ್ರೀಮಂತ ಉದ್ಯಮಿಗಳು, ಶ್ರೀಮಂತ ಬಂಡವಾಳಶಾಹಿ ರೈತರು ಪಡೆದ ಸಾಲವನ್ನು ಹಿಂತಿರುಗಿಸುತ್ತಾರೆ, ದುರ್ಬಲ, ಆಸ್ತಿರಹಿತರು ಸಾಲ ಮರುಪಾವತಿ ಮಾಡುವುದಿಲ್ಲವೆಂಬ ವಾಣಿಜ್ಯ ಬ್ಯಾಂಕುಗಳ ಧೋರಣೆ ಬದಲಾಗಬೇಕು. ಬಡವರ ಸಾಲ ಅಗತ್ಯಗಳನ್ನು ಪರಿಗಣಿಸಿ ಅವರೂ ಸಾಲ ಪಡೆಯುವ ಹಕ್ಕು ಮತ್ತು ಆರ್ಥಿಕ ಸಾಮಾಜಿಕವಾಗಿ ಪರಿವರ್ತನೆ ಹೊಂದುವ, ಯೋಗ್ಯ ಜೀವನ ಮಾರ್ಗ ಆರಿಸಿಕೊಳ್ಳುವ ಹಕ್ಕು ಹೊಂದಿದ್ದಾರೆ ಎಂದು ಭಾವಿಸಬೇಕಾಗಿತ್ತದೆ. ಈ ರೀತಿ ಸಾರ್ವಜನಿಕ ವಲಯದ ವಾಣಿಜ್ಯ ಬ್ಯಾಂಕುಗಳು ಅಲೋಚಿಸುವ ಮತ್ತು ಅಲೋಚನೆಯನ್ನು ಪರಿಣಾಮಕಾರಿಯಾಗಿ ಅಚರಣೆಗೆ ತರುವಂತೆ ಮಾಡುವ ಜವಾಬ್ದಾರಿ ಸರ್ಕಾರ ಮತ್ತು ಆರ್‌ಬಿಐ ಯದ್ದು. ಹೀಗೆ ಶ್ರೀಮಂತ ಕಾರ್ಪೊರೇಟ್ ಕಂಪನಿ, ಉದ್ಯಮಿಗಳು, ಕಾರ್ಪೋರೇಟ್ ರೈತರನ್ನು ಒಳಗೊಳ್ಳುವ ಪರಿಶಷ್ಟರು ಮತ್ತು ಹಿಂದುಳಿದ ವರ್ಗಗಳ ದುರ್ಬಲರು, ಮಹಿಳೆಯರು (ವಿಧಿವೆ) ಆಸ್ತಿರಹಿತ ದುಡಿಮೆ ವರ್ಗಗಳನ್ನು ಹೊರಗಿಡುವ ಸಂಘಟಿತ ಹಣಕಾಸು ವ್ಯವಸ್ಥೆಯನ್ನು ಮತ್ತು ದೇಶದ ಹಣಕಾಸು ನೀತಿಗಳನ್ನು ಜಾಗತೀಕರಣದ ಈ ಸಂದರ್ಭದಲ್ಲಿ ಪುನರ್ ಪರಿಶೀಲಿಸುವ–ರಚಿಸುವ–ಸಂಘಟಿಸುವ ಅನಿವಾರ್ಯತೆ ಇದೆ ಎಂಬುದು ನನ್ನ ಅಭಿಪ್ರಾಯ. ಈ ರೀತಿಯ ಧೋರಣೆ ಮತ್ತು ನೀತಿಗಳು **'ಕೊಟ್ಟವನು ಕೋಡಂಗಿ ಈಸ್ಕೊಂಡವನು ವೀರಭದ್ರ"** ಎನ್ನುವುದಕ್ಕೆ ಪೂರಕವಾಗಿದೆ. ಈ ಧೋರಣೆಯು ಸೃಷ್ಟಿಸುವ ಸಮಸ್ಯೆಗಳು, ಅನ್ಯಾಯ, ಅಸಮಾನತೆಗಳು ಇತ್ಯಾದಿಗಳ ಪರಿಣಾಮಗಳನ್ನು ನೀತಿ ರೂಪಿಸುವ ತಜ್ಞರು ಗಂಭೀರವಾಗಿ ಆಲೋಚಿಸಬೇಕಾಗುತ್ತದೆ. ಬಡವರು, ಮಧ್ಯಮ ವರ್ಗ ಸೇರಿದಂತೆ ದೇಶದ ಸಾಮಾನ್ಯರು ಬೆವರು ಸುರಿಸಿ ದುಡಿದ ಉಳಿತಾಯದ ಹಣದಿಂದ ಬ್ಯಾಂಕಿಂಗ್ ಕ್ಷೇತ್ರ ಬೆಳೆಯುತ್ತಿದೆ. ಬ್ಯಾಂಕುಗಳಲ್ಲಿ ಠೇವಣಿ ಇಡುವವರಲ್ಲಿ ಸಾಮಾನ್ಯರೇ ಅಧಿಕ. ಹಾಗಾಗಿ ಬ್ಯಾಂಕಿಂಗ್ ಕ್ಷೇತ್ರದ ಎಲ್ಲಾ ಪ್ರಯೋಜನಗಳು ನೇರವಾಗಿ ಸಾಮಾನ್ಯ ಜನರಿಗೂ ಸಿಗುವಂತಾಗಬೇಕು. ಆದರೆ ಕೇವಲ ಪ್ರಭಾವಿಗಳು ಹಾಗೂ ಉಳ್ಳವರು, ಲಾಬಿಮಾಡುವವರು ಮಾತ್ರ ಬ್ಯಾಂಕಿಂಗ್ ಪ್ರಯೋಜನ ಪಡೆಯುತ್ತಿದ್ದಾರೆ. ಅವರು ಪಡೆಯುತ್ತಿರುವ ದೊಡ್ಡ ಮೊತ್ತದ ಸಾಲ ಮರುಪಾವತಿ ಯಾಗುತ್ತಿಲ್ಲ. ಇದರಿಂದಾಗಿ ಬ್ಯಾಂಕುಗಳಲ್ಲಿ ಅನುತ್ಪಾದಕ ಆಸ್ತಿಯ ಪ್ರಮಾಣ ದಿನೇ ದಿನೇ ಬೆಟ್ಟದಷ್ಟು ಬೆಳೆಯುತ್ತಿದೆ.

ದೇಶದ ಪ್ರತಿಯೊಬ್ಬ ಪ್ರಜೆಗೂ ಬ್ಯಾಂಕಿಂಗ್ ಸೇವೆ ಒದಗಿಸಬೇಕು. ಗ್ರಾಮೀಣ ಪ್ರದೇಶಗಳ ಕೃಷಿ ಕ್ಷೇತ್ರದ ರೈತರ ಹಣಕಾಸು ಅಗತ್ಯಗಳನ್ನು ದೊಡ್ಡ ಪ್ರಮಾಣದಲ್ಲಿ ಕಡಿಮೆ ಬಡ್ಡಿ ದರದಲ್ಲಿ ಪೂರೈಸಬೇಕು. ಗ್ರಾಮೀಣ ಪ್ರದೇಶಗಳ ಅಸಂಘಟಿತ ಸಾಲ ಮೂಲಗಳ ಪ್ರಭಾವ ತಗ್ಗಿಸಬೇಕು. ದುರ್ಬಲ ರೈತರು ಹಾಗೂ ಅಸಹಾಯಕ ಶೋಷಿತ ವರ್ಗಗಳು ಸಾಲ ಸೌಲಭ್ಯ ಪಡೆಯುವಂತಾಗ ಬೇಕು. ಕೃಷಿ ಉತ್ಪಾದನೆ ಹೆಚ್ಚಬೇಕು. ಉದ್ಯೋಗವಕಾಶಗಳು ಹೆಚ್ಚಬೇಕು. ಬ್ಯಾಂಕುಗಳ ರಾಷ್ಟ್ರೀಕರಣದ

ಆಶಯವು ಇದೇ ಆಗಿತ್ತು. ದೇಶದ ಅರ್ಥವ್ಯವಸ್ಥೆ ಬಲಿಷ್ಠವಾಗಬೇಕೆಂಬುದು ಇದರ ಉದ್ದೇಶವಾಗಿತ್ತು. ಆದರೆ ಇಂದಿನ ಅಪಾರ ಪ್ರಮಾಣದ ಅನುತ್ಪಾದಕ ಆಸ್ತಿ, ಬ್ಯಾಂಕುಗಳ ಲಾಭಗಳಿಕೆಯ ಮನಸ್ಥಿತಿ ಮತ್ತು ದುರ್ಬಲರ ವರ್ಗಗಳ ನಿರ್ಲಕ್ಷತೆ ವಿಶ್ಲೇಷಿಸಿದರೆ ವಿಶೇಷವಾಗಿ ವಾಣಿಜ್ಯ ಬ್ಯಾಂಕುಗಳ ಹಾಗೂ ಬ್ಯಾಂಕಿಂಗ್ ವಲಯದ ಸಾಲ ನೀತಿಗಳನ್ನು ಪುನರ್ ವ್ಯಾಖ್ಯಾಯಿನಿಸಬೇಕಾದ ಅನಿವಾರ್ಯತೆ ಮನವರಿಕೆಯಾಗುತ್ತದೆ. ಬ್ಯಾಂಕುಗಳ ರಾಷ್ಟ್ರೀಕರಣದ ಆಶಯವು ಈಡೇರುವುದೆ ಎಂಬ ಪ್ರಶ್ನೆಗೆ ಉತ್ತರ ದೊರಕಬಹುದು.

ಸಹಕಾರ ಸಂಘಗಳ ಬಗ್ಗೆ ಜನರ ಅಭಿಪ್ರಾಯವನ್ನು ಪರಿಗಣಿಸುವುದಾದರೆ ಈಗಾಗಲೇ ಈ ಬ್ಯಾಂಕುಗಳ ಧೋರಣೆಗಳನ್ನು ವಿಶ್ಲೇಷಿಸಲಾಗಿದೆ. ದೇವದುರ್ಗ ಮತ್ತು ಸಿಂಧನೂರು ತಾಲೂಕಿನ ಅಭಿಪ್ರಾಯಗಳು ಒಂದೇ ತೆರನಾಗಿದೆ. ದೇವದುರ್ಗ ತಾಲೂಕಿನ ಶೇಕಡಾ ೩೨ ಮತ್ತು ಸಿಂಧನೂರು ತಾಲೂಕಿನ ಶೇಕಡಾ ೩೦ರಷ್ಟು ಜನ ಸಹಕಾರ ಸಂಘಗಳು ನೀಡುವ ಸಾಲ ಕಡಿಮೆ. ಈ ಸಾಲ ಉತ್ಪಾದನಾ ಉದ್ದೇಶಗಳಿಗೆ ಬಳಕೆಯಾಗುವುದಿಲ್ಲ. ಸಾಲ ದೊರೆಯುವುದು ವಿಳಂಬವಾಗುತ್ತದೆ. ಈ ಬ್ಯಾಂಕುಗಳು ಸಹ ಉಳ್ಳವರ ಪರವಾಗಿರುತ್ತವೆ. ಖಾತೆದಾರು ಮಾತ್ರ ಸಾಲ ಪಡೆಯಬಹುದು. ಭೂಮಿ ಇಲ್ಲದ ಹಾಗೂ ಆದಾಯದ ಮೂಲಗಳಿಲ್ಲದ ಗ್ರಾಮೀಣ ಬಡ ವರ್ಗಗಳು ಇಂದಿಗೂ ಸಹಕಾರ ಸಂಘಗಳ ಸದಸ್ಯರಾಗುವ ಅರ್ಹತೆ ಇಲ್ಲದೆ ಸಾಲ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಸಹಕಾರ ಸಂಸ್ಥೆಗಳಿಂದ ಸಾಲ ಪಡೆದ ಸದಸ್ಯರುಗಳಿಂದ ಸಾಲ ವಸೂಲೂ ಮಾಡುವುದು ಸಂಸ್ಥೆಯ ಕರ್ತವ್ಯ. ಆ ಮೂಲಕ ಸಂಸ್ಥೆಯ ಆರ್ಥಿಕ ಸ್ಥಿರತೆ ಕಾಪಾಡಿಕೊಳ್ಳುವುದು ಸಂಸ್ಥೆಯ ಜವಾಬ್ದಾರಿ. ಸಹಕಾರ ತತ್ವವೂ ಇದನ್ನೆ ಪ್ರತಿಪಾದಿಸುತ್ತದೆ. ಆದರೆ ಸಾಲ ವಸೂಲು ಮಾಡಲಾಗದೆ ಆಂತರಿಕವಾಗಿ ಸಂಪನ್ಮೂಲ ಸಂಗ್ರಹವನ್ನು ನಿರ್ಲಕ್ಷಿಸಿ, ಅದಕ್ಷ ಆಡಳಿತ ಮತ್ತು ವ್ಯವಸ್ಥಾಪನೆಯಿಂದ ಸಹಕಾರ ಸಂಘಗಳು ಬಾಹ್ಯ ಹಣಕಾಸು ನೆರವಿನ ಮೇಲೆ ಅವಲಂಬಿಸಿ ಸಹಕಾರ ಸಂಸ್ಥೆಗಳ ಆರ್ಥಿಕ ಸ್ಥಿತಿ ಹದಗೆಟ್ಟಿದೆ. ಈ ನಿಟ್ಟನಲ್ಲಿ ಸಹಕಾರಿ ಸಂಸ್ಥೆಗಳನ್ನು ಮರು ರೂಪಿಸುವ ಅಥವಾ ಬಲಪಡಿಸುವ ನಿಟ್ಟಿನ ಪರಿಣಾಮಕಾರಿ ಸುಧಾರಣಾ ಕ್ರಮ ಕೈಗೊಳ್ಳುವ ಅಗತ್ಯವಿದೆ. ಈ ರೀತಿ ಸುಧಾರಣೆಗಾಗಿ ೨೦೦೫ರಲ್ಲಿ ಪ್ರೊ. ವೈದ್ಯನಾಥನ್ ಸಮಿತಿ ಶಿಫಾರಸ್ಸಿನ ಪ್ರಕಾರ ಸಾಲ ವಸೂಲಾತಿ ಪ್ರಮಾಣ ಶೇಕಡಾ ೩೦ಕ್ಕಿಂತ ಹೆಚ್ಚಾಗಿರುವ ಸಂಸ್ಥೆಗಳಿಗೆ ಆರ್ಥಿಕ ನೆರವು, ಸಾಂಸ್ಥಿಕ ಸುಧಾರಣಾ ನೆರವು ಹಾಗೂ ವ್ಯವಸ್ಥಾಪನಾ ಗುಣಮಟ್ಟ ಸುಧಾರಣೆ ಇತ್ಯಾದಿ ಸುಧಾರಣೆಯ ಪ್ಯಾಕೇಜನ್ನೇ ಶಿಫಾರಸ್ಸು ಮಾಡಲಾಯಿತು. ಸಹಕಾರಿ ಸಂಸ್ಥೆಗಳ ಸಿಬ್ಬಂದಿಗೆ ಸಾಮರ್ಥ್ಯ ಬಲಪಡಿಸುವ ತರಬೇತಿ ನೀಡಲಾಗಿದೆ.[೬] ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಂತೆ ಸಂಘಟಿತ ಬ್ಯಾಂಕುಗಳ ಮುಖ್ಯವಾಗಿ ಸಾರ್ವಜನಿಕ ರಂಗದ ಬ್ಯಾಂಕುಗಳ ಮತ್ತು ಸ್ಥಳೀಯ ಸಹಕಾರ ಸಾಲ ಸಂಘಗಳ ಅಧಿಕಾರಿ ರೈತರಿಗೆ ಸಾಲ ಒದಗಿಸಲು ಮುಂದೆ ಬರುವುದಿಲ್ಲ. ಹಣಕಾಸು ಸಂಸ್ಥೆಗಳ ಅಧಿಕಾರಶಾಹಿ ಮನೋಭಾವದಿಂದ ರೈತರು ಬ್ಯಾಂಕುಗಳಿಗೆ ಪದೇ ಪದೇ ಅಥವಾ ಹಲವು ಸಾರಿ ತಿರುಗಬೇಕಾಗುತ್ತದೆ. ಸಾಲ ಮಂಜೂರಾಗುವಲ್ಲಿ ವಿಳಂಬವಾಗುತ್ತದೆ. ಇದರಿಂದ ಸಾಲ ಪಡೆಯಲು ಮಾಡುವ ಖರ್ಚು

ಹೆಚ್ಚಾಗುತ್ತದೆ. ಈ ಪ್ರಕ್ರಿಯೆಯು ಕೃಷಿ ಹೂಡಿಕೆ ಮೇಲೆ ವ್ಯತಿರಿಕ್ತ ಪರಿಣಾಮ ಬೀರುತ್ತದೆ. ಸಾಲ ಪಡೆಯುವ ಆಸಕ್ತಿ ನಾಶವಾಗುತ್ತದೆ ಎನ್ನಬಹುದು. ಹೀಗೆ ಸಂಘಟಿತ ಸಾಲ ವ್ಯವಸ್ಥೆ ಬಗ್ಗೆ ರೈತರು ಅಸಮದಾನ ವ್ಯಕ್ತಪಡಿಸುತ್ತಾರೆ. ಸಂಘಟಿತ ಹಣಕಾಸು ವ್ಯವಸ್ಥೆಯ ಉದ್ದೇಶಗಳು ಮತ್ತು ಈ ವ್ಯವಸ್ಥೆಯ ಹಣಕಾಸು ಸಂಸ್ಥೆಗಳು ಅಥವಾ ಬ್ಯಾಂಕುಗಳೊಂದಿಗಿನ ರೈತರ ಅನುಭವಗಳು ವಿರುದ್ಧವಾಗಿರುತ್ತವೆ.[೨]

ಸಾಲ ನೀಡುವ ಅವಧಿ ಮತ್ತು ಸಾಲದ ಪ್ರಮಾಣ ಹಾಗೂ ಸಾಲದ ಬಳಕೆಯ ಪರಿಣಾಮಗಳ ಆಧಾರದ ಮೇಲೆ ಸಾಲವನ್ನು ಪರಿಣಾಮಕಾರಿ ಸಾಧನ ಎನ್ನಬಹುದು. ಈ ಹಿನ್ನೆಲೆಯಿಂದಲೇ ಲೀಡ್‌ಬ್ಯಾಂಕು ಯೋಜನೆ ಮತ್ತು ತಾಂತ್ರಿಕ ಸಮಿತಿಯನ್ನು ಸ್ಥಾಪಿಸಿ ಸ್ಕೇಲ್ ಆಫ್ ಫೈನಾನ್ಸ್-ಬ್ಯಾಂಕುಗಳು ನೀಡುವ ನಿಗದಿತ ಸಾಲದ ಮೊತ್ತದ ನಿಯಮವನ್ನು ಜಾರಿಗೆ ತರಲಾಗಿದೆ. ಇದರ ಪ್ರಕಾರ ಬೆಳೆಯ ಸ್ವರೂಪ ಮತ್ತು ಕೃಷಿ ಹಿಡುವಳಿ ವಿಸ್ತೀರ್ಣದ ಆಧಾರದ ಮೇಲೆ ಬ್ಯಾಂಕುಗಳು ಸಾಲಗಳನ್ನು ನೀಡುತ್ತವೆ.[೮] ಈ ಸಮಿತಿಯು ಮಾರುಕಟ್ಟೆ ದರ, ಸಹಕಾರ ಸಂಘಗಳು ಹಾಗೂ ವಾಣಿಜ್ಯ ಬ್ಯಾಂಕುಗಳಿಂದ ಮಾಹಿತಿ ಸಂಗ್ರಹಿಸಿ ಕೃಷಿ ಬೆಳೆಗಳಿಗೆ ಬೇಕಾದ ಸಾಲ ಪ್ರಮಾಣವನ್ನು ನಿಗದಿ ಮಾಡುತ್ತದೆ. ಕಡಿಮೆ ಸಾಲ ದೊರೆಯದಂತೆ ಬೆಳೆಗೆ ಬೇಕಾದಷ್ಟು ಸಾಲ ದೊರೆತು ಕೃಷಿ ಉತ್ಪಾದನೆ ಮತ್ತು ಹೂಡಿಕೆಗೆ ತೊಂದರೆಯಾಗದಂತೆ ನೋಡಿಕೊಳ್ಳಲು ಈ ವಿಧಾನ ಅನುಸರಿಸಲಾಗುತ್ತದೆ. ಮೂರು ವರ್ಷಗಳಿಗೆ ಒಮ್ಮೆ ಈ ರೀತಿ ಮಾಡುಲಾಗತ್ತದೆ ಅಂದರೆ ಮೂರು ವರ್ಷಗಳಿಗೆ ಸಂಘಟಿತ ಹಣಕಾಸು ಸಂಸ್ಥೆಗಳು ಅಲ್ಪಾವಧಿ ಬೆಳೆಸಾಲದ ಪ್ರಮಾಣವನ್ನು ಈ ಸಮಿತಿ ನಿಗಧಿಗೊಳಿಸುತ್ತದೆ. ಈ ರೀತಿಯ ನಿಯಮಗಳಿಂದ ದೊಡ್ಡರೈತರು ಹೆಚ್ಚಿನ ಸಾಲದ ಅನುಕೂಲ ಪಡೆಯುತ್ತಾರೆ. ಆದರೆ ತುಂಡು ಹಿಡುವಳಿ ಹೊಂದಿದ್ದ ಸಣ್ಣ ಮತ್ತು ಅತೀ ಸಣ್ಣ ರೈತರು ಹೆಚ್ಚಿನ ಪ್ರಮಾಣದ ಸಾಲದ ಅನುಕೂಲ ಪಡೆಯಲು ಸಾದ್ಯವೇ ಇಲ್ಲ. ಆದ್ದರಿಂದ ಈ ರೈತರ ವಿಷಯದಲ್ಲಿ ಬ್ಯಾಂಕುಗಳು ನೀಡುವ ಕಡಿಮೆ ಸಾಲದಿಂದ ಯಾವುದೇ ಧನಾತ್ಮಕ ಅನುಕೂಲಗಳನ್ನು ಅಥವಾ ಪರಿಣಾಮಗಳನ್ನು ನಿರೀಕ್ಷಿಸುವಂತಿಲ್ಲ.

ಈ ರೀತಿ ಬೆಳೆಸಾಲ ಪ್ರಮಾಣವನ್ನು ನಿಗದಿ ಮಾಡುವುದೇ ಅವೈಜ್ಞಾನಿಕವಾಗಿರುತ್ತದೆ. ಈ ನಿಯಮದ ಪ್ರಕಾರ ಸಾಲ ಮಂಜೂರು ಮಾಡಬೇಕಾಗಿರುವುದರಿಂದ ಸಣ್ಣ ಅತಿ ಸಣ್ಣ ಮತ್ತು ದೊಡ್ಡ ರೈತರು ಎಲ್ಲಾ ವರ್ಗದ ರೈತರಿಗೂ ತಾವು ಬೆಳೆಯುವ ಬೆಳೆಗಳಿಗೆ ಸಾಕಷ್ಟು ಪ್ರಮಾಣದ ನಿಗದಿ ಅವಧಿಯಲ್ಲಿ ಸಾಲ ದೊರೆಯುವುದಿಲ್ಲ. ಹೀಗೆ ಸೀಮಿತ ಸಾಲದಿಂದ ಅನಿವಾರ್ಯವಾಗಿ ರೈತರು ಅಸಂಘಟಿತ ಸಾಲ ಮೂಲಗಳಿಂದ ತಮಗೆ ಬೇಕಾದಷ್ಟು ಸಾಲವನ್ನು ಪಡೆಯಲು ಪ್ರಯತ್ನಿಸುತ್ತಾರೆ. ಆದ್ದರಿಂದ ಸಂಘಟಿತ ಸಾಲ ಮೂಲಗಳು ತನ್ನ ಪ್ರಭಾವ ಉಳಿಸಿಕೊಳ್ಳುವಂತಾಗಿ ರೈತರು ಅನಿವಾರ್ಯವಾಗಿ ಈ ಮೂಲವನ್ನು ಅವಲಂಬಿಸಬೇಕಾಗಿದೆ. ಇದರಿಂದ ಸಂಘಟಿತ ಸಾಲ ವ್ಯವಸ್ಥೆ ವಿಸ್ತರಣೆ ನಡುವೆಯೂ ಗ್ರಾಮೀಣ ಭಾಗದಲ್ಲಿ ಇಂದಿಗೂ ಅಸಂಘಟಿತ ಸಾಲ ಮೂಲ

ಹೆಚ್ಚು ಕ್ರಿಯಾಶೀಲವಾಗಿದ್ದು ಇದರ ಸುಳಿಯಿಂದ ರೈತರು ತಪ್ಪಿಸಿಕೊಳ್ಳದಂತಾಗಿದೆ. ಅಸಂಘಟಿತ ಸಾಲ ಮೂಲ ವಿಧಿಸುವ ಅಧಿಕ ಬಡ್ಡಿದರಗಳು ಕೃಷಿಕರನ್ನು ಸಂಕಷ್ಟಕ್ಕೆ ದೂಡುತ್ತವೆ. ಕೃಷಿಯಲ್ಲಿನ ಸಾಗುವಳಿದಾರರ ಹತಾಶೆ ಮತ್ತು ಆತ್ಮಹತ್ಯೆಯ ಪ್ರಯತ್ನಗಳಿಗೆ ಇತರೆ ಕಾರಣಗಳಾದ ಸೂಕ್ತ ತಾಂತ್ರಿಕ ನೆರವಿನ ಕೊರತೆ, ನಕಲಿ ಬೀಜ, ಅಸಮರ್ಪಕ ಬೆಳೆ ನಿರ್ವಹಣೆ ಬೆಳೆನಾಶ ಸಮಸ್ಯೆಗಳು ಎಲ್ಲಕ್ಕಿಂತ ಮುಖ್ಯವಾಗಿ ಅಧಿಕ ಬಡ್ಡಿದರದ ಸಾಲಗಳೇ ಕಾರಣ.[೧೯]

ಆದ್ಯತಾ ವಲಯಕ್ಕೆ ನೀಡುವ ಸಾಲದಲ್ಲಿ ಕುಸಿತ ಉಂಟಾಗಿದೆ. ಈ ವಲಯಕ್ಕೆ ನೀಡುತ್ತಿದ್ದ ಸಾಲದ ಪ್ರಮಾಣ ೧೯೯೦ಕ್ಕಿಂತ ಹಿಂದೆ ಶೇ. ೪೦ರಷ್ಟಿತ್ತು. ೧೯೯೦ಕ್ಕೆ ಶೇ. ೧೮ಕ್ಕೆ ಇಳಿಯಿತು. ೧೯೯೦ರ ನಂತರ ೧೩ಕ್ಕೆ ಕುಸಿಯಿತು. ೧೯೯೦ರ ನಂತರ ಗ್ರಾಮೀಣ ಬ್ಯಾಂಕುಗಳ ಶಾಖೆಗಳ ಸಂಖೆ ಶೇ. ೫೮ ರಿಂದ ಶೇ. ೪೫ಕ್ಕೆ ಇಳಿಯಿತು. ಹೀಗೆ ಸಂಘಟಿತ ಹಣಕಾಸು ವ್ಯವಸ್ಥೆಯು ಗ್ರಾಮೀಣ ಪ್ರದೇಶಗಳನ್ನು ನಿರ್ಲಕ್ಷಿಸುವಿಕೆ ಹೆಚ್ಚಿ ಸಾಗುವಳಿದಾರರು ತಮ್ಮ ಸಾಲದ ಅಗತ್ಯಗಳನ್ನು ಲೇವಾದೇವಿಗಳಿಂದ ಪಡೆದುಕೊಳ್ಳುವಂತಾಯಿತು. ಈ ಮೂಲಕ ಖಾಸಗಿ ಲೇವಾದೇವಿ ಹಣಕಾಸು ಮಾರುಕಟ್ಟೆಯ ಹಿಡಿತಕ್ಕೆ ಸಿಲುಕಿ ಇದರ ಪ್ರಭಾವದಿಂದ ಹೊರಬರಲಾರದಂತಾಯಿತು. ಅಧಿಕ ಬಡ್ಡಿ ದರ, ಸಾಲ ತೀರಿಸಬೇಕಾದ ಒತ್ತಡ ಇತ್ಯಾದಿಗಳ ಪರಿಣಾಮವಾಗಿ ಸಾಗುವಳಿದಾರರಲ್ಲಿ ಹತಾಶೆಯು ಹೆಚ್ಚಿ ಆತ್ಮಹತ್ಯೆಯಂತಹ ಘಟನೆಗಳಿಗೆ ಪ್ರೇರಣೆಯಾಗುತ್ತದೆ.[೨೦] ಪ್ರಸ್ತುತ ಅಧ್ಯಯನದ ಮಾಹಿತಿ ವಿಶ್ಲೇಷಣೆ ಪ್ರಕಾರ ಶೇಕಡ ೩೮ರಷ್ಟು ಜನ ಯಾವ ಮೂಲದಿಂದಲೂ ಸಾಲ ಪಡೆದಿಲ್ಲ. ಶೇ. ೩೩ರಷ್ಟು ಜನ ಅಸಂಘಟಿತ ಮೂಲದಿಂದ ಪಡೆದಿದ್ದಾರೆ. ಸಂಘಟಿತ ಸಾಲ ಮೂಲದ ಮುಖ್ಯ ಭಾಗವಾದ ಸಹಕಾರ ಸಂಸ್ಥೆಗಳು ನೀಡುವ ಸಾಲ ಪ್ರಮಾಣ ಮತ್ತು ಅವಧಿ ಎರಡೂ ಸಾಗುವಳಿದಾರರಿಗೆ ಉಪಯುಕ್ತವಲ್ಲ. ರೈತರಿಗೆ ಅಗತ್ಯವಿದ್ದ ಸಮಯ ಮತ್ತು ಅಗತ್ಯವಿದ್ದ ಪ್ರಮಾಣದಲ್ಲಿ ಸಾಲಗಳು ದೊರೆಯದೆ ಸಹಕಾರ ಸಂಘಗಳ ಸಾಲ ಪೂರೈಕೆ ಗ್ರಾಮೀಣ ಬಡವರ್ಗಗಳ ಬದುಕನ್ನು ಸುಧಾರಿಸುವಲ್ಲಿ ನೆರವಾಗುತ್ತಿಲ್ಲ. ಅದರಲ್ಲೂ ಅತೀ ಸಣ್ಣ ರೈತ ವರ್ಗಕ್ಕೆ ಸೇರಿದ ಪರಿಶಿಷ್ಟರು, ಹಿಂದುಳಿದ ವರ್ಗಗಳಂತಹ ದುರ್ಬಲರ ಜೀವನದಲ್ಲಿ ಯಾವುದೇ ಬದಲಾವಣೆಗಳನ್ನು ತಂದಿದೆ ಎಂಬ ಭಾವನೆ ಸಾಮಾನ್ಯ ವರ್ಗದ ಜನರಲ್ಲಿ ಇಲ್ಲ. ಕಾರಣ ಸಹಕಾರ ಸಂಘಗಳು ನೀಡುವ ಸಾಲ ಕಡಿಮೆಯಿದ್ದು, ಕೃಷಿ ಚಟುವಟಿಕೆಗಳು ನಡೆಯುವ ಸಂದರ್ಭದಲ್ಲಿ ಅಂದರೆ ಉತ್ಪಾದನಾ ಪ್ರಕಿಯೆ ಸಂದರ್ಭದಲ್ಲಿ ದೊರೆಯದೆ ಇರುವುದರಿಂದ ಈ ಸಂಸ್ಥೆಗಳ ಸಾಲ ಬಳಕೆಯ ಧನಾತ್ಮಕ ಪರಿಣಾಮವನ್ನು ಗ್ರಾಮಗಳಲ್ಲಿ ಕಂಡುಬಂದಿಲ್ಲ. ಸಿಂಧನೂರು ತಾಲ್ಲೂಕು ರಾಗಲಪರ್ವಿ ಗ್ರಾಮದ ದೊಡ್ಡ ರೈತ ವೆಂಕೋಬರ ಪ್ರಕಾರ ಸಹಕಾರ ಸಂಸ್ಥೆಗಳಿಗೆ ಕೃಷಿ ಚಟುವಟಿಕೆಗಳು ಪ್ರಾರಂಭವಾಗುವ ಸಮಯದಲ್ಲಿ ಸಾಲಕ್ಕಾಗಿ ಅರ್ಜಿ ಸಲ್ಲಿಸಿದರೆ ಸುಗ್ಗಿ ಮುಗಿಯುವ ಸಂದರ್ಭದಲ್ಲಿ ಸಾಲ ದೊರೆಯಬಹುದು ಅಥವಾ ದೊರೆಯದೇ ಇರಬಹುದು. ಈ ಅಭಿಪ್ರಾಯದ ಅರ್ಥವನ್ನು ಯಾರು ಬೇಕಾದರೂ ಗ್ರಹಿಸಬಹುದು. ಈ ರೀತಿಯ ಭಾವನೆಯಿಂದಲೆ ರೈತರು ತಮ್ಮ ಉತ್ಪಾದನಾ ಉದ್ದೇಶಕ್ಕೆ ಬೇಕಾದ ಸಾಲಗಳಿಗಾಗಿ ಸಹಕಾರ ಸಂಘಗಳನ್ನು ನೆಚ್ಚಿಕೊಳ್ಳದೆ ಕೃಷಿ ಉತ್ಪನ್ನಕ್ಕೆ

ಬೇಕಾದ ಹೂಡುವಳಿಗಳನ್ನು ಪೂರೈಸುವ ವ್ಯಾಪಾರಿಗಳನ್ನ ಅವಲಂಬಿಸಿದ್ದಾರೆ. ದೊಡ್ಡ ರೈತರು ತಮಗೆ ಬೇಕಾಗುವಷ್ಟು ಸಾಲವನ್ನು ಸಹಕಾರ ಸಂಘಗಳಿಂದ ದೊರೆಯದ ಕಾರಣ. ಅವರೂ ಅಸಂಘಟಿತ ಮೂಲದ ವ್ಯಾಪಾರಸ್ಥರಿಂದ ಸಾಲ ಪಡೆಯುತ್ತಾರೆ. ಇವರು ದೊಡ್ಡ ಹಿಡುವಳಿಗಳನ್ನು ಹೊಂದಿದ್ದು ದೊಡ್ಡ ಪ್ರಮಾಣದ ಕೃಷಿ ಚಟುವಟಿಕೆ ಕೈಗೊಳ್ಳುತ್ತಾರೆ ಹಾಗಾಗಿ ದೊಡ್ಡ ಪ್ರಮಾಣದ ಸಾಲ ಬಯಸುತ್ತಾರೆ. ಸಂಘಟಿತ ಮೂಲದಿಂದ ಸಾಲ ಪಡೆದ ಶೇ. ೫೧ರಷ್ಟು ಲಿಂಗಾಯಿತ ಜಾತಿಗೆ ಸೇರಿದ ದೊಡ್ಡ ರೈತರು ಸಿಂಧನೂರು ಮತ್ತು ದೇವದುರ್ಗ ಎರಡೂ ತಾಲ್ಲೂಕುಗಳ ಶೇಕಡಾ ೬೫ರಷ್ಟು ರೈತರು ಸಂಘಟಿತ ಸಾಲ ಸಂಸ್ಥೆಗಳ ಸಾಲ ಪ್ರಮಾಣ ಕಡಿಮೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು. ತಮ್ಮ ಬೇಡಿಕೆಗೆ ಅನುಗುಣವಾಗಿ ಈ ಮೂಲದಿಂದ ಸಾಲ ಪಡೆಯಲು ಸಾಧ್ಯವಿಲ್ಲದ್ದರಿಂದ ಅಸಂಘಟಿತ ಮಾರುಕಟ್ಟೆಯಿಂದ ಸಾಲ ಪೂರೈಸಿಕೊಳ್ಳಲಾಗುತ್ತದೆ ಎಂದು ತಿಳಿಸಿದರು. ಆದರೆ ಅಸಂಘಟಿತ ಸಾಲ ಮೂಲದ ಋಣಾತ್ಮಕ ಪರಿಣಾಮಗಳಿಗೆ ದೊಡ್ಡ ರೈತರು ಒಳಗಾಗುವುದಿಲ್ಲ ಕಾರಣ ಪಡೆದ ಸಾಲವನ್ನು ಉತ್ಪಾದನಾ ಉದ್ದೇಶಕ್ಕೆ ಬಳಸಿಕೊಳ್ಳುತ್ತಾರೆ. ಇದರಿಂದ ಬಂದ ಆದಾಯದಿಂದ ಸಾಲ ತೀರಿಸುತ್ತಾರೆ.ಇದನ್ನು ನಿರ್ವಹಿಸುವ ಆರ್ಥಿಕ ಸಾಮರ್ಥ್ಯ ಈ ವರ್ಗಗಳಿಗೆ ಇರುವದರಿಂದ ಈ ಮೂಲದ ಋಣಾತ್ಮಕ ಪರಿಣಾಮಗಳಿಗೆ ಗುರಿಯಾಗುವುದಿಲ್ಲ. ಆದರೆ ಸಣ್ಣ ಮತ್ತು ಅತೀ ಸಣ್ಣ ರೈತ ವರ್ಗಕ್ಕೆ ಸೇರಿದ ಪರಿಶಿಷ್ಟ ಹಾಗೂ ಹಿಂದುಳಿದವರು ಈ ಮೂಲದ ಋಣಾತ್ಮಕ ಪರಿಣಾಮಗಳಿಗೆ ಒಳಗಾಗಿದ್ದಾರೆ.

### ೫.೨. ಸಾಲ ಮಂಜೂರಾತಿಯ ವಿಳಂಬ

ಸಂಘಟಿತ ಸಾಲ ವ್ಯವಸ್ಥೆಯ ಹಣಕಾಸು ಸಂಸ್ಥೆಗಳು ಸಾಲ ಮಂಜೂರಾತಿ ಮತ್ತು ಸಾಲ ವಿತರಣೆಗೆ ತೆಗೆದುಕೊಳ್ಳುವ ಸಮಯ ಮತ್ತು ಸಾಲ ಪಡೆಯಲು ರೈತರು ಭರಿಸಬೇಕಾದ ವೆಚ್ಚಗಳನ್ನು ಪರಿಶೀಲಿಸುವುದು ಅಗತ್ಯ. ಸರಿಯಾದ ಸಮಯಕ್ಕೆ ಸಾಲ ಮಂಜೂರಾತಿ ಮಾಡುವುದು ಮುಖ್ಯ. ವಿಶೇಷವಾಗಿ ಬೆಳೆ ಸಾಲದ ವಿಷಯದಲ್ಲಿ ಇದು ಪ್ರಮುಖ. ಅಸಂಘಟಿತ ಮೂಲಕ್ಕೆ ಹೋಲಿಸಿದರೆ ಸಂಘಟಿತ ಮೂಲದಿಂದ ಸಾಲ ಪಡೆಯಲು ಸಾಕಷ್ಟು ಕಾಯಬೇಕಾಗುತ್ತದೆ. ಸಂಘಟಿತ ವಲಯದ ಸಾಲ ನೀತಿಯು ಸಂಕೀರ್ಣವಾಗಿದೆ ಎನ್ನಬಹುದು. ಸಾಲ ಸಂಸ್ಥೆಗಳ ಪ್ರಕಾರ ಸಾಲ ಮಂಜೂರಾತಿ ಮತ್ತು ವಿತರಣೆಯಲ್ಲಿನ ವಿಳಂಬ ಸಾಲ ಪಡೆಯುವುದರಿಂದಲೇ ಆಗುತ್ತದೆ. ಸಾಲ ಪಡೆಯುವವರು ಸರಿಯಾದ ಸಮಯಕ್ಕೆ ದಾಖಲಾತಿಗಳನ್ನು ನೀಡುವುದಿಲ್ಲ. ಸಾಲ ಪಡೆಯಲು ಇಚ್ಚಿಸುವ ರೈತರು ಸಂಘಟಿತ ಸಾಲ ಮೂಲದ ಪ್ರಕಾರ ಹಲವು ದಾಖಲೆಗಳನ್ನು ನೀಡಬೇಕಾಗುತ್ತದೆ. ಈ ದಾಖಲಾತಿಗಳನ್ನು ಹೊಂದಿಸುವುದೇ ಒಂದು ದೊಡ್ಡ ಪ್ರಕ್ರಿಯೆ. ಸಾಲ ಪಡೆಯುವ ರೈತರು ಕೃಷಿ ಸಾಗುವಳಿ ಭೂಮಿ ಹೊಂದಿರಬೇಕು. ಅವರ ಹೆಸರಲ್ಲಿ ದಾಖಲಾತಿಗಳು ಇರಬೇಕು. ಕಂದಾಯ ಹಕ್ಕು ಪತ್ರಗಳು, ಖಾತೆ ಪಹಣಿಗಳು, ಮ್ಯುಟೇಷನ್, ಭೂಹಿಡುವಳಿ ಪತ್ರ, ಸಾಗುವಳಿ ಹಕ್ಕುಪತ್ರ, ಬೇಬಾಕಿ ಅಥವಾ ನೋ ಅಬ್ಜೆಕ್ಷನ್ ಪತ್ರ, ಗ್ಯಾರಂಟಿ ಪತ್ರ ಅಥವಾ ಶ್ಯೂರಿಟಿ ಪತ್ರ ಇತ್ಯಾದಿಗಳನ್ನು ನೀಡಬೇಕು. ವಾಣಿಜ್ಯ ಬ್ಯಾಂಕು ಮತ್ತು ಸಹಕಾರ ಸಂಸ್ಥೆಗಳೆರಡೂ ಈ ಎಲ್ಲಾ ದಾಖಲಾತಿಗಳನ್ನು

ಪಡೆಯುತ್ತವೆ. ಸಾಲ ಮಂಜೂರಾತಿಗೆ ರೈತರು ತಮ್ಮ ಭೂಮಿಯನ್ನು ದಾಖಲೆ ಸಮೇತ ಬ್ಯಾಂಕಿನ ಅಥವಾ ಸಂಸ್ಥೆಯ ಹೆಸರಿನಲ್ಲಿ ಅಡವಿಡಬೇಕು. ಇದನ್ನೇ ತಾಲ್ಲೂಕು ಕಂದಾಯ ಉಪನೋಂದಾಣಿ ಅಧಿಕಾರಿಗಳ ಕಛೇರಿಯಲ್ಲಿ ನೊಂದಾಯಿಸಬೇಕು. ಸಹಕಾರ ಸಂಸ್ಥೆಗಳು ಈ ಎಲ್ಲಾ ದಾಖಲೆಗಳನ್ನು ನಿರೀಕ್ಷಿಸದೆ ಸರಳ ಸಾಲ ನೀಡುವ ನೀತಿ ಅನುಸರಿಸಬಹುದು. ಆದರೆ ಈ ಸಂಸ್ಥೆಗಳು ತಮ್ಮ ಸಾಲ ನೀತಿಯಲ್ಲಿ ಯಾವುದೇ ರೀತಿಯ ಸಡಿಲಿಕೆ ನೀಡುವುದಿಲ್ಲ. ಈ ದಾಖಲಾತಿಗಳನ್ನು ಪಡೆಯುವುದು ದೊಡ್ಡ ಪ್ರಕ್ರಿಯೆ ಮತ್ತು ವೆಚ್ಚ ಭರಿಸಬೇಕಾದಂತಹದ್ದು. ಸಾಲ ಪಡೆಯಲು ಇಚ್ಚಿಸುವವರು ಬೇಬಾಕಿ ಅಥವಾ ನೊ ಅಬ್ಜೆಕ್ಷನ್ ಪ್ರಮಾಣ ಪತ್ರವನ್ನು ನಿರ್ಧಿಷ್ಠ ಏರಿಯಾ ಅಥವಾ ಪ್ರದೇಶದ ಎಲ್ಲಾ ಬ್ಯಾಂಕು ಮತ್ತು ಸಾಲ ಸಂಸ್ಥೆಗಳಿಂದ ಪಡೆಯಬೇಕು. ಪ್ರತಿ ಸಾಲ ಸಂಸ್ಥೆಗೆ ವಯುಕ್ತಿಕವಾಗಿ ಬೇಟಿ ನೀಡಿ ಪ್ರಮಾಣ ಪತ್ರ ಪಡೆಯಬೇಕು. ಗ್ರಾಮಗಳಿಂದ ತಾಲ್ಲೂಕು ಮತ್ತು ಹೋಬಳಿ ಪ್ರದೇಶಗಳಿಗೆ ಹೋಗಿ ಬರುವ ಖರ್ಚು ಭರಿಸಬೇಕು. ಗ್ರಾಮಗಳಲ್ಲಿ ಇಂದಿಗೂ ಸಾರಿಗೆ ವ್ಯವಸ್ಥೆ ಸರಿಯಾಗಿ ಇರುವುದಿಲ್ಲ. ಸಿಂಧನೂರು ತಾಲ್ಲೂಕಿನ ರಾಗಲಪರ್ವಿ ಮತ್ತು ದೇವದುರ್ಗ ತಾಲ್ಲೂಕಿನ ಹೇರುಂಡಿ ಗ್ರಾಮದ ರೈತರಿಗೆ ಈ ಸಮಸ್ಯೆ ಇದೆ. ಕನಿಷ್ಠ ೫ ಕಿ.ಮೀ.ಗಳಷ್ಟು ದೂರ ವಿದೆ. ಸಂದರ್ಶನದ ಸಮಯದಲ್ಲಿ ರೈತರೊಬ್ಬರು ತಿಳಿಸಿದಂತೆ ಈ ಪ್ರಮಾಣ ಪತ್ರ ಪಡೆಯಲು ಕನಿಷ್ಟು ಒಂದು ತಿಂಗಳು ಬೇಕು. ಪ್ರತಿ ಭೇಟಿಗೆ ಸಾರಿಗೆ, ಇತರೆ ವೈಯುಕ್ತಿಕ ಖರ್ಚುಗಳನ್ನು ಭರಿಸಬೇಕು. ವಯುಕ್ತಿಕವಾಗಿ ಸಾರಿಗೆ ವ್ಯವಸ್ಥೆ ಮಾಡಿಕೊಳ್ಳವಷ್ಟು ಸಾಮರ್ಥ್ಯ ದೊಡ್ಡ ರೈತರಿಗೆ ಮಾತ್ರ ಇದ್ದು ಅವರು ಬೈಕ್‌ಗಳನ್ನು ಹೊಂದಿದ್ದಾರೆ. ಅದೇ ರೀತಿ ಉಪನೋದಾಣಾಧಿಕಾರಿ ಕಛೇರಿಯು ತಾಲ್ಲೂಕು ಕೇಂದ್ರದಲ್ಲಿದ್ದು ಭೂಹಿಡುವಳಿ ಅಥವಾ ಇಸಿ (ಎನ್‌ಕಂಬರೆನ್ಸ್ ಸರ್ಟಿಫಿಕೇಟ್) ಪಡೆಯಲು ಕನಿಷ್ಠ ೧೫ ದಿನ ತಗೆದುಕೊಳ್ಳುತ್ತದೆ. ಅರ್ಜಿ ಸಲ್ಲಿಸಿದ ನಂತರ ಕಾಯಬೇಕು. ರೈತರೊಬ್ಬರ ಪ್ರಕಾರ ಈ ಕಛೇರಿಯಲ್ಲಿ ಲಂಚ ನೀಡಿದರೆ ೨ ರಿಂದ ೩ ದಿನಗಳಲ್ಲಿ ಈ ಪ್ರಮಾಣ ಪತ್ರ ಲಭಿಸುತ್ತದೆ. ಇಲ್ಲೂ ಖರ್ಚನ್ನು ಭರಿಸಬೇಕು. ಹೀಗೆ ಸಾಕಷ್ಟು ಸುತ್ತಾಡಬೇಕು. ತಾಳ್ಮೆ–ಸಹನೆ ಇಟ್ಟುಕೊಳ್ಳಬೇಕು. ಈ ಪ್ರಕ್ರಿಯೆಯಲ್ಲಿ ವ್ಯವಸ್ಥೆ ಬಗ್ಗೆ ನಿರಾಸಕ್ತಿ ಮೂಡುವ ಸಾಧ್ಯತೆಯೂ ಇದ್ದು ಸಾಲ ಪಡೆಯುವ ಆಸಕ್ತಿ ಮತ್ತು ಉತ್ಸಾಹವೇ ಭತ್ತಿ ಹೋಗಬಹುದು. ಈ ದಾಖಲಾತಿ ಪಡೆಯಲು ಕ್ಷೇತ್ರಕಾರ್ಯದಲ್ಲಿ ತಿಳಿದು ಬಂದಂತೆ ಕನಿಷ್ಠ ೪೦೦೦ ರಿಂದ ೫೦೦೦ ರೂ ಭರಿಸಬೇಕಾಗುತ್ತದೆ. ಹೀಗೆ ಸಂಘಟಿತ, ಸಂಸ್ಥೆಗಳ ಸಂಕೀರ್ಣ ಸಾಲ ನೀತಿಯು ಅತಿ ಸಣ್ಣ ಮತ್ತು ಸಣ್ಣ ರೈತರನ್ನು ಸಾಲ ಸೌಲಭ್ಯಗಳಿಂದ ಹೊರಗುಳಿಯುವಂತೆ ಮಾಡುವ ಪ್ರಮುಖ ಅಂಶಗಳಲ್ಲಿ ಒಂದು. ಕಷ್ಟಪಟ್ಟು ಎಲ್ಲಾ ದಾಖಲಾತಿಗಳನ್ನು ಒದಗಿಸಿ ಸಾಲ ಸಂಸ್ಥೆಗಳಿಗೆ ನೀಡಿದರೆ ಸಾಲ ಮಂಜೂರಾತಿ ವಿಳಂಬವಾಗುತ್ತದೆ. ಸಹಕಾರ ಸಾಲ ಸಂಸ್ಥೆಗಳು ಬೆಳೆ ಸಾಲದ ಅರ್ಜಿಗಳನ್ನು ಪರಿಶೀಲಿಸಿ ಸಾಲ ನೀಡಲು ಯೋಗ್ಯ ಎಂದು ಪರಿಗಣಿಸಿ ಸಾಲ ಒದಗಿಸುವಷ್ಟರಲ್ಲಿ ತಿಂಗಳುಗಳು ಕಳೆದಿರುತ್ತವೆ. ಕ್ಷೇತ್ರ ಕಾರ್ಯದಲ್ಲಿ ತಿಳಿದು ಬಂದಂತೆ ಶೇಕಡಾ ೮೫ರಷ್ಟು ಸಾಲಗಳು ಮಂಜೂರಾತಿ ಮತ್ತು ವಿತರಣೆಯಲ್ಲಿ ವಿಳಂಬವಾಗಿದ್ದವು.ರೈತರು ತಿಳಿಸಿದಂತೆ ವಾಣಿಜ್ಯ ಬ್ಯಾಂಕುಗಳು ಸಾಲ ನೀಡುವಲ್ಲಿ ಸ್ವಲ್ಪ ಉತ್ತಮ. ಆದರೆ ಸಹಕಾರ

ಬ್ಯಾಂಕುಗಳ ವಿಚಾರದಲ್ಲಿ ಸಾಲ ಮಂಜೂರಾಗಿ ಕೈಗೆ ಸಿಗುವ ಖಾತರಿಯೇ ಇಲ್ಲ. ದೇವದುರ್ಗ ತಾಲ್ಲೂಕಿನ ಶರಣಗೌಡ ಹೇಳುವಂತೆ ಕರ್ನಾಟಕ ರಾಜ್ಯದಲ್ಲಿ ಕಾಂಗ್ರೆಸ್ ಸರಕಾರ ಬರುವುದಕ್ಕೆ ಮುಂಚೆ ಬಿಜೆಪಿ ಸರ್ಕಾರ ಸಹಕಾರ ಸಂಘಗಳ ಸಾಲ ಮನ್ನಾ ಘೋಷಣೆ ಮಾಡಿತ್ತು. ಆದರೆ ಸಾಲ ಮನ್ನಾದ ಹಣ ಬಿಡುಗಡೆ ಆಗುವ ಹೊತ್ತಿಗೆ ೨೦೧೩ರಲ್ಲಿ ಸಾಮಾನ್ಯ ಚುನಾವಣೆ ನಡೆದು ಹೊಸ ಸರ್ಕಾರ ಅಧಿಕಾರಕ್ಕೆ ಬಂದಿತ್ತು. ೨೦೧೨ರಲ್ಲಿ ಶರಣಗೌಡ ಜಾಲಹಳ್ಳಿ ಪ್ರಾಥಮಿಕ ಕೃಷಿ ಸಹಕಾರ ಸಾಲ ಸಂಘದಲ್ಲಿ ಬೆಳೆ ಸಾಲಕ್ಕಾಗಿ ಅರ್ಜಿ ಸಲ್ಲಿಸಿದರು. ಎರಡು ಲಕ್ಷ ಸಾಲ ನಿರೀಕ್ಷಿಸಿದ್ದರು. ಆದರೆ ೨೦೧೩ ಕಳೆದರೂ ಸಾಲ ಮಂಜೂರಾಗಿರಲಿಲ್ಲ, ಇವರು ಮೊದಲ ಬಾರಿ ಸಾಲಕ್ಕಾಗಿ ಅರ್ಜಿ ಸಲ್ಲಿಸಿದ್ದರು. ಪ್ರಾಥಮಿಕ ಕೃಷಿ ಸಹಕಾರ ಸಂಘಗಳಿಗೆ ಹಿಂದಿನ ಸರ್ಕಾರ ಘೋಷಣೆ ಮಾಡಿದ್ದ ಸಾಲ ಮನ್ನಾ ಹಣ ಬಿಡುಗಡೆ ಯಾಗಿದ್ದು ಈ ಹಣದಿಂದಲೇ ಮತ್ತೆ ಹಿಂದೆ ಪಡೆದವರಿಗೇ ಸಾಲ ನೀಡಲಾಗಿತ್ತು. ಸಾಲ ಮನ್ನಾ ಅನುಕೂಲ ಪಡೆದ ಹಳೆಯ ರೈತರಿಗೆ ಸಾಲಮನ್ನಾ ಹಣದಿಂದ ಸ್ವಲ್ಪ ಸ್ವಲ್ಪ ಪ್ರಮಾಣದಿಂದ ಸಾಲ ನೀಡಲಾಯಿತು. ಹೊಸದಾಗಿ ಸಾಲ ಪಡೆಯಲು ಬಯಸಿದ್ದವರಿಗೆ ಸಾಲ ದೊರೆಯಲಿಲ್ಲಿ. ಹೊಸ ಸರ್ಕಾರ ಅಧಿಕಾರಕ್ಕೆ ಬಂದ ವರ್ಷವಾದರೂ ಸಹಕಾರ ಸಂಸ್ಥೆಗಳಿಗೆ ಹಣಕಾಸು ಬಿಡುಗಡೆ ಮಾಡಲಿಲ್ಲ. ಆದರೆ ಪತ್ರಿಕೆಗಳಲ್ಲಿ, ವಿಧಾನಸಭೆ ಕಲಾಪಗಳು ನಡೆದ ನಂತರ ರಾಜ್ಯದ ಮಂತ್ರಿಗಳು ರೈತರಿಗೆ ಬೆಳೆ ಸಾಲ ನೀಡಲು ಸಹಕಾರ ಸಂಸ್ಥೆಗಳಿಗೆ ಇಂತಿಷ್ಟು ಕೋಟಿ ಹಣ ಬಿಡುಗಡೆ ಮಾಡಲು ತೀರ್ಮಾನಿಸಲಾಗಿದೆ ಎಂದು ಹೇಳಿಕೆಗಳನ್ನಷ್ಟೇ ನೀಡಿದರು. ಹೀಗೆ ಸಂಪನ್ಮೂಲಕ್ಕಾಗಿ ಸಹಕಾರ ಸಂಸ್ಥೆಗಳು ಸರ್ಕಾರವನ್ನು ಅವಲಂಬಿಸಿರುವುದರಿಂದ ಗ್ರಾಮೀಣ ಭಾಗದಲ್ಲಿ ರೈತರು ಸಹಕಾರ ಸಂಸ್ಥೆಗಳಿಂದ ಸರಿಯಾದ ಸಮಯಕ್ಕೆ ಸಾಕಷ್ಟು ಪ್ರಮಾಣದಲ್ಲಿ ಸಾಲ ನೀರಿಕ್ಷಿಸುವ ಅವಕಾಶಗಳೇ ಇಲ್ಲದಂತಾಗಿದೆ.ಇದರಿಂದ ಕೇವಲ ಸಣ್ಣ ಮತ್ತು ಅತೀ ಸಣ್ಣ ರೈತರಲ್ಲದೇ ದೊಡ್ಡ ರೈತರು ಸಾಲಕ್ಕಾಗಿ ಅಸಂಘಟಿತ ಮೂಲವನ್ನೇ ಅವಲಂಬಿಸುವಂತಾಗಿದೆ. ಹೀಗಾಗಿ ಅಸಂಘಟಿತ ಸಾಲ ಮೂಲ ಇಂದಿಗೂ ಗ್ರಾಮೀಣ ರಂಗದಲ್ಲಿ ಪ್ರಬಲ ಮೂಲವಾಗಿ ಉಳಿದಿದೆ ಎನ್ನಬಹುದು. ರೈತರು ಈ ಮೂಲದ ಸುಳಿಗೆ ನಿರಂತರವಾಗಿ ಸಿಲುಕುತ್ತಿದ್ದಾರೆ. ಸಂಕಷ್ಟಕ್ಕೀಡಾಗುತ್ತಿದ್ದಾರೆ. ಈ ಹಿನ್ನಲೆಯಲ್ಲಿ ಸರ್ಕಾರ ಈ ವಿಷಯವನ್ನು ಗಂಭೀರವಾಗಿ ಪರಿಗಣಿಸಿ ಸಂಘಟಿತ ಹಣಕಾಸು ವಲಯವನ್ನು ಸುಧಾರಿಸುವ ಅಗತ್ಯ ವಿಲ್ಲವೆ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಸುಧಾರಿಸುವ ಅನಿವಾರ್ಯತೆ ಅಥವಾ ಅಗತ್ಯವಿದೆ.

**ಕೊನೆ ಟಿಪ್ಪಣಿಗಳು**

೧. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ (೨೦೧೧-೧೨). ವಾರ್ಷಿಕ ವರದಿ, ಆರ್‌ಬಿಐ, ಬಾಂಬೆ, ಪು. ೮೮-೯೬

೨. ಕೇಂದ್ರ ಸರ್ಕಾರ (೨೦೧೩-೧೪). ಬಜೆಟ್ ಮುಖ್ಯಾಂಶಗಳು, ಭಾರತ ಸರ್ಕಾರ, ಪು. ೨೭ ನೋಡಿ

೩. ಕೃಷಿ ಸಾಲ ವ್ಯವಸ್ಥೆಯ ಇತಿಹಾಸ, ಪ್ರಸ್ತುತ ಸಮಸ್ಯೆಗಳು, ಸಂಘಟಿತ ಹಣಕಾಸು ವಲಯದ ಕಾರ್ಯವೈಖರಿ ಮತ್ತು ಕೃಷಿ ಸಾಲ ವ್ಯವಸ್ಥೆಯ ಭವಿಷ್ಯವನ್ನು ಕುರಿತು ರಾಕೇಶ್ ಮೋಹನ್ ವಿಶ್ಲೇಷಿಸಿದ್ದಾರೆ. *ಅಗ್ರಿಕಲ್ಚರಲ್ ಕ್ರೆಡಿಟ್ ಇನ್ ಇಂಡಿಯಾ; ಸ್ಟೇಟಸ್, ಇಶ್ಯೂಸ್ ಅಂಡ್ ಫ್ಯೂಚರ್ ಅಜೆಂಡಾ,* ಆರ್‌ಬಿಐ ಬುಲೆಟಿನ್, ನವಂಬರ್, ಮುಂಬೈ, ೨೦೦೫, ಪು. ೯೯೮ ನೋಡಬಹುದು

೪. ವಿ.ಎಮ್. ದಾಂಡೇಕರ್, ಗ್ರಾಮೀಣ ಸಂಘಟಿತ ಹಣಕಾಸು ವ್ಯವಸ್ಥೆಯ ಸುಧಾರಣೆಗೆ ಸರ್ಕಾರ ಸ್ವಾತಂತ್ರ್ಯಾನಂತರ ಕೈಗೊಂಡ ನೀತಿಮಟ್ಟದ ಪ್ರಯತ್ನಗಳನ್ನು ವಿಶ್ಲೇಷಿಸಿದ್ದಾರೆ. ಹೀಗೆ ಹಲವು ಸಮಿತಿಗಳ ವರದಿಗಳು ಮತ್ತು ಕಾನೂನುಗಳಿಂದಾಗಿ ಗ್ರಾಮೀಣ ಸಂಘಟಿತ ಸಾಲ ಪೂರೈಕೆಯು ಹೇಗೆ ಸಂಕೀರ್ಣಗೊಂಡಿತು? ಅದರಿಂದಾದ ಸಮಸ್ಯೆಗಳೇನು? ಎಂಬುದನ್ನು ಚರ್ಚಿಸಿದ್ದಾರೆ. *ಲಿಮಿಟ್ಸ್ ಆಫ್ ಕ್ರೆಡಿಟ್, ನಾಟ್ ಕ್ರೆಡಿಟ್ ಲಿಮಿಟ್ಸ್, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ,* ವಾಲ್ಯೂಂ ೨೮, ನಂ ೩೯, ಸೆಪ್ಟಂಬರ್ ೨೫, ಪು. ಎ೮೬–ಎ೯೫ ನೊಡಿ.

೫. ಥಾಮಸ್ ಟಿಂಬರ್ಗ್ ಅಂಡ್ ಚಂದ್ರಶೇಖರ್ ವಿ. ಅಯ್ಯರ್ ಸಹಕಾರ ಸಂಸ್ಥೆಗಳ ಕಾರ್ಯವೈಖರಿ ಯನ್ನು ವಿಶ್ಲೇಷಿಸುತ್ತಾ ಭಾರತದಲ್ಲಿ ಸಂಘಟಿತ ಹಣಕಾಸು ಮೂಲದ ಆಲೋಚನೆ ಮತ್ತು ಆಚರಣೆಯಲ್ಲಿನ ದೋಷಗಳಿಂದ ಅಸಂಘಟಿತ ಹಣಕಾಸು ಮಾರುಕಟ್ಟೆ ಹೇಗೆ ಪ್ರಬಲ ಮೂಲವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಕಾರ್ಯನಿರ್ವಹಿಸುತ್ತದೆ ಎಂಬುದನ್ನು ವಿಶ್ಲೇಷಿಸಿದ್ದಾರೆ. *ಇನ್‌ಫಾರ್ಮಲ್ ಕ್ರೆಡಿಟ್ ಇನ್ ಇಂಡಿಯಾ,* ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ವಾಲ್ಯೂಂ ೧೫, ನಂ ೫/೭, ಫೆಬ್ರವರಿ ೧೯೮೦, ಪು. ೨೭೯–೨೮೦, ನೊಡಿ.

೬. ಜೀನ್ ಡ್ರೆಜ್ ಗ್ರಾಮೀಣ ಸಾಲ ಮಾರುಕಟ್ಟೆಗಳು ಹೇಗೆ ಕಾರ್ಯನಿರ್ವಹಿಸುತ್ತವೆ. ಸ್ಥಳೀಯ ಲೇವಾದೇವಿಗಾರರ ಶೋಷಣೆಯ ಮನೋಭಾವ, ಸಾಲ ಸೌಲಭ್ಯ ಪಡೆಯವಲ್ಲಿನ ಸಾಮಾಜಿಕ ಅಸಮಾನತೆಯ ಪರಿಣಾಮವನ್ನು ಪಶ್ಚಿಮ ಉತ್ತರ ಪ್ರದೇಶದ ಪಾಲಂಪರ್ ಗ್ರಾಮದಲ್ಲಿ ಪ್ರಾಯೋಗಿಕ ಅಧ್ಯಯನ ಕೈಗೊಂಡು ಈ ವಿಶ್ಲೇಷಣೆ ಮಾಡಿದ್ದಾರೆ. *ಕ್ರೆಡಿಟ್ ಇನ್ ರೂರಲ್ ಇಂಡಿಯಾ; ಎ ಕೇಸ್ ಸ್ಟಡಿ,* ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ಅಂಡ್ ಹಾಟನ್‌ಸ್ಟ್ರೀಟ್, ೧೯೯೭, ಪು; ೧–೧೭ ನೋಡಿ

೭. ರೈತರ ಆತ್ಮಹತ್ಯೆಗೆ ಬೇರೆ ಬೇರೆ ಕಾರಣ ಮತ್ತು ಪರಿಣಾಮಗಳನ್ನು ಮುಜಾಫರ್ ಅಸಾಧಿ ವಿಶ್ಲೇಷಿಸಿದ್ದಾರೆ. ಭಾರತ ಮತ್ತು ಕರ್ನಾಟಕದ ರೈತರ ಆತ್ಮಹತ್ಯೆಯ ಘಟನೆಗಳನ್ನು ಉಲ್ಲೇಖಿಸಿದ್ದಾರೆ. *ಕರ್ನಾಟಕದಲ್ಲಿ ಐಡೆಂಟಿಟಿ ರಾಜಕೀಯ, ರೈತ ಹೋರಾಟ ಹಾಗೂ ಸಾಮಾಜಿಕ ಚಳುವಳಿ,* ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೦೯, ಪು. ೧೨೨–೧೨೯, ನೋಡಬಹುದು

೮. ದೇಶಪಾಂಡ್ಯ ಆರ್.ಎಸ್. ಮತ್ತು ಸರೋಜಾ ಅರೋರ ಪಂಜಾಬ್ ರಾಜ್ಯದ ಮೂರು ಜಿಲ್ಲೆಗಳಲ್ಲಿ ಅಧ್ಯಯನ ಕೈಗೊಂಡು ಕೃಷಿ ಬಿಕ್ಕಟ್ಟು, ರೈತರ ಆತ್ಮಹತ್ಯೆಗೆ ಕಾರಣವಾದ ಅಂಶಗಳು ಮತ್ತು ಆತ್ಮಹತ್ಯೆಯ ನಂತರದ ಪರಿಣಾಮಗಳನ್ನು ವಿಶ್ಲೇಷಿಸಿದ್ದಾರೆ. *ಅಗ್ರೇರಿಯನ್ ಕ್ರೈಸಿಸ್ ಅಂಡ್ ಫಾರ್ಮರ್ಸ್ ಸೂಸೈಡ್ಸ್ – ಲ್ಯಾಂಡ್ ರಿಫಾರಮ್ಸ್ ಇನ್ ಇಂಡಿಯಾ,* ವಾಲ್ಯೂಂ ೧೨, ಸೇಜ್ ಪಬ್ಲಿಕೇಷನ್, ಡಿಲ್ಲಿ, ೨೦೧೦, ಪು. ೧–೧೩, ನೋಡಬಹುದು.

೯. ಸಿ.ಪಿ. ಚಂದ್ರಶೇಖರ್ ಅಂಡ್ ಜಯತಿ ಘೋಶ್ ಟ್ರಿಕಲ್ ಡೌನ್ ಥಿಯರಿಯ ವಿಪಲತೆಯನ್ನು ವಿಶ್ಲೇಷಿಸಿದ್ದಾರೆ. ೧೯೯೧ರ ಆರ್ಥಿಕ ಸುಧಾರಣೆ ಮತ್ತು ಹಣಕಾಸು ಸುಧಾರಣಾ ನೀತಿಗಳ ಪರಿಣಾಮಗಳು ಮತ್ತು ಈ ನೀತಿಗಳು ಹೇಗೆ ನಿರುದ್ಯೋಗ ಮತ್ತು ಬಡತನ ಹೆಚ್ಚಾಗಲು ಕಾರಣವಾಗಿವೆ ಎಂಬುದನ್ನು ವಿಶ್ಲೇಷಿಸಿದ್ದಾರೆ. ಹೀಗೆ ಸಮಗ್ರ ಆರ್ಥಿಕ ನೀತಿಗಳ ವೈಪಲ್ಯವನ್ನು ಇವರು ಚರ್ಚಿಸಿದ್ದಾರೆ. *ದಿ ಮಾರ್ಕೆಟ್ ದಟ್ ಫೈಲ್ಡ್–ನಿಯೋ ಲಿಬರಲ್ ಎಕನಾಮಿಕ್ ರಿಫಾರ್ಮ್ಸ್ ಇನ್ ಇಂಡಿಯಾ,* ನ್ಯೂಡೆಲ್ಲಿ, ಲೆಫ್ಟ್ ವರ್ಡ್ ಬುಕ್ಸ್, ಪು. ೧೩೯–೧೫೪ ನೋಡಿ

೧೦. ಕೆ.ಎ. ರಸೂರ್, ಚನ್ನಬಸವನಗೌಡ ಮತ್ತು ಬೊಕ್ಕಲ್ ನಾಗೇಂದ್ರಪ್ಪ ಭಾರತದ ಮತ್ತು ಕರ್ನಾಟಕ ರಾಜ್ಯದ ಮುಖ್ಯವಾಗಿ ಹೈದರಾಬಾದ್ ಕರ್ನಾಟಕ ಜಿಲ್ಲೆಗಳಕಲ್ಲಿ ಕೃಷಿ ಕಾರ್ಮಿಕರ ಹೆಚ್ಚಳದ ಬಗ್ಗೆ ವಿಶ್ಲೇಷನೆ ನೀಡಲಾಗಿದೆ. ಜನಗಣತಿ ವರ್ಷಗಳು, ದೇಶದ ಒಟ್ಟು ಜನಸಂಖ್ಯೆ, ಒಟ್ಟು ಶ್ರಮ ಶಕ್ತಿ, ಇದರಲ್ಲಿ ಕೃಷಿಕೂಲಿ ಕಾರ್ಮಿಕರ ಶೇಕಡಾವಾರು ಹೆಚ್ಚಳಕ್ಕೆ ಕಾರಣವಾದ ಅಂಶಗಳನ್ನು ವಿಶ್ಲೇಷಿಸಲಾಗಿದೆ. *ಆನ್ ಎಕಾನಮಿಕ್ ಅನಾಲಿಸಿಸ್ ಆಫ್ ಅಗ್ರಿಕಲ್ಚರಲ್ ಲೇಬರ್ ಇನ್ ಹೈದರಾಬಾದ್ ಕರ್ನಾಟಕ ಇಲ್ಲಿ ಕೆ.ಕೆ ಬಾಗ್ಚಿ (ಸಂ) ಅಗ್ರೇರಿಯನ್ ಕ್ರೈಸಿಸ್; ಫಾರ್ಮರ್ಸ್ ಸುಸೈಡ್ಸ್ ಅಂಡ್ ಲೈವ್‌ಲಿಹುಡ್ ಸೆಕ್ಯೂರಿಟಿ ಆಫ್ ರೂರಲ್ ಲೇಬರ್ ಇನ್ ಇಂಡಿಯಾ,* ಅಭಿಜಿತ್ ಪಬ್ಲಿಕೇಷನ್, ಡೆಲ್ಲಿ, ೨೦೧೧, ಪು.೨೨೩–೨೨೪, ನೋಡಿ.

೧೧. ಗ್ರಾಮೀಣ ಸಾಲ ವ್ಯವಸ್ಥೆಯಲ್ಲಿ ಸಮಾಜದ ಕೆಲವು ನಿರ್ಧಿಷ್ಟ ವರ್ಗಗಳು ಅನುಭವಿಸುವ ಸಾಲ ಸೌಲಭ್ಯದಲ್ಲಿನ ಅಸಮಾನತೆಯನ್ನು ಮತ್ತು ಈ ಅಸಮಾನತೆಯ ಲಿಂಗ ಸಂಬಂಧಿ ಅಯಾಮವನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಮೀನಾಕ್ಷಿ ರಾಜೀವ್, ಬಿ.ಪಿ. ವಾಣಿ ಅಂಡ್ ಮನೋಜಿತ್ ಭಟ್ಟಾಚಾರ್ಜಿ, *ಈಕ್ವಲ್ ಆಕ್ಸೆಸ್ ಫಾರ್ ಕ್ರೆಡಿಟ್; ಜಂಡರ್ ರಿಲೇಟೆಡ್ ಡಿಬೆಟ್,* ವಾಲ್ಯುಂ ಎಕ್ಸ್‌ಎಲ್‌ವಿಎಲ್ ನಂ.೩೩, ಎಕಾನಾಮಿಕ್ ಅಂಡ್ ಪಲಿಟಿಕಲ್ ವೀಕ್ಲೀ, ಆಗಸ್ಟ್ ೧೩, ೨೦೧೧, ಪು. ೭೬–೭೯, ನೋಡಬಹುದು

೧೨. ಒಳಗೊಳ್ಳುವ ಅಭಿವೃದ್ಧಿ ಎಂದರೇನು? ಇದು ಯಾರನ್ನು ಒಳಗೊಳ್ಳುತ್ತದೆ? ಯಾರನ್ನು ಹೊರಗಿಡುತ್ತದೆ. ಅಭಿವೃದ್ಧಿಯಿಂದ ವಂಚಿತರಾದ ಮಹಿಳೆಯ ಬದುಕಿನ ಸ್ಥಿತಿಯೇನು? ಎಂಬದನ್ನು ಕರ್ನಾಟಕ ರಾಜ್ಯ ಮತ್ತು ಹೈದರಾಬಾದ್ ಕರ್ನಾಟಕದ ಮಟ್ಟದಲ್ಲಿ ಚರ್ಚಿಸಿದ್ದಾರೆ. ಡಾ. ಟಿ.ಆರ್. ಚಂದ್ರಶೇಖರ್, ಜನರನ್ನು ಒಳಗೊಳ್ಳುವ ಅಭಿವೃದ್ಧಿ; ಹೈದರಾಬಾದ್ ಕರ್ನಾಟಕದ ಪ್ರದೇಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೦–೩೦

೧೩. ಅದೇ

೧೪. ಜೆ.ಪಿ. ಸಿಂಗ್ ಅವರ ಪ್ರಕಾರ ವಾಣಿಜ್ಯ ಬ್ಯಾಂಕುಗಳ ಹಣಕಾಸು ದೊಡ್ಡ ರೈತರ ಹಾಗೂ ಮದ್ಯಮ ರೈತರ ಪಾಲಾಗುತ್ತದೆ. ಈ ಬ್ಯಾಂಕುಗಳ ಹಣಕಾಸು ಸೌಲಭ್ಯಗಳನ್ನು ಹೆಚ್ಚಿನ ಪ್ರಮಾಣದಲ್ಲಿ ದೊಡ್ಡ ರೈತರು ಪಡೆಯುತ್ತಾರೆ ಎಂದು ವಿಶ್ಲೇಷಿಸಿದ್ದಾರೆ. *ರೋಲ್ ಆಫ್ ಇನ್‌ಸ್ಟಿಟ್ಯೂಷನಲ್ ಫೈನಾನ್ಸ್ ಇನ್ ಅಗ್ರಿಕಲ್ಚರ್,* ಆಶಿಸ್ ಪಬ್ಲಿಷಿಂಗ್ ಹೌಸ್, ಜೈಪುರ, ೧೯೮೬, ಪು.೧೬೬–೧೮೯.

೧೫. ವಿಜಯ ಕರ್ನಾಟಕ (೨೦೧೪). ದಿನೇಶ್ ಎಮ್.ಆರ್. *ಕೊಟ್ಟವ ಕೋಡಂಗಿ!* ವಿಜಯ ಕರ್ನಾಟಕ, ಸೋಮವಾರ, ದಿನಾಂಕ; ೦೮ ಡಿಸೆಂಬರ್ ೨೦೧೪, ಬೆಂಗಳೂರು, ಪು.೦೮. ದಿನೇಶ್‌ರವರು ಸಾರ್ವಜನಿಕ ಬ್ಯಾಂಕುಗಳ ಅನುತ್ಪಾದಕ ಆಸ್ತಿಯ ಪ್ರಮಾಣ, ಅವುಗಳು ಸೃಷ್ಟಿಯಾಗುವ ಬಗೆ ಹಾಗೂ ಸಾಲ ಪಡೆದು ಅದನ್ನು ಅನುತ್ಪಾದಕಗೊಳ್ಳುವಲ್ಲಿ ಉಳ್ಳವರ ಲಾಬಿಯ ಬಗ್ಗೆ ಚರ್ಚಿಸಿದ್ದಾರೆ.

೧೬. ಮಂಡಲ್ ಜಿ.ಸಿ. ಅವರು ಸಹಕಾರ ಸಂಸ್ಥೆಗಳು ಸಾಮಾಜಿಕ ಆರ್ಥಿಕ ಪರಿವರ್ತನೆ ತರುವಲ್ಲಿ ಪ್ರಮುಖ ಪಾತ್ರವಹಿಸುವ ಅವಕಾಶವಿದ್ದರೂ ಅದನ್ನು ನಿರ್ವಹಿಸಲಾಗದೆ ಆರ್ಥಿಕ ಅದೋಗತಿಗೆ ಸಿಲುಕಿದ್ದು ನೆರವಿಗಾಗಿ ಬಾಹ್ಯ ಮೂಲವನ್ನು ಅವಲಂಬಿಸಿವೆ ಎಂದು ವಿಶ್ಲೇಷಿಸಿದ್ದಾರೆ. *ಸೋಷಿಯಲ್ ಇಂಪ್ಯಾಕ್ಟ್ ಆಫ್ ಬ್ಯಾಂಕಿಂಗ್, ಟೆಕ್ನಾಲಜಿ ಅಂಡ್ ಡವಲಪ್‌ಮೆಂಟ್ ಆನ್ ವಿಲೇಜಸ್ ಇನ್ ಇಂಡಿಯಾ,* ರಜತ್ ಪಬ್ಲಿಕೇಶನ್, ನ್ಯೂಡೆಲ್ಲಿ, ೨೦೦೯, ಪು. ೪೨೭–೪೩೩

೧೭. ರಾಜಶೇಖರ್ ಡಿ. ಮತ್ತು ವಿನೋದ್ ವ್ಯಾಸಲು ಸಂಘಟಿತ ಹಣಕಾಸು ವಲಯ ಮತ್ತು ಈ ವಲಯದ ಬ್ಯಾಂಕುಗಳೊಂದಿಗಿನ ರೈತರ ವ್ಯತಿರಿಕ್ತ ಅನುಭಗಳು ಮತ್ತು ಸಂಭದಗಳನ್ನು ವಿಶ್ಲೇಷಿಸಿದ್ದಾರೆ. *ರೂರಲ್ ಕ್ರೆಡಿಟ್ ಅಂಡ್ ಎಕನಾಮಿಕ್ ಡವಲಪ್‌ಮೆಂಟ್; ಎ ಸ್ಟಡಿ ಇನ್ ಒರಿಸ್ಸಾ, ಇಂಡಿಯಾ,* ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ೧೯೯೩. ಪು.೧೭–೧೯

೧೮. ವೀರಶೇಖರಪ್ಪ (೨೦೦೨). ಸಂಘಟಿತ ಹಣಕಾಸು. ಭಾರತೀಯ ಆರ್ಥಿಕ ಸಾಮಾಜಿಕ ಬದಲಾವಣೆ ಸಂಸ್ಥೆ, ಬೆಂಗಳೂರು, ಪು.೧೨೮–೧೨೯.

೧೯. ಪ್ರೊ. ಮೈತ್ರೇಯಿ ಕೃಷ್ಣರಾಜನ್, ಶ್ರೀ ಅಗರ್‌ವಾಲ್ ಎ.ಕೆ. ಮತ್ತು ಡಾ. ಕೆ.ಎಸ್.ಸಿ. ರಾವ್ (೨೦೦೭). *"ರಿಪೋರ್ಟ್ ಆನ್ ಸಬ್‌ಗ್ರೂಪ್ ಆನ್ ಜಂಡರ್ ಅಂಡ್ ಅಗ್ರಿಕಲ್ಚರ್"* ಪ್ಲಾನಿಂಗ್ ಕಮಿಷನ್, ಗೌರ್‍ನಮೆಂಟ್ ಅಫ್ ಇಂಡಿಯಾ, ಪು.೪–೫ ನ್ನು ನೋಡಿ

೨೦. ಅವನೀಂದ್ರನಾಥ್ ಠಾಕೂರ್‌ರು (೨೦೧೦). ಬ್ಯಾಂಕಿಂಗ್ ಸಾಗಿ ಬಂದ ದಾರಿ, ಯೋಜನಾ, ಫೆಬ್ರವರಿ, ೨೦೧೦, ಪು.೨–೫ ನೋಡಬಹುದು

# ಸಮಾರೋಪ

ಪ್ರಸ್ತುತ ಅಧ್ಯಯನದ ಫಲಿತಗಳು ಮತ್ತು ಫಲಿತಗಳ ಹಿನ್ನೆಲೆಯಲ್ಲಿ ರೂಪಿಸಿಕೊಂಡ ಕೆಲವು ಸಲಹೆಗಳನ್ನು ಸಮಾರೋಪದಲ್ಲಿ ನೀಡಲಾಗಿದೆ.

ಹಸಿರು ಕ್ರಾಂತಿ, ಪಂಚವಾರ್ಷಿಕ ಯೋಜನೆಗಳು, ನೀರಾವರಿ ಯೋಜನೆಗಳು, ವಿದ್ಯುತ್, ಸಾರಿಗೆ ಮುಂತಾದ ಸಾರ್ವಜನಿಕ ಹೂಡಿಕೆಗಳ ಪ್ರಯೋಜನ, ಸಂಘಟಿತ ಸಾಲ ವ್ಯವಸ್ಥೆ, ರಿಯಾಯತಿ ಬಡ್ಡಿದರದ ಸಾಲಗಳು, ಸಾಲಮನ್ನಾ ಯೋಜನೆಗಳ ಅನುಕೂಲವನ್ನು ಕೇವಲ ಶ್ರೀಮಂತರ ರೈತರು ಪ್ರಬಲ ಸಮುದಾಯಗಳಿಗೆ ಸೇರಿದ ದೊಡ್ಡಹಿಡುವಳಿದಾರರು ಮಾತ್ರ ಪಡೆಯುವಂತಾಗಿರುವುದು ಆರ್ಥಿಕ ಅಭಿವೃದ್ಧಿ ನೀತಿಗಳು ಮತ್ತು ರಾಜಕೀಯ ಆರ್ಥಿಕತೆಯ ವೈಪಲ್ಯವೆನ್ನಬಹುದು. ಜನ್ ಬ್ರಮನ್‌ರ ಪ್ರಕಾರ ಉಳುವವನೇ ಒಡೆಯ ಎಂಬ ಘೋಷಣೆ–ಸುಧಾರಣೆ ಜಾರಿಗೆ ಬಂದರೂ ಭೂರಹಿತರ ಕಾರ್ಮಿಕರ ಪರಿಸ್ಥಿತಿಯಲ್ಲಿ ಯಾವುದೇ ಬದಲಾವಣೆಯಾಗಲಿಲ್ಲ. ಇವರು ಕೃಷಿ ಬಂಡವಾಳ ಮರು ಹಂಚಿಕೆಯ ವ್ಯವಸ್ಥೆಯಿಂದ ಹೊರಗಿಳಿದರು. ಗ್ರಾಮೀಣ ಪ್ರದೇಶದ ಬಂಡವಾಳಶಾಹಿ ಶಕ್ತಿಗಳನ್ನು ಬಲಪಡಿಸುವ ರೀತಿಯಲ್ಲೇ ಸರ್ಕಾರದ ಅಭಿವೃದ್ಧಿ ಪ್ರಯತ್ನಗಳಿದ್ದವು. ಬಡತನದ ದುಸ್ಥಿತಿಯಲ್ಲಿರುವ ಗ್ರಾಮೀಣ ಪ್ರದೇಶದ ಬಹು ಸಂಖ್ಯಾತ ಜನರನ್ನು ಸಂಘಟಿಸಲು ಪ್ರಯತ್ನಿಸುವ ಭಾರತದ ರಾಜಕೀಯ ವ್ಯವಸ್ಥೆ ಬಂಡವಾಳ ಒಡೆತನವನ್ನು (ಓನರ್ ಶಿಪ್ ಆಫ್ ಕ್ಯಾಪಿಟಲ್) ಪೋಷಿಸಿ ಪ್ರಬಲ ಸಮುದಾಯಗಳ ಹಿತಾಸಕ್ತಿಗೆ ಪೂರಕವಾದ ಅಭಿವೃದ್ಧಿ ತಂತ್ರ ವಿಧಾನಗಳನ್ನು ಅನುಸರಿಸುತ್ತಿರುವುದು ವ್ಯವಸ್ಥೆಯೊಳಗಿನ ವೈರುದ್ಯ. ಈ ಹಿನ್ನೆಲೆಯಲ್ಲಿ ಅಭಿವೃದ್ಧಿ ನೀತಿಯ ಭಾಗವೆನ್ನಬಹುದಾದ ಸಂಘಟಿತ ವಲಯದ ಸಾಲ ಸೌಲಭ್ಯಗಳು ಸಮಾಜದ

ಎಲ್ಲಾ ಗುಂಪು, ವರ್ಗಗಳನ್ನು ತಲುಪುವಂತಹ ಹಾಗೂ ಸಾಮಾಜಿಕ ಆರ್ಥಿಕ ಪರಿವರ್ತನೆಗಳ ಭಾಗವಾಗಿ ಎಲ್ಲರನ್ನು ಒಳಗೊಳ್ಳುವ ಹಣಕಾಸು ಅಥವಾ ಸಾಲ ನೀತಿಯನ್ನು ಸರ್ಕಾರ ಅನುಷ್ಠಾನಗೊಳಿಸಬೇಕಾಗಿದೆ. ಇದಕ್ಕಾಗಿ ಸಮಾಜದ ಮೂಲಭೂತ ವ್ಯವಸ್ಥೆಯೊಳಗೆ ಸುಧಾರಣೆಗಳನ್ನ ತರಬೇಕಾಗಿದೆ. ಎಲ್ಲರೂ ಅಭಿವೃದ್ಧಿಯ ಲಾಭ ಮತ್ತು ಅವಕಾಶಗಳನ್ನು ಪಡೆಯಲು ಅನುಕೂಲ ವಾಗುವಂತೆ ಸಂಪನ್ಮೂಲಗಳಾದ ಭೂಮಿ, ಬಂಡವಾಳ ಮತ್ತು ಕೌಶಲ್ಯಗಳನ್ನು ಹೊಂದುವಂತಾಗಬೇಕು. ಆಸ್ಥಿ ರಹಿತ ಹಾಗೂ ಆಸ್ಥಿ ಸಹಿತ ವರ್ಗಗಳ ಅಂತರ ಕಡಿಮೆಯಾಗಿ ಅಸಮಾನತೆ ಕಡಿಮೆಯಾಗುತ್ತದೆ ಎಂಬುದು ನನ್ನ ದೃಷ್ಟಿಕೋನ ಅಥವಾ ವಾದ. ಸಾರ್ವಜನಿಕ ಹೂಡಿಕೆಗಳು ಹಾಗೂ ಸರ್ಕಾರದ ಸಾಲ ಯೋಜನೆಗಳ ಪ್ರಯೋಜನ ಪಡೆಯುವಂತಾಗಲು ಸಮಾಜದ ಎಲ್ಲಾ ವರ್ಗಗಳು ಮುಖ್ಯವಾಗಿ ಆಸ್ತಿ ರಹಿತರು, ನಿರ್ಲಕ್ಷಿತ ವರ್ಗಗಳು, ಭೂಮಿ, ನೀರಾವರಿ ಸೌಲಭ್ಯ, ತಂತ್ರಜ್ಞಾನದ ಅಳವಡಿಕೆಗೆ ಬೇಕಾದ ಪೂರಕ ತಿಳುವಳಿಕೆ ಹೊಂದಿರಬೇಕು. ಇದಕ್ಕೆ ಬೇಕಾದ ಪೂರಕ ಪ್ರಯತ್ನಗಳನ್ನು ಸರ್ಕಾರ ಮಾಡಬೇಕಾಗಿದೆ. ಸಂಘಟಿತ ಸಾಲ ವ್ಯವಸ್ಥೆಯಿಂದ ಸಾಲ ಸೌಲಭ್ಯ ಪಡೆಯುವಲ್ಲಿ ಸಾಗುವಳಿ ಭೂಮಿ, ಲಿಂಗ, ಶಿಕ್ಷಣ ಮತ್ತು ಕುಟುಂಬದ ಗಾತ್ರ ಇತ್ಯಾದಿ ಅಂಶಗಳು ಪ್ರಭಾವ ಬೀರುತ್ತವೆ. ಪುರುಷ ಮುಖ್ಯಸ್ಥ ಕುಟುಂಬಗಳು ಮಹಿಳಾ ಮುಖ್ಯಸ್ಥ ಕುಟುಂಬಗಳಿಗಿಂತ ಸಾಲ ಪಡೆಯುವ ಹೆಚ್ಚಿನ ಅವಕಾಶಗಳನ್ನು ಹೊಂದಿರುತ್ತವೆ. ಶೇ. ೧೧ರಷ್ಟು ಗ್ರಾಮೀಣ ಕುಟುಂಬಗಳು ಮಹಿಳಾ ಮುಖ್ಯಸ್ಥ ಕುಟುಂಬಗಳಾಗಿವೆ (ಅಂಜಲಿ ಕುಮಾರ್ & ದೀರಜ್ ಕೆ.ಸಿಂಗ್:೨೦೦೭:೫೭). ಶಿಕ್ಷಣ ಹೊಂದಿರುವ ಕುಟುಂಬಗಳು ಸಂಘಟಿತ ವ್ಯವಸ್ಥೆಯಿಂದ ಸಾಲ ಸೌಲಭ್ಯಗಳನ್ನು ಪಡೆಯಲು ಪ್ರಯತ್ನಿಸುತ್ತಾರೆ. ಪ್ರಸ್ತುತ ನನ್ನ ಅಧ್ಯಯನದಲ್ಲಿ ತಿಳಿದುಬಂದಂತೆ ಲಿಂಗಾಯತ ಜಾತಿಯ ಬಹುತೇಕರು ಶಿಕ್ಷಣ ಪಡಿದ್ದಾರೆ. ಪ್ರಾಥಮಿಕ, ಪ್ರೌಢ ಮತ್ತು ಕಾಲೇಜು ಶಿಕ್ಷಣ ಪಡೆದಿದ್ದು ಸರ್ಕಾರದ ಸಾಲ ಯೋಜನೆಗಳ ಬಗ್ಗೆ ಮಾಹಿತಿ ಪಡೆದಿರುತ್ತಾರೆ. ಹಣಕಾಸು ಸಂಸ್ಥೆಗಳು ಬ್ಯಾಂಕುಗಳನ್ನು ಮತ್ತು ಅವುಗಳ ಅಧಿಕಾರಿಗಳನ್ನ ಸಂಪರ್ಕಿಸಿ, ಅವರಿಗೆ ಸೂಕ್ತ ಮಾಹಿತಿ ನೀಡಿ ಧನಾತ್ಮಕ ಭಾವನೆ ಮೂಡಿಸುವ ಪ್ರಭುದ್ದತೆ ಹೊಂದಿದ್ದಾರೆ. ಹಾಗೆಯೇ ಕುಟುಂಬದ ಗಾತ್ರ ದೊಡ್ಡದಾಗಿದ್ದು ಭೂಮಿ ಹೆಚ್ಚಾಗಿರುವ, ಸಾಲ ಭದ್ರತೆ ನೀಡಲು ಸಾದ್ಯವಿರುವವರು ಸಂಘಟಿತ ಸಾಲ ವ್ಯವಸ್ಥೆಯಿಂದ ಹೆಚ್ಚು ಅನುಕೂಲ ಪಡೆಯುತ್ತಾರೆ. ಆದರೆ ದುರ್ಬಲರು ಅಸಂಘಟಿತ ಮೂಲವನ್ನು ಸಾಲಕ್ಕಾಗಿ ಅವಲಂಭಿಸಿ ಅವುಗಳ ವಿಷ ವರ್ತುಲದ ಸುಳಿಯಲ್ಲಿ ಸಿಲುಕುತ್ತಾರೆ. ಸಂಘಟಿತ ಹಣಕಾಸು ವ್ಯವಸ್ಥೆಯಿಂದ ಆರ್ಥಿಕವಾಗಿ ಉತ್ತಮವಾಗಿರುವ ಕುಟುಂಬಗಳೇ ಹೆಚ್ಚಾಗಿ ಸಾಲ ಸೌಲಭ್ಯ ಪಡೆಯುವವರು. ಗ್ರಾಮೀಣ ಪ್ರದೇಶದಲ್ಲಿ ಸಂಘಟಿತ ಹಣಕಾಸು ವಲಯದ ಬ್ಯಾಂಕುಗಳು ತಮ್ಮ ಸಾಲ ಯೋಜನೆಗಳು ಹಾಗೂ ಅವುಗಳ ನಿಯಮ ನೀತಿಗಳ ಬಗ್ಗೆ ತರಬೇತಿ ನೀಡುವ ಮೂಲಕ, ಸಾಲ ಪೂರೈಕೆ ವಿಧಾನವನ್ನು ಸರಳ ಗೊಳಿಸಿ ಭೂರಹಿತರು ಮತ್ತು ಅತಿ ಸಣ್ಣ ಹಾಗೂ ಸಣ್ಣ ಹಿಡುವಳಿದಾರರನ್ನ ಹಣಕಾಸು ಸೌಲಭ್ಯದಿಂದ ಹೊರಗಳಿಯುವಂತೆ ಮಾಡುವ ಸಾಲ ಭದ್ರತೆ ನಿಯಮಗಳನ್ನು

ಸಡಿಲಿಸುವ ಮೂಲಕ ಸಂಘಟಿತ ವ್ಯವಸ್ಥೆಯ ಸಾಲ ಸೌಲಭ್ಯಗಳನ್ನು ಎಲ್ಲರಿಗೂ ತಲುಪುವಂತೆ ಮಾಡಬಹುದು.

ಹಣಕಾಸು ಒಳಗೊಳ್ಳುವಿಕೆ ಮತ್ತು ಸಾಮಾಜಿಕ ಆರ್ಥಿಕ ಅಭಿವೃದ್ಧಿಗೆ ಇರುವ ಸಂಬಂಧವನ್ನ ವಿಶ್ಲೇಷಿಸಿವುದಾದರೇ ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಸಾಲ ಅಥವಾ ಹಣಕಾಸು ಬೇರೇ ಬೇರೇ ಕಾರಣಗಳಿಗಾಗಿ ಅಗತ್ಯವಿದೆ. ಅಂದರೆ ಉತ್ಪಾದನೆ ಅನುಭೋಗ, ಕೌಟುಂಬಿಕ ವೆಚ್ಚಗಳು, ಆರೋಗ್ಯ, ಆದಾಯವೃದ್ಧಿ ಚಟುವಟಿಕೆಗಳಂತಹ ಅಂಭೀರ ಅಗತ್ಯಗಳಿಗೆ ಸಾಲ ಅವಶ್ಯಕ. ಸಾಲ ಸೌಲಭ್ಯಗಳು ಕುಟುಂಬಗಳ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಯನ್ನು ಸುಧಾರಿಸಲಿವೆ. ಈ ಕಾರಣದಿಂದ ಕಡಿಮೆ ವೆಚ್ಚದ ಕಡಿಮೆ ಬಡ್ಡಿಯ ಸಾಕಷ್ಟು ಪ್ರಮಾಣದ ಸಾಲ ಆರ್ಥಿಕ ಸಾಮಾಜಿಕ ಅಭಿವೃದ್ಧಿಯಲ್ಲಿ ಮುಖ್ಯವಾದದ್ದು. ಸಂಘಟಿತ ವಲಯದ ಸಾಲ ಹಣಕಾಸು ಒಳಗೊಳ್ಳುವಿಕೆ ಪ್ರಕ್ರಿಯೆ ದೃಷ್ಟಿಯಿಂದ ಪ್ರಧಾನವಾದದು. ಕಾರಣ ಸಂಘಟಿತ ಹಣಕಾಸು ವಲಯ ಮಾತ್ರ ಕಡಿಮೆ ವೆಚ್ಚದಲ್ಲಿ ಅಧಿಕ ಪ್ರಮಾಣದ ಸಾಲವನ್ನು ಪೂರೈಸಬಲ್ಲದು. ಸಾಲ ಬೇಡಿಕೆಯನ್ನು ಪೂರೈಸುವ ಸಾಮರ್ಥ್ಯ ಅಥವಾ ಅವಕಾಶ ಸಂಘಟಿತ ಮೂಲಕ್ಕೆ ಮಾತ್ರ ಇದೆ. ಹಲವು ಅಧ್ಯಯನಗಳ ಪ್ರಕಾರ ಬಡತನ ಮತ್ತು ಆದಾಯ ಅಸಮಾನತೆಯನ್ನು ಕಡಿಮೆ ಮಾಡಿ ಅಭಿವೃದ್ಧಿಯನ್ನ ಹೆಚ್ಚಿಸಲು ಮತ್ತು ಅಭಿವೃದ್ಧಿಯ ಅನುಕೂಲ ಬಡವರು, ನಿರ್ಗತಿಕರು, ಅವಕಾಶ ವಂಚಿತರಿಗೆ ತಲುಪುವಂತೆ ಮಾಡಲು ಸುಲಭ ಮತ್ತು ಸಾಕಷ್ಟು ಪ್ರಮಾಣದ ಸಾಲ ಸೌಲಭ್ಯವನ್ನು ಒದಗಿಸುವುದು ಒಂದು ಮುಖ್ಯ ಅಂಶವಾಗಿದೆ. ಎಲ್ಲಾ ವರ್ಗದ ಜನರ ಸಾಲ ಅಗತ್ಯಗಳನ್ನು ಪೂರೈಸುವ, ಸಾಲ ಸಮಸ್ಯೆಗಳಿಗೆ ಸ್ಪಂದಿಸುವಂತಹ ಹಣಕಾಸು ನೀತಿ–ವ್ಯವಸ್ಥೆಯಿಂದ ಎಲ್ಲರಿಗೂ ಸಮಾನ ಅವಕಾಶಗಳನ್ನು ಸೃಷ್ಟಿಸಿ ಸಾಮಾಜಿಕವಾಗಿ ಆರ್ಥಿಕವಾಗಿ ಅಭಿವೃದ್ಧಿಯಿಂದ ಹೊರಗುಳಿದವರನ್ನು ಆರ್ಥಿಕತೆಯೊಂದಿಗೆ ಬೆರೆಯುವಂತೆ ಮಾಡಿ ಸುಧಾರಣೆ ಪ್ರಕ್ರಿಯೆಯಲ್ಲಿ ಕ್ರಿಯಾಶೀಲವಾಗಿ ಪಾಲ್ಗೊಂಡು ಅಭಿವೃದ್ಧಿ – ಬದಲಾವಣೆಯ ನಿಯೋಗಿಗಳಂತೆ ಕಾರ್ಯ ನಿರ್ವಹಿಸಿ ಪ್ರಗತಿ ಪ್ರಕ್ರಿಯೆಗೆ ಸಕ್ರೀಯವಾಗಿ ಕೊಡುಗೆ ನೀಡುವಂತೆ ಮಾಡಬಹುದು. ಈ ಸಾಧ್ಯತೆಗಳು ಸಾಕಾರಗೊಳ್ಳಲು ಹೊಸ ಆಲೋಚನೆಯ ಅನುಷ್ಠಾನ ಮುಖ್ಯವಾದದ್ದು. ಬ್ಯಾಂಕು ಸಾಲಗಳ ಹಂಚಿಕೆಯಲ್ಲಿನ ಅಸಮಾನತೆ ಸರಿಪಡಿಸದಿದ್ದರೆ ಅದು ಒಳಗೊಳ್ಳುವ ಅಭಿವೃದ್ಧಿಯ ಮೇಲೆ ಪರಿಣಾಮಬೀರುತ್ತದೆ. ಪ್ರಗತಿಯ ಅಸಮತೋನವನ್ನು ಹೆಚ್ಚಿಸುತ್ತದೆ. ಅಭಿವೃದ್ಧಿಯ ಪಾಲು ಎಲ್ಲಾ ಸಾಮಾಜಿಕ ಗುಂಪುಗಳ ನಡುವೆ ಸಮಾನವಾಗಿ ಹಂಚಿಕೆಯಾಗದಿದ್ದರೆ, ಅದೇ ಅಭಿವೃದ್ಧಿ ದುರ್ಬಲರ ವರ್ಗಗಳ ಅಸಮಾನತೆಯನ್ನು ಹೆಚ್ಚಿಸುತ್ತದೆ. ಅಸಮಾನತೆಯ ಹೆಚ್ಚಳ ಬಡತನವನ್ನು ಕಡಿಮೆ ಮಾಡುವ ಪ್ರಕ್ರಿಯೆಯನ್ನು ದುರ್ಬಲಗೋಳಿಸುತ್ತದೆ. ಇದು ಅಭಿವೃದ್ಧಿ ಪ್ರಕ್ರಿಯೆಯನ್ನೇ ದುರ್ಬಲಗೊಳಿಸುವುದು. ಇದರಿಂದ ಎಲ್ಲರನ್ನೂ ಅಭಿವೃದ್ಧಿಯ ಪಾಲುದಾರರನ್ನಾಗಿಸುವ ಪ್ರಯತ್ನ ನಿರರ್ಥಕವಾಗುತ್ತದೆ. ೧೧ನೇ ಪಂಚವಾರ್ಷಿಕ ಯೋಜನೆಯಲ್ಲಿ ಭಾರತ ಅಳವಡಿಸಿಕೊಂಡಿರುವ ಒಳಗೊಳ್ಳುವ ಅಭಿವೃದ್ಧಿ (ಇನ್‌ಕ್ಲೂಸಿವ್ ಗ್ರೋಥ್) ತಂತ್ರ ವಿಫಲವಾಗುತ್ತದೆ. ಜವಾಬ್ದಾರಿಯುತ ಸಾಲ ವ್ಯವಸ್ಥೆಯಲ್ಲಿ ಸಾಲದ ಲಭ್ಯತೆ ಒಂದು ಮುಖ್ಯ

ವಿಷಯ. ಬಡತನ ನಿರ್ಮೂಲನೆಯಲ್ಲಿ ಸಾಲದ ಪೂರೈಕೆ ಮತ್ತು ಬೇಡಿಕೆ ಅಂಶಗಳು ಪ್ರಮುಖವಾದವುಗಳು. ಲಭ್ಯವಿರುವ ಸಾಲ-ಹಣಕಾಸನ್ನು ಬಳಸಿಕೊಳ್ಳಲು ಅನುಕೂಲವಾಗುವಂತೆ ಬಡವರ ಆದಾಯಗಳಿಸುವ ಸಾಮರ್ಥ್ಯವನ್ನು ಬಲಪಡಿಸಬೇಕು. ಅವರ ಕೌಶಲ್ಯಗಳನ್ನು ಹೆಚ್ಚಿಸಬೇಕು ಮತ್ತು ಆಸ್ತಿ ಸ್ವತ್ತುಗಳಿಸುವಂತೆ ಅವರನ್ನು ಬಲವರ್ಧನೆಗೊಳಿಸಬೇಕು. ಆಸ್ತಿಗಳಿಸುವ ಅವಕಾಶವನ್ನು ಸೃಷ್ಟಿಸಬೇಕು. ಈ ನಿಟ್ಟಿನಲ್ಲಿ ಸಮಾಜದ ಆರ್ಥಿಕ ವ್ಯವಸ್ಥೆಯನ್ನು ಸುಧಾರಿಸಬೇಕಾಗಿದೆ. ಗ್ರಾಮೀಣ ಹಣಕಾಸು ಎಲ್ಲರನ್ನೂ ತಲುಪಬೇಕಾದರೆ ಸಮಾಜದ ಮೂಲಭೂತ ಆರ್ಥಿಕ ವ್ಯವಸ್ಥೆಯಲ್ಲಿ ಸುಧಾರಣೆ ಆಗಬೇಕಾಗಿದೆ. ಸಂಘಟಿತ ಹಣಕಾಸು ವ್ಯವಸ್ಥೆಯ ಸಾಲ ಸೌಲಭ್ಯಗಳಿಂದ ಹೊರಗುಳಿದ ವರ್ಗಗಳನ್ನು ಸಾಲ ಪಡೆಯಲು ಅರ್ಹರನ್ನಾಗಿಸುವ ಮತ್ತು ಪಡೆದ ಸಾಲವನ್ನು ತಮ್ಮ ಜೀವನ ಸುಧಾರಣೆಗೆ ಬಳಸಿಕೊಳ್ಳುವ ಸಾಮರ್ಥ್ಯವನ್ನು ಸಧಾರಿಸಬೇಕಾಗುತ್ತದೆ. ಈ ನಿಟ್ಟಿನಲ್ಲಿ ಆರ್ಥಿಕ ವ್ಯವಸ್ಥೆಯನ್ನು ಸಂಘಟಿಸುವ ಮತ್ತು ವ್ಯವಸ್ಥೆಯಲ್ಲಿ ಸುಧಾರಣೆ ತರುವ ಬೃಹತ್ ಸಾರ್ವಜನಿಕ ವೆಚ್ಚ ಹೂಡಿಕೆಯ ಕಾರ್ಯಕ್ರಮಗಳನ್ನು ಜಾರಿಗೊಳಿಸಬೇಕಾಗಿದೆ. ಆಸ್ತಿರಹಿತ ದುರ್ಬಲ ವರ್ಗಗಳಿಗೆ ಭೂಮಿ, ಬೀಜ, ಔಷಧಿ, ನೀರಾವರಿ ಸೌಲಭ್ಯಗಳ, ಸಹಾಯಧನ ಆಧಾರಿತ ಗೊಬ್ಬರ, ಔಷಧಿಗಳನ್ನು ಸರ್ಕಾರ ಒದಗಿಸಬೇಕಾಗಿದೆ. ಈ ಸೌಲಭ್ಯಗಳ ಮೂಲಕ ಬಡವರನ್ನು ಸಾಲ ಪಡೆಯಲು ಮತ್ತು ಪಡೆದ ಸಾಲವನ್ನು ತಮ್ಮ ಅಭಿವೃದ್ಧಿಗೆ ಬಳಸಿಕೊಳ್ಳಲು ಸಮರ್ಥರನ್ನಾಗಿಸಬಹುದು. ಈ ರೀತಿ ಸುಧಾರಣೆ ತರುವ ಅನಿವಾರ್ಯತೆ ಇದೆ. ಉದಾರವಾಗಿ ಸಾಲ ನೀಡುವ ಮತ್ತು ಸಾಲ ಮನ್ನಾ ಮಾಡುವ ಅಥವಾ ಸಾಲ ಮುಕ್ತಿಗೊಳಿಸುವತ್ತ ಸರ್ಕಾರ ಗಮನ ಹರಿಸುತ್ತದೆ ವಿನಃ ಬಡಕುಟುಂಬಗಳ ಸಾಮರ್ಥ್ಯವೃದ್ಧಿಸುವಂತಹ ಮೂಲಭೂತ ಆರ್ಥಿಕ ವ್ಯವಸ್ಥೆಯ ಮರು ಸಂಘಟನೆಯನ್ನು ನಿರ್ಲಕ್ಷಿಸುತ್ತದೆ. ಗ್ರಾಮೀಣ ಸಾಲ ಪೂರೈಕೆ ವಲಯವನ್ನು ಮರು ಸಂಘಟಿಸುವುಕ್ಕಿಂತ ಸಮಾಜದ ಮೂಲಭೂತ ಆರ್ಥಿಕ ವ್ಯವಸ್ಥೆಯನ್ನು ಪುನರ್ ರಚಿಸುವ ಅಗತ್ಯವಿದೆ ಎಂಬುದು ನನ್ನ ವಾದ. ಇಲ್ಲವಾದರೆ ಸ್ವಾತಂತ್ರ ನಂತರ ಹಲವು ಕಾಯಿದೆ, ಹಲವು ಸಮಿತಿಗಳು ಸಾಲ ಪೂರೈಕೆ ವ್ಯವಸ್ಥೆಯ ಸುಧಾರಣೆಗೆ ಹಲವು ಶಿಫಾರಸ್ಸುಗಳನ್ನು ನೀಡಿವೆ. ಈ ಶಿಫಾರಸ್ಸುಗಳ ಅನುಷ್ಠಾನದ ನಂತರವೂ ಇಂದಿಗೂ ಬಹುಸಂಖ್ಯಾತ ಗ್ರಾಮೀಣ ಕುಟುಂಬಗಳು ಗ್ರಾಮೀಣ ಸಂಘಟಿತ ಸಾಲ ಪೂರೈಕೆ ವ್ಯವಸ್ಥೆಯ ಸಾಲ ಸೌಲಭ್ಯಗಳಿಂದ ಹೊರಗುಳಿದಿವೆ. ಸಾಲ ಹಂಚಿಕೆಯಲ್ಲಿನ ಅಸಮಾನತೆ ಮತ್ತು ಸಾಲ ಯೋಜನೆಗಳ ಅನುಕೂಲ ಶ್ರೀಮಂತರ ಪಾಲಾಗುವುದನ್ನು ತಪ್ಪಿಸಲು ಸಾಧ್ಯವಾಗಿಲ್ಲ. ಈ ನಿಟ್ಟಿನಲ್ಲಿ ಸಾಲ ಪೂರೈಕೆ ವ್ಯವಸ್ಥೆಗಿಂತ ಸಮಾಜದ ಆರ್ಥಿಕ ವ್ಯವಸ್ಥೆಯ ಪುನರಚನೆ ಅಗತ್ಯ. ಬಡವ ಶ್ರೀಮಂತರ ನಡುವಿನ ಅಂತರ ಹೆಚ್ಚುತ್ತಿರುವ, ಬಡತನ ಹೆಚ್ಚಾಗುತ್ತಿರುವ ಜಾಗತೀಕರಣದ ಸಂದರ್ಭದಲ್ಲಿ ಸಮಾಜದ ವ್ಯವಸ್ಥೆಯೊಳಗಿನ ಮೂಲಭೂತ ಬದಲಾವಣೆ ಹೆಚ್ಚು ಅನಿವಾರ್ಯ. ಇದಕ್ಕಾಗಿ ಮತ್ತೊಮ್ಮೆ ಸರ್ಕಾರ ಭೂ ಸುಧಾರಣೆ ಕಾಯ್ದೆಯನ್ನು ಪರಿಣಾಮಕಾರಿಯಾಗಿ ಜಾರಿಗೆ ತರಬೇಕು. ಸರ್ಕಾರಿ ಭೂಮಿ ವುಳ್ಳವರ ಪಾಲಾಗದಂತೆ, ಭೂರಹಿತರಿಗೆ, ಗುತ್ತಿಗೆಯಾಗಿ ದುಡಿಯುತ್ತಿರುವವರಿಗೆ ದೊರೆಯುವಂತೆ ಮಾಡಬೇಕು. ಈ ಭೂಮಿಯು ದುರ್ಬಲ ವರ್ಗಗಳಿಗೆ ಹಂಚಿಕೆಯಾಗಬೇಕು. ಪ್ರಸ್ತುತ ಈ

ಅಧ್ಯಯನದ ಪ್ರಕಾರ ಶೇಕಡಾ ೨೮ರಷ್ಟು ಕೃಷಿಕೂಲಿ ಕಾರ್ಮಿಕರು, ಭೂರಹಿತ ದುಡಿಮೆಗಾರರು ಸಂಘಟಿತ ಸಾಲ ಸೌಲಭ್ಯದಿಂದ ವಂಚಿತರಾಗಿದ್ದಾರೆ. ಈ ರೀತಿ ವಂಚಿತರಾಗಲು ಬಹುಮುಖ್ಯ ಕಾರಣ ಆಸ್ತಿ ಇಲ್ಲದಿರುವಿಕೆ. ಈ ವರ್ಗ ಆಸ್ತಿ ಅಥವಾ ಸಂಪನ್ಮೂಲ ರಹಿರವಾಗುವುದಕ್ಕೆ ಇರುವ ಐತಿಹಾಸಿಕ ಕಾರಣಗಳನ್ನು ಇಲ್ಲಿ ಪ್ರತ್ಯೇಕವಾಗಿ ವಿಶ್ಲೇಷಿಸಲಾಗಿದೆ. ಕೊನೆಯ ಅಧ್ಯಾಯದ ಮೊದಲ ಭಾಗದಲ್ಲಿ ಭೂರಹಿತ ದುಡಿಮೆಗಾರರು ಒಂದು ವರ್ಗವಾಗಿ ಹೇಗೆ ಬದಲಾದರು? ಬಂಡವಾಳಶಾಹಿ ವ್ಯವಸ್ಥೆ ಕೃಷಿ ಕ್ಷೇತ್ರದಲ್ಲಿ ಹೇಗೆ ಸೃಷ್ಠಿಯಾಯಿತು? ಯಾವಾಗ ಪ್ರಾರಂಭವಾಯಿತು? ಈ ಬಂಡವಾಳಶಾಹಿ ವ್ಯವಸ್ಥೆ ವ್ಯವಸ್ಥಿತವಾಗಿ ಶ್ರಮಿಕ ವರ್ಗವನ್ನು ಹೇಗೆ ಶೋಷಿಸಿತು? ಬಂಡವಾಳಶಾಹಿ ಭೂಮಾಲಿಕರು ಶ್ರಮಿಕ ವರ್ಗವನ್ನು ತಮ್ಮ ಏಳಿಗೆಗೆ ಹೇಗೆ ಬಳಸಿಕೊಂಡರು ಹಾಗೂ ಶ್ರಮಿಕರನ್ನು ಆಸ್ತಿ ರಹಿತರನ್ನಾಗಿಸಿದ ವಸಾಹತು ಸಂದರ್ಭಗಳನ್ನು ಅರ್ಥಮಾಡಿಕೊಳ್ಳಬೇಕಾಗುತ್ತದೆ. ಆಸ್ತಿ ರಹಿತವರ್ಗವಾದ ಭೂರಹಿತ ದುಡಿಮೆಗಾರರು ಸಂಘಟಿತ ಸಾಲ ವ್ಯವಸ್ಥೆಯ ಸೌಲಭ್ಯಗಳು ಮತ್ತು ಅಭಿವೃದ್ಧಿಯ ಎಲ್ಲಾ ಪ್ರಯೋಜನಗಳಿಂದ ವಂಚಿತರಾದರು. ಇದು ಆರ್ಥಿಕ ಅಸಮಾನತೆಯನ್ನು ಹೆಚ್ಚಿಸಿತು. ಅಸಮಾನತೆಯಿಂದ ಭೂರಹಿತ ದುಡಿಮೆಗಾರ ವರ್ಗ ಇಂದಿಗೂ ದುಸ್ಥಿತಿಯ ಬದುಕನ್ನು ನಡೆಸುತ್ತಾ ಅಂಚಿನಲ್ಲಿ ಜೀವಿಸುತ್ತಿದ್ದಾರೆ. ಈ ಅಧ್ಯಯನದ ಪ್ರಕಾರ ಶೇ. ೮೮ರಷ್ಟು ಭೂರಹಿತ ದುಡಿಮೆಗಾರರು ಪರಿಶಿಷ್ಟರು. ಇವರು ಗ್ರಾಮಾಧ್ಯಯನದಲ್ಲಿ ತಿಳಿದುಬಂದಂತೆ ತಮ್ಮ ಅಸ್ತಿತ್ವವುಳಿಸಿಕೊಳ್ಳಲು ನಗರಗಳಿಗೆ ವಲಸೆ ಹೋಗುತ್ತಾರೆ. ಗ್ರಾಮದಲ್ಲಿ ಜೀವನೋಪಾಯ ಮಾರ್ಗಗಳು ಗಣನೀಯವಾಗಿ ಕುಸಿದಿವೆ. ಇವರ ಮಕ್ಕಳು ಶಿಕ್ಷಣ ಮತ್ತು ಆರೋಗ್ಯದಿಂದ ವಂಚಿತರಾಗಿದ್ದಾರೆ. ಮಕ್ಕಳು ತಮ್ಮ ಕುಟುಂಬಗಳೊಂದಿಗೆ ವಲಸೆ ಹೋಗುತ್ತಾರೆ. ಇಂದಿಗೂ ಈ ಜನರು ಊರ ಹೊರಗಿನ ಪ್ರದೇಶದಲ್ಲಿ ಬದುಕುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಸಮಾಜದ ಆರ್ಥಿಕ ವ್ಯವಸ್ಥೆಯು ಮರು ಸಂಘಟಿತಗೊಳ್ಳಬೇಕು. ಅದೇ ರೀತಿ ಕ್ಷೇತ್ರಾಧ್ಯಯನದ ಕ್ರೂಡೀಕೃತ ಮಾಹಿತಿ ವಿಶ್ಲೇಷಣೆ ಪ್ರಕಾರ ಶೇ. ೨೪ರಷ್ಟು ಅತೀ ಸಣ್ಣ ಹಿಡುವಳಿದಾರರು ಮಾತ್ರ ಸಂಘಟಿತ ವಲಯದಿಂದ ಸಾಲ ಪಡೆದಿದ್ದಾರೆ. ಅದು ಸ್ಥಳೀಯ ಮಟ್ಟದ ಸಹಕಾರ ಸಂಸ್ಥೆಗಳಿಂದ ಮಾತ್ರ. ಈ ಸಣ್ಣ ಹಿಡುವಳಿದಾರರ ಬದುಕಿನಲ್ಲಿ ಸಹಕಾರ ಸಂಸ್ಥೆಗಳಿಂದ ಪಡೆದ ಈ ಸಾಲ ಯಾವ ಬದಲಾವಣೆಗಳನ್ನು ತಂದಿಲ್ಲ. ಸಾಲದ ಧನಾತ್ಮಕ ಪರಿಣಾಮ ಶೂನ್ಯವೆನ್ನಬಹುದು. ಕಾರಣ ಉತ್ಪಾದನೆ ಸಂದರ್ಭದಲ್ಲಿ ಅಗತ್ಯವಿರುವಷ್ಟು ಪ್ರಮಾಣದಲ್ಲಿ ಸಾಲ ದೊರೆತಿಲ್ಲ. ಸಹಕಾರ ಸಂಘಗಳಿಗೆ ಬಿತ್ತನೆ ಸಮಯದಲ್ಲಿ ಪ್ರಸ್ತಾವನೆ ಸಲ್ಲಿಸಿದರೆ ಸುಗ್ಗಿಯಾದ ನಂತರ ಅಗತ್ಯಕ್ಕಿಂತ ಕಡಿಮೆ ಪ್ರಮಾಣದಲ್ಲಿ ಸಾಲ ದೊರೆತ ನಿದರ್ಶನಗಳಿವೆ. ಇದಕ್ಕೆ ಸಹಕಾರ ಸಂಘಗಳ ಆರ್ಥಿಕ ದುಸ್ಥಿತಿಯು ಕಾರಣವೆನ್ನಬಹುದು. ಸಾಲ ಪಡೆದವರು ಸಾಲ ಮರುಪಾವತಿ ಮಾಡುವುದಿಲ್ಲ. ಈ ಸಂಸ್ಥೆಗಳಿಂದ ಹೆಚ್ಚಿನ ಪ್ರಮಾಣದಲ್ಲಿ ಸಾಲ ಪಡೆದವರು ಪ್ರಬಲ ಲಿಂಗಾಯಿತ ಜಾತಿಯವರು. ಇವರು ದೊಡ್ಡ ಹಿಡುವಳಿದಾರರಾದ್ದರಿಂದ ದೊಡ್ಡ ಪ್ರಮಾಣದ ಸಾಲ ಪಡೆದಿದ್ದಾರೆ. ಸಾಲ ಹಿಂತಿರುಗಿಸುವುದಿಲ್ಲ. ಪಡೆದ ಸಾಲ ಮನ್ನಾ ಆಗುತ್ತದೆ ಎಂಬ ಭರವಸೆ. ಸಹಕಾರ ಸಂಸ್ಥೆಗಳಲ್ಲಿ ಲಿಂಗಾಯಿತ ಜಾತಿಯವರದೆ ಹೆಚ್ಚು ಪ್ರಾಬಲ್ಯ ವಿದ್ದು ಸಾಲ ಮರುಪಾವತಿ ಮಾಡುವ ಆಲೋಚನೆಯೇ ಇಲ್ಲ. ಈ ರೀತಿಯ

ಧೋರಣೆಯಿಂದ ಸಹಕಾರ ಸಂಸ್ಥೆಗಳಿಂದ ಸಾಲ ಪಡೆದ ಇತರೇ ಯಾವ ವರ್ಗದ ರೈತರೂ ಸಾಲ ಹಿಂದುರುಗಿಸುವ ಪ್ರಯತ್ನ ಮಾಡವುದಿಲ್ಲ. ಇದರಿಂದ ಸಹಕಾರ ಸಂಸ್ಥೆಗಳಲ್ಲಿ ಅನುತ್ಪಾದಕ ಆಸ್ತಿ ಪ್ರಮಾಣ ಹೆಚ್ಚಾಗಿದೆ. ದಿನ ನಿತ್ಯದ ವ್ಯವಹಾರ ಚಟುವಟಿಕೆಗಳಿಗೆ ಸಂಸ್ಥೆಗಳಲ್ಲಿ ಸ್ವಂತ ಬಂಡವಾಳವಿಲ್ಲದಂತಾಗಿದೆ. ಬಂಡವಾಳ ಅಥವಾ ಸಂಪನ್ಮೂಲಗಳಿಗಾಗಿ ಸರ್ಕಾರವನ್ನು ಅವಲಂಬಿಸು ವಂತಾಗಿದೆ. ಸರ್ಕಾರಗಳು ಈ ಹಿಂದಿನ ಅಧ್ಯಾಯಗಳಲ್ಲಿ ಚರ್ಚಿಸಿರುವಂತೆ ಸಹಕಾರ ಸಂಸ್ಥೆಗಳ ತತ್ವ ಮತ್ತು ಸಿದ್ಧಾಂತಗಳಿಗೆ ವಿರುದ್ಧವಾಗಿ ಸರ್ಕಾರವೆ ಇಡೀ ಸಹಕಾರ ವ್ಯವಸ್ಥೆಯನ್ನು ರಾಜಕೀಕರಣ ಗೊಳಿಸಿದೆ. ಸರ್ಕಾರ ಚುನಾವಣಾ ಸಂದರ್ಭಗಳಲ್ಲಿ ಸಾಲಮನ್ನಾ ರೂಪದಲ್ಲಿ ಹಣಕಾಸು ಬಿಡುಗಡೆ ಮಾಡುತ್ತದೆ. ಚುನಾವಣೆಗೆ ಮುಂಚೆ ಸಾಲಮನ್ನಾ ಮಾಡುವುದಾಗಿ ರಾಜಕೀಯ ಪಕ್ಷಗಳು ಘೋಷಿಸತೊಡಗುತ್ತವೆ. ಈ ಬೆಳವಣಿಗೆಗಳಿಂದ ಸಹಕಾರ ಸಂಸ್ಥೆಗಳು ಸರ್ಕಾರದ ಸಾಲವನ್ನು ಹಂಚುವ ಸಂಸ್ಥೆಗಳಾಗಿವೇ ವಿನಃ ತಳಮಟ್ಟದಲ್ಲಿ ಎಲ್ಲಾ ವರ್ಗಳ ಅಭಿವೃದ್ಧಿಯನ್ನು ಪ್ರೋತ್ಸಾಹಿಸುವ ಸಹಕಾರ ತತ್ವ ಪ್ರಕಾರ ಕಾರ್ಯ ನಿರ್ವಹಿಸುವ ಅಭಿವೃದ್ಧಿ ಸಂಸ್ಥೆಗಳಾಗಿ ಕಾರ್ಯ ನಿರ್ವಹಿಸಲಿಲ್ಲ. ಇನ್ನೂ ವಾಣಿಜ್ಯ ಬ್ಯಾಂಕುಗಳು ಸಂಘಟಿತ ಹಣಕಾಸು ವ್ಯವಸ್ಥೆಯಲ್ಲಿ ಇತ್ತಿಚೀನ ವರ್ಷಗಳಲ್ಲಿ ಅತೀ ಹೆಚ್ಚು ಗ್ರಾಮೀಣ ಸಾಲ ಪೂರೈಸಿವೆ. ದೊಡ್ಡ ಹಿಡುವಳಿಗಳ ಶ್ರೀಮಂತ ಲಿಂಗಾಯತ ರೈತರು ಹೆಚ್ಚಿನ ಸಾಲ ಪಡೆದಿದ್ದಾರೆ. ಆದರೆ ವಾಣಿಜ್ಯ ಬ್ಯಾಂಕುಗಳು ಅತೀ ಸಣ್ಣ, ಸಣ್ಣ ರೈತರ ಸಾಲ ಅಗತ್ಯಗಳನ್ನು ನಿರ್ಲಕ್ಷಿಸಿವೆ. ಯಾವುದೆ ಜಾತಿಗೆ ಅತೀ ಸಣ್ಣ, ಸಣ್ಣ ರೈತರು ವಾಣಿಜ್ಯ ಬ್ಯಾಂಕುಗಳಿಂದ ಸಾಲ ಪಡೆದಿಲ್ಲ. ೧೯೯೧ರ ನಂತರ ವಾಣಿಜ್ಯ ಬ್ಯಾಂಕುಗಳು ಲಾಭದ ಸಂಸ್ಥೆಗಳಾಗಿ ವಾಣಿಜ್ಯೀಕರಣದ ಮನೋಭಾವದಿಂದ ಶ್ರೀಮಂತ ದೊಡ್ಡ ಹಿಡುವಳಿದಾರರ ಸಾಲದ ಅಗತ್ಯಗಳನ್ನು ಪೂರೈಸುವಲ್ಲಿ ಆದ್ಯತೆ ನೀಡಿವೆ ಎನ್ನಬಹುದು. ಇದರಿಂದ ಅತೀ ಸಣ್ಣ ರೈತರು ಸಾಲಕ್ಕಾಗಿ ಅಸಂಘಟತ ಮಾರುಕಟ್ಟೆಯನ್ನು ಅವಲಂಬಿಸುವಂತಾಗಿ ಸಮಸ್ಯೆಗಳ ಸುಳಿಗೆ ಸಿಲುಕು ವಂತಾಗಿದೆ. ಇದರಿಂದ ಇದ್ದ ಅಲ್ಪ ಸ್ವಲ್ಪ ಭೂಮಿ-ಭರವಸೆಗಳನ್ನು ಕಳೆದುಕೊಂಡು ನಿರ್ಲಕ್ಷಿತ ಭೂರಹಿತ ಕಾರ್ಮಿಕ ವರ್ಗವಾಗಿ ರೂಪುಗೊಳ್ಳುತ್ತಾರೆ. ದುಸ್ಥಿಗೆ ಸಿಲುಕುತ್ತಾರೆ.

### ಅಧ್ಯಯನದ ಫಲಿತಗಳು

ಗ್ರಾಮೀಣ ಹಣಕಾಸು ಮೂಲಗಳ ಲಕ್ಷಣಗಳು, ಸಾಲ ಪೂರೈಕೆಯ ವಿಧಾನ ಮತ್ತು ಸಮಸ್ಯೆ ಗಳನ್ನು ಅರ್ಥ ಮಾಡಿಕೊಳ್ಳುವ ದೃಷ್ಟಿಯಿಂದ ಅಧ್ಯಯನ ಗ್ರಾಮಗಳಲ್ಲಿ ವಿವಿಧ ರೈತ ವರ್ಗಗಳು ಮತ್ತು ಅವರ ಸಾಮಾಜಿಕ ಆರ್ಥಿಕ ಪರಿಸ್ಥಿತಿ, ಸಾಲದ ಅಗತ್ಯಗಳು, ಸಂಘಟಿತ ಮೂಲದಿಂದ ಸಾಲ ಪಡೆಯಲು ಭರಿಸಬೇಕಾದ ವೆಚ್ಚ, ಸಾಲ ಪಡೆಯಲು ಬೇಕಾದ ಅರ್ಹತೆ, ಈ ಅವಕಾಶ ಅಥವಾ ಅರ್ಹತೆ ಇಲ್ಲದವರ ಸಮಸ್ಯೆಗಳನ್ನು ಅಭ್ಯಸಿಸಿ ಫಲಿತಗಳನ್ನು ಪಡೆಯಲಾಗಿದೆ.

ಭಾರತದಲ್ಲಿ ಬಹು ಸಂಸ್ಥೆ ಸಾಲ ವಿಧಾನ ಅಸ್ತಿತ್ವದಲ್ಲಿದೆ. ಕರ್ನಾಟಕದಲ್ಲಿ ಇದೇ ವಿಧಾನ ಜಾರಿಯಲ್ಲಿದೆ. ಗ್ರಾಮೀಣ ಹಣಕಾಸು ಸಂಘಟಿತ ಮತ್ತು ಅಸಂಘಟಿತ ಸಾಲ ಮಾರುಕಟ್ಟೆಗಳನ್ನು

ಒಳಗೊಂಡಿದೆ. ಎರಡೂ ಮೂಲಗಳು ಗ್ರಾಮೀಣ ಜನರ ಹಣಕಾಸು ಅಗತ್ಯಗಳನ್ನು ಪೂರೈಸುತ್ತವೆ. ಪ್ರಸ್ತುತ ಅಧ್ಯಯನದಲ್ಲಿ ಕೃಷಿ ಕ್ಷೇತ್ರಕ್ಕೆ ಪೂರೈಕೆಯಾಗುವ ಸಾಲದ ಮೇಲೆ ಗಮನ ಹರಿಸಲಾಗಿದ್ದು ಇದು ಬಡತನ ನಿರ್ಮೂಲನೆ ಅಸಮಾನತೆ ನಿವಾರಣೆಯ ಪ್ರಮುಖ ಸಾಧನ ಎನ್ನಲಾಗಿದೆ. ಗ್ರಾಮೀಣ ಸಂಘಟಿತ ಸಾಲ ಪೂರೈಕೆಗೆ ಸಂಬಂಧಿಸಿದ ಸಾಲ ನೀತಿ ನಿಯಮಗಳು ಕಾರ್ಯಕ್ರಮಗಳನ್ನು ಸರ್ಕಾರ, ಭಾರತೀಯ ರಿಸರ್ವ್ ಬ್ಯಾಂಕು ಮತ್ತು ಹಣಕಾಸು ಸಚಿವಾಲಯಗಳು ರೂಪಿಸುತ್ತವೆ. ಸಾಲ ನೀತಿ ಮತ್ತು ಕಾರ್ಯಕ್ರಮಗಳ ಅನುಷ್ಠಾನ ವಿಧಾನವನ್ನು ಸಹ ಇವೇ ನಿರ್ಧರಿಸುತ್ತವೆ. ಇವುಗಳನ್ನು ಸಾರ್ವಜನಿಕ ಹಣಕಾಸು ಸಂಸ್ಥೆಗಳು ಅಥವಾ ಬ್ಯಾಂಕುಗಳು ಜಾರಿಗೊಳಿಸುತ್ತವೆ. ಸಾರ್ವಜನಿಕ ವಲಯದ ಬ್ಯಾಂಕುಗಳಾದ ಸಹಕಾರ ಸಾಲ ಸಂಸ್ಥೆಗಳು, ಗ್ರಾಮೀಣ ಬ್ಯಾಂಕುಗಳು ಹಾಗೂ ವಾಣಿಜ್ಯ ಬ್ಯಾಂಕುಗಳು ಸರ್ಕಾರದ ಸಾಲ ನೀತಿಯನ್ನು ಅನುಷ್ಠಾನಗೊಳಿಸುತ್ತವೆ. ಇದನ್ನು ಸಂಘಟಿತ ಸಾಲ ಮೂಲ ಎನ್ನಲಾಗುತ್ತದೆ. ಈ ಮೂಲ ಕೃಷಿಗೆ ರಿಯಾಯತಿ ಬಡ್ಡಿದರದಲ್ಲಿ ಅಲ್ಪಾವಧಿ ಬೆಳೆ ಸಾಲಗಳನ್ನು ಪೂರೈಸುತ್ತದೆ. ಭೂ ಭದ್ರತೆಯ ಆಧಾರದ ಮೇಲೆ ಈ ಮೂಲ ಸಾಲ ಸೌಲಭ್ಯ ನೀಡುತ್ತದೆ. ಭದ್ರತೆ ಇಲ್ಲದೆ ಯಾವ ಸಾಲಗಳನ್ನು ಈ ಮೂಲದಿಂದ ಪಡೆಯಲು ಸಾಧ್ಯವಿಲ್ಲ. ಕರ್ನಾಟಕದಲ್ಲಿ ಸಹಕಾರ ಸಂಸ್ಥೆಗಳಿಂದ ರೈತರು ಪಡೆಯುವ ೨ ಲಕ್ಷ ರೂ.ವರೆಗಿನ ಸಾಲಕ್ಕೆ ಶೂನ್ಯ ಬಡ್ಡಿ, ೨–೩ ಲಕ್ಷವರೆಗಿನ ಸಾಲಕ್ಕೆ ಶೇಕಡಾ ೧ರಷ್ಟು ಬಡ್ಡಿ. ಗ್ರಾಮೀಣ ಅಭಿವೃದ್ಧಿಗೆ ಪೂರಕವಾಗುವಂತೆ ಸಾಲ ಸೌಲಭ್ಯಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಪೂರೈಸಲು ಕರ್ನಾಟಕ ಸರ್ಕಾರ ೨೦೧೨–೧೩ರ ಬಜೆಟ್‌ನಲ್ಲಿ ಈ ಸೌಲಭ್ಯಗಳನ್ನು ಜಾರಿಗೆ ತಂದಿದೆ. ಮದ್ಯಮಾವದಿ/ದೀರ್ಘಾವಧಿ ಸಾಲಕ್ಕೆ ಶೇಕಡ ೩ರಷ್ಟು ಬಡ್ಡಿದರ. ಅಂದರೆ ರಾಜ್ಯ ಸರ್ಕಾರದ ಅದೀನಕ್ಕೆ ಒಳಪಟ್ಟಿರುವ ಕೃಷಿ ಪತ್ತಿನ ಸಹಕಾರ ಸಂಘಗಳು ನೀಡುವ ಬೆಳೆ ಸಾಲಕ್ಕೆ ಸದ್ಯ ಶೇಕಡಾ ೪ರಷ್ಟು ಬಡ್ಡಿ ವಿದಿಸಲಾಗುತ್ತದೆ. ಅದರಲ್ಲಿ ಶೇಕಡಾ ೩ರಷ್ಟು ಬಡ್ಡಿಯನ್ನು ಸರ್ಕಾರ ಸಬ್ಸಿಡಿಯಾಗಿ ನೀಡುತ್ತದೆ. ಹೀಗಾಗಿ ರೈತರಿಗೆ ಶೇಕಡಾ ೧ರಷ್ಟು ಬಡ್ಡಿಯಲ್ಲಿ ಸಾಲ ಸಿಗುತ್ತದೆ. ರಾಷ್ಟ್ರೀಕೃತ ಬ್ಯಾಂಕುಗಳಲ್ಲಿ ಬೆಳೆ ಸಾಲಕ್ಕೆ ಶೇಕಡಾ ೭ರಷ್ಟು ಬಡ್ಡಿ ವಿಧಿಸಲಾಗುತ್ತದೆ. ಸಕಾಲಕ್ಕೆ ಮರುಪಾವತಿಸಿದರೆ ರೈತರಿಗೆ ಕೇಂದ್ರ ಸರ್ಕಾರದಿಂದ ಶೇಕಡಾ ೩ರಷ್ಟು ಬಡ್ಡಿ ಸಬ್ಸಿಡಿ ಸಿಗುತ್ತದೆ. ರಾಯಚೂರು ಜಿಲ್ಲೆಯಲ್ಲಿ ಈ ಮೂರು ರೀತಿಯ ಬ್ಯಾಂಕುಗಳಿದ್ದು ಸಾಲ ಪೂರೈಸುತ್ತಿವೆ.

ಅಧ್ಯಯನ ಗ್ರಾಮಗಳಲ್ಲಿ ಶೇಕಡಾ ೭೨.೪೯ರಷ್ಟು ರೈತರಿಗೆ ಸಂಘಟಿತ ಸಾಲ ಮೂಲದಿಂದ ಸಾಲ ದೊರೆತಿಲ್ಲ. ಶೇಕಡಾ ೨೮.೫೨ರಷ್ಟು ರೈತರಿಗೆ ಮಾತ್ರ ಈ ಮೂಲದಿಂದ ಸಾಲ ಸೌಲಭ್ಯಗಳು ದೊರೆತಿವೆ. ಸಾಲ ಪಡೆದವರಲ್ಲಿ ೨೯.೬೭ರಷ್ಟು ಅತೀ ಸಣ್ಣ ಸಾಗುವಳಿದಾರರು, ಶೇ. ೨೦.೮೭ರಷ್ಟು ಸಣ್ಣ ಹಿಡುವಳಿದಾರರು ಹಾಗೂ ಶೇ ೪೯.೪೫ರಷ್ಟು ದೊಡ್ಡ ಹಿಡುವಳಿದಾರರು ಸಾಲ ಪಡೆದಿರುವುದು ಕಂಡುಬಂದಿದೆ. ಅತೀ ಸಣ್ಣ ಮತ್ತು ಸಣ್ಣ ಹಿಡುವಳಿದಾರರು ಪ್ರಾಥಮಿಕ ಸಹಕಾರ ಸಾಲ ಸಂಸ್ಥೆಗಳಿಂದ ಮಾತ್ರ ಸಾಲ ಪಡೆದಿದ್ದರೆ ದೊಡ್ಡ ಹಿಡುವಳಿದಾರರು ಸಹಕಾರ ಸಂಸ್ಥೆ ಮತ್ತು ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳಿಂದ ಸಾಲ ಪಡೆದಿದ್ದಾರೆ. ಸಾಲ ಪಡೆದವರ ಜಾತಿವಾರು

ಸೂಚಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದವರು ಶೇ. ೩೦.೭೬ರಷ್ಟು, ಹಿಂದುಳಿದ ವರ್ಗದವರು ಶೇ. ೨೦.೮೭ರಷ್ಟು ಹಾಗೂ ಶೇ. ೪೯.೩೯ರಷ್ಟು ಲಿಂಗಾಯತರು ಕಂಡು ಬಂದಿದ್ದಾರೆ. ಪರಿಶಿಷ್ಟ ಜಾತಿ ಮತ್ತು ಪಂಗಡದವರು ಪ್ರಾಥಮಿಕ ಸಹಕಾರ ಸಾಲ ಸಂಸ್ಥೆಗಳಿಂದ ಮಾತ್ರ ಸಾಲ ಪಡೆದಿದ್ದರೆ ಲಿಂಗಾಯತರು ಅಧಿಕ ಸಂಖ್ಯೆಯಲ್ಲಿ ದೊಡ್ಡ ಹಿಡುವಳಿದಾರರಾಗಿದ್ದು ಸಹಕಾರ ಸಂಸ್ಥೆ ಮತ್ತು ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳಿಂದ ಸಾಲ ಪಡೆದಿದ್ದಾರೆ. ಇವರ ದೊಡ್ಡ ಪ್ರಮಾಣದ ಹಿಡುವಳಿಗಳನ್ನು ಹೊಂದಿದ್ದು ದೊಡ್ಡ ಮಟ್ಟದ ಕೃಷಿ ಚಟುವಟಿಕೆಗಳನ್ನು ಕೈಗೊಳ್ಳುವುದು ತಿಳಿದುಬಂದಿದೆ. ತಮ್ಮ ಹೆಸರಲ್ಲಿ ಭೂ ದಾಖಲೆಗಳನ್ನು ಹೊಂದಿದ್ದಾರೆ. ಇವರಿಗೆ ಸಂಘಟಿತ ಮೂಲದಿಂದ ಸಾಲ ಪಡೆಯಲು ಬೇಕಾದ ಆರ್ಥಿಕ ಸಾಮರ್ಥ್ಯವಿದೆ. ಇವರ ಕೃಷಿ ವ್ಯವಹಾರಗಳು, ಆದಾಯ, ಮರು ಪಾವತಿ ಸಾಮರ್ಥ್ಯ ಬ್ಯಾಂಕುಗಳೊಂದಿಗಿನ ಸಮನ್ವಯಗಳ ಆಧಾರದ ಮೇಲೆ ನಿರಂತರವಾಗಿ ಹೆಚ್ಚಿನ ಸಾಲಗಳನ್ನು ಪಡೆಯುತ್ತಿದ್ದಾರೆ. ಇವರು ಪಡೆದ ಸಾಲವನ್ನು ಕೃಷಿ ಉತ್ಪನ್ನದ ಹೆಚ್ಚಳದಂತಹ ಉತ್ಪಾದಕ ಉದ್ದೇಶಕ್ಕೆ ಬಳಸಿ ಕೊಂಡದ್ದಾರೆ. ತಮ್ಮ ಕೃಷಿ ಚಟುವಟಿಕೆಗಳನ್ನು ವಿಸ್ತರಿಸಿಕೊಂಡಿದ್ದಾರೆ. ಇದರಿಂದ ಇವರ ಆದಾಯ ಹೆಚ್ಚಿದೆ. ಇವರಲ್ಲಿ ಕೆಲವರು ತಮ್ಮ ಹೆಚ್ಚುವರಿ ಆದಾಯದಿಂದ ಹೊಸದಾಗಿ ಭೂಮಿ ಖರೀದಿಸಿ ತಮ್ಮ ಆಸ್ತಿಯನ್ನು ಹೆಚ್ಚಿಸಿಕೊಂಡಿರುವುದು ಕಂಡು ಬಂದಿದೆ. ತಮ್ಮ ಆರ್ಥಿಕ ಸಾಮಾಜಿಕ ಪರಿಸ್ಥಿತಿ ಸುಧಾರಿಸಿಕೊಂಡಿದ್ದಾರೆ. ಇವರು ಸಹಕಾರ ಸಾಲ ಸಂಸ್ಥೆಗಳಿಂದ ಸಾಲ ಮನ್ನಾ ಪ್ರಯೋಜನ, ನಿಗದಿತ ಅವಧಿಯೊಳಗೆ ಸಾಲ ಮರುಪಾವತಿ ಮಾಡಿದ್ದಕ್ಕೆ ವಾಣಿಜ್ಯ ಬ್ಯಾಂಕುಗಳಿಂದ ಪ್ರೋತ್ಸಾಹ ಧನ ಅನುಕೂಲಗಳನ್ನು ಪಡೆದಿದ್ದಾರೆ. ಹೀಗೆ ಸರ್ಕಾರದ ಸಾಲ ನೀತಿಗಳು ಮತ್ತು ಕಾರ್ಯಕ್ರಮಗಳ ಲಾಭಗಳನ್ನು ಸಮಾಜದ ಪ್ರಬಲ ವರ್ಗಗಳು ಪಡೆಯುತ್ತಿವೆ.

ಅಧ್ಯಯನ ಗ್ರಾಮಗಳಲ್ಲಿ ಸಮಾಜದ ದುರ್ಬಲ ವರ್ಗಗಳೆಂದು ಪರಿಗಣಿತವಾಗಿರುವ ಪರಿಶಿಷ್ಟ ಜಾತಿ ಪಂಗಡದ ಮತ್ತು ಹಿಂದುಳಿದ ವರ್ಗದ ರೈತರು ಸ್ಥಳೀಯ ಬ್ಯಾಂಕುಗಳಾದ ಪ್ರಾಥಮಿಕ ಸಹಕಾರ ಸಾಲ ಸಂಸ್ಥೆಗಳಿಂದ ಮಾತ್ರ ಸಾಲ ಸೌಲಭ್ಯ ಪಡೆದಿರುವುದು ಕಂಡುಬಂದಿದೆ. ಸಂದರ್ಶನದ ಮೂಲಕ ಸಂಗ್ರಹಿದ ಮಾಹಿತಿ ವಿಶ್ಲೇಷಣೆ ಪ್ರಕಾರ ಶೇಕಡಾ ೩೦.೭೬ರಷ್ಟು ಹಾಗೂ ಶೇಕಡಾ ೨೦.೮೭ರಷ್ಟು ಹಿಂದುಳಿದ ಜಾತಿಗಳಾದ ಉಪ್ಪಾರ, ಕಬ್ಬೇರು, ಪತ್ತಾರ್, ಕುರುಬರು ಸಹಕಾರ ಸಂಸ್ಥೆಗಳಿಂದ ಸಾಲ ಪಡೆದಿದ್ದಾರೆ. ಈ ವರ್ಗಗಳು ಪ್ರಸ್ತುತದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ ಕ್ಷೇತ್ರಕ್ಕೆ ಅತೀ ಹೆಚ್ಚು ಸಾಲ ಪೂರೈಸುವ ವ್ಯಾಣಿಜ್ಯ ಬ್ಯಾಂಕುಗಳಿಂದ ಸಾಲ ಪಡೆದಿಲ್ಲ. ಅಲ್ಪಾವಧಿ ಬೆಳೆ ಸಾಲಗಳ ಮೇಲೆ ವಾಣಿಜ್ಯ ಬ್ಯಾಂಕುಗಳು ವಿಧಿಸುವ ಬಡ್ಡಿದರ ಶೇ. ೭ ರಿಂದ ೯ರವರೆಗೂ ಇದೆ. ಸಾರ್ವಜನಿಕ ಬ್ಯಾಂಕುಗಳು ಉತ್ಪಾದನಾ ವೆಚ್ಚದ ಆಧಾರದ ಮೇಲೆ ಸಾಲದ ಪ್ರಮಾಣವನ್ನು ನಿರ್ಧಸುತ್ತವೆ. ಅಂದರೆ ಇದನ್ನು ಸ್ಕೇಲ್ ಆಫ್ ಫೈನಾನ್ಸ್ ಎಂದು ಕರೆಯಲಾಗುತ್ತದೆ. ಭೂ ಹಿಡುವಳಿ ಪ್ರಮಾಣ ಹೆಚ್ಚಾಗಿದ್ದು ಕೃಷಿ ಚಟುವಟಿಕೆಗಳ ದೊಡ್ಡ ಪ್ರಮಾಣದಲ್ಲಿದ್ದರೆ ಈ ಬ್ಯಾಂಕುಗಳು ನೀಡುವ ಸಾಲದ ಪ್ರಮಾಣವೂ ಅಧಿಕವಾಗಿರುತ್ತದೆ. ಸಾಳ ಮಂಜೂರು ವಿಧಾನ ಕಠಿಣವಾಗಿದೆ. ಸಾಲದ ಮೊತ್ತ, ಉದ್ದೇಶಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಲಾಗುತ್ತದೆ. ಸಾಲ ಮರುಪಾವತಿ

ಕಡ್ಡಾಯ. ಮರುಪಾವತಿಯಾಗದಿದ್ದಲ್ಲಿ ಸುಸ್ಥಿದಾರರ ವಿರುದ್ಧ ಕೋರ್ಟ್‌ನಲ್ಲಿ ಕೇಸ್ ಹಾಕಲಾಗುತ್ತದೆ. ಇದಕ್ಕೆ ಮುಂಚೆ ನೋಟೀಸ್‌ಗಳನ್ನು ನೀಡಲಾಗುತ್ತದೆ. ಮೇಲಾಗಿ ಸಣ್ಣ ಮೊತ್ತದ ಸಾಲಗಳನ್ನು ನೀಡಲು ಈ ಬ್ಯಾಂಕುಗಳು ಆಸಕ್ತಿ ವಹಿಸುವುದಿಲ್ಲ. ಈ ಬ್ಯಾಂಕುಗಳಿಂದ ಸಾಲ ಮನ್ನಾ ಸೌಲಭ್ಯವು ದೊರೆಯುವುದಿಲ್ಲ. ಮೇಲಿನ ವರ್ಗಗಳು ಸಹಕಾರ ಸಂಸ್ಥೆಗಳಿಂದ ಸಾಲ ಪಡೆದಿದ್ದರೂ ಅದರ ಪ್ರಮಾಣ ಕಡಿಮೆ. ನಿಗದಿದ ಅವಧಿಗೆ ಅದು ದೊರೆಯುತ್ತಿಲ್ಲ. ಅಧ್ಯಯನ ಗ್ರಾಮಗಳಲ್ಲಿ ಶೇಕಡಾ ೨೮.೫೨ರಷ್ಟು ಕೃಷಿ ಕಾರ್ಮಿಕರು ಕಂಡು ಬಂದಿದ್ದು ಈ ವರ್ಗ ಸಂಘಟಿತ ಮೂಲದಿಂದ ಸಾಲ ಪಡೆಯುವ ಆರ್ಥಿಕ ಸಾಮರ್ಥ್ಯವಿಲ್ಲ. ಸಂಘಟಿತ ಮೂಲ ಭೂ ಆಧಾರವಿಲ್ಲದೆ ಸಾಲ ಸೌಲಭ್ಯಗಳನ್ನು ನೀಡುವದೇ ಇಲ್ಲ. ಈ ಪ್ರಕಾರ ಕೃಷಿ ಕಾರ್ಮಿಕರು ಭೂಮಿ ಹೊಂದಿರದೆ ಸಾಲ ಪಡೆಯಲಾಗಿಲ್ಲ. ಕೃಷಿ ಕಾರ್ಮಿಕರಲ್ಲಿ ಪರಿಶಿಷ್ಟ ಜಾತಿ ಪಂಗಡದ ಮತ್ತು ಹಿಂದುಳಿದ ವರ್ಗದ ರೈತರು ಕ್ರಮವಾಗಿ ಶೇ. ೮೨.೦೨ ಮತ್ತು ಶೇ. ೧೭.೯೭ರಷ್ಟು ಕಂಡು ಬಂದಿದ್ದಾರೆ. ಆರ್ಥಿಕ ಸಾಮಾಜಿಕವಾಗಿ ದುರ್ಬಲವಾಗಿರುವ ಭೂ ರಹಿತ ಕೃಷಿ ಕಾರ್ಮಿಕರು, ಅತೀ ಸಣ್ಣ ಹಿಡುವಳಿದಾರರು ಆಸ್ತಿ ರಹಿತ ಅಥವಾ ಸಂಪನ್ಮೂಲ ವರ್ಗಗಳಾಗಿ ಸಂಘಟಿತ ಹಣಕಾಸು ಮೂಲದ ಸಾಲ ಸೌಲಭ್ಯಗಳನ್ನು ಪಡೆಯಲಾಗಿಲ್ಲ.

ಅಧ್ಯಯನ ಗ್ರಾಮಗಳಲ್ಲಿ ಶೇಕಡ ೩೨.೭೯ರಷ್ಟು ಹಿಡುವಳಿದಾರರು ಅಸಂಘಟಿತ ಹಣಕಾಸು ಮಾರುಕಟ್ಟೆ ಅಂದರೆ ಖಾಸಗಿ ಮೂಲದಿಂದ ಸಾಲ ಪಡೆದಿರುವುದು ಕಂಡು ಬಂದಿದೆ. ೩೮.೪೭ರಷ್ಟು ಹಿಡುವಳಿದಾರರು ಸಂಘಟಿತ ಮತ್ತು ಅಸಂಘಟಿತ ಮೂಲಗಳೆರಡರಿಂದಲೂ ಸಾಲ ಸೌಲಭ್ಯ ಪಡೆದಿಲ್ಲ. ಅಸಂಘಟಿತ ಮೂಲದಿಂದ ಅತೀಸಣ್ಣ, ಸಣ್ಣ ಹಾಗೂ ದೊಡ್ಡ ಹಿಡುವಳಿದಾರರು ಸಾಲ ಪಡೆದಿದರುವುದು ಕಂಡು ಬಂದಿದೆ. ಅತೀ ಸಣ್ಣ ಮತ್ತು ಸಣ್ಣ ಹಿಡುವಳಿದಾರರು ಸಹಕಾರ ಸಂಸ್ಥೆಗಳಿಂದ ದೊರೆಯವ ಸಾಲ ಕಡಿಮೆ ಮೊತ್ತದ್ದು ಮತ್ತು ಅಗತ್ಯ ವಿರುವ ಸಮಯದಲ್ಲಿ ದೊರೆಯುತ್ತಿಲ್ಲ. ಈ ಸಂಸ್ಥೆಗಳಿಂದ ಪಡೆದ ಸಾಲವನ್ನು ಸಾಮಾಜಿಕ ಉದ್ದೇಶಗಳಿಗೆ ಬಳಸಿ ಕೊಳ್ಳುತ್ತಿದ್ದಾರೆ. ಇವರಿಗೆ ವಾಣಿಜ್ಯ ಬ್ಯಾಂಕುಗಳಿಂದ ಸಾಲ ಸಿಗುವುದಿಲ್ಲ. ಈ ಬ್ಯಾಂಕುಗಳಿಂದ ಸಾಲ ಪಡೆಯಲು ಇವರೂ ಸಹ ಇಚ್ಚಿಸುವುದಿಲ್ಲ. ಹೀಗಾಗಿ ಇವರು ತಮ್ಮ ಸಣ್ಣ ಪ್ರಮಾಣದ ಕೃಷಿ ಕಾರ್ಯಗಳಿಗೆ ಅನಿವಾರ್ಯವಾಗಿ ಅಸಂಘಟಿತ ಮೂಲದಿಂದ ಸಾಲ ಪಡೆಯುತ್ತಿದ್ದಾರೆ. ದೊಡ್ಡ ಹಿಡುವಳಿದಾರರಿಗೆ ತಮ್ಮ ಬೇಡಿಕೆಗೆ ಅನುಗುಣವಾಗಿ ಸಂಘಟಿತ ಮೂಲದಿಂದ ಸಾಲ ಪೂರೈಕೆ ಯಾಗುವುದಿಲ್ಲ. ಹೆಚ್ಚುವರಿ ಸಾಲಗಳನ್ನು ಖಾಸಗೀ ಲೇವಾದೇವಿದಾರರಿಂದ ಪಡೆಯುತ್ತಾರೆ. ಅಸಂಘಟಿತ ಅಧ್ಯಯನ ಗ್ರಾಮಗಳಲ್ಲಿ ಖಾಸಗೀ ಮಾರುಕಟ್ಟೆಯಲ್ಲಿ ಹೂಡುವಳಿ ಪೂರೈಕೆದಾರರು (ಇನ್ಪುಟ್ ಸಪ್ಲೆಯರ್ಸ್) ಹೆಚ್ಚು ಸಕ್ರೀಯವಾಗಿದ್ದಾರೆ. ಇವರು ಜಿಲ್ಲಾ ಕೇಂದ್ರದ ಗಂಜ್ ಪ್ರದೇಶದಿಂದ ತಮ್ಮ ಸಾಲ ವ್ಯವಹಾರಗಳನ್ನು ನಡೆಸುತ್ತಿದ್ದಾರೆ. ಇವರು ತಾಲ್ಲೂಕು ಮತ್ತು ಪೋತ್ನಾಳ್‌ನಂತಹ ವಾಣಿಜ್ಯ ಕೇಂದ್ರಗಳಲ್ಲಿ ವಾಸಿಸುತ್ತಿದ್ದಾರೆ. ಇವರು ಕೃಷಿಕರಿಗೆ ಬೀಜ, ಗೊಬ್ಬರ, ಔಷಧಿಗಳನ್ನು ಸಾಲದ ರೂಪದಲ್ಲಿ ಪೂರೈಸುತ್ತಾರೆ. ಅವಶ್ಯಕತೆ ಇದ್ದಾಗ ನಗದನ್ನು ಸಹ ನೀಡುತ್ತಾರೆ. ಸಾಲ ನೀಡುವಾಗ

ಬೆಳೆದ ಉತ್ಪನ್ನವನ್ನು ತಮಗೆ ನೀಡಬೇಕೆಂಬ ಷರತ್ತನ್ನು ವಿಧಿಸುತ್ತಾರೆ. ಒಪ್ಪಂದ ಪತ್ರಕ್ಕೆ ಸಾಲಗಾರರಿಂದ ಸಹಿ ಪಡೆಯುತ್ತಾರೆ. ಬೇರೆ ಯಾವ ದಾಖಲೆಗಳನ್ನು ಪಡೆಯುವುದಿಲ್ಲ. ತಮಗಿರುವ ಸ್ಥಳೀಯ ಜ್ಞಾನ ರೈತರ ಬಗೆಗಿನ ಮಾಹಿತಿ ತಮ್ಮ ಪ್ರಭಾವಗಳನ್ನು ಬಳಸಿಕೊಂಡು ಸಾಲ ನೀಡುತ್ತಾರೆ. ಆದರೆ ಸಾಲ ಪಡೆಯಲು ಇಚ್ಚಿಸುವವ ಸಾಗುವಳಿದಾರರು ಭೂಮಿಯನ್ನು ಹೊಂದಿದ್ದು ಕೃಷಿ ಕಾರ್ಯಗಳನ್ನು ನಡೆಸುತ್ತಿರಬೇಕು. ಹೊಸ ಹಿಡುವಳಿದಾರರಾದರೆ ಹಳೆಯ ರೈತರು ಹಾಗೂ ಕೆಲವೊಮ್ಮೆ ಮಧ್ಯವರ್ತಿಗಳ ಮಾಹಿತಿಗಳ ಮೇಲೂ ಸಾಲಗಳನ್ನು ನೀಡುತ್ತಾರೆ. ತಾವು ನೀಡಿದ ಸಾಲಗಳನ್ನು ಹಿಂದಿರುಗಿ ಪಡೆಯುತ್ತೇವೆಂಬ ಭರವಸೆಯಿಂದ ಸಾಲ ವ್ಯವಹಾರ ಮಾಡುತ್ತಾರೆ. ಇವರ ಸಾಲ ನೀಡುವ ನಿಯಮಗಳು ಸರಳವಾಗಿದ್ದು ತ್ವರಿತವಾಗಿ ಹಣ ನೀಡುತ್ತಾರೆ. ಸಾಲಸ ಬಡ್ಡಿ ತುರ್ತು ಸಂದರ್ಭವನ್ನು ಅವಲಂಭಿಸಿರುತ್ತದೆ. ಸಾಮಾನ್ಯವಾಗಿ ಮಾಸಿಕ ಬಡ್ಡಿದರ ಕನಿಷ್ಟ ಶೇ. ೩ರಷ್ಟಿದ್ದು ಗರಿಷ್ಠ ೬ ರವರೆಗೂ ಇರುತ್ತದೆ. ವಾರ್ಷಿಕವಾಗಿ ಇದು ಶೇಕಡಾ ಕನಿಷ್ಟ ೩೬ರಷ್ಟಿರುತ್ತದೆ. ಫಸಲು ಅಥವಾ ಉತ್ಪನ್ನವನ್ನು ವರ್ಷದ ಕೊನೆಯಲ್ಲಿ ಕೃಷಿಕರು ನೀಡುವಾಗ ಪಡೆದ ಸಾಲದ ಮೊತ್ತ ಮತ್ತು ನೀಡುವ ಫಸಲಿನಲ್ಲಿ ವ್ಯತ್ಯಾಸವಿದ್ದರೂ ಮುಂದಿನ ಬೆಳೆಗೂ ಸಾಲ ನೀಡುವುದು ಕಂಡು ಬಂದಿದೆ. ಹೀಗೆ ಮೂರು ನಾಲ್ಕು ವರ್ಷಗಳ ಕಾಲ ಮುಂದುವರಿದು ಸಾಲ ಸಂಪೂರ್ಣವಾಗಿ ತೀರಿಸಲು ಸಾಧ್ಯವಾಗದಿದ್ದಾಗ ಸಾಗುವಳಿದಾರರು ಒತ್ತಡಕ್ಕೆ ಒಳಗಾಗುತ್ತಾರೆ. ಬರ, ಅಧಿಕ ಉತ್ಪಾದನಾ ವೆಚ್ಚ, ಬೆಲೆ ಸಿಗದಿರುವ ಕಾರಣಗಳಿಂದ ಉತ್ತಮ ಫಸಲು ಬರದೇ ಸಾಲ ಹಿಂದಿರುಗಿಸಿ ಉಳಿತಾಯ ಮಾಡಿಕೊಂಡು ಬದುಕನ್ನು ಸುಧಾರಿಸಿಕೊಳ್ಳುವ ಸಾಧ್ಯತೆಗಳು ಕಡಿಮೆ. ಸಾಳ ನೀಡಲಾಗದೆ ಭೂಮಿ ಮಾರುವ, ಮಾನಸಿಕ ತಳಮಳಗಳಿಗೆ ಒಳಗಾಗುವುದು ತಿಳಿದು ಬಂದಿದೆ. ಈ ರೀತಿಯ ಪರಿಸ್ಥಿತಿ ಸಣ್ಣ ಮತ್ತು ಅತೀ ಸಣ್ಣ ರೈತರಿಗಿದ್ದು ದೊಡ್ಡ ಹಿಡುವಳಿದಾರರಿಗೆ ಇರುವುದಿಲ್ಲ. ಇವರು ಈ ರೀತಿ ಋಣಾತ್ಮಕ ಪರಿಣಾಮಗಳಿಗೆ ಒಳಗಾಗದಿರುವುದು ಕಂಡು ಬಂದಿದೆ. ಭೂ ರಹಿತ ಕೃಷಿ ಕಾರ್ಮಿಕರು ಭದ್ರತೆ ನೀಡುವ ಸಾಮರ್ಥ್ಯವಿಲ್ಲದೆ ಸಂಘಟಿತ ಮತ್ತು ಅಸಂಘಟಿತ ಮೂಲಗಳಿಂದ ಸಾಲ ಪಡೆಯುವ ಅವಕಾಶಗಳೇ ಇಲ್ಲದಂತಾಗಿದೆ.

ಹಣಕಾಸು ಒಳಗೊಳ್ಳುವಿಕೆ ಮತ್ತು ಸಾಮಾಜಿಕ ಆರ್ಥಿಕ ಅಭಿವೃದ್ಧಿಗೆ ಇರುವ ಸಂಬಂಧವನ್ನ ವಿಶ್ಲೇಷಿಸಿವುದಾದರೇ ಭಾರತದಂತಹ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಸಾಲ ಅಥವಾ ಹಣಕಾಸು ಬೇರೇ ಬೇರೇ ಕಾರಣಗಳಿಗಾಗಿ ಅಗತ್ಯವಿದೆ. ಅಂದರೆ ಉತ್ಪಾದನೆ ಅನುಭೋಗ ಕೌಟುಂಬಿಕ ವೆಚ್ಚಗಳು, ಆರೋಗ್ಯ, ಆದಾಯವೃದ್ಧಿ ಚಟುವಟಿಕೆಗಳಂತಹ ಗಂಭೀರ ಅಗತ್ಯಗಳಿಗೆ ಸಾಲ ಅವಶ್ಯಕ. ಸಾಲ ಸೌಲಭ್ಯಗಳು ಕುಟುಂಬಗಳ ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಯನ್ನು ಸುಧಾರಿಸಲಿವೆ. ಬ್ಯಾಂಕು ಸಾಲಗಳ ಹಂಚಿಕೆಯಲ್ಲಿನ ಅಸಮಾನತೆ ಸರಿಪಡಿಸದಿದ್ದರೆ ಅದು ಒಳಗೊಳ್ಳುವ ಅಭಿವೃದ್ಧಿಯ ಮೇಲೆ ಪರಿಣಾಮಬೀರುತ್ತದೆ. ಪ್ರಗತಿಯ ಅಸಮತೋಲನವನ್ನು ಹೆಚ್ಚಿಸುತ್ತದೆ. ಅಧ್ಯಯನದ ಪ್ರಕಾರ ಸಮಾಜದ ಆರ್ಥಿಕ ಸಾಮಾಜಿಕ ಸಾಮರ್ಥ್ಯವಿರುವವರು ಸರ್ಕಾರದ ಸಂಘಟಿತ ಹಣಕಾಸು ಮೂಲದ ಸಾಲ ಸೌಲಭ್ಯಗಳ ಪ್ರಯೋಜನ ಪಡೆಯುತ್ತಿದ್ದು ಭೂ ರಹಿತ ಕೃಷಿ ಕಾರ್ಮಿಕರು, ಅತೀ

ಸಣ್ಣ ಹಿಡುವಳಿದಾರರು ಹಾಗೂ ಮಹಿಳೆಯರು, ವಿಧವೆಯರು ಈ ಪ್ರಯೋಜನಗಳಿಂದ ಹೊರಗುಳಿದಿದ್ದಾರೆ. ಅಭಿವೃದ್ಧಿಯ ಭಾಗವೆನ್ನಬಹುದಾದ ಸರ್ಕಾರದ ಸಾಲ ಸೌಲಭ್ಯಗಳು ಸಮಾಜದ ದುರ್ಬಲರನ್ನು ಹೊಳಗೊಳ್ಳುತ್ತಿಲ್ಲ. ಇದು ಬಡವರನ್ನು ಸಂಪನ್ಮೂಲ ರಹಿತ ಜನರನ್ನು ಅಭಿವೃದ್ಧಿಯ ಅವಕಾಶ ಮತ್ತು ಹಕ್ಕಿನಿಂದಲೇ ಹೊರಗಿಟ್ಟಂತೆ.

**ಸಲಹೆಗಳು**

ಸರ್ಕಾರ ಸಮಾಜದ ಎಲ್ಲಾ ಸಾಮಾಜಿಕ ಗುಂಪು ವರ್ಗಗಳನ್ನು ಒಳಗೊಳ್ಳುವಂತಹ ಸಾಲ ನೀತಿಯನ್ನು ರೂಪಿಸಬೇಕು. ಎಲ್ಲರೂ ಅಭಿವೃದ್ಧಿಯ ಪಾಲುದಾರರಾಗಬೇಕು. ಆಗಲೇ ಎಲ್ಲರನ್ನೂ ಒಳಗೊಂಡ ಅಭಿವೃದ್ಧಿ ಸಾರ್ಥಕವಾಗುವುದು. ಈ ಅಧ್ಯಯನದಲ್ಲಿ ಮೂಡಿ ಬಂದ ಫಲಿತಗಳ ಹಿನ್ನೆಲೆಯಲ್ಲಿ ಎಲ್ಲರನ್ನೂ ಒಳಗೊಳ್ಳುವ ಸಾಲ ನೀತಿಗೆ ಪೂರಕವಾದ ಕೆಲವು ಸಲಹೆಗಳನ್ನು ನೀಡಲಾಗಿದೆ.

೧. ಸಂಘಟಿತ ಸಾಲ ಎಲ್ಲಾ ಸಾಮಾಜಿಕ ಗುಂಪುಗಳನ್ನು ತಲುಪಬೇಕಾದರೆ ಸಮಾಜದ ಮೂಲಭೂತ ಆರ್ಥಿಕ ವ್ಯವಸ್ಥೆಯಲ್ಲಿ ಸುಧಾರಣೆ ಆಗಬೇಕಾಗಿದೆ. ಸಂಘಟಿತ ಮೂಲದ ಸಾಲ ಸೌಲಭ್ಯಗಳಿಂದ ಹೊರಗುಳಿದ ಜನರನ್ನು ಸಾಲ ಪಡೆಯಲು ಅರ್ಹರನ್ನಾಗಿಸುವ ಮತ್ತು ಪಡೆದ ಸಾಲವನ್ನು ತಮ್ಮ ಪ್ರಗತಿಗೆ ಬಳಸಿಕೊಳಲು ಅನುಕೂಲವಾಗುವಂತೆ ಅವರ ಸಾಮರ್ಥ್ಯವನ್ನು ಸುಧಾರಿಸಬೇಕು. ಈ ನಿಟ್ಟಿನಲ್ಲಿ ಆರ್ಥಿಕ ವ್ಯವಸ್ಥೆಯನ್ನು ಸಂಘಟಿಸುವ ಮತ್ತು ವ್ಯವಸ್ಥೆಯಲ್ಲಿ ಸುಧಾರಣೆ ತರುವ ಸಾರ್ವಜನಿಕ ಹೂಡಿಕೆ ನೀತಿ ರಚನೆಯಾಗಬೇಕು. ಆಸ್ತಿರಹಿತ ದುರ್ಬಲ ವರ್ಗಗಳಿಗೆ ಭೂಮಿ, ಬೀಜ, ನೀರಾವರಿ ಸೌಲಭ್ಯ, ಸಹಾಯಧನ ಆಧಾರಿತ ಗೊಬ್ಬರ, ಔಷಧಿಗಳು ಮತ್ತು ಇವುಗಳ ಬಳಕೆಗೆ ಬೇಕಾದ ಪೂರಕ ತರಬೇತಿಗಳನ್ನು ಸರ್ಕಾರ ಒದಗಿಸಬೇಕಾಗಿದೆ. ಈ ಸೌಲಭ್ಯಗಳ ಮೂಲಕ ಬಡವರನ್ನು ಸಾಲ ಪಡೆಯಲು ಮತ್ತು ಪಡೆದ ಸಾಲವನ್ನು ತಮ್ಮ ಅಭಿವೃದ್ಧಿಗೆ ಬಳಸಿಕೊಳ್ಳಲು ಸಮರ್ಥರನ್ನಾಗಿಸಬೇಕು.

೨. ಉದಾರವಾಗಿ ಸಾಲ ನೀಡುವ ಮತ್ತು ಸಾಲಮನ್ನಾ ಮಾಡುವ ಅಥವಾ ಸಾಲ ಮುಕ್ತಿ ಗೊಳಿಸುವತ್ತ ಸರ್ಕಾರ ಗಮನ ಹರಿಸುತ್ತದೆ ವಿನಃ ಬಡಕುಟುಂಬಗಳ ಸಾಮರ್ಥ್ಯವೃದ್ಧಿಸುವಂತಹ ಅವಶ್ಯಕತೆಯನ್ನು ನಿರ್ಲಕ್ಷಿಸುತ್ತದೆ. ಗ್ರಾಮೀಣ ಸಾಲ ಪೂರೈಕೆ ವ್ಯವಸ್ಥೆಯನ್ನು ಸುಧಾರಿಸಲು ಕ್ರಮ ಕೈಗೊಳ್ಳುವುದರೊಂದಿಗೆ ಕೃಷಿ ವ್ಯವಸ್ಥೆಯನ್ನು ಮರು ಸಂಘಟಿಸುವ ಅಗತ್ಯವಿದೆ. ಕೃಷಿ ಕ್ಷೇತ್ರವನ್ನು ಲಾಭದಾಯಕ ಗೊಳಿಸಬೇಕು. ಸಂಘಟಿತ ಸಾಲಗಳು ಕೃಷಿ ಉತ್ಪಾದಕತೆಯನ್ನು ಹೆಚ್ಚಿಸುವಂತಾಗಬೇಕು. ಈ ರೀತಿಯ ಪ್ರಯತ್ನಗಳು ಗ್ರಾಮೀಣ ಜನರ ಜೀವನ ಸುಧಾರಣೆಗೆ ನೆರವಾಗುತ್ತವೆ.

೩. ಸರ್ಕಾರದ ಸಾಲ ನೀತಿ ಮತ್ತು ಯೋಜನೆಗಳ ಪ್ರಯೋಜನದ ಬಗ್ಗೆ ಸಾಗುವಳಿದಾರರಿಗೆ ಸರಿಯಾದ ಮಾಹಿತಿ ನೀಡಬೇಕಾಗಿದೆ. ಇದರಿಂದ ಯೋಜನೆಗಳ ಬಗ್ಗೆ ಜನರಲ್ಲಿ ಜಾಗೃತಿ

ಮೂಡುತ್ತದೆ. ಬ್ಯಾಂಕುಗಳು ಹಣಕಾಸು ಸಂಸ್ಥೆಗಳಿಗೆ ಭೇಟಿ ನೀಡುವುದು ಮತ್ತು ಸಾಲ ಪಡೆಯಲು ಪ್ರಯತ್ನಿಸುವುದು ಪ್ರಾರಂಭವಾಗುತ್ತದೆ. ಸಂಘಟಿತ ಸಾಲ ಕೆಲವೇ ಜನರನ್ನು ತಲುಪುವ ಬದಲಾಗಿ ಸಾಲ ಪಡೆಯಲು ಅರ್ಹತೆ ಇರುವ ಎಲ್ಲರನ್ನು ತಲುಪುವಂತಾಗುತ್ತವೆ.

೪. ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳ ಸಾಲ ನಿಯಮಗಳು ಸರಳೀಕರಣಗೊಳ್ಳಬೇಕು. ಸಾಲ ಪಡೆಯಲು ಬೇಕಾದ ದಾಖಲಾತಿಗಳ ಸಂಖ್ಯೆ ಕಡಿಮೆಯಾಗಬೇಕು. ಈ ಪ್ರಕ್ರಿಯೆ ಗ್ರಾಮೀಣ ಜನರಲ್ಲಿ ಬ್ಯಾಂಕುಗಳ ಬಗ್ಗೆ ಧನಾತ್ಮಕ ಭಾವನೆ ಮತ್ತು ನಂಬಿಕೆ ಮೂಡಿಸುತ್ತದೆ. ಗ್ರಾಮೀಣ ಭಾಗದಲ್ಲಿ ಹಿಡುವಳಿದಾರರು ಸಣ್ಣ ಸಣ್ಣ ಹಿಡುವಳಿಗಳನ್ನು ಹೊಂದಿದ್ದರೂ ಭೂ ದಾಖಲಾತಿಗಳು ಇವರ ಹೆಸರಿನಲ್ಲಿ ಇರುವುದಿಲ್ಲ. ಪೂರ್ವಿಕರಿಂದ ಭೂ ದಾಖಲಾತಿಗಳು ಇವರ ಹೆಸರಿಗೆ ವರ್ಗಾವಣೆ ಗೊಂಡಿರುವುದಿಲ್ಲ. ಭೂ ದಾಖಲಾತಿಗಳ ವರ್ಗಾವಣೆ ಅಧಿಕ ಖರ್ಚು ಮತ್ತು ಸಮಯ ತೆಗೆದುಕೊಳ್ಳುತ್ತದೆ. ಅದ್ದರಿಂದ ಜನ ಇದರ ಬಗ್ಗೆ ನಿರ್ಲಕ್ಷಿಸುತ್ತಾರೆ. ಆದರೆ ಇವರು ಕೃಷಿ ಉತ್ಪಾದನಾ ಚಟುವಟಿಕೆಗಳಲ್ಲಿ ತೊಡಗಿರುತ್ತಾರೆ. ಕೃಷಿ ಇವರ ಮುಖ್ಯ ವೃತ್ತಿಯಾಗಿರುತ್ತದೆ. ಭೂಮಿ ಇರುವ ಎಲ್ಲರೂ ಸಾಲ ಪಡೆಯಲು ಮಾಡಬೇಕಾದ ಖರ್ಚನ್ನು ಭರಿಸುವಷ್ಟು ಉಳಿತಾಯ ಹೊಂದಿರುವುದಿಲ್ಲ. ಹಾಗೆಯೇ ಸಾಲ ಮಂಜೂರಾತಿ ನಿಯಮಗಳು ಕಠಿಣವಾಗಿವೆ. ಈ ಹಿನ್ನೆಲೆಯಲ್ಲಿ ಸಂಘಟಿತ ಮೂಲದಿಂದ ಕನಿಷ್ಠ ಒಂದರಿಂದ ಒಂದುವರೆ ಲಕ್ಷದವರೆಗೂ ಸಾಲಕ್ಕೆ ಭದ್ರತೆ ಇಲ್ಲದೇ ಸಾಲ ನೀಡುವಂತಹ ನೀತಿ ಜಾರಿಗೆ ಬರಬೇಕು. ಇದು ಪರಿಣಾಮ ಕಾರಿಯಾಗಿ ಅನುಷ್ಠಾನಗೊಳ್ಳಬೇಕು. ಈ ನೀತಿಯ ಅನುಷ್ಠಾನ ಕುರಿತು ಪರಿಶೀಲಿಸಬೇಕು. ಅನುಷ್ಠಾನ ಗೊಳಿಸದ ಬ್ಯಾಂಕು ಅಥವಾ ಹಣಕಾಸು ಸಂಸ್ಥೆಯ ಮೇಲೆ ಕಟ್ಟುನಿಟ್ಟಿನ ಕ್ರಮ ಜರುಗಿಸಬೇಕು. ಈ ನಿಯಮದಡಿ ಸಾಲ ಪಡೆದವರಿಗೆ ಸರ್ಕಾರ ಮತ್ತು ಬ್ಯಾಂಕುಗಳು ಸಾಲ ಬಳಕೆಯಿಂದಾಗುವ ಅನುಕೂಲಗಳ ಬಗ್ಗೆ ನಿರಂತರ ಸಲಹೆ ಮಾರ್ಗದರ್ಶನ ನೀಡಬೇಕು. ಇದು ಸಾಲ ಮರುಪಾವತಿ ಸಮಸ್ಯೆಯನ್ನು ಪರಿಹರಿಸಲು ನೆರವಾಗಬಹುದು. ಇದರಿಂದ ಸಾರ್ವಜನಿಕ ಬ್ಯಾಂಕುಗಳು ಸಾಮಾಜಿಕ ಜವಾಬ್ದಾರಿಯನ್ನು ಪಾಲಿಸಿದಂತಾಗುತ್ತದೆ.

೫. ಜವಾಬ್ದಾರಿಯುತ ಸಾಲ ವ್ಯವಸ್ಥೆಯಲ್ಲಿ ಸಾಲದ ಲಭ್ಯತೆ ಒಂದು ಮುಖ್ಯ ವಿಷಯ. ಬಡತನ ನಿರ್ಮೂಲನೆಯಲ್ಲಿ ಸಾಲದ ಪೂರೈಕೆ ಮತ್ತು ಬೇಡಿಕೆ ಅಂಶಗಳು ಪ್ರಮುಖವಾದವುಗಳು. ಸಂಘಟಿತ ಸಾಲಕ್ಕೆ ಬೇಡಿಕೆ ಹೆಚ್ಚು. ರಿಯಾಯತಿ ಬಡ್ಡಿ ದರದಲ್ಲಿ ಸಾಲಗಳು ಪೂರೈಕೆಯಾಗುತ್ತವೆ. ಎಲ್ಲರೂ ಈ ಮೂಲದಿಂದ ಸಾಲ ಸೌಲಭ್ಯ ಪಡೆಯಲು ಬಯಸುತ್ತಾರೆ. ಆದರೆ ಸಾಲಗಳು ಎಲ್ಲರಿಗೂ ದೊರೆಯವುದಿಲ್ಲ. ಸಮಾಜದ ದುರ್ಬಲ ವರ್ಗಗಳು ಸಂಘಟಿತ ಮೂಲದಿಂದ ಕಡಿಮೆ ಬಡ್ಡಿ ಅಥವಾ ಬಡ್ಡಿ ರಹಿತ ಸಾಲಗಳನ್ನು ಪಡೆದು ಅದನ್ನು ಉತ್ಪಾದಕ ಉದ್ದೇಶಗಳಿಗೆ ಬಳಸಿಕೊಂಡು ಜೀವನ ಸುಧಾರಿಸಿಕೊಳ್ಳುಲು ಬಯಸುತ್ತಾರೆ. ಭೂರಹಿತ ಮತ್ತು ಕೃಷಿಕೂಲಿ ಕಾರ್ಮಿಕರು ಸಾಲ ಸೌಲಭ್ಯಗಳು ಅಗತ್ಯ ಇವೆ ಎಂದು ಅಭಿಪ್ರಾಯ ಪಡುತ್ತಾರೆ. ಈ

ದೃಷ್ಟಿಯಿಂದ ಸಂಘಟಿತ ಮೂಲದಿಂದ ಲಭ್ಯವಿರುವ ಅಥವಾ ದೊರೆಯುವ ಸಾಲಗಳನ್ನು ಬಳಸಿಕೊಳ್ಳಲು ಅನುಕೂಲವಾಗುವಂತೆ ಬಡವರ ಆದಾಯಗಳಿಸುವ ಸಾಮರ್ಥ್ಯವನ್ನು ಬಲಪಡಿಸಬೇಕು. ಅವರ ಕೌಶಲ್ಯಗಳನ್ನು ಹೆಚ್ಚಿಸಬೇಕು ಮತ್ತು ಸ್ವತ್ತುಗಳಿಸುವಂತೆ ಅವರನ್ನು ಬಲವರ್ಧನೆಗೊಳಿಸಬೇಕು. ಅವರು ಆಸ್ತಿಗಳಿಸುವಂತಹ ಅವಕಾಶವನ್ನು ಸೃಷ್ಟಿಸಬೇಕು ಮತ್ತು ವಿಸ್ತರಿಸಬೇಕು. ಈ ಪ್ರಕ್ರಿಯೆ ಅವರನ್ನು ಸಂಘಟಿತ ಮೂಲದ ಸಾಲ ನೀತಿ ಮತ್ತು ಕಾರ್ಯಕ್ರಮಗಳ ಅನುಕೂಲ ಪಡೆಯಲು ನೆರವಾಗುವುದು ಮಾತ್ರವಲ್ಲದೆ ಇತರೇ ಅಭಿವೃದ್ಧಿ ನೀತಿಗಳ ಫಲಗಳನ್ನು ಪಡೆಯುವಂತೆ ಪ್ರೇರೇಪಿಸುತ್ತದೆ. ಸಂಘಟಿತ ಮೂಲ ಮಾತ್ರ ಸಮಾಜದ ಎಲ್ಲಾ ಸಾಮಾಜಿಕ ವರ್ಗಗಳ ಸಾಲ ಅಗತ್ಯಗಳನ್ನು ರಿಯಾಯತಿ ದರದಲ್ಲಿ ಪೂರೈಸಿ ಗ್ರಾಮೀಣ ಜನರ ಬದುಕಲ್ಲಿ ಬದಲಾವಣೆ ಮತ್ತು ಬರವಸೆಗಳನ್ನು ಮೂಡಿಸಬಲ್ಲದ್ದು. ಸಾರ್ವಜನಿಕ ಬ್ಯಾಂಕುಗಳು ಬಡವರ್ಗಗಳಿಗೆ ಕಡಿಮೆ ಬಡ್ಡಿ ದರದಲ್ಲಿ ಸಾಲ ಪೂರೈಸುವುದು ಅನುತ್ಪಾದಕ ಎಂದು ಭಾವಿಸಬಾರದು. ಉದ್ಯಮಿಗಳಿಗೆ ಸಾಲ ಮರುಪಾವತಿಸುವ ಸಾಮರ್ಥ್ಯವಿದ್ದಾಗ್ಯು ಪಡೆದ ಸಾಲದಿಂದ ವ್ಯವಹಾರ ಉದ್ಯಮ ಚಟುವಟಿಕೆಗಳನ್ನು ವಿಸ್ತರಿಸಿಕೊಂಡು ಅದರ ಪ್ರಯೋಜನ ಪಡೆದಿದ್ದಾರೆ. ಆದರೂ ಇಂತಹ ಜನರಿಂದ ಬ್ಯಾಂಕುಗಳಿಗೆ ಬರಬೇಕಾದ ಸಾಲಬಾಕಿ ಲಕ್ಷ ಕೋಟಿಗಳಿವೆ. ಇದನ್ನು ಅನುತ್ಪಾದಕ ಆಸ್ತಿ ಅಥವಾ ಸಾಲಗಳೆಂದು ಪರಿಗಣಿಸುತ್ತಿರುವ ಬ್ಯಾಂಕುಗಳು ಶ್ರೀಮಂತರಿಗೆ ನೀಡಿದ ಈ ಸಾಲಗಳನ್ನು ಹಿಂದಿರುಗಿ ಪಡೆಯಲಾಗುತ್ತಿಲ್ಲ.

೬. ಸಂಘಟಿತ ಹಣಕಾಸು ವ್ಯವಸ್ಥೆಯಲ್ಲಿ ಸುಧಾರಣೆ ತರುವುದರೊಂದಿಗೆ ಖಾಸಗೀ ಲೇವಾದೇವಿ ಸಾಲ ಮಾರುಕಟ್ಟೆಯನ್ನು ನಿಯಂತ್ರಿಸುವ ಕಾನೂನುಗಳನ್ನು ಸರ್ಕಾರ ಪರಿಣಾಮಕಾರಿಯಾಗಿ ಜಾರಿಗೊಳಿಸಬೇಕಾಗಿದೆ. ಇದರಿಂದ ಈ ಮೂಲದ ಪ್ರಭಾವ ಕಡಿಮೆಯಾಗುತ್ತದೆ. ಸಾಗುವಳಿ ದಾರರ ಆತ್ಮಹತ್ತೆಯಂತಹ ಪ್ರಕರಣಗಳು ಕಡಿಮೆಯಾಗಬಹುದು.

೭. ಜಿಲ್ಲಾ ಮಟ್ಟದ ಸಾಲ ಯೋಜನೆಗಳನ್ನು ಪರಿಣಾಮಕಾರಿಯಾಗಿ ರೂಪಿಸಬೇಕು. ಪ್ರತಿ ಗ್ರಾಮದ ಸಾಲದ ಅಗತ್ಯಗಳನ್ನು ಗಂಭೀರವಾಗಿ ಪರಿಗಣಿಸಬೇಕು. ಸಾರ್ವಜನಿಕ ಬ್ಯಾಂಕುಗಳ ಪ್ರತಿನಿಧಿಗಳು ಭಾಗವಹಿಸಿ ತಮ್ಮ ಕಾರ್ಯವ್ಯಾಪ್ತಿ ಪ್ರದೇಶದ ಸಾಲದ ಅಗತ್ಯಗಳನ್ನು ಯೋಜನೆಗಳಲ್ಲಿ ಸೇರಿಸಬೇಕು. ಸಂಘಟಿತ ಸಾಲ ಸೌಲಭ್ಯಗಳಿಂದ ಹೊರಗುಳಿದ ಜನರು ಸಾಲ ಪಡೆಯುವಂತಾಗಲು ಆಯಾ ಪ್ರದೇಶಗಳ ಪರಿಸ್ಥಿತಿಗೆ ಅನುಗುಣವಾದ ಸಾಮರ್ಥ್ಯ ಕೌಶಲ್ಯ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಬೇಕು. ಈ ರೀತಿ ಯೋಜನೆ ಅಥವಾ ಕಾರ್ಯಕ್ರಮಗಳನ್ನು ಕೈಗೊಳ್ಳುವಾಗ ಜಿಲ್ಲಾ ಮಟ್ಟದ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಸಹಭಾಗಿತ್ವ ಪಡೆಯಬೇಕು.

# ಪರಾಮರ್ಶನ ಗ್ರಂಥಗಳು


೧. ಅಂಜಲಿ ಕುಮಾರ್, ದೀರಜ್ ಕೆ ಸಿಂಗ್ ಪ್ರಭಾತ್ ಕುಮಾರ್ (೨೦೦೭). ಟ್ರೆಂಡ್ಸ್ ಇನ್ ರೂರಲ್ ಫೈನಾನ್ಸ್; ಪರ್‌ಫಾರ್ಮೆನ್ಸ್ ಆಫ್ ರೂರುಲ್ ಕ್ರೆಡಿಟ್ ಅಂಡ್ ಫ್ಯಾಕ್ಟರ್ಸ್ ಅಫೆಕ್ಟಿಂಗ್ ದಿ ಚಾಯ್ಸ್ ಆಫ್ ಕ್ರೆಡಿಟ್ ಸೋರ್ಸ್, ಇಂಡಿಯನ್ ಜರ್ನಲ್ ಆಫ್ ಅಗ್ರಿಕಲ್ಚರಲ್ ಎಕನಾಮಿಕ್ಸ್, ವ್ಯಾಲ್ಯೂಮ್.೬೨.ನಂ.೩, ಜುಲೈ-ಸೆಪ್ಟಂಬರ್ ೨೦೦೭.

೨. ಅಮರೇಶ್ ನುಗಡೋಣಿ (೨೦೦೩). ಹೈದರಾಬಾದ್ ಕರ್ನಾಟಕದ ಹಾಡು ಪಾಡು, ಅಮರೇಶ್ ನುಗಡೋಣಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೩. ಅಮಿಯ ಕುಮಾರ್ ಬಾಗ್ಚಿ (೧೯೮೯). ದಿ ಪ್ರೆಸಿಡೆನ್ಸಿ ಬ್ಯಾಂಕ್ಸ್ ಅಂಡ್ ದಿ ಇಂಡಿಯನ್ ಎಕನಾಮಿ ೧೮೭೬-೧೯೧೪, ಆಕ್ಸ್‌ಫರ್ಡ್ ಯೂನಿವರ್‌ಸಿಟಿ ಪ್ರೆಸ್, ಕೋಲ್ಕತ್ತಾ.

೪. ಅವನೀಂದ್ರನಾಥ್ ಠಾಕೂರ್‌ರು (೨೦೧೦). ಬ್ಯಾಂಕಿಂಗ್ ಸಾಗಿ ಬಂದ ದಾರಿ, ಯೋಜನಾ, ಫೆಬ್ರವರಿ, ೨೦೧೦.

೫. ಆರ್.ಬಿ.ಐ. (೨೦೧೨-೧೩). ವಾರ್ಷಿಕ ವರದಿ, ಆರ್‌ಬಿಐ, ಬಾಂಬೆ ಪು.೮೫ ವಿವರಗಳಿಗೆ ನೋಡಿ.

೬. ಆರ್.ಬಿ.ಐ (೨೦೧೨). ಪಾಲಿಸಿ; ಪ್ರಿಯಾರಿಟಿ ಸೆಕ್ಟರ್ ಗೈಡ್‌ಲೈನ್ಸ್ ಅಮೆಂಡಡ್, ಮಾನಿಟರಿ ಅಂಡ್ ಕ್ರೆಡಿಟ್ ಇನಫರ್‌ಮೇಶನ್ ರಿವ್ಯೂವ್, ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ, ಅಕ್ಟೋಬರ್ ೨೦೧೨, ವ್ಯಾಲೂಮ್ ಐಎಕ್ಷ್, ಇಶ್ಯೂ ೪.

೭. ಇಪಿಡಬ್ಲ್ಯೂ ರೀಸರ್ಚ್ ಫೌಂಡೇಶನ್(೨೦೦೭). ರೂರಲ್ ಕ್ರೆಡಿಟ್ ಸ್ಟ್ರಕ್ಚರ್ ನೀಡ್ಸ್ ಜೆನ್ಯೆನ್ ರಿವಿಟಲೈಶೇನ್, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ೧೯ ಮೇ ೨೦೦೯.

೮. ಇಪಿಡಬ್ಲ್ಯೂ ರೀಸರ್ಚ್ ಫೌಂಡೇಶನ್ (೧೯೭೮). ಅಗ್ರಿಕಲ್ಚರಲ್ ಲೇಬರ್-ಗೆಟಿಂಗ್ ಪೂರ್, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಅಕ್ಟೋಬರ್ ೧೯೭೮.

೯. ಎಡಿಟೆಡ್ ಬೈ ರಾವ್ ವಿ.ಕೆ.ಆರ್.ವಿ. (೧೯೭೭). ಪ್ಲಾನಿಂಗ್ ಇನ್ ಪರ್ಸ್‌ಪೆಕ್ಟೀವ್, ಪಾಲಿಸಿ ಚಾಯ್ಸ್‌ಸ್ ಇನ್ ಪ್ಲಾನಿಂಗ್ ಫಾರ್ ಕರ್ನಾಟಕ ೧೯೭೩-೭೪ ಟು ೧೯೮೮-೯೦, ಇಂಡಿಯನ್ ಇಸ್ಟಿಟ್ಯೂಟ್ ಫಾರ್ ಸೋಶಿಯೋ ಎಕನಾಮಿಕ್ ಛೇಂಜ್ (ಐಸೆಕ್), ಬೆಂಗಳೂರು.

೧೦. ಕರ್ನಾಟಕ ಸರ್ಕಾರ (೨೦೧೧). ಕೈಗಾರಿಕೆ ವಾಣಿಜ್ಯ ಇಲಾಖೆ, ಕರ್ನಾಟಕ ಸರ್ಕಾರ.

೧೧. ಕರ್ನಾಟಕ ಸರ್ಕಾರ (೨೦೦೬). ಕರ್ನಾಟಕ ಮಾನವ ಅಭಿವೃದ್ಧಿ ವರದಿ–೨೦೦೫, ಕರ್ನಾಟಕ ಸರ್ಕಾರ, ಯೋಜನಾ ಆಯೋಗ ಇಲಾಖೆ, ಬೆಂಗಳೂರು, ಪು.೧೮–೮೫
೧೨. ಕರ್ನಾಟಕ ಸರ್ಕಾರ (೨೦೦೨). ಪ್ರಾದೇಶಿಕ ಅಸಮತೋಲನ ನಿವಾರಣಾ ಉನ್ನತಾಧಿಕಾರಿ ಸಮಿತಿ, ಅಂತಿಮ ವರದಿ ೨೦೦೨, ಕರ್ನಾಟಕ ಸರ್ಕಾರ, ಯೋಜನಾ ಆಯೋಗ ಇಲಾಖೆ, ಬೆಂಗಳೂರು.

೧೩. ಕರ್ಮಾಕರ್ ಕೆ.ಜಿ. (೧೯೯೯). ರೂರಲ್ ಕ್ರೆಡಿಟ್ ಅಂಡ್ ಸೆಫ್ಲ್ ಹೆಲ್ಪ್ ಗ್ರೂಪ್ಸ್, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ.

೧೪. ಕರುನಯ್ಯತಲ್ ಎ. (೨೦೦೯). ಲಿಂಕೇಜ್ ಬಿಟ್‌ವೀನ್ ಸೆಲ್ಫ್ ಹೆಲ್ಪ್ ಗ್ರೂಪ್ಸ್ ಇನ್ ಇಂಡಿಯಾ, ನ್ಯೂ ಸೆಂಚುರಿ ಪಬ್ಲಿಕೇಷನ್, ನ್ಯೂಡೆಲ್ಲಿ.

೧೫. ಕಲೋನ್ ಎಸ್. (೧೯೯೧). ಇನ್ಸ್‌ಟಿಟೂಶನಲ್ ಕ್ರೆಡಿಟ್ ಅಂಡ್ ಒವರ್‌ಡ್ಯೂ ಫ್ರಮ್ ಬಾರೋವರ್ಸ್ ಆಂಗಲ್, ಎಕಾನಿಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಫೆಬ್ರವರಿ, ೨, ೧೯೯೧.

೧೬. ಕಾಮತ್, ಜಿ.ಎಸ್. (೧೯೮೬). ಕೋಅಪರೇಟಿವ್ಸ್ ಅಂಡ್ ಪಾವರ್ಟಿ ರಿಮೂವಲ್, ಕುರುಕ್ಷೇತ್ರ ಎಕ್ಸ್‌ಎಕ್ಸ್‌ವಿ.

೧೭. ಕುಮಾರ್ ಎ. (೨೦೦೧). ಫೈನಾನ್ಸಿಂಗ್ ಅಂಡ್ ಕಮರ್ಶಿಯಲೈಸೇಷನ್ ಆಫ್ ಇಂಡಿಯನ್ ಅಗ್ರಿಕಲ್ಚರ್, ಸುರಪ್ ಪಬ್ಲಿಕೇಷನ್, ನ್ಯೂಡೆಲ್ಲಿ.

೧೮. ಕುರಿಯನ್ ಸಿ.ಟಿ. (೧೯೯೨). ದಿ ಎಕನಾಮಿ–ಅನ್ ಇನ್‌ಟರ್‌ಪ್ರಿಟೇಟಿವ್ ಇಂಟ್ರೊಡಕ್ಷನ್, ಸೇಜ್ ಪಬ್ಲಿಕೇಶನ್, ನ್ಯೂಡೆಲ್ಲಿ

೧೯. ಕುರಿಯನ್ ಸಿ.ಟಿ. (೧೯೯೨) ಗ್ರೋಥ್ ವಿತ್ ಜಸ್ಟೀಸ್ ಆಸ್‌ಪೆಕ್ಟ್ಸ್ ಆಫ್ ಇಂಡಿಯಾಸ್ ಡೆವಲಪ್‌ಮೆಂಟ್ ಎಕ್ಸ್‌ಪೀರಿಯನ್ಸ್, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ಮದ್ರಾಸ್.

೨೦. ಕೃಷಿ ಗಣತಿ (೨೦೧೦–೧೧). ಆರ್ಥಿಕ ಸಾಂಖಿಕ ನಿರ್ದೇಶನಾಲಯ, ಬೆಂಗಳೂರು.

೨೧. ಕೃಷ್ಣಕುಮಾರಿ ಡಿ.ಬಿ. (೧೯೮೮). ಕೋಅಪರೇಟಿವ್ ಬ್ಯಾಂಕಿಂಗ್ ಫಾರ್ ಅಗ್ರಿಕಲ್ಚರ್ ಡವಲಪ್‌ಮೆಂಟ್, ದೀಪ್ ಅಂಡ್ ದೀಪ್ ಪಬ್ಲಿಕೇಷನ್, ನ್ಯೂಡೆಲ್ಲಿ.

೨೨. ಕೃಷ್ಣ ಭಾರದ್ವಾಜ್ (೧೯೯೪). ಅಕ್ಯುಮುಲೇಶನ್, ಎಕ್ಸ್‌ಚೇಂಜ್ ಅಂಡ್ ಡವಲಪ್‌ಮೆಂಟ್–ಎಸ್ಸೆ ಆನ್ ದಿ ಇಂಡಿಯನ್ ಇಕನಾಮಿ, ಸೇಜ್ ಪಬ್ಲಿಕೇಶನ್, ನ್ಯೂಡೆಲ್ಲಿ.

೨೩. ಗಾಡ್ಗಿಲ್ ಡಿ.ಆರ್. (೧೯೪೫). ಟುವರ್ಡ್ಸ್ ಎ ಕೊಅಪರೇಟೀವ್ ಕಾಮನ್‌ವೆಲ್ತ್, ಪ್ರೊ. ಬ್ರಿಜ್ ನರೈನ್ ಮೆಮೋರಿಯಲ್ ಲೆಕ್ಚರ್ಸ್, ಯೂನಿವರ್ಸಿಟಿ ಆಫ್ ಪಂಜಾಬ್, ೧೯೬೦,

೨೪. ಗುಣಶೇಖರನ್ ಎಸ್. (೧೯೮೫). ಸ್ಮಾಲ್ ಫಾರ್ಮರ್ಸ್ ಅಂಡ್ ಇನ್‌ಸ್ಟಿಟ್ಯೂಶನಲ್ ಕ್ರೆಡಿಟ್, ಆಶಿಶ್ ಪಬ್ಲಿಕೇಷನ್, ನ್ಯೂಡೆಲ್ಲಿ.

೨೫. ಗುರುದೇವ್ ಸಿಂಗ್ (೧೯೮೯). ಇನ್‌ಸ್ಟಿಟ್ಯೂಶನಲ್ ಫೈನಾನ್ಸ್ ಇನ್ ರೂರಲ್ ಇಂಡಿಯಾ: ಎಫಿಷಿಯನ್ಸಿ ಅಂಡ್ ಎಫಿಕೆಸಿ, ಆಕ್ಸ್‌ಫರ್ಡ್ ಎಸ್‌ಬಿಹೆಚ್ ಪಬ್ಲೀಷಿಂಗ್ ಕೊ.ಪ್ರೈ.ಲಿಮಿಟೆಡ್, ನ್ಯೂಡೆಲ್ಲಿ.

೨೬. ಗುರುದೇವಸಿಂಗ್ ಮತ್ತು ಎಸ್.ಆರ್. ಅಶೋಕನ್ (೧೯೮೮). ಇನ್ಸಿಟ್ಯೂಷನಲ್ ಫೈನಾನ್ಸ್ ಇನ್ ರೂರಲ್ ಇಂಡಿಯಾ: ರಾವತ್ ಪಬ್ಲಿಕೇಷನ್, ಜೈಪುರ.

೨೭. ಗೊರವಾಲ ಎ.ಡಿ. (೧೯೫೪). ಆಲ್ ಇಂಡಿಯಾ ರೂರಲ್ ಕ್ರೆಡಿಟ್ ಸರ್ವೆ–ರಿಪೋರ್ಟ್ ಆಫ್ ದಿ ಕಮಿಟಿ ಆಫ್ ಡೈರೆಕ್ಷನ್, ವಾಲ್ಯೂಮ್.೨೫, ಜನರಲ್ ರಿಪೋರ್ಟ್, ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ, ಬಾಂಬೆ, ೧೯೫೬.

೨೮. ಗೋಪಾಲ್ ಅಯ್ಯರ್ ಅಂಡ್ ಸರೋಜ ಅರೋರ (೨೦೧೦). ಇನ್‌ಡೆಟ್‌ನೆಸ್ ಅಂಡ್ ಫಾರ್ಮರ್ಸ್ ಸೂಸೈಡ್ಸ್ ಇನ್ ಆರ್.ಎಸ್ ದೇಶಪಾಂಡೆ ಅಂಡ್ ಸರೋಜ ಅರೋರ (ಸಂ) ಅಗ್ರೇರಿಯನ್ ಕ್ರೈಸಿಸ್ ಅಂಡ್ ಫಾರ್ಮರ್ಸ್ ಸೂಸೈಡ್ಸ್–ಲ್ಯಾಂಡ್ ರಿಫಾರ್ಮ್ಸ್–ವ್ಯಾಲ್ಯೂಮ್ ೧೨, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ.

೨೯. ಗೌತಮ್ ಪುರಕಾಯಸ್ತ (೨೦೦೮). ರೂರಲ್ ಕ್ರಡಿಟ್ ಇನ್ ಡಿಸಾರೆ, ಐಸೆಕ್, ಬೆಂಗಳೂರು.

೩೦. ಗೌರ್ನಮೆಂಟ್ ಆಫ್ ಇಂಡಿಯಾ (೨೦೦೮–೦೯). ಎಕನಾಮಿಕ್ ಸರ್ವೆ ೨೦೦೮–೦೯.

೩೧. ಗೌರ್ನಮೆಂಟ್ ಆಫ್ ಇಂಡಿಯಾ (೨೦೦೦–೦೧). ಎಕನಾಮಿಕ್ ಸರ್ವೆ ೨೦೦೦–೦೧.

೩೨. ಚಂದ್ರಶೇಖರ ಟಿ.ಆರ್. (೨೦೧೪). ಗುಲಬರ್ಗಾ ವಿಭಾಗದ ಆರು ಜಿಲ್ಲೆಗಳ ಅಭಿವೃದ್ಧಿ ಮತ್ತು ಸಂವಿಧಾನದ ಪರಿಚ್ಛೇದ ೩೭೧ (ಜೆ); ನಮ್ಮ ಮುಂದಿರುವ ಸವಾಲುಗಳು, ಕನ್ನಡ ವಿಶ್ವ ವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗ ೨೦೧೪, ಜನವರಿ ೨೮ ಮತ್ತು ೨೯ ರಂದು ಗುಲಬರ್ಗಾದಲ್ಲಿ ಏರ್ಪಡಿಸಿದ್ದ ಕಾರ್ಯಾಗಾರದ ಆಶಯ ಭಾಷಣ.

೩೩. ಚಂದ್ರಶೇಖರ ಟಿ.ಆರ್. (೨೦೧೦). ಧರೆ ಹತ್ತಿ ಉರಿದರೆ; ಪ್ರಚಲಿತ ಕರ್ನಾಟಕ ಕುರಿತ ಬರಹಗಳು, ಪಲ್ಲವಿ ಪ್ರಕಾಶನ, ಬಳ್ಳಾರಿ.

೩೪. ಚಂದ್ರಶೇಖರ ಟಿ.ಆರ್. (೨೦೦೮). ಕರ್ನಾಟಕದಲ್ಲಿ ಪ್ರಾಥಮಿಕ ಶಿಕ್ಷಣದ ಸ್ಥಿತಿಗತಿ, ಹಂಪಿ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

೩೫. ಚಂದ್ರಶೇಖರ ಟಿ.ಆರ್. (೨೦೦೪). ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರೀಕರಣ: ರಾಜಕೀಯ ವೈಫಲ್ಯದ ಒಂದು ಸಂಕತನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೩೬. ಚಂದ್ರಶೇಖರ ಟಿ.ಆರ್. (೨೦೦೩) ಕರ್ನಾಟಕ: ಅಭಿವೃದ್ಧಿಯ ಸಾಮಾಜಿಕ ನೆಲೆಗಳು, ಬೆಂಗಳೂರು, ಸಿವಿಜಿ ಪಬ್ಲಿಕೇಶನ್.

೩೭. ಚಂದ್ರಶೇಖರ ಟಿ.ಆರ್. (೨೦೧೪). ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯ, ಗಾಯತ್ರಿ ಪ್ರಕಾಶನ, ಬಳ್ಳಾರಿ, ೨೦೧೪.

೩೮. ಚಂದ್ರಶೇಖರ ಟಿ.ಆರ್. ಜನರನ್ನು ಒಳಗೊಳ್ಳುವ ಅಭಿವೃದ್ಧಿ; ಹೈದರಾಬಾದ್ ಕರ್ನಾಟಕದ ಪ್ರದೇಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೯. ಚಂದ್ರಶೇಖರ ಟಿ.ಆರ್. (೨೦೦೪). ಗ್ರಾಮೀಣ ಅಭಿವೃದ್ಧಿ ಮತ್ತು ವಿಕೇಂದ್ರಿಕರಣ; ರಾಜಕೀಯ ವೈಫಲ್ಯದ ಒಂದು ಸಂಕತನ, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ,.

೪೦. ಚಂದ್ರಶೇಖರ ಸಿ.ಪಿ. ಅಂಡ್ ಜಯತಿ ಘೋಶ್ (೨೦೦೨). ದಿ ಮಾರ್ಕೆಟ್ ದಟ್ ಫೈಲ್ಡ್- ನಿಯೋಲಿಬರಲ್ ಎಕನಾಮಿಕ್ ರಿಫಾರರ್ಮ್ಸ್ ಇನ್ ಇಂಡಿಯಾ; ಲೆಫ್ಟ್ ವರ್ಡ್ ಬುಕ್ಸ್, ನ್ಯೂಡೆಲ್ಲಿ.

೪೧. ಚಂದ್ರಶೇಖರ ಬಿ. ದಾಮ್ಲೆ (೧೯೯೭). ಅಗ್ರೇರಿಯನ್ ಇನ್ ಈಕ್ವ್ಯಾಲಿಟಿ; ಪೋಸ್ಟ್ ಲ್ಯಾಂಡ್ ರಿಫಾರ್ಮ್ಸ್ ಎಕ್ಸ್‌ಪೀರಿಯನ್ಸ್ ಇನ್ ದಕ್ಷಿಣ ಕನ್ನಡ ಡಿಸ್ಟ್ರಿಕ್ಟ್ ಇನ್ ಅಬ್ದುಲ್ ಅಜೀಜ್ ಅಂಡ್ ಸುಧೀರ್ ಕ್ರಷ್ಣ (ಸಂ) ಲ್ಯಾಂಡ್ ರಿಫಾರ್ಮ್ಸ್ ಇನ್ ಇಂಡಿಯಾ ವಾಲ್ಯೂಮ್-೪, ಕರ್ನಾಟಕ ಪ್ರಾಮಿಸಸ್ ಕೆಪ್ಟ್ ಅಂಡ್ ಮಿಸ್ಡ್, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ.

೪೨. ಚಂದ್ರ ಪೂಜಾರಿ ಎಂ. (೨೦೧೦). ಕರ್ನಾಟಕ ಪಂಚವಾರ್ಷಿಕ ಯೋಜನೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೪೩. ಚಂದ್ರ ಪೂಜಾರಿ ಎಂ. (೨೦೧೦). ಯಾಕೀಗ ಭೂಮಿ ಪ್ರಶ್ನೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ.

೪೪. ಚಂದ್ರ ಪೂಜಾರಿ ಎಂ. (೨೦೦೮). ರಾಜಕೀಯ ಬಡತನ, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ.

೪೫. ಚೆಸ್ಟರ್ ಬಿ. ಬೇಕರ್ ಮತ್ತು ವಿನಯ್, ಕೆ ಭಾರ್ಗವ (೧೯೯೨). ಫೈನಾನ್ಸ್ ಫಾರ್ ಡವಲಪ್‌ಮೆಂಟ್ ಆಫ್ ಸ್ಮಾಲ್ ಹೋಲ್ಡಿಂಗ್ ಇನ್ ಇಂಡಿಯಾ, ದಿ ಎಕನಾಮಿಕ್ ಡವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಆಫ್ ದಿ ವರ್ಲ್ಡ್ ಬ್ಯಾಂಕ್, ದಿ ಜಾನ್ ಹಾಕಿನ್ಸ್ ಯೂನಿವರ್‌ಸಿಟಿ ಪ್ರೆಸ್.

೪೬. ಚೌಧರಿ ಎಮ್. (೧೯೯೨). ಮೇಕಿಂಗ್ ಪ್ಯಾಕ್ಸ್ ಎಕನಾಮಿಕಲಿ ವೈಯಬಲ್, ಕುರುಕ್ಷೇತ್ರ ಎಕ್ಸ್‌ಎಲ್.

೪೭. ಜನ್ ನೆಡರ್‌ವೀನ್ ಪೀಟರ್ಸ್ (೨೦೦೧). ಡವೆಲಪ್‌ಮೆಂಟ್ ಥಿಯರಿ: ಡಿಕನ್‌ಸ್ಟ್ರಕ್ಷನ್/ ರಿಕನ್‌ಸ್ಟ್ರಕ್ಷನ್, ನೂಡೆಲ್ಲಿ.

೪೮. ಜಯದೇವಪ್ಪ ಮತ್ತು ಪ್ರೊ. ಎ.ಆರ್. ವಿಶ್ವನಾಥ್ (ಡಿಸೆಂಬರ್ ೨೦೦೮). ಯೋಜನಾ: ಸಣ್ಣ ಹಣಕಾಸು ಕ್ಷೇತ್ರದಲ್ಲಿನ ಪ್ರಾದೇಶಿಕ ಅಸಮತೋಲನ.

೪೯. ಜಯಸೀಲನ್ ನಟರಾಜನ್ (೨೦೧೦). ಮೈಕ್ರೋ ಕ್ರೆಡಿಟ್ ಟೂ ಮೈಕ್ರೋ ಎಂಟರ್ ಪ್ರೈಸಸ್, ಡಾಮಿನೆಂಟ್ ಪಬ್ಲಿಷರ್ಸ್, ನ್ಯೂಡೆಲ್ಲಿ.

೫೦. ಜಲ್ಮಾ ರಾವ್ ವಿ. (೨೦೦೨). ಪ್ರಾಬ್‌ಲಮ್ಸ್ ಅಂಡ್ ಪ್ರಾಸ್‌ಪೆಕ್ಟ್ಸ್ ಆಫ್ ಇನ್‌ಸ್ಟಿಟೂಷನಲ್ ಫೈನಾನ್ಸ್, ಇಂಡಿಯನ್ ಇಸ್ಟಿಟ್ಯೂಟ್ ಫಾರ್ ಸೋಶಿಯೋ ಎಕನಾಮಿಕ್ ಛೇಂಜ್ (ಐಸೆಕ್), ಬೆಂಗಳೂರು.

೫೧. ಜಾರ್ಜ್ ಎನ್.ಡಿ., ಕನ್ನಡಕ್ಕೆ ಜಿ.ಡಿ. ಪಾಟೀಲ್ (೨೦೦೮). ಭಾರತದಲ್ಲಿ ಕಿರು ಸಾಲ ನೀಡಿಕೆ, ಯೋಜನಾ.

೫೨. ಜಾಫರ್ ಆಲಿಖಾನ್ (೨೦೧೦)ನಾನ್ ಬ್ಯಾಂಕಿಂಗ್ ಫೈನಾನ್ಸಿಯಲ್ ಕಂಪನೀಸ್ ಇನ್ ಇಂಡಿಯಾ, ಫಂಕ್ಷನ್ಸ್ ಅಂಡ್ ರಿಫಾರ್ಮ್ಸ್, ನ್ಯೂಸೆಂಚುರಿ ಪಬ್ಲಿಕೇಶನ್, ನ್ಯೂಡೆಲ್ಲಿ.

೫೩. ಜಿಲ್ಲಾ ಪಂಚಾಯತ್ (೨೦೧೨). ರಾಯಚೂರು ಜಿಲ್ಲಾ ಅಂಕಿಅಂಶಗಳ ನೋಟ, ಕರ್ನಾಟಕ ಸರ್ಕಾರ.

೫೪. ಜಿಲ್ಲಾ ಪಂಚಾಯತ್ (೨೦೧೨). ರಾಯಚೂರು ಜಿಲ್ಲಾ ಅಂಕಿಅಂಶಗಳ ನೋಟ, ಕರ್ನಾಟಕ ಸರ್ಕಾರ.

೫೫. ಜೇನ್ಸ್ ಲರ್ಸಿ, ಇಸಾಬೆಲ್ ಗುರಿನ್ ಮತ್ತು ರವಿ ಶ್ರೀವಾಸ್ತವ್ (೨೦೧೨). ಮೈಗ್ರೇಟಿಂಗ್ ಬಿಟ್‌ವೀನ್ ರೂರಲ್ ರಾಯಚೂರ್ ಅಂಡ್ ಬೂಮ್ ಟೌನ್ ಬೆಂಗಳೂರು, ಕ್ಲಾಸ್ ರಿಲೇಶನ್ ಅಂಡ್ ದಿ ಸರ್ಕ್ಯುಲೇಶನ್ ಆಫ್ ಲೇಬರ್ ಇನ್ ಸೌತ್ ಇಂಡಿಯಾ, ಗ್ಲೋಬಲ್ ಲೇಬರ್ ಜರ್ನಲ್, ವಾಲ್ಯೂಮ್ ೩, ಇಶು ೧, ಜೋನಾಥನ್ ಪ್ಯಾಂಟೆಡನ್, ಯೂನಿವರ್ಸಿಟಿ ಆಫ್ ಈಸ್ಟ್ ಆಂಜಿಲ, ಯುನೈಟೆಡ್ ಕಿಂಗ್‌ಡಮ್.

೫೬. ಜೀನ್ ಡ್ರೆಜ್ ಆಂಡ್ ಅಮರ್ಥ್ಯಸೇನ್ (೧೯೯೯). ಇಂಡಿಯಾ: ಎಕನಾಮಿಕ್ ಡವಲಪ್‌ಮೆಂಟ್ ಅಂಡ್ ಸೋಶಿಯಲ್ ಆಪರ್ಚುನಿಟಿ, ಆಕ್ಸ್‌ಫರ್ಡ್ ಯೂನಿವರ್‌ಸಿಟಿ ಪ್ರೆಸ್ಸ್, ನ್ಯೂಡೆಲ್ಲಿ.

೫೭. ಜೀನ್ ಡ್ರೆಜ್ (೧೯೯೭). ಕ್ರೆಡಿಟ್ ಇನ್ ರೂರಲ್ ಇಂಡಿಯಾ; ಎ ಕೇಸ್ ಸ್ಟಡಿ, ಲಂಡನ್ ಸ್ಕೂಲ್ ಆಫ್ ಎಕನಾಮಿಕ್ಸ್ ಅಂಡ್ ಪೊಲಿಟಿಕಲ್ ಸೈನ್ಸ್, ಹಾಗ್ಟನ್ ಸ್ಟ್ರೀಟ್.

೫೮. ಜೀನ್ ಡ್ರೆಜ್ (೧೯೯೭). ಆಕ್ಯುಪೇಶನಲ್ ಚೇಂಜ್, ಲ್ಯಾಂಡ್ ಓನರ್‌ಶಿಪ್ ಅಂಡ್ ಸೋಶಿಯಲ್ ಇನ್‌ಈಕ್ವಾಲಿಟಿ ಇನ್ ಜನ್ ಬ್ರಮನ್, ಪೀಟರ್ ಕ್ಲೂಸ್ ಅಂಡ್ ಅಶ್ವಿನಿ ಸೇಥ್ (ಸಂ) ದಿ ವಿಲೇಜ್ ಇನ್ ಏಷಿಯಾ ರಿ ವಿಸಿಟೆಡ್, ಆಕ್ಸ್‌ಫರ್ಡ್ ಯೂನಿವರ್‌ಸಿಟಿ ಪ್ರೆಸ್, ನ್ಯೂಡೆಲ್ಲಿ.

೫೯. ಜೇಮ್ಸ್ ಮೇನರ್ (೨೦೦೭). ಛೇಂಜ್ ಇನ್ ಕರ್ನಾಟಕ ಓವರ್ ದಿ ಲಾಸ್ಟ್ ಜನರೇಷನ್– ವಿಲೇಜಸ್ ಅಂಡ್ ದಿ ವೈಡರ್ ಕಂಟೆಕ್ಸ್ಟ್, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಫೆಬ್ರವರಿ ೨೪, ೨೦೦೭.

೬೦. ಜ್ಯೋತ್ನಾ ಸಿಂಗ್ (೨೦೧೨). ಇನ್ ಫೋರ್ ಮನ್ತ್ಸ್ ೩೫೮ ಚಿಲ್ಡ್ರನ್ಸ್ ಡೈಡ್ ಮಾಲ್ ನ್ಯೂಟ್ರೀಶನ್ ಇನ್ ರಾಯಚೂರು ಡಿಸ್ಟ್ರಿಕ್ಟ್, ಡಿಸೆಂಬರ್ ೨೧, ೨೦೧೨, ಡಕ್ಕನ್ ಹೆರಾಲ್ಡ್.

೬೧. ಡವಲಪ್‌ಮೆಂಟ್ ಇಸ್ಟಿಟ್ಯೂಟ್, ಎಮ್.ಎಸ್.ಎಮ್.ಇ. (೨೦೦೬) ಮಿನಿಸ್ಟ್ರಿ ಆಫ್ ಎಮ್‌ಎಸ್‌ಎಮ್‌ಇ ಗೌರ್‍ನಮೆಂಟ್ ಆಫ್ ಇಂಡಿಯಾ.

೬೨. ಡಿಸ್ಟ್ರಿಕ್ಟ್ ಎನ್.ಆರ್.ಡಿ.ಎಮ್.ಎಸ್. ಸೆಂಟರ್ (೨೦೦೬). ಜಿಲ್ಲಾ ಪಂಚಾಯತ್, ರಾಯಚೂರು.

೬೩. ತನುಜ್ ಕುಮಾರ್ ಬಿಸಾಯ್ (೨೦೧೦). ರೂರಲ್ ಕ್ರೆಡಿಟ್; ರೀಜಿನಲ್ ರೂರಲ್ ಬ್ಯಾಂಕ್ ಅಂಡ್ ಮೈಕ್ರೋಪೈನಾನ್ಸ್, ಅಭಿಜಿತ್ ಪಬ್ಲಿಕೇಷನ್, ನ್ಯೂಡೆಲ್ಲಿ.

೬೪. ತಾರಾ ಎಸ್. ನಾಯರ್ (೨೦೧೦). ಕಮರ್ಶಿಯಲ್ ಮೈಕ್ರೋ ಪೈನಾಸ್ಸ್ ಅಂಡ್ ಸೋಶಿಯಲ್ ರೆಸ್ಪಾನ್ಸಿಬಿಲಿಟಿ, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ವಾಲ್ಯೂಮ್, ಎಕ್ಸ್‌ಎಲ್‌ವಿ, ನಂ.೩೧.

೬೫. ತಿಮ್ಮಯ್ಯ ಜಿ. (೧೯೯೭). ನ್ಯೂ ಪರ್ಸ್‌ಪೆಕ್ಟಿವ್ ಆನ್ ಲ್ಯಾಂಡ್ ರಿಫಾರ್ಮ್ಸ್ ಇನ್ ಅಬ್ದುಲ್ ಅಜೀಜ್ ಅಂಡ್ ಸುಧೀರ್ ಕ್ರಷ್ಣ (ಸಂ) ಲ್ಯಾಂಡ್ ರಿಫಾರ್ಮ್ಸ್ ಇನ್ ಇಂಡಿಯಾ ವಾಲ್ಯೂಮ್–೪, ಕರ್ನಾಟಕ ಪ್ರಾಮಿಸಸ್ ಕೆಪ್ಟ್ ಅಂಡ್ ಮಿಸ್ಡ್, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ.

೬೬. ತ್ರಿಪತಿ ಎಸ್.ಎನ್. (೨೦೦೮). ಅಗ್ರಿಕಲ್ಚರಲ್ ಲೇಬರ್, ಪಾಲಿಸಿ ಆಫ್ ಡಬ್ಲ್ಯೂಟಿಓ ಅಂಡ್ ಫಾರ್ಮರ್ಸ್ ಸೂಸೈಡ್ ಇನ್ ಇಂಡಿಯನ್ ಸ್ಟೇಟ್ಸ್ ಇನ್ ಕೆ.ಕೆ. ಬಾಗ್ಚಿ (ಸಂ) ಅಗ್ರೇರಿಯನ್ ಕ್ರೈಸಿಸ್ ಅಂಡ್ ಫಾರ್ಮರ್ಸ್ ಸೂಸೈಡ್ಸ್ ಅಂಡ್ ಲೈವ್‌ಲಿಹುಡ್ ಸೆಕ್ಯುರಿಟಿ ಆಫ್ ರೂರಲ್ ಲೇಬರ್ ಇನ್ ಇಂಡಿಯಾ, ವ್ಯಾಲೂಮ್–೧, ಅಭಿಜಿತ್ ಪಬ್ಲಿಕೇಷನ್, ನ್ಯೂಡೆಲ್ಲಿ.

೬೭. ಥಾಮಸ್ ಟಿಮ್‌ಬರ್ಗ್ ಅಂಡ್ ಚಂದ್ರಶೇಖರ್ ವಿ. ಅಯ್ಯರ್ (೧೯೮೦). ಇನ್‌ಫಾರ್ಮಲ್ ಕ್ರೆಡಿಟ್ ಮಾರ್ಕೆಟ್ಸ್ ಇನ್ ಇಂಡಿಯಾ, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ವಾಲ್ಯೂಮ್ ೧೫, ನಂ.೫/೭, ಫೆಬ್ರವರಿ ೧೯೮೦.

೬೮. ಥೋರಟ್ ವೈ.ಎಸ್.(೨೦೦೬). ರೂರಲ್ ಕ್ರೆಡಿಟ್ ಇನ್ ಇಂಡಿಯಾ; ಇಶ್ಯೂಸ್ ಅಂಡ್ ಕನ್ಸರ್ನ್ಸ್, ಇಂಡಿಯನ್ ಜರ್ನಲ್ ಆಫ್ ಅಗ್ರಿಕಲ್ಚರಲ್ ಎಕನಾಮಿಕ್ಸ್ ೬೧,(೧).

೬೯. ದಂತವಾಲ ಎಂ.ಎಲ್. (೧೯೯೬). ಡೈಲಮಾಸ್ ಆಫ್ ಗ್ರೋತ್– ದಿ ಇಂಡಿಯನ್ ಎಕ್ಸ್‌ಪೀರಿಯನ್ಸ್, ಸೇಜ್ ಪಬ್ಲಿಕೇಷನ್, ನ್ಯೂಡೆಲ್ಲಿ/ಲಂಡನ್.

೭೦. ದಾಂಡೇಕರ್ ವಿ.ಎಮ್. (೧೯೯೪). ದಿ ಇಂಡಿಯನ್ ಎಕನಾಮಿ ೧೯೪೭–೯೨, ವಾಲ್ಯೂಮ್ ೨, ಪಾಪುಲೇಶನ್, ಪಾವರ್ಟಿ ಅಂಡ್ ಇಮ್‌ಪ್ಲಾಯ್‌ಮೆಂಟ್, ಸೇಜ್ ಪಬ್ಲಿಕೇಶನ್, ನ್ಯೂಡೆಲ್ಲಿ.

೭೧. ದಾಂಡೇಕರ್ ವಿ.ಎಮ್. (೧೯೯೪). ದಿ ಇಂಡಿಯನ್ ಎಕನಾಮಿ ೧೯೪೭–೯೨, ವಾಲ್ಯೂಮ್ ೧, ಅಗ್ರಿಕಲ್ಚರ್, ಸೇಜ್ ಪಬ್ಲಿಕೇಶನ್, ನ್ಯೂಡೆಲ್ಲಿ.

೭೨. ದಾಂಡೇಕರ್ ವಿ.ಎಂ. (೧೯೯೩). ಲಿಮಿಟ್ಸ್ ಆಫ್ ಕ್ರೆಡಿಟ್, ನಾಟ್ ಕ್ರೆಡಿಟ್ ಲಿಮಿಟ್ಸ್ ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ವಾಲ್ಯೂಮ್ ೨೮, ನಂ.೩೯, ಸೆಪ್ಟಂಬರ್ ೨೫.

೭೩. ದಿನೇಶ್ ಚಂದ್ರ (೧೯೯೩). ರೂರಲ್ ಕ್ರೆಡಿಟ್; ರೋಲ್ ಆಫ್ ಇನ್‌ಫಾರ್ಮಲ್ ಸೆಕ್ಟರ್, ಸೆಗ್ಮೆಂಟ್ ಬುಕ್ಸ್, ನ್ಯೂಡೆಲ್ಲಿ.

೭೪. ದಿಲಿಪ್ ಎಸ್. ಠಾಕೂರ್ ಅಂಡ್ ನೀರಜ್ ಶರ್ಮ (೨೦೦೮). ಡಿಸ್ಟ್ರಿಬ್ಯೂಷನ್ ಆಫ್ ಹೌಸ್‌ಹೋಲ್ಡ್ಸ್ ಅಂಡ್ ದಿ ರಿಸಲ್ಟಾಂಟ್ ಪ್ಯಾಟರ್ನ್ ಆಫ್ ಇನ್ಕಮ್ ಅಂಡ್ ಎಮ್‌ಪ್ಲಾಯ್‌ಮೆಂಟ್ ಅಮಾಂಗ್ ದಿ ವೀಕರ್ಸ್ ಸೆಕ್ಷನ್ ಇನ ದಿ ರೂರಲ್ ಏರಿಯಾ ಆಫ್ ಹರ್‍ಯಾಣ, ಸೋಶಿಯಲ್ ಛೇಂಜ್, ಸೆಪ್ಟಂಬರ್ ೨೦೦೮, ವಾಲ್ಯೂಮ್ ೩೮, ನಂ.೩.

೭೫. ದೀಪ್ತಿಮಾ ಮೆಸ್ಸೀ, ಅಬ್ದುಲ್ ರಫೀಕ್ ಅಂಡ್ ಜಾನೆಟ್ ಶೀಲಿ (೨೦೧೦). ಬೆಗ್ಗಿಂಗ್ ಇನ್ ರೂರುಲ್ ಇಂಡಿಯಾ ಅಂಡ್ ಬಾಂಗ್ಲಾದೇಶ್, ಇಪಿಡಬ್ಲೂ, ಏಪ್ರಿಲ್ ೨೦೧೦, ವಾಲ್ಯೂಮ್ ಎಕ್ಸ್‌ಎಲ್‌ವಿ, ನಂ.೧೪.

೭೬. ದೀರಜ್ ತಿವಾರಿ (೨೦೧೧). ಔಟ್‌ಲೇ ಫಾರ್ ಫಾರ್ಮರ್ಸ್ ರಿಲೀಫ್ ಸ್ಕೀಮ್ ಅಪ್ ಬೈ ೭೦%, ದಿ ಎಕನಾಮಿಕ್ ಟೈಮ್ಸ್, ೫ ಮಾರ್ಚ್ ೨೦೧೧.

೭೭. ದೇಶಪಾಂಡೆ ಆರ್.ಎಸ್. ಮತ್ತು ಸರೋಜಾ ಅರೋರ (೨೦೧೦). ಅಗ್ರೇರಿಯನ್ ಕ್ರೈಸಿಸ್ ಅಂಡ್ ಫಾರ್ಮರ್ಸ್ ಸೂಸೈಡ್ಸ್ – ಲ್ಯಾಂಡ್ ರಿಫಾರಮ್ಸ್ ಇನ್ ಇಂಡಿಯಾ–ವಾಲೂಮ್ ೧೨, ಸೇಜ್ ಪಬ್ಲಿಕೇಷನ್, ಡಿಲ್ಲಿ, ಪು.೧–೧೩, ನೋಡಬಹುದು.

೭೮. ದೇಸಾಯಿ ಎಸ್.ಎಸ್.ಎಮ್. (೧೯೮೬). ರೂರಲ್ ಬ್ಯಾಂಕಿಂಗ್ ಇನ್ ಇಂಡಿಯಾ, ಹಿಮಾಲಯ ಪಬ್ಲಿಕೇಷನ್, ಬಾಂಬೆ.

೭೯. ದೇಸಾಯಿ ಎಸ್.ಎಸ್.ಎಂ. (೧೯೭೯). ರೂರಲ್ ಬ್ಯಾಂಕಿಂಗ್ ಇನ್ ಇಂಡಿಯಾ, ಹಿಮಾಲಯ ಪಬ್ಲಿಕೇಷನ್, ಬಾಂಬೆ.

೮೦. ನಬಾರ್ಡ್ (೨೦೧೨-೧೩). ರಾಜ್ಯ ಹಣಕಾಸು ಯೋಜನೆ, ನಬಾರ್ಡ್, ಕರ್ನಾಟಕ ರೀಜಿನಲ್ ಆಫೀಸ್, ಬೆಂಗಳೂರು.

೮೧. ನರಸಿಂಹನ್ ಎಂ. (೧೯೯೧). ರಿಪೋರ್ಟ್ ಆನ್ ದಿ ಫೈನಾನ್ಸಿಯಲ್ ಸಿಸ್ಟಮ್ ೧೯೯೧, ಸ್ಟ್ಯಾಂಡರ್ಡ್ ಬುಕ್ ಕಂಪನಿ, ನ್ಯೂಡೆಲ್ಲಿ.

೮೨. ನಾಯಕ್ ಪಿ.ಕೆ., ಸುಧಾನ್ ಕುಮಾರ್ ಚಟ್ಟೋಪಾಧ್ಯಯ ಮತ್ತು ಅರುಣ್ ವಿಷ್ಣು ಕುಮಾರ್ (೨೦೧೦). ಇನ್‌ಕ್ಲೂಸಿವ್ ಗ್ರೋತ್ ಅಂಡ್ ಇಟ್ಸ್ ರೀಜಿನಲ್ ಡೈಮೆನ್‌ಷನ್, ಆರ್‌ಬಿಐ ಅಕೇಷನಲ್ ಪೇಪರ್, ವಾಲೂಮ್.೩೧, ನಂ.೩, ಮುಂಬೈ.

೮೩. ನಾಯ್ಡು ಎಲ್.ಕೆ (೧೯೯೫). ಕಮರ್ಶಿಯಲ್ ಬ್ಯಾಂಕಿಂಗ್ ಆಫ್ಟರ್ ನ್ಯಾಷನಲೈಜೇಷನ್ ಕಾಟ್ ಇನ್ ದಿ ಕಾಂಟ್ರಡಿಕ್ಷನ್ ಆಫ್ ಸೋಶಿಯಲ್ ಬ್ಯಾಂಕಿಂಗ್ ಇನ್ ಬಿ.ಎಲ್ ಮಾಥುರ್ ಅಂಡ್ ಭಾಗೀರಥ್ ಸಿಂಗ್ (ಸಂ) ಎಕ್ಸ್‌ಪೀರಿಉನ್ಸ್ ಆಫ್ ಬ್ಯಾಂಕಿಂಗ್ ಇನ್ ರೂರಲ್ ಡವಲಪ್‌ಮೆಂಟ್, ಆರ್.ಬಿ.ಎಸ್.ಎ ಪಬ್ಲಿಷರ್ಸ್, ಜೈಪುರ.

೮೪. ನಾರಾಯಣ ಎನ್.ಎಸ್.ಎಸ್. ಮತ್ತು ಉಷಾ ವಡ್ರೆವು (೧೯೮೩). ಕರ್ನಾಟಕದ ಅಭಿವೃದ್ಧಿ ಮಾಧರಿಗಳು, ಇಂಡಿಯನ್ ಸ್ಟಾಟಿಸ್ಟಿಕಲ್ ಇನ್‌ಸ್ಟಿಟ್ಯೂಟ್, ಬೆಂಗಳೂರು.

೮೫. ನ್ಯಾಷನಲ್ ಕೌನ್ಸಿಲ್ ಅಂಡ್ ಅಪ್ಲೈಡ್ ಎಕನಾಮಿಕ್ ರೀಸರ್ಚ್ ಅಂಡ್ ವರ್ಲ್ಡ್ ಬ್ಯಾಂಕ್ (೨೦೦೩). ರೂರಲ್ ಫೈನಾನ್ಸಿಯಲ್ ಸರ್ವೆ, ಎನ್‌ಸಿಎಇಆರ್.

೮೬. ನ್ಯಾಷನಲ್ ಬ್ಯಾಂಕ್ ಫಾರ್ ಅಗ್ರಿಕಲ್ಚರ್ ಅಂಡ್ ರೂರಲ್ ಡವಲಪ್‌ಮೆಂಟ್ (೨೦೦೧). ಅನ್ ಓವರ್‌ವ್ಯೂವ್ ಆಫ್ ಕೋಅಪರೇಟಿವ್ ಕ್ರೆಡಿಟ್ ಸ್ಟ್ರಕ್ಚರ್ (ಶಾರ್ಟ್‌ಟರ್ಮ್ ಅಂಡ್ ಲಾಂಗ್‌ಟರ್ಮ್), ಮುಂಬೈ.

೮೭. ಪಟೇಲ್ ಎ.ಆರ್. (೧೯೭೫). ಕೋಅಪರೇಟಿವ್ ಕ್ರೆಡಿಟ್ ಮೌಂಟಿಂಗ್ ಓವರ್‌ಡ್ಯೂಸ್, ದಿ ಬ್ಯಾಂಕರ್ ಎಕ್ಸ್‌ಎಕ್ಸ್‌ಐ, (೧೨).

೮೮. ಪ್ರಕಾಶ್ ಭಕ್ಷಿಯವರು (೨೦೧೩). ರಿಪೋರ್ಟ್ ಆಫ್ ದಿ ಎಕ್ಸ್‌ಪರ್ಟ್ ಕಮಿಟಿ ಟು ಎಕ್ಸಮೈನ್ ತ್ರಿ ಟಯರ್ ಕೋ ಅಪರೇಟಿವ್ ಕ್ರೆಡಿಟ್ ಸ್ಟ್ರಕ್ಚರ್, ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ, ಸೆಂಟ್ರಲ್ ಆಫೀಸ್, ಮುಂಬೈ.

೮೯. ಪ್ರಣಬ್ ಬರ್ಧನ್ (೧೯೯೮). ದಿ ಪೊಲಿಟಿಕಲ್ ಎಕನಾಮಿ ಆಫ್ ಡವಲಪ್‌ಮೆಂಟ್ ಇನ್ ಇಂಡಿಯಾ, ಆಕ್ಸ್‌ಫರ್ಡ್ ಯೂನಿವರ್‌ಸಿಟಿ ಪ್ರೆಸ್ಸ್, ನ್ಯೂಡೆಲ್ಲಿ.

೯೦. ಪ್ರಿಯಾಬಸು (೨೦೦೫). ಡೈರೆಕ್ಷನ್ ಇನ್ ಡೆವಲಪ್‌ಮೆಂಟ್: ಇಂಪ್ರೂವಿಂಗ್ ಆಕ್ಸಸ್ ಟೂ ಫೈನಾನ್ಸ್ ಫಾರ್ ಇಂಡಿಯಾಸ್ ರೂರಲ್ ಪೂರ್, ವರ್ಲ್ಡ್ ಬ್ಯಾಂಕ್.

೯೧. ಪ್ಲಾನಿಂಗ್ ಕಮಿಷನ್ (೨೦೦೭). ರಿಪೋರ್ಟ್ ಆಫ್ ದಿ ಸ್ಟಿರಿಂಗ್ ಕಮಿಟಿ ಆನ್ ಅಗ್ರಿಕಲ್ಚರ್ ಅಂಡ್ ಅಲೈಡ್ ಸೆಕ್ಟರ್ ಫಾರ್ ಫಾರ್ಮುಲೇಶನ್ ಆಫ್ ದಿ ಇಲೆವಂತ್ ಫೈವ್ ಇಯರ್ ಪ್ಲಾನ್ (೨೦೦೭-೨೧೦೨). ಗೌರ್ನಮೆಂಟ್ ಆಫ್ ಇಂಡಿಯಾ.

೯೨. ಭಟ್ ಎಮ್.ಎಲ್. (೧೯೭೧). ಡೈವರ್‌ಷನ್ ಆಫ್ ಲಾಂಗ್ ಟರ್ಮ್ ಅಗ್ರಿಕಲ್ಚರಲ್ ಫೈನಾನ್ಸ್, ಎಕನಾಮಿಕ ಅಂಡ್ ಪೊಲಿಟಿಕಲ್ ವೀಕ್ಲಿ, ವಾಲ್ಯೂಮ್ ೩, ನಂ.೪೦, ಮುಂಬೈ.

೯೩. ಬೀನಾ ಅಗರ್‌ವಾಲ್ (೨೦೦೧). ರೀ ತಿಂಕಿಂಗ್ ಅಗ್ರಿಕಲ್ಚರಲ್ ಪ್ರೊಡಕ್ಷನ್ ಕಲೆಕ್ಟಿವಿಟೀಸ್, ಇಪಿಡಬ್ಲ್ಯೂ, ಫೆಬ್ರವರಿ ೨೭ ೨೦೦೧, ವಾಲ್ಯೂಮ್ ೯.

೯೪. ಬ್ರಮನ್, ಜನ್ (೧೯೯೭). ದಿ ವಿಲೇಜ್ ಇನ್ ಫೋಕಸ್ ಇನ್ ಜನ್ ಬ್ರಮನ್, ಪೀಟರ್ ಕ್ಲೂಸ್ ಅಂಡ್ ಅಶ್ವಿನಿ ಸೇಥ್ (ಸಂ) ದಿ ವಿಲೇಜ್ ಇನ್ ಏಷಿಯಾ ರಿ ವಿಸಿಟೆಡ್, ಆಕ್ಸ್‌ಫರ್ಡ್ ಯೂನಿವರ್‌ಸಿಟಿ ಪ್ರೆಸ್ಸ್, ನ್ಯೂಡೆಲ್ಲಿ.

೯೫. ಬರ್ಬರಾ ಹ್ಯಾರಿಸ್ ವೈಟ್ (೨೦೦೪). ಇಂಡಿಯಾ ವರ್ಕಿಂಗ್; ಎಸ್ಸೆ ಆನ್ ಸೊಸೈಟಿ ಅಂಡ್ ಎಕನಾಮಿ, ಕೇಂಬ್ರಿಡ್ಜ್ ಯೂನಿವರ್‌ಸಿಟಿ ಪ್ರೆಸ್ಸ್, ನ್ಯಾಡೆಲ್ಲಿ, ಫೌಂಡೇಶನ್ ಬುಕ್ಸ್.

೯೬. ಮಂಡಲ್ ಜಿ.ಸಿ. (೨೦೦೯). ಸೋಶಿಯಲ್ ಇಂಪ್ಯಾಕ್ಟ್ ಆಫ್ ಬ್ಯಾಂಕಿಂಗ್, ಟಿಕ್ನಾಲಜಿ ಅಂಡ್ ಡವಲಪ್‌ಮೆಂಡ್ ಆನ್ ವಿಲೇಜ್ ಇಂಡಿಯಾ, ರಜತ್ ಪಬ್ಲಿಕೇಷನ್, ನ್ಯೂಡೆಲ್ಲಿ.

೯೭. ಮಹದೇವ್ ಪ್ರಕಾಶ್ (೨೦೧೨). ಇಷ್ಟು ಕಾಲ ಬಿತ್ತಿದರೂ; ಹಲವು ರೈತ ಪರ ಯೋಜನೆಗಳು ರೂಪುಗೊಂಡರೂ ಆತ್ಮಹತ್ಯೆ ನಿಲ್ಲಿಸಲು ಸಾದ್ಯವಾಗಿಲ್ಲವೇಕೆ? ವಿಜಯ ಕರ್ನಾಟಕ, ೧೧ ಅಕ್ಟೋಬರ್ ೨೦೧೨.

೯೮. ಮ್ಯಾನ್‌ಫ್ರೆಡ್ ಜೆಲ್ಲರ್, ಗೆರ್ಟರಡ್ ಸ್ನೈಡರ್, ಯಾಕಿಮ್ ವೋನ್ ಬ್ರೌನ್ ಅಂಡ್ ಫ್ರಾಜ್ ಹೈಡಸ್ (೧೯೯೭). ಫುಡ್ ಪಾಲಿಸಿ ರಿವ್ಯೂವ್-ರೂರಲ್ ಫೈನಾನ್ಸ್ ಫಾರ್ ಫುಡ್ ಸೆಕ್ಯುರಿಟಿ ಫಾರ್ ದಿ ಪೂರ್- ಇಮ್‌ಪ್ಲಿಕೇಶನ್ ಫಾರ್ ರೀಸರ್ಚ್ ಅಂಡ್ ಪಾಲಿಸಿ, ಇಂಡಿಯನ್ ಇನ್ಸ್ಟಿಟ್ಯೂಟ್ ಫಾರ್ ಸೋಶಿಯೋ ಎಕನಾಮಿಕ್ ಛೇಂಜ್ (ಐಸೆಕ್), ಬೆಂಗಳೂರು.

೯೯. ಮಾಲ್ಕಮ್ ಹಾರ್ಪರ್ (೨೦೦೨). ಸೆಫ್ಲ್ ಹೆಲ್ಪ್ ಗ್ರೂಪ್ಸ್ ಅಂಡ್ ಗ್ರಾಮೀಣ್ ಬ್ಯಾಂಕ್ ಗ್ರೂಪ್ಸ್; ವಾಟ್ ಆರ್ ದಿ ಡಿಫರೆನ್ಸಸ್ ಇಲ್ಲಿ ಥಾಮಸ್ ಫಿಷರ್ ಅಂಡ್ ಎಮ್ ಎಸ್ ಶ್ರೀರಾಮ್ (ಸಂ) ಬಿಹಾಂಡ್ ಮೈಕ್ರೊ ಕ್ರೆಡಿಟ್, ವಿಸ್ತಾರ್ ಪಬ್ಲಿಕೇಷನ್, ನ್ಯೂ ಡೆಲ್ಲಿ.

೧೦೦. ಮಿನಿಸ್ಟ್ರೀ ಆಪ್ ಅಗ್ರಿಕಲ್ಚರ್ (೨೦೦೯), ರಿಪೋರ್ಟ ಆಫ್ ದಿ ಹೈ ಪವರ್ಡ್ ಕಮಿಟಿ ಆನ್ ಕೋಆಪರೇಟೀವ್ಸ್, ಗೌರ್ನಮೆಂಟ್ ಆಫ್ ಇಂಡಿಯಾ.

೧೦೧. ಮಿನಿಸ್ತ್ರಿ ಆಫ್ ಪಂಚಾಯತ್ ರಾಜ್ (೨೦೦೯). ಎ ನೋಟ್ ಆನ್ ದಿ ಬ್ಯಾಕ್ ವರ್ಡ್ ರೀಜನ್ಸ್ ಗ್ರಾಂಟ್ ಫಂಡ್ ಫ್ರೋಗ್ರಾಮ್, ಗೌರ್ನಮೆಂಟ್ ಆಫ್ ಇಂಡಿಯಾ.

೧೦೨. ಮಿನಿಸ್ತ್ರಿ ಆಫ್ ಪಂಚಾಯತ್ ರಾಜ್ (೨೦೦೯). ಎ ನೋಟ್ ಆನ್ ದಿ ಬ್ಯಾಕ್ ವರ್ಡ್ ರೀಜನ್ಸ್ ಗ್ರಾಂಟ್ ಫಂಡ್ ಫ್ರೋಗ್ರಾಮ್, ಗೌರ್ನಮೆಂಟ್ ಆಫ್ ಇಂಡಿಯಾ.

೧೦೩. ಮೀನಾಕ್ಷಿ ರಾಜೀವ್, ಬಿ.ಪಿ. ವಾಣಿ ಮತ್ತು ಭಟ್ಟಾಚಾರ್ಜಿ (೨೦೧೧). ಕ್ರೆಡಿಬಿಲಿಟಿ ಆಫ್ ಈಕ್ವಲ್ ಆಕ್ಸೆಸ್ ಟು ಕ್ರೆಡಿಟ್; ಡಸ್ಸ್ ಜೆಂಡರ್ ಮ್ಯಾಟರ್?, ವಾಲ್ಯೂಮ್, ಎಕ್ಸ್ಎಲ್ವಿಐ, ನಂ ೩೩, ಆಗಸ್ಟ್ ೧೩ ೨೦೧೧, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ.

೧೦೪. ಮೀನಾಕ್ಷಿ ರಾಜೀವ್ ಅಂಡ್ ಬಿ.ಬಿ ವಾಣಿ (೨೦೧೨). ಫಾರ್ಮ್ ಸೆಕ್ಟರ್ ಇನ್ ಕರ್ನಾಟಕ; ಫಾರ್ಮರ್ಸ್ ಇನ್‌ಡೆಟ್‌ನೆಸ್ ಅಂಡ್ ರಿಸ್ಕ್ ಮ್ಯಾನೆಜ್‌ಮೆಂಟ್; ಅನ್ ಅಸೆಸ್‌ಮೆಂಟ್ ಆಫ್ ದಿ ಚಾಲೆಂಜಸ್ ಟು ದಿ ಸ್ಟೇಟ್, ಸೆಪ್ಟಂಬರ್ ೨೦೧೨, ಇಂಡಿಯನ್ ಇಸ್ಟಿಟ್ಯೂಟ್ ಫಾರ್ ಸೋಶಿಯೋ ಎಕನಾಮಿಕ್ ಛೇಂಜ್ (ಐಸೆಕ್), ಬೆಂಗಳೂರು.

೧೦೫. ಮೈಕ್ರೋ, ಸ್ಮಾಲ್ ಅಂಡ್ ಮೀಡಿಯಮ್ ಎಂಟರ್‌ಪ್ರೈಸಸ್ (೨೦೧೧). ಮಿನಿಸ್ತ್ರಿ ಆಫ್ ಎಮ್‌ಎಸ್‌ಎಮ್‌ಇ, ಗೌರ್ನಮೆಂಟ್ ಆಫ್ ಇಂಡಿಯಾ.

೧೦೬. ಮೈತ್ರೇಯಿ ಕೃಷ್ಣರಾಜನ್, ಶ್ರೀ ಎಕೆ. ಅಗವಾಲ್ ಅಂಡ್ ಡಾ. ಕೆ.ಎಸ್.ಪಿ ರಾವ್ (೨೦೦೭). ರಿಪೋರ್ಟ್ ಆಫ್ ಸಬ್ ಗ್ರೂಪ್ ಆನ್ ಜಂಡರ್ ಅಂಡ್ ಅಗ್ರಿಕಲ್ಚರ್, ಪ್ಲಾನಿಂಗ್ ಕಮಿಷನ್, ಗೌರ್ನಮೆಂಟ್ ಆಫ್ ಇಂಡಿಯಾ.

೧೦೭. ಮೈತ್ರೇಯಿ ಕೃಷ್ಣರಾಜನ್, ಶ್ರೀ ಅಗರ್‌ವಾಲ್ ಏ.ಕೆ. ಮತ್ತು ಡಾ. ಕೆ ಸ್ ಸಿ ರಾವ್ (೨೦೦೭). “ರಿಪೋರ್ಟ್ ಆನ್ ಸಬ್‌ಗ್ರೂಪ್ ಆನ್ ಜಂಡರ್ ಅಂಡ್ ಅಗ್ರಿಕಲ್ಚರ್” ಪ್ಲಾನಿಂಗ್ ಕಮಿಷನ್, ಗೌರ್ನಮೆಂಟ್ ಅಫ್ ಇಂಡಿಯಾ.

೧೦೮. ಮೋತಿಲಾಲ್ ಮಹಾಮಲಿಕ್ ಅಂಡ್ ಗಗನ್ ಬಿಹಾರಿ ಸಾಹು (೨೦೧೧). ಐಡೆಂಟಿಫಿಕೇಷನ್ ಆಫ್ ದಿ ಪೂರ್; ಎರರ್ಸ್ ಆಫ್ ಎಕ್ಸ್‌ಕ್ಲೂಷನ್ ಅಂಡ್ ಇನ್‌ಕ್ಲೂಷನ್, ಎಕಾನಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಮಾರ್ಚ್ ೪, ಎಕ್ಸ್ಎಲ್ವಿಐ ನಂ.೯.

೧೦೯. ರಂಗರಾಜನ್ ಸಿ. (೧೯೯೮). ಅಗ್ರೀಕಲ್ಚರ್ ಇನ್ ಚೇಂಜಿಂಗ್ ಎನ್‌ವಿರಾನ್‌ಮೆಂಟ್: ಎಕನಾಮಿಕ್ ಡವಲಪ್‌ಮೆಂಟ್ ಇನ ಇಪಿಐ, ಮಂತ್ಲಿ ಅಪ್‌ಡೇಟ್.

೧೧೦. ರಂಗಸ್ವಾಮಿ ಎಸ್. ಮತ್ತು ಪಿ.ಕೆ. ತ್ರಿಪಾಟಿ (೨೦೧೩). ಸ್ಟ್ರಕ್ಚರಲ್ ಛೇಂಜ್ ಇನ್ ಕರ್ನಾಟಕಾಸ್ ಎಕನಾಮಿ, ವರ್ಕಿಂಗ್ ಪೇಪರ್ ಸೀರಿಸ್ ನಂ ೨, ಯೂಜಿಸಿ ಸೆಂಟರ್ ಫಾರ್ ದಿ ಸ್ಟಡಿ ಆಫ್, ಸೋಸಿಯಲ್ ಎಕ್ಸ್‌ಕ್ಲೂಷನ್ ಅಂಡ್ ಇನ್‌ಕ್ಲೂಸಿವ್ ಪಾಲಿಸಿ, ಬೆಂಗಳೂರು ಯೂನಿವರ್‌ಸಿಟಿ, ಬೆಂಗಳೂರು.

೧೧೧. ರಸೂರ್ ಕೆ.ಎ., ಚನ್ನಬಸವನಗೌಡ, ಅಂಡ್ ಬೂಕ್ಕಲೆ ನಾಗೇಂದ್ರಪ್ಪ (೨೦೧೧). ಆನ್ ಎಕನಾಮಿಕ್ ಅನಾಲಿಸಿಸ್ ಆಫ್ ಅಗ್ರಿಕಲ್ಚರಲ್ ಲೇಬರ್ ಇನ್ ಹೈದರಾಬಾದ್ ಕರ್ನಾಟಕ ಪ್ರಾಜೆಕ್ಟ್ ಇಲ್ಲಿ ಕೆ.ಕೆ.ಬಾಗ್ಚಿ ೨೦೧೧. ಅಗ್ರೇರಿಯನ್ ಕೈಸಿಸ್, ಪಾರ್ಮರ್ಸ್ ಸೂಸೈಡ್ಸ್ ಅಂಡ್ ಲೈವ್‌ಲಿಹುಡ್ ಸೆಕುರಿಟಿ ಆಫ್ ರೂರಲ್ ಲೇಬರ್ ಇನ್ ಇಂಡಿಯಾ, ಅಭಿಜಿತ್ ಪಬ್ಲಿಕೇಶನ್ ಡೆಲ್ಲಿ.

೧೧೨. ರಾಕೇಶ್ ಮೋಹನ್ (೨೦೦೪). ಆಗ್ರಿಕಲ್ಚರ್ ಕ್ರೆಡಿಟ್ ಇನ್ ಇಂಡಿಯಾ; ಸ್ಟೇಟಸ್, ಇಷ್ಯೂಸ್ ಅಂಡ್ ಫ್ಯೂಚರ್ ಅಜೆಂಡಾ, ರಿಸರ್ವಬ್ಯಾಂಕ್ ಆಪ್ ಇಂಡಿಯಾ ಬುಲೆಟಿನ್, ನವಂಬರ್ ೨೦೦೪.

೧೧೩. ರಾಕೇಶ್ ಮೋಹನ್ (೨೦೦೪). ಅಗ್ರಿಕಲ್ಚರ್ ಕ್ರೆಡಿಟ್ ಇನ್ ಇಂಡಿಯಾ; ಸ್ಟೇಟಸ್, ಇಷ್ಯೂಸ್ ಅಂಡ್ ಫ್ಯೂಚರ್ ಅಜೆಂಡಾ, ರಿಸರ್ವಬ್ಯಾಂಕ್ ಆಪ್ ಇಂಡಿಯಾ ಬುಲೆಟಿನ್, ನವಂಬರ್ ೨೦೦೪.

೧೧೪. ರಾಜನ್ ಪಾಂಡೆ (೨೦೦೯). ಆನ್ ಉಮನ್ ಸರ್‌ವೈವಿಂಗ್ ಫಾರ್ಮರ್ಸ್ ಸೂಸೈಡ್ಸ್ ಇನ್ ಪಂಜಾಬ್, ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ೯ ಮೇ, ೨೦೦೯, ವ್ಯಾಲೂಮ್, ಎಕ್ಸ್‌ಎಲ್‌ಐವಿ, ನಂ.೧೯.

೧೧೫. ರಾಜಶೇಖರ್ ಡಿ. (೧೯೯೮). ಪ್ರೊ. ಪಾರ್ಥಸಾರಥಿಸ್ ರೈಟಿಂಗ್ಸ್ ಆನ್ ಇಂಡಿಯನ್ ರೂರುಲ್ ಎಕನಾಮಿ ಇನ್ ಟ್ರಾನ್ಸಿಷನ್, ಪ್ರಿಂಟ್ ವೆಲ್ ಪಬ್ಲಿಷರ್ಸ್, ಜೈಪುರ್.

೧೧೬. ರಾಜಶೇಖರ್ ಡಿ. (೧೯೯೧). ಇನ್ಸ್‌ಟಿಟೂಶನಲ್ ಕ್ರೆಡಿಟ್; ಅನ್ ಅನಾಲಿಸಿಸ್, ಎಕಾನಿಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಫೆಬ್ರವರಿ, ಜುಲೈ ೨೭, ೧೯೯೧.

೧೧೭. ರಾಜಶೇಖರ್ ಡಿ. (೧೯೯೧). ಇನ್‌ಸ್ಟಿಟೂಷನಲ್ ಕ್ರೆಡಿಟ್ ಅಂಡ್ ಓವರ್‌ಡ್ಯೂ: ಬಾರೋಬರ್ಸ್ ಆಂಗಲ್, ಎಕನಾಮಿಕ ಅಂಡ್ ಪೊಲಿಟಿಕಲ್ ವೀಕ್ಲಿ, ಜುಲೈ ೨೭, ೧೯೯೧.

೧೧೮. ರಾಮಣ್ಣ ಹವಳೆ (೨೦೧೦). ಹೈದರಾಬಾದ್ ಸಂಸ್ಥಾನ ವಿಮೋಚನೆಯಲ್ಲಿ ರಾಯಚೂರು ಜಿಲ್ಲೆಯ ಹೋರಾಟ. ಎನ್‌ಜಿವೊ ಕಾಲೋನಿ, ರಾಯಚೂರು.

೧೧೯. ರಾಯಚೂರು ಜಿಲ್ಲೆ ವಾರ್ಷಿಕ ಸಾಲ ಯೋಜನೆ (೨೦೧೩-೧೪). ಲೀಡ್‌ಬ್ಯಾಂಕ್ ಆಫೀಸ್, ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದ್, ರಾಯಚೂರು.

೧೨೦. ರಾಯಚೂರು ಜಿಲ್ಲೆ ವಾರ್ಷಿಕ ಸಾಲ ಯೋಜನೆ (೨೦೧೩-೧೪). ಲೀಡ್‌ಬ್ಯಾಂಕ್ ಆಫೀಸ್, ಸ್ಟೇಟ್ ಬ್ಯಾಂಕ್ ಆಫ್ ಹೈದ್ರಾಬಾದ್, ರಾಯಚೂರು.

೧೨೧. ರಿಸರ್ವ್‌ಬ್ಯಾಂಕ್ ಆಫ್ ಇಂಡಿಯಾ (೨೦೦೯-೧೦). ಆನ್ಯುಯಲ್ ರಿಪೋರ್ಟ್, ಮುಂಬೈ.

೧೨೨. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ (೧೯೯೦). ರಿಪೋರ್ಟ್ ಆಫ್ ದಿ ಅಗ್ರಿಕಲ್ಚರಲ್ ಕ್ರೆಡಿಟ್ ರಿವ್ಯೂವ್ ಕಮಿಟಿ, ಬಾಂಬೆ.

೧೨೩. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ (೧೯೯೯–೨೦೦೦). ಆನ್ಯುಯಲ್ ರಿಪೋರ್ಟ್, ಮುಂಬೈ.

೧೨೪. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ (೧೯೯೭). ಎ ರಿವ್ಯೂವ್ ಆಫ್ ಅಗ್ರಿಕಲ್ಚರಲ್ ಕ್ರೆಡಿಟ್ ಸಿಸ್ಟಮ್ ಇನ್ ಇಂಡಿಯಾ; ರಿಪೋರ್ಟ್ ಆಫ್ ಅಗ್ರಿಕಲ್ಚರಲ್ ಕ್ರೆಡಿಟ್ ಕಮಿಟಿ ಹೆಡೆಡ್ ಬೈ ಪ್ರೊ. ಎ.ಮ್.ಕುಸ್ರೋ, ಆರ್‌ಬಿಐ, ಬಾಂಬೆ.

೧೨೫. ರುದ್ರ ಪ್ರತಾಪ್ ಸಿಂಗ್ (೧೯೯೩). ನಬಾರ್ಡ್–ಆರ್ಗನೈಷೇಶನ್, ಮ್ಯಾನೇಜ್‌ಮೆಂಟ್ ಅಂಡ್ ರೋಲ್, ದೀಪ್ ಪಬ್ಲಿಕೇಷನ್, ನ್ಯೂ ಡೆಲ್ಲಿ.

೧೨೬. ರೆಡ್ಡಿ ವೈ.ವಿ. (೨೦೦೪). ರೂರಲ್ ಕ್ರೆಡಿಟ್; ಸ್ಟೇಟಸ್ ಅಂಡ್ ಅಜೆಂಡಾ, ದಿ ಜರ್ನಲ್ ಆಫ್ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಬ್ಯಾಂಕಿಂಗ್ ಅಂಡ್ ಫೈನಾನ್ಸ್ ವಾಲ್ಯೂಮ್ ೭೫, ನಂ.೪.

೧೨೭. ರೆಡ್ಡಿ ಸಿ.ಆರ್. (೧೯೮೨). ರೂರಲ್ ಕ್ರೆಡಿಟ್, ಕುರುಕ್ಷೇತ್ರ ವಾಲ್ಯೂಮ್ ಎಕ್ಸ್‌ಎಕ್ಸ್‌ವಿಐಐಐ, ನ್ಯೂಡೆಲ್ಲಿ, ಪು ಪು.೨೩–೨೬

೧೨೮. ರೈತರ ಆತ್ಮಹತ್ಯೆಗೆ ಬೇರೆ ಬೇರೆ ಕಾರಣ ಮತ್ತು ಪರಿಣಾಮಗಳನ್ನು ಮುಜಾಫರ್ ಅಸಾಧಿ ವಿಶ್ಲೇಷಿಸಿದ್ದಾರೆ. ಭಾರತ ಮತ್ತು ಕರ್ನಾಟಕದ ರೈತರ ಆತ್ಮಹತ್ಯೆಯ ಘಟನೆಗಳನ್ನು ಉಲ್ಲೇಖಿಸಿದ್ದಾರೆ. ಕರ್ನಾಟಕದಲ್ಲಿ ಐಡೆಂಟಿಟಿ ರಾಜಕೀಯ, ರೈತ ಹೋರಾಟ ಹಾಗೂ ಸಾಮಾಜಿಕ ಚಳುವಳಿ, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೦೯.

೧೨೯. ರೋಹಿನಿ ಪಾಂಡೆ (೧೯೯೮). ರೂರಲ್ ಕ್ರೆಡಿಟ್, ನ್ಯಾಷನಲ್ ಸ್ಯಾಂಪಲ್ ಸರ್ವೆ.

೧೩೦. ಲೀಡ್ ಬ್ಯಾಂಕ್ (೨೦೧೩). ರಾಯಚೂರು ಜಿಲ್ಲೆಯ ವಾರ್ಷಿಕ ಸಾಲ ಯೋಜನೆ, ಲೀಡ್ ಬ್ಯಾಂಕ್ ಆಫೀಸ್, ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ ರಾಯಚೂರು.

೧೩೧. ಲೋಕೇಶ ಕಾಯರ್ಗ ಮತ್ತು ಕೇಶವ ಪ್ರಸಾದ್ ಬಿ ಕಿದೂರು (೨೦೧೩). ಸಾಲ ಬೆಳೆಯದಿರಲು ಬೆಳೆ ಸಾಲ ಸೌಲಭ್ಯ., ವಿಜಯ ಕರ್ನಾಟಕ, ಭಾನುವಾರ, ೭ ಜುಲೈ ೨೦೧೩, ಬೆಂಗಳೂರು.

೧೩೨. ವಾನ್ ಪಿಷ್ಕೇ ಜೆ.ಡಿ., ಡಬ್ಲ್ಯೂ ಆಡಮ್ ಅಂಡ್ ಗೋರ್ಡನ್ ಡೋನಲ್ಡ್ (೧೯೮೨). ರೂರಲ್ ಫೈನಾನ್ಸಿಯಲ್ ಮಾರ್ಕೆಟ್ಸ್ ಇನ್ ಡವಲಪಿಂಗ್ ಕಂಟ್ರೀಸ್; ದಿ ಯೂಸ್ ಅಂಡ್ ಅಬ್ಯೂಸ್, ದಿ ಎಕನಾಮಿಕ್ ಡವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಆಫ್ ದಿ ವರ್ಲ್ಡ್ ಬ್ಯಾಂಕ್, ದಿ ಜಾನ್ ಹಾಕಿನ್ಸ್ ಯೂನಿವರ್‌ಸಿಟಿ ಪ್ರೆಸ್.

೧೩೩. ವಾರನ್ ಎಫ್ ಲೀ (೧೯೮೨). ದಿ ರೋಲ್ ಆಫ್ ಫೈನಾನ್ಸಿಯಲ್ ಇನಟರ್‌ಮೀಡಿಯೇಶನ್ ಇನ್ ದಿ ಆಕ್ಟಿವಿಟೀಸ್ ಆಫ್ ರೂರಲ್ ಫರ್ಮ್ಸ್ ಅಂಡ್ ಹೌಸ್‌ಹೋಲ್ಡ್ಸ್ ಇನ್ ವಾನ್ ಪಿಷ್ಕೇ ಜೆ.ಡಿ ಅಂಡ್ ಡಬ್ಲೂ ಆಡಮ್ (ಸಂ) ರೂರಲ್ ಫೈನಾನ್ಸಿಯಲ್ ಮಾರ್ಕೆಟ್ಸ್ ಇನ್ ಡವಲಪಿಂಗ್ ಕಂಟ್ರೀಸ್; ದಿ ಯೂಸ್ ಅಂಡ್ ಅಬ್ಯೂಸ್, ದಿ ಎಕನಾಮಿಕ್ ಡವಲಪ್‌ಮೆಂಟ್ ಇನ್‌ಸ್ಟಿಟ್ಯೂಟ್ ಆಫ್ ದಿ ವರ್ಲ್ಡ್ ಬ್ಯಾಂಕ್, ದಿ ಜಾನ್ ಹಾಕಿನ್ಸ್ ಯೂನಿವರ್‌ಸಿಟಿ ಪ್ರೆಸ್.

೧೩೪. ವ್ಯಾಸ್ ವಿ.ಎಸ್. (೨೦೦೪). ರಿಪೋರ್ಟ್ ಆಫ್ ದಿ ಅಡ್‌ವೈಸರಿ ಕಮಿಟಿ ಆನ್ ಫ್ಲೋ ಆಫ್ ಕ್ರೆಡಿಟ್ ಅಂಡ್ ರಿಲೇಟೆಡ್ ಆಕ್ಟಿವಿಟಿ ಫ್ರಮ್ ದಿ ಬ್ಯಾಂಕಿಂಗ್ ಸಿಸ್ಟಮ್, ಸಬ್‌ಮಿಟೆಡ್ ಟು ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ, ಮುಂಬೈ.

೧೩೫. ವಾರ್ಷಿಕ ವರದಿ (೨೦೧೨-೧೩). ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು, ರಾಯಚೂರು ಜಿಲ್ಲೆ.

೧೩೬. ವಾರ್ಷಿಕ ವರದಿ (೨೦೧೨-೧೩). ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು, ಸಿಂಧನೂರು ತಾಲ್ಲೂಕು, ರಾಯಚೂರು ಜಿಲ್ಲೆ.

೧೩೭. ವಾಸವಿ ಎ.ಆರ್. (೧೯೯೯). ಬೀದರ್ ಡಿಸ್ಟ್ರೆಸ್ ಅಂಡ್ ಫಾರ್ಮರ್ಸ್ ಸೂಸೈಡ್ಸ್; ಎಕನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ, ಅಕ್ಟೋಬರ್, ೧೯೯೯.

೧೩೮. ವಿಜಯ ಕರ್ನಾಟಕ (೨೦೧೪). ದಿನೇಶ್ ಎಮ್.ಆರ್. ಕೊಟ್ಟವ ಕೋಡಂಗಿ!, ವಿಜಯ ಕರ್ನಾಟಕ, ಸೋಮವಾರ, ದಿನಾಂಕ;೦೮ ಡಿಸೆಂಬರ್ ೨೦೧೪, ಬೆಂಗಳೂರು.

೧೩೯. ವೀರಶೇಖರಪ್ಪ (೧೯೯೭). ಇನ್‌ಸ್ಟಿಟ್ಯೂಷನಲ್ ಫೈನಾನ್ಸ್ ಫಾರ್ ರೂರಲ್ ಡವಲಪ್‌ಮೆಂಟ್, ರಾವತ್ ಪಬ್ಲಿಕೇಷನ್, ಜೈಪುರ್ ಅಂಡ್ ನ್ಯೂಡೆಲ್ಲಿ.

೧೪೦. ವೀರಶೇಖರಪ್ಪ (೧೯೯೪). ಡೆಟರ್‌ಮಿನ್ಯಾನ್ಟ್ಸ್ ಆಫ್ ಇನ್‌ಸ್ಟಿಟೂಷನಲ್ ಕ್ರೆಡಿಟ್ ಫ್ಲೋ ಟು ಅಗ್ರಿಕಲ್ಚರ್; ಇನಟರ್ ಡಿಸ್ಟ್ರಿಕ್ಟ್ ಅನಾಲಿಸಿಸ್, ಕರ್ನಾಟಕ, ಜರ್ನಲ್ ಆಫ್‌ರೂರಲ್ ಡವಲಪ್‌ಮೆಂಟ್, ೩(೩).

೧೪೧. ಶಾಕುಂತಲಾ ದೇವಿ (೧೯೯೬). ರೂರಲ್ ಕ್ರೆಡಟ್ ಅಂಡ್ ಅಗ್ರಿಕಲ್ಚರಲ್ ಡವಲಪ್‌ಮೆಂಟ್, ಸರೂಪ್ ಅಂಡ್ ಸನ್ಸ್ ಪಬ್ಲಿಷರ್ಸ್, ನ್ಯೂಡೆಲ್ಲಿ.

೧೪೨. ಶರ್ಮಾ, ಅನಿಲ್ (೨೦೦೫). ದಿ ಕಿಸಾನ್ ಕ್ರೆಡಿಟ್ ಕಾರ್ಡ್ ಸ್ಕೀಮ್; ಇಮ್‌ಪ್ಯಾಕ್ಟ್, ವೀಕ್‌ನೆಸಸ್ ಅಂಡ್ ಫ್ಯೂಚರ್ ರಿಫಾರ್ಮ್ಸ್, ನ್ಯಾಷನಲ್ ಕೌನ್ಸಿಲ್ ಆಫ್ ಅಪ್ಲೈಡ್ ಇಕನಾಮಿಕ್ ರೀಸರ್ಚ್, ನ್ಯೂಡೆಲ್ಲಿ.

೧೪೩. ಶೈಲೇಂದ್ರ ಹೆಚ್.ಎಸ್. (೧೯೯೨). ಇಂಪ್ಯಾಕ್ಟ್ ಆಫ್ ಇನ್‌ಸ್ಟೂಷನಲ್ ಕ್ರಡಿಟ್ ಆನ್ ರೂರಲ್ ಪೂರ್ ವಿತ್ ಸ್ಪೆಷಲ್ ರೆಪರೆನ್ಸ್ ಟೂ ದಿ ಪರ್‌ಫಾರ್‌ಮೆನ್ಸ್ ಆಫ್ ಎ ರೀಜಿನಲ್ ರೂರಲ್ ಬ್ಯಾಂಕ್ ಇನ್ ಕರ್ನಾಟಕ, ಇಂಡಿಯನ್ ಇಸ್ಟಿಟ್ಯೂಟ್ ಫಾರ್ ಸೋಶಿಯೋ ಎಕನಾಮಿಕ್ ಛೇಂಜ್ (ಐಸೆಕ್), ಬೆಂಗಳೂರು.

೧೪೪. ಶ್ರೀರಾಮ್ ಎಂ.ಎಸ್.(೨೦೧೦). ಮೈಕ್ರೋ ಪೈನಾನ್ಸ್; ಎ ಫೇರ್‌ಲೀ ಟೇಲ್ ಟರ್ನ್ಸ್ ಇನ್‌ಟೂ ಎ ನೈಟ್‌ಮೇರ್, ಇಪಿಡಬ್ಲೂ ಅಕ್ಟೋಬರ್ ೨೩ ೨೦೧೦, ವಾಲ್ಯೂಮ್ ೪೩.

೧೪೫. ಸಂಕ್ಷಿಪ್ತ ವಾರ್ಷಿಕ ವರದಿ (೨೦೧೩). ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು-ಕೆಎಸ್‌ಸಿಅ&ಆರ್‌ಡಿ ಸಂಸ್ಥೆ, ಬೆಂಗಳೂರು.

೧೪೬. ಸಂಜಯ್ ಸಿಂಗ್ ರಾಥೋರ್ (೨೦೦೪). ರೂರಲ್ ಬ್ಯಾಂಕಿಂಗ್ ಇನ್ ಇಂಡಿಯಾ, ನ್ಯೂ ರಾಯಲ್ ಬುಕ್ ಕಂಪನಿ, ಲಕ್ನೊ.

೧೪೭. ಸಿಂಗ್ ಎಸ್.ಕೆ. (೧೯೮೮). ರೂರಲ್ ಕ್ರೆಡಿಟ್ ಅಂಡ್ ಕೋಅಪರೇಟಿವ್ಸ್ ಇನ್ ಇಂಡಿಯಾ, ನ್ಯೂಡೆಲ್ಲಿ, ಸುನೆಜಾ ಪಬ್ಲಿಕೇಷನ್.

೧೪೮. ಸಿಂಗ್ ಜೆ.ಪಿ. (೧೯೮೬). ರೋಲ್ ಆಫ್ ಇನ್‌ಸ್ಟಿಟೂಷನಲ್ ಫೈನಾನ್ಸ್ ಇನ್ ಅಗ್ರಿಕಲ್ಚರ್, ಆಶಿಸ್ ಪಬ್ಲೀಷಿಂಗ್ ಹೌಸ್, ಜೈಪುರ, ೧೯೮೬.

೧೪೯. ಸಿಕ್ಕ ಬಿ.ವಿ., ವೈದ್ಯ ಸಿ.ಎಸ್., ಅಂಡ್ ಸ್ವರೂಪ್ (೧೯೮೮). ಪ್ಯಾಟರ್ನ್ ಅಂಡ್ ಕಾಸ್ಟ್ ಆಫ್ ಕ್ರೆಡಿಟ್ ಫ್ರಮ್ ಕಮರ್ಷಿಯಲ್ ಬ್ಯಾಂಕ್ಸ್ ಇನ್ ಹಿಮಾಚಲ್ ಪ್ರದೇಶ್, ಆಗ್ರೋ ಎಕನಾಮಿಕ್ ರೀಸರ್ಚ್ ಸೆಂಟರ್, ಹಿಮಾಚಲ್ ಪ್ರದೇಶ್ ಯೂನಿವರ್‌ಸಿಟಿ.

೧೫೦. ಸಿಬ್ಬಂದಿ ತರಬೇತಿ ಕೈಪಿಡಿ (೨೦೧೨). ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು, ಬೆಂಗಳೂರು.

೧೫೧. ಸೆನ್ಸಸ್ (೨೦೧೧). ಪ್ರೈಮರಿ ಸೆನ್ಸಸ್ ಅಬ್‌ಸ್ಟ್ರಾಕ್ಸ್, ಕರ್ನಾಟಕ, ಸೆನ್ಸಸ್ ಆಫ್ ಇಂಡಿಯಾ ೨೦೧೧.

೧೫೨. ಸ್ವಾಮಿ ವಿಘ್ನೇಶ್ವರ್ ಡಿ.ಮ್ (೨೦೦೫). ರೂರಲ್ ಬ್ಯಾಂಕಿಂಗ್ ಚಾಲೆಂಜಸ್ ಅಂಡ್ ಅಪ್ರೋಚಸ್, ಸೆಂಟರ್ ಫಾರ್ ಹ್ಯೂಮನ್ ಡವಲಪ್‌ಮೆಂಟ್, ಸ್ಟಡೀಸ್, ಮೈಸೂರು.

೧೫೩. ಸ್ವಾಮಿ ವಿಘ್ನೇಶ್ವರ್ (೨೦೦೫). ರೂರಲ್ ಬ್ಯಾಂಕಿಂಗ್; ಚಾಲೆಂಜಸ್ ಅಂಡ್ ಅಪ್ರೋಚಸ್, ಸೆಂಟರ್ ಫಾರ್ ಹ್ಯೂಮನ್ ಡವಲಪ್‌ಮೆಂಟ್ ಸ್ಟಡೀಸ್, ಮೈಸೂರು.

೧೫೪. ಹನ್ಸ್‌ರಾ ಬಿ.ಎಸ್. ಮತ್ತು ಎ.ಎನ್ ಶುಕ್ಲಾ (೧೯೯೧). ಸೋಶಿಯಲ್, ಇಕನಾಮಿಕ್ ಅಂಡ್ ಪೊಲಿಟಿಕಲ್ ಇಂಪ್ಲಿಕೇಷನ್ ಆಫ್ ಗ್ರೀನ್ ರೆವಲ್ಯೂಶನ್ ಇನ್ ಇಂಡಿಯಾ, ಕ್ಲಾಸಿಕ್ ಪಬ್ಲಿಕೇಷನ್, ನ್ಯೂಡೆಲ್ಲಿ.



ಸಿಂಧನೂರು ತಾಲ್ಲೂಕಿನ ರಾಗಲಪರ್ವಿ ಗ್ರಾಮದ ಪ್ರಾಥಮಿಕ ಸಹಕಾರ ಸಂಸ್ಥೆಯ
ಸದಸ್ಯರೊಂದಿಗೆ ಗುಂಪು ಚರ್ಚೆ



ದೇವದುರ್ಗ ತಾಲ್ಲೂಕಿನ ಜಾಲಹಳ್ಳಿ ಗ್ರಾಮದ ಪ್ರಾಥಮಿಕ ಸಹಕಾರ ಸಂಸ್ಥೆಯ
ಸದಸ್ಯರು ಮತ್ತು ಕಾರ್ಯದರ್ಶಿ ಬಸವರಾಜು ಜೊತೆ ಚರ್ಚೆ



ಸಿಂಧನೂರು ತಾಲ್ಲೂಕಿನ ಯಾಪಲಪರ್ವಿ ಗ್ರಾಮದ ದೊಡ್ಡ ಸಾಗುವಳಿದಾರ
ಶರಣೇಗೌಡರ ಜೊತೆ ಅವರ ಹತ್ತಿ ಹೊಲದಲ್ಲಿ ಚರ್ಚೆ



ಸಿಂಧನೂರು ತಾಲ್ಲೂಕಿನ ಯಾಪಲಪರ್ವಿ ಗ್ರಾಮದ ಇತರೇ ಸಾಗುವಳಿದಾರರೊಂದಿಗೆ
ಶರಣೇಗೌಡರ ಹತ್ತಿ ಹೊಲದಲ್ಲಿ ಚರ್ಚೆ



ಸಿಂಧನೂರು ತಾಲ್ಲೂಕಿನ ಯಾಪಲಪರ್ವಿ ಗ್ರಾಮದ ವಿಧವೆ ಶರಣಮ್ಮ ನವರೊಂದಿಗೆ
ಅವರ ಜನತಾ ಮನೆಯಲ್ಲಿ ಚರ್ಚೆ



ದೇವದುರ್ಗ ತಾಲ್ಲೂಕಿನ ಹೇರುಂಡೆ ಗ್ರಾಮದ ಸಾಗುವಳಿದಾರರೊಂದಿಗೆ
ಗ್ರಾಮದ ಜಗಲೀಕಟ್ಟೆ ಮೇಲೆ ಗುಂಪು ಚರ್ಚೆ

